# ಶ್ರೀಮದ್‌ಭಾಗವತಸಾರೋದ್ಧಾರ

ಶ್ರೀಮದ್ ಅವಧೂತ ಶಿರೋಮಣಿ (ಶ್ರೀ ಜಯತೀರ್ಥ)

ಶ್ರೀ ವಿಷ್ಣುತೀರ್ಥ ಮುನಿವರ ಪ್ರಣೀತ

(ಸಂಪುಟ-೨)





ಅನುವಾದಕರು :

ವಿದ್ವಾನ್ ಕೆ.ಹಯವದನ ಪುರಾಣಿಕ, ಎಮ್. ಎ.

ಪ್ರಕಾಶಕರು

ಅಖಿಲ ಭಾರತ ಮಾಧ್ವ ಮಹಾ ಮಂಡಲ (ರಿ), ಉಡುಪಿ

ಪೂರ್ಣಪ್ರಜ್ಞ ವಿದ್ಯಾಪೀಠ, ಡಾ॥ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ ಮಾರ್ಗ (ಕತ್ರಿಗುಪ್ಪೆ ರಸ್ತೆ), ಬೆಂಗಳೂರು - ೫೬೦ ೦೭೦

ಶ್ರೀಮದ್‌ಹನುಮದ್ ಭೀಮ ಮಧ್ವಾಂತರ್ಗತ ರಾಮ ಕೃಷ್ಣ
ವೇದವ್ಯಾಸಾತ್ಮಕ ಶ್ರೀಲಕ್ಷ್ಮೀ ಹಯಗ್ರೀವಾಯ ನಮಃ

ಶ್ರೀಮದ್ ಅವಧೂತ ಶಿರೋಮಣಿ (ಶ್ರೀಜಯತೀರ್ಥ)
ಶ್ರೀವಿಷ್ಣುತೀರ್ಥ ಮುನಿವರ ಪ್ರಣೀತ

# ಶ್ರೀಮದ್‌ಭಾಗವತಸಾರೋದ್ಧಾರ

## (ಸಂಪುಟ – ೨)

ಅನುವಾದಕರು
ರಾಷ್ಟ್ರಪ್ರಶಸ್ತಿ ವಿಜೇತರು
**ವಿದ್ವಾನ್ ಕೆ.ಹಯವದನ ಪುರಾಣಿಕ**, ಎಮ್.ಎ.

ಪ್ರಕಾಶಕರು
**ಅಖಿಲ ಭಾರತ ಮಾಧ್ವಮಹಾ ಮಂಡಲ (ರಿ), ಉಡುಪಿ**
ಪೂರ್ಣಪ್ರಜ್ಞ ವಿದ್ಯಾಪೀಠ, ಡಾ॥ ಶ್ರೀ ವಿಶ್ವೇಶತೀರ್ಥಸ್ವಾಮೀಜಿ ಮಾರ್ಗ
(ಕತ್ರಿಗುಪ್ಪೆ ಮುಖ್ಯರಸ್ತೆ), ಬೆಂಗಳೂರು – 560 070.

**ಶ್ರೀಮದ್ ಅವಧೂತ ಶಿರೋಮಣಿ (ಶ್ರೀಜಯತೀರ್ಥ)**
**ಶ್ರೀವಿಷ್ಣುತೀರ್ಥಮುನಿವರಪ್ರಣೀತ ಶ್ರೀಮದ್‌ಭಾಗವತಸಾರೋದ್ಧಾರ**
**ಸಂಪುಟ-೨ ಕನ್ನಡ ಅನುವಾದದೊಂದಿಗೆ ಮುದ್ರಿತಗೊಂಡ**
**ಈ ಗ್ರಂಥವನ್ನು ದಿನಾಂಕ ೧೯-೦೨-೨೦೨೨ರಂದು**
**ಪೂರ್ಣಪ್ರಜ್ಞ ವಿದ್ಯಾಪೀಠದ ವಾರ್ಷಿಕೋತ್ಸವದ ಶುಭಾವಸರದಲ್ಲಿ**
**ಪರಮಪೂಜ್ಯ ಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರು**
**ಲೋಕಾರ್ಪಣೆ ಮಾಡಿದರು.**

ಅನುವಾದಕರು :
ರಾಷ್ಟ್ರಪ್ರಶಸ್ತಿ ವಿಜೇತರು
**ವಿದ್ವಾನ್ ಕೆ. ಹಯವದನ ಪುರಾಣಿಕ**


| | | |
|---|---|---|
| ಪ್ರಕಾಶಕರು | : | **ಅಖಿಲ ಭಾರತ ಮಾಧ್ವಮಹಾಮಂಡಲ, ಬೆಂಗಳೂರು** |
| ಪುಟಗಳು | : | 454+34 |
| ಪ್ರತಿಗಳು | : | 500 |
| ಬೆಲೆ | : | 400/- ರೂ. |
| ಮುದ್ರಣ | : | 2022 |





ಪುಸ್ತಕಗಳು ದೊರೆಯುವ ಸ್ಥಳ :
**ಅಖಿಲ ಭಾರತ ಮಾಧ್ವಮಹಾಮಂಡಲ**
ಪೂರ್ಣಪ್ರಜ್ಞ ವಿದ್ಯಾಪೀಠ, ಡಾ॥ ಶ್ರೀ ವಿಶ್ವೇಶತೀರ್ಥಸ್ವಾಮೀಜಿ ಮಾರ್ಗ
(ಕತ್ರಿಗುಪ್ಪೆ ಮುಖ್ಯರಸ್ತೆ), ಬೆಂಗಳೂರು – 560 070.

ಅಕ್ಷರ ಜೋಡಣೆ : **ಆರ್.ಎಸ್.ಪ್ರೇಮ್‌ಕುಮಾರ್,**

ಮುದ್ರಣ : **ಶಂಕರ್ ಗ್ರಾಫಿಕ್ಸ್ ಇಂಕ್**, ಜಯನಗರ, ಬೆಂಗಳೂರು-70
Email : shankargraphicsinc@gmail.com



# ಅನುಗ್ರಹ ಸಂದೇಶ

ನಮ್ಮ ಗುರುಗಳು ಸ್ಥಾಪಿಸಿದ ಅಖಿಲ ಭಾರತ ಮಾಧ್ವ ಮಹಾಮಂಡಲವು ಭಕ್ತಭಾವುಕರಿಗೆ ಉಪಯುಕ್ತವಾದ ಕೃತಿಗಳನ್ನು ನೀಡುತ್ತಿರುವುದು ಪ್ರಶಂಸಾರ್ಹವಾಗಿದೆ. ಶ್ರೀ ವಿಷ್ಣುತೀರ್ಥರು ರಚಿಸಿದ ಭಾಗವತ ಸಾರೋದ್ಧಾರ ಅತ್ಯುತ್ತಮ ಕೃತಿಯಾಗಿದೆ..

ಭಾಗವತ ಗ್ರಂಥದಲ್ಲಿನ ಹಲವಾರು ಶ್ಲೋಕಗಳನ್ನು ಆಯ್ಕೆಮಾಡಿ ತಮ್ಮ ವ್ಯಾಖ್ಯಾನದಲ್ಲಿ ಸಮಗ್ರ ಭಾಗವತದ ತಿರುಳನ್ನೇ ತೆರೆದು ನೀಡಿದ್ದಾರೆ. ಭಾಗವತದ ಇತರ ಶ್ಲೋಕಗಳಿಂದಲೇ ಭಾಗವತದ ಶ್ಲೋಕಗಳಿಗೆ ವ್ಯಾಖ್ಯಾನ ಮಾಡಿರುವುದು ವ್ಯಾಖ್ಯಾನದ ಮಹತ್ವವನ್ನು ಸೂಚಿಸುತ್ತದೆ. ಒಂದೊಂದು ಪ್ರಕರಣಗಳೂ ಮುಮುಕ್ಷುವಿಗೆ ದಾರಿದೀಪದಂತಿವೆ.

ಧರ್ಮೋಪದೇಶ ಪ್ರಕರಣವು ಭಾಗವತ ಧರ್ಮಗಳ ಅನುಷ್ಠಾನದ ಮಹತ್ವವನ್ನು ತಿಳಿಸುವುದರೊಂದಿಗೆ ಆ ಧರ್ಮದಲ್ಲಿ ಶ್ರದ್ಧೆಯನ್ನು ಹುಟ್ಟಿಸುತ್ತಿದೆ. ಇಂತಹ ಉತ್ತಮ ಕೃತಿಯನ್ನು ವಿದ್ವಾಂಸರಾದ ಹಯವದನ ಪುರಾಣಿಕರು ಕೃತಿಕಾರರಾದ ವಿಷ್ಣುತೀರ್ಥರ ವೇದವ್ಯಾಸರ ಆಶಯಕ್ಕೆ ಚ್ಯುತಿ ಬಾರದಂತೆ ಅಚ್ಚುಕಟ್ಟಾದ ಅನುವಾದ ಮಾಡಿದ್ದಾರೆ. ನಮ್ಮ ಗುರುಗಳಿಗೆ ಪ್ರೀತಿಪಾತ್ರ ಶಿಷ್ಯರಾದ ವಿ॥ ಹಯವದನ ಪುರಾಣಿಕರಿಂದ ಇನ್ನು ಹೆಚ್ಚಿನ ಜ್ಞಾನ ಸೇವೆ ನಡೆಯಲಿ ಎಂದು ಶ್ರೀ ಕೃಷ್ಣ ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಸಪ್ರೇಮ ನಾರಾಯಣಸ್ಮರಣೆಗಳು

**ಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದರು**
**ಶ್ರೀ ಪೇಜಾವರ ಮಠ, ಉಡುಪಿ**

## ಸಂಪಾದಕ ಮಂಡಲಿಯ ನಿವೇದನೆ

ಶ್ರೀಮದ್ಭಾಗವತ ಮಹಾಪುರಾಣ ವೈಷ್ಣವರಿಗೆ ಒಂದು ದೊಡ್ಡ ನಿಧಿ. "ಯದ್ ವೈಷ್ಣವಾನಾಂ ಧನಮ್". ಆದರೆ ಅದರ ಶೈಲಿ ಎಲ್ಲಾ ಪುರಾಣಗಳಂತೆ ಅಲ್ಲ; ಸ್ವಲ್ಪ ಕ್ಲಿಷ್ಟವಾದ ಶೈಲಿ. ಅಲ್ಲಿ ಕಥೆಗಿಂತಲೂ ಪ್ರಮೇಯಗಳಿಗೇ ಪ್ರಾಶಸ್ತ್ಯ. ಧಾರ್ಮಿಕ ಜೀವನದ ಅಮೂಲ್ಯ ಮೌಲ್ಯಗಳು ಅಲ್ಲಿ ತುಂಬಿವೆ. ಪ್ರಾತಃಸ್ಮರಣೀಯರಾದ ಶ್ರೀ ವಿಷ್ಣುತೀರ್ಥರು ಭಾಗವತ ಸಾರೋದ್ಧಾರದಲ್ಲಿ ಸಾಧನೆಗೆ ಮಾರ್ಗದರ್ಶಕವಾದ ಭಾಗವತದ ಕೆಲವು ಶ್ಲೋಕಗಳನ್ನು ಸಂಗ್ರಹಿಸಿ ಅವುಗಳ ವಿವರಣೆಯನ್ನು ನೀಡಿದ್ದಾರೆ. ಭಗವಂತನಲ್ಲಿ ಭಕ್ತಿ, ಪ್ರಪಂಚದಲ್ಲಿ ವಿರಕ್ತಿ ಇವರೆಡು ಭಾಗವತಾಧ್ಯಯನಕ್ಕೆ ಬೇಕಾದ ಅರ್ಹತೆಗಳು. ಇವೆರಡನ್ನೂ ಮೈಗೂಡಿಸಿಕೊಂಡ ಮಹಾತ್ಮರು ಶ್ರೀ ವಿಷ್ಣುತೀರ್ಥರು. ಆದ್ದರಿಂದ ಅವರು ನೀಡಿರುವ ವಿವರಣೆ ಹೃದಯದಿಂದ ಬಂದಿರುವ ನಿರೂಪಣೆ.

ಈ ಗ್ರಂಥವನ್ನು ಕನ್ನಡೀಕರಿಸಿಕೊಟ್ಟವರು ವಿದ್ವಾಂಸರಾದ ಶ್ರೀ ಹಯವದನ ಪುರಾಣಿಕರು. ಅವರು ವ್ಯಾಸ-ದಾಸ ಸಾಹಿತ್ಯಗಳೆರಡರಲ್ಲೂ ಪ್ರಾವೀಣ್ಯವನ್ನು ಪಡೆದವರು. ಅಖಿಲ ಭಾರತ ಮಾಧ್ವ ಮಹಾಮಂಡಲದಲ್ಲಿ ಸರ್ವಮೂಲ ಗ್ರಂಥಗಳ ಕನ್ನಡೀಕರಣ ಪ್ರಕಾಶನ ಯೋಜನೆಯಲ್ಲಿ ಭಾಗವತ ತಾತ್ಪರ್ಯವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಲ್ಲದೆ ಭಾಗವತ ಪ್ರತಿಷ್ಠಾನಕ್ಕೆ ಸಮಗ್ರ ಭಾಗವತದ ಪ್ರತಿಶ್ಲೋಕಗಳಿಗೆ ಕನ್ನಡಾನುವಾದವನ್ನು ಮಾಡಿಕೊಟ್ಟವರು. ಆದ್ದರಿಂದ ಭಾಗವತದ ಪ್ರಮೇಯಗಳು ಅವರಿಗೆ ಹೃದ್ಗತವಾಗಿವೆ. ಹೀಗಾಗಿ ಈ ಗ್ರಂಥವು ಅಧಿಕೃತವಾಗಿದ್ದು ಶ್ರೋತೃಗಳಿಗೆ ಅವಶ್ಯ ಸಂಗ್ರಾಹ್ಯವಾಗಿದೆ.

ವಿ॥ ಹಯವದನ ಪುರಾಣಿಕರು ಅನೇಕ ಸಂಸ್ಕೃತ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸಿಕೊಟ್ಟಿದ್ದಾರೆ. ಹರಿಕಥಾಮೃತಸಾರ ಮುಂತಾದ ಕನ್ನಡಕೃತಿಗಳ ವಿವರಣೆಯನ್ನು ಮಾಡಿಕೊಟ್ಟಿದ್ದಾರೆ. ಮಂಡಲಕ್ಕೆ ಅವರು ಮಾಡಿದ ಸೇವೆ ಅವಿಸ್ಮರಣೀಯವಾದುದು. ಅವರಿಗೆ ಕೃತಜ್ಞತೆಗಳು. ಅದರಂತೆ ಈ ಕೃತಿಯನ್ನು ಹೊರಬರುವಂತೆ ಶ್ರಮಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿ ಶ್ರೀ ಶ್ರೀಪಾದ ಸಿಂಗನಮಲ್ಲಿಯವರಿಗೂ ಕೃತಜ್ಞತೆಗಳು.

ಇತಿ

**ಮಹಾಮಹೋಪಾಧ್ಯಾಯ**

**ವಿದ್ವಾನ್ ಎ. ಹರಿದಾಸ ಭಟ್**

ಕಾರ್ಯಾಧ್ಯಕ್ಷರು, ಸಂಪಾದಕ ಮಂಡಳಿ

ಅಖಿಲ ಭಾರತ ಮಾಧ್ವ ಮಹಾಮಂಡಲ

ಬೆಂಗಳೂರು

# ಪ್ರಕಾಶಕರ ನುಡಿ

ಆರಣ್ಯಕಾಚಾರ್ಯರು, ಅಡವಿ ಆಚಾರ್ಯರೆಂದೇ ಪ್ರಖ್ಯಾತರಾದ ಮಾದನೂರಿನ ಮಹಾಮಹಿಮರಾದ ಪರಮಹಂಸ ಶ್ರೀ ವಿಷ್ಣುತೀರ್ಥರು, ಕೊಪ್ಪಳ ಜಿಲ್ಲೆಯ ಮಾದನೂರಿನಲ್ಲಿ ನೆಲೆಸಿರುತ್ತಾರೆ. ಶ್ರೀಮತಿ ಭಾಗೀರಥಿಬಾಯಿ ಹಾಗೂ ಶ್ರೀ ಬಾಳಾಚಾರ್ಯ ದಂಪತಿಗಳ ಸುಪುತ್ರರೇ ಶ್ರೀ ಜಯತೀರ್ಥರು. ಆಗರ್ಭ ಶ್ರೀಮಂತರಾದ ಇವರು ಬಂಗಾರದ ತೂಗುಮಂಚದ ಮೇಲೆ ವಿಶ್ರಮಿಸುತ್ತಿರುವಾಗ ದಾಸಯ್ಯನೊಬ್ಬನು ಇವರ ಮನೆಮುಂದೆ ಹಾಡುತ್ತಾ ಬರುತ್ತಾನೆ.

**ಮಂಚ ಬಾರದು ಮಡದಿ ಬಾರಳು ಕಂಚು ಕನ್ನಡಿ ಬಾರದು ।**
**ಸಂಚಿತಾರ್ಥದ ದ್ರವ್ಯ ಬಾರದು ಮುಂಚೆ ಮಾಡಿರೋ ಧರ್ಮವ ॥**

ದಾಸಪಿತಾಮಹ ಶ್ರೀ ಪುರಂದರದಾಸರ ಈ ಕೀರ್ತನೆಯು ಶ್ರೀ ಜಯತೀರ್ಥರ ಮನಸ್ಸಿನ ಮೇಲೆ ಪ್ರಭಾವ ಬೀರಿ ವೈರಾಗ್ಯ ಹುಟ್ಟಿಸಿತು. ತಕ್ಷಣವೇ ಸಂಸಾರಜೀವನವನ್ನು ತ್ಯಜಿಸಿ, ವಾನಪ್ರಸ್ಥಾಶ್ರಮವನ್ನು ಕೈಗೊಂಡರು. ಮುಂದೊಂದು ದಿನ ಪರಮಪೂಜ್ಯ ಶ್ರೀ ಸತ್ಯವರತೀರ್ಥರಿಂದ ಸನ್ಯಾಸಾಶ್ರಮ ವನ್ನು ಸ್ವೀಕರಿಸಿ ೧೦೮ ಬಾರಿ ಶ್ರೀಮನ್ನ್ಯಾಯಸುಧಾಮಂಗಳವನ್ನು ನೆರವೇರಿ ಸಿದ ಕೀರ್ತಿ ಮತ್ತು ಸಾಧನೆ ಇವರ ಮುಡಿಗೇರಿತು. ಸುಮಾರು ೨೦ಕ್ಕೂ ಹೆಚ್ಚು ಮಹಾನ್ ಕೃತಿಗಳನ್ನು ರಚಿಸಿ ಶ್ರೀಮದಾಚಾರ್ಯರ ಕೃಪೆಗೆ ಪಾತ್ರರಾದರು.

ಇಂತಹ ಮಹಾಮಹಿಮರು ರಚಿಸಿದ ಶ್ರೇಷ್ಠ ಗ್ರಂಥವೇ **ಶ್ರೀಮದ್ಭಾಗವತ ಸಾರೋದ್ಧಾರ.** ಕಬ್ಬಿಣದ ಕಡಲೆಯಂತಹ ಈ ಕೃತಿಯನ್ನು ಅರ್ಥಸಹಿತವಾಗಿ ಕನ್ನಡದಲ್ಲಿ ಅನುವಾದಿಸಿ ಈ ಗ್ರಂಥವನ್ನು ಪ್ರಕಟಿಸಿದರೆ ಮಹದುಪಕಾರ ವಾಗುವುದೆಂದು ವಿದ್ಯಾಪೀಠದ ಪಂಡಿತರು ಮಂಡಲದ ಗಮನಕ್ಕೆ ತಂದರು. ಅಖಿಲ ಭಾರತ ಮಾಧ್ವ ಮಹಾಮಂಡಲವೂ ಸಹ ಶ್ರೀ ವಿಷ್ಣುತೀರ್ಥರು ರಚಿಸಿದ **ಶ್ರೀಮದ್ಭಾಗವತಸಾರೋದ್ಧಾರ** ಗ್ರಂಥವನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಣೆ ಮಾಡುವ ಸಂಕಲ್ಪವನ್ನು ಕೈಗೊಂಡಿತು. ಸಮರ್ಥ ಲೇಖಕರ ಅನ್ವೇಷಣೆ ಹಾಗೂ ಚಿಂತನೆಯಲ್ಲಿದ್ದಾಗ, ಶ್ರೀ ಹಯಗ್ರೀವರೂಪಿ ಪರಮಾತ್ಮನ ಕೃಪೆಯೋ ಎಂಬಂತೆ ನಾಡಿನ ಪ್ರಸಿದ್ಧ ವಿದ್ವಾಂಸರು, ರಾಷ್ಟ್ರಪತಿ ಪ್ರಶಸ್ತಿ ಭಾಜನರು, ಸಂಶೋಧಕರು ಹಾಗೂ ವಿಮರ್ಶಕರೂ ಆದ ವಿದ್ವಾನ್ ಶ್ರೀ ಕೆ.ಹಯವದನ ಪುರಾಣಿಕರ ಹೆಸರು

ಕಣ್ಮುಂದೆ ಬಂತು. ತಡಮಾಡದೇ ಮಂಡಲದ ಪರವಾಗಿ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಶ್ರೀಪಾದ ಮ. ಸಿಂಗನಮಲ್ಲಿ ಮತ್ತು ಶ್ರೀ ವೆಂಕಟೇಶ ಪುರೋಹಿತ್ ಇವರುಗಳು ವಿದ್ವಾನ್ ಶ್ರೀ ಹಯವದನ ಪುರಾಣಿಕರ ಮನೆಗೆ ಹೋಗಿ ಮಂಡಲದ ಅಪೇಕ್ಷೆಯನ್ನು ಅವರ ಮುಂದೆ ವ್ಯಕ್ತಪಡಿಸಿದರು. ತಮಗೆ ಬಿಡುವಿಲ್ಲದಿದ್ದರೂ ಸಹ ಅನುವಾದದ ಜವಾಬ್ದಾರಿಯನ್ನು ಒಪ್ಪಿಕೊಂಡು ಸಂಪೂರ್ಣಗೊಳಿಸಿದ ವಿದ್ವಾನ್ ಶ್ರೀ ಹಯವದನ ಪುರಾಣಿಕರಿಗೆ ಮಂಡಲದ ಪರವಾಗಿ ಪ್ರಣಾಮಪೂರ್ವಕ ಅಭಿನಂದನೆಗಳು.

ಶ್ರೀ ಪೇಜಾವರ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವಪ್ರಸನ್ನ ತೀರ್ಥ ಶ್ರೀಪಾದಂಗಳವರು ಅನುಗ್ರಹ ಸಂದೇಶವನ್ನಿತ್ತು ಆಶೀರ್ವದಿಸಿದ್ದಾರೆ. ಪೂಜ್ಯ ಶ್ರೀಗಳವರಿಗೂ ಸಹ ಮಂಡಲದ ಪರವಾಗಿ ಅನಂತ ಪ್ರಣಾಮಗಳು.

ಈ ಗ್ರಂಥ ಪ್ರಕಟಣೆಯ ಜವಾಬ್ದಾರಿಯನ್ನು ಹೊತ್ತು ಶ್ರಮಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಶ್ರೀಪಾದ ಮ. ಸಿಂಗನಮಲ್ಲಿ, ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ದ್ವಾರಕಾನಾಥ್ ಹಾಗೂ ಮಂಡಲದ ಸಿಬ್ಬಂದಿವರ್ಗಕ್ಕೂ, ಅಕ್ಷರ ವಿನ್ಯಾಸವನ್ನು ಅಂದವಾಗಿ ಮಾಡಿಕೊಟ್ಟ ಶ್ರೀ ಆರ್.ಎಸ್.ಪ್ರೇಮ್‌ಕುಮಾರ್ ಹಾಗೂ ಸಕಾಲದಲ್ಲಿ ಮುದ್ರಣವನ್ನು ಮಾಡಿದ ಶಂಕರ್ ಗ್ರಾಫಿಕ್ಸ್ ಇವರಿಗೂ ನಮ್ಮ ಕೃತಜ್ಞತೆಗಳು.

ಸಹೃದಯ ವಾಚಕರು ಈ ಗ್ರಂಥದ ಅಧ್ಯಯನ ನಡೆಸಿದಲ್ಲಿ ನಮ್ಮ ಶ್ರಮ ಸಾರ್ಥಕ.

**ಹೆಚ್.ವಿ. ಗೌತಮ**

ಬೆಂಗಳೂರು

**ಅಧ್ಯಕ್ಷರು**

**ಅಖಿಲ ಭಾರತ ಮಾಧ್ವಮಹಾಮಂಡಲ**

# ಅವಲೋಕನ

ಅವಧೂತವರ್ಯ ಶ್ರೀ ವಿಷ್ಣುತೀರ್ಥರು ಭಾಗವತದಿಂದ ಮುನ್ನೂರಾರವತ್ತೈದು ಶ್ಲೋಕಗಳನ್ನು ಹೆಕ್ಕಿದರು. ವಿಷಯವಾರು ವಿಂಗಡಿಸಿದರು. ಮೂವತ್ತು ಪ್ರಕರಣಗಳಲ್ಲಿ ಜೋಡಿಸಿದರು. ಇದು ಸಾಗರದಿಂದ ರತ್ನಗಳನ್ನು ಹೆಕ್ಕಿದಂತಲ್ಲ. ರತ್ನರಾಶಿಯಿಂದ ರತ್ನಗಳನ್ನು ಹೆಕ್ಕಿದ್ದು.

ಮೂಲಭಾಗವತದ ಪ್ರತಿಯೊಂದು ಶ್ಲೋಕಗಳೂ ಜ್ಞಾನದ ಬೆಳಕುಬೀರುವ ರತ್ನಗಳು. ಮಾಲಾಕಾರನು ತನ್ನ ಮಾಲೆಗೆ ಉಚಿತವಾದ ರತ್ನಗಳನ್ನು ಆರಿಸಿ ಪೋಣಿಸುವಂತೆ ಅವಧೂತರು ಭಾಗವತದಿಂದ ಶ್ಲೋಕಗಳನ್ನು ಉದ್ಧರಿಸಿದ್ದಾರೆ. 365 ರತ್ನಗಳಿಂದ 30 ಮಾಲೆಗಳನ್ನು ರಚಿಸಿದ್ದಾರೆ. ಭಾಗವತಧರ್ಮದ ಸಾರವನ್ನು ಇತ್ತಿದ್ದಾರೆ. ದಿನಕ್ಕೊಂದು ಶ್ಲೋಕದಂತೆ ವರ್ಷದಲ್ಲಿ ಮುಗಿಸಬಹುದಾದ ದಿನಕ್ಕೊಂದು ಪ್ರಕರಣದಂತೆ ಓದಿ ತಿಂಗಳಲ್ಲಿ ಮುಗಿಸಬಹುದಾದ ಈ ಸಾರೋದ್ಧಾರವನ್ನು ವಿದ್ವಾಂಸರಾದ ಹಯವದನ ಪುರಾಣಿಕರು ತಿಂಗಳೊಳಗಾಗಿ ಕನ್ನಡಕ್ಕಿಳಿಸಿ ಕನ್ನಡಿಗ ಭಾಗವತರಿಗೆ ಸಂಜೀವಿನಿಯನ್ನಿತ್ತಿದ್ದಾರೆ.

ವಿ|| ಪುರಾಣಿಕರಿಗೆ ಶ್ರೀ ವಿಷ್ಣುತೀರ್ಥರಲ್ಲಿ ಸಹಜ ಸೆಳೆತವಿದೆ. ಬಾಹ್ಯವೃತ್ತಿಯಲ್ಲಲ್ಲದಿದ್ದರೂ ಆಂತರ ವೃತ್ತಿ-ಪ್ರವೃತ್ತಿಗಳಲ್ಲಿ ಇವರೀರ್ವರಲ್ಲಿ ಬಹಳಷ್ಟು ಸಾಮ್ಯವಿದೆ. ಸಮಾನಶೀಲವ್ಯಸನಗಳು ಸಖ್ಯಕ್ಕೆ ಕಾರಣಗಳಂತೆ.

ಸಮಗ್ರ ಭಾಗವತಕ್ಕೆ, ಭಾಗವತತಾತ್ಪರ್ಯಕ್ಕೆ ಕನ್ನಡವ್ಯಾಖ್ಯಾನ ಬರೆದ ಮೇಲೆ ಲೇಖಕರು ಈ ಪುಸ್ತಕ ಬರೆದಿದ್ದಾರೆ. ಇದು ಇಲ್ಲಿನ ಬಿಗು ಮತ್ತು ಪರಿಪೂರ್ಣತೆಯಲ್ಲಿ ಮುಖ್ಯಪಾತ್ರವಹಿಸಿದೆ.

ಸಾರೋದ್ಧಾರವೆಂದರೆ ಕೇವಲ ಶ್ಲೋಕಸಂಗ್ರಹವಲ್ಲ. ಇಲ್ಲಿ ಭಾಗವತಶ್ಲೋಕಗಳಿಗೆ ಶ್ರೀ ವಿಷ್ಣುತೀರ್ಥರು ಸ್ವಯಂ ಅವತರಣಿಕೆಯಿತ್ತು ವ್ಯಾಖ್ಯಾನಿಸಿದ್ದಾರೆ. ಇದು ಕೆಲವೆಡೆ ಎರಡೇ ವಾಕ್ಯಗಳಲ್ಲಿ ಮುಗಿದಿದೆ. ಕೆಲವೊಮ್ಮೆ ನಾಲ್ಕುಪುಟಗಳಷ್ಟು ವಿಸ್ತೃತವಿದೆ. ಇದರ ಸ್ವಾರಸ್ಯವನ್ನು ಅನುವಾದಿಸುವವರಿಗೆ ಯೋಗ, ಆಯುರ್ವೇದ, ವೇದ, ವೇದಾಂಗ, ಕರ್ಮಮೀಮಾಂಸೆ, ಬ್ರಹ್ಮಮೀಮಾಂಸೆಗಳಂತಹ ಅನೇಕಶಾಸ್ತ್ರಗಳ ತಿಳಿವು ಬೇಕಿದೆ. ಲೇಖಕರು ಆ ಎಲ್ಲಾ ವಿಭಾಗಗಳಲ್ಲೂ ಚಿಕಿತ್ಸಕಬುದ್ಧಿಯಿಂದ ಕೈಯಾಡಿಸಿ ಅರಗಿಸಿಕೊಂಡವರು. ಅವರನ್ನು ಹತ್ತಿರದಿಂದ ಕಂಡ ನಾವೆಲ್ಲಾ ನಡೆದಾಡುವ ಗ್ರಂಥಾಲಯವೆನ್ನುವುದಿದೆ. ಪ್ರಸ್ತುತ ಅನುವಾದ ಆ ಮಾತಿಗೆ ಪುಷ್ಟಿಯಿತ್ತಿದೆ.

ಸಾರೋದ್ಧಾರವು ಮೂಲತಃ ಸಾಧಕನಿಗೆ ಭಾವವನ್ನು ಪ್ರಚೋದಿಸುವ ಭಾವುಕ ಗ್ರಂಥ. ವ್ಯಾಖ್ಯಾನದೊಂದಿಗೆ ಓದಿದಾಗ ಇದು ಅನೇಕ ವೈಚಾರಿಕ ವಿಮರ್ಶೆಗಳ ಮೂಲಕ ತಾತ್ವಿಕವಿಷಯಗಳನ್ನು ನಿರ್ಧರಿಸಿರುತ್ತದೆ. ಭಾಗವತಧರ್ಮ ಮತ್ತು ತತ್ವಗಳ ಬಗೆಗಿನ ಜಿಜ್ಞಾಸುವಿಗೆ ಇದೊಂದು ಪಠ್ಯವಾಗಿದೆ. ಪ್ರಸ್ತುತ ಅನುವಾದವು ಅಧ್ಯೇತೃವಿಗೆ ಗೈಡ್ ಆಗಿದೆ. ಮಾರ್ಗದರ್ಶಿ ಕರದೀಪಿಕೆಯಾಗಿದೆ.

ಲೇಖಕರ ಅನುವಾದ ಕ್ರಮ ಹೀಗಿದೆ -

★ ಪ್ರತಿಯೊಂದು ಶ್ಲೋಕಕ್ಕೂ ಸರ್ವಸಂಗ್ರಾಹಕ ಶೀರ್ಷಿಕೆ.

★ ಶ್ರೀ ವಿಷ್ಣುತೀರ್ಥರ ಸಂಸ್ಕೃತ ಮಾತಿಗೆ ಸಂಗ್ರಹಾತ್ಮಕ ವಿವರಣೆ.

★ ಅಲ್ಲಿ ಬರುವ ಸಂಶಯಗಳನ್ನೆತ್ತಿ ತೋರಿಸಿ ಸಮಾಧಾನ.

★ ಅರ್ಥಗ್ರಹಣಕ್ಲೇಶವಿದ್ದಲ್ಲಿ ಪುಟ್ಟ ವಿವರಣೆ.

★ ತಪ್ಪಾಗಿ ಗ್ರಹಿಸುವ ಸಾಧ್ಯತೆಯಿದ್ದಲ್ಲಿ ಎಚ್ಚರಿಕೆ.

**ಮಂಗಳಪದ್ಯ :**

'ಸ್ವಸ್ತಿಶ್ರೀ' ಎಂಬುದು ಎಲ್ಲ ಮಂಗಲಗಳ ಆರಂಭದ ಪದ. ಮದುವೆಯ ಕಾಗದದ ಆರಂಭ ಸ್ವಸ್ತಿಶ್ರೀ ಎಂದೇ. ಶಿಶುವಿನ ಜಾತಕ ಬರೆಯಲಾರಂಭಿಸುವಾಗಲೂ ಮೊದಲ ಪದ ಸ್ವಸ್ತಿಶ್ರೀ. ಶ್ರೀ ವಿಷ್ಣುತೀರ್ಥರೂ ಸಾರೋದ್ಧಾರವನ್ನು ಆರಂಭಿಸಿದುದೂ ಸ್ವಸ್ತಿಶ್ರೀ ಎಂದೇ.

ಸ್ವಸ್ತಿಶ್ರೀರಸ್ತು ಮೇ ಶಸ್ತಂ ನಿಸ್ತುಲಾ ನಿಸ್ತುಲಾತ್ಮನಃ।
ವಸ್ತುನೋಽವಸ್ತುನೋಽನಿತ್ಯಂ ಸಮಸ್ತ ವ್ಯಸ್ತಯೋಗತಃ॥

ಅರ್ಥಶಬ್ದಾಲಂಕಾರಾಲಂಕೃತವಾದ ಈ ಆದಿಮ ಪದ್ಯಕ್ಕೆ ಅರ್ಥಹೇಳುವ ವಿದ್ವಾಂಸನೂ ತಿಣುಕಾಡಬೇಕಾಗಿದೆ. ವ್ಯಾಖ್ಯಾನ ಸಾಪೇಕ್ಷವಾಗಿದೆ.

ಸ್ವಸ್ತಿಶ್ರೀ ಎಂದರೆ ಮಂಗಳಕರ ಸಂಪತ್ತು. ಸ್ವಸ್ತಿಶ್ರೀ ಎಂದರೆ ಸರ್ವಮಂಗಲೆ ಮಹಾಲಕುಮಿ. ಸ್ವಸ್ತಿಶ್ರೀ ಎಂದರೆ ವಾಯುಪತ್ನಿ ಭಾರತೀದೇವಿ. ಈ ಎಲ್ಲ ಅರ್ಥವೂ ಪ್ರಾಮಾಣಿಕ, ಯೋಗಲಭ್ಯ. ಈ ಅರ್ಥಗಳಿಗೆ ಸರ್ವಮೂಲದ ವಾಕ್ಯಗಳ ಪುಷ್ಟಿಯಿದೆ.

ಈ ಪುಟ್ಟ ಪದ್ಯಕ್ಕೆ ಲೇಖಕರು ಆರು ಪುಟದ ವ್ಯಾಖ್ಯಾನವಿತ್ತಿದ್ದಾರೆ. ಅಧ್ಯೇತೃವಿಗೆ ಇಲ್ಲಿಯ ಒಂದು ವಿಷಯವೂ ಜಾಸ್ತಿಯೆನಿಸದು. ಅನ್ಯೂನಾನತಿರಿಕ್ತ ವಿವರಣೆ. 'ಹೀಗೇ ಆರಂಭಿಸಬೇಕು. ಇಲ್ಲಿಗೆ ಮುಗಿಸಬೇಕು' ಎಂಬ ಕರಾರುವಾಕ್ಕಾದ ಪಾಠಕನ ಕ್ರಮ ಇಲ್ಲಿದೆ.

**ಉಲ್ಲೇಖಗಳ ಆಕರ ವಿವರಣೆ:**

ಶ್ರೀ ವಿಷ್ಣುತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಪ್ರಕೃತಾರ್ಥದ ಪುಷ್ಟಿಗಾಗಿ ಕೆಲವು ಶ್ಲೋಕಗಳನ್ನು ಉಲ್ಲೇಖಿಸುತ್ತಾರೆ. ಅವು ಯಾವ ಸಂದರ್ಭದಲ್ಲಿ ಎಲ್ಲಿ ಬಂದಿವೆ. ಎಂಬುದು ತಿಳಿಯದಿದ್ದರೆ ವಾಚಕನಿಗೆ ಪೂರ್ತಿ ಗ್ರಹಣವಾಗದು. ಅಂಥಲ್ಲಿ ಲೇಖಕರು ಉಪಕರಿಸಿದ್ದಾರೆ.

ಹಿರಿಯರ ನಿಂದೆ ಕೇಳಬಾರದು. ಸತೀದೇವಿ ದಕ್ಷನಿಂದ ಶಿವನಿಂದೆಯನ್ನು ಕೇಳಿ ಶರೀರತ್ಯಾಗದ ನಿರ್ಧಾರಕ್ಕೆ ಬರುತ್ತಾಳೆ. ಈ ಸಂದರ್ಭದಲ್ಲಿ ಧರ್ಮಪ್ರವರ್ತಕನಾದ ಸ್ವಾಮಿಯ ನಿಂದೆಯನ್ನು ಕೇಳಿದವನಿಗೂ ಅನರ್ಥವಿದೆಯೆಂಬುದನ್ನು ಸಮರ್ಥಿಸಲು ಸಾರೋದ್ಧಾರವು ಈ ಶ್ಲೋಕವನ್ನು ಉಲ್ಲೇಖಿಸಿದೆ -

ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ।
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾತ್ ಚ್ಯುತಃ॥

ಲೇಖಕರು ವಿವರಿಸಿದರು - ಶಿಶುಪಾಲನು ಶ್ರೀಕೃಷ್ಣನನ್ನು ನಿಂದಿಸುತ್ತಿದ್ದಾಗ ರಾಜಸೂಯಯಾಗಮಂಟಪದಲ್ಲಿದ್ದ ಸಭಾಸದರು ಕಿವಿಮುಚ್ಚಿಕೊಂಡು ಕೋಪದಿಂದ ಶಿಶುಪಾಲನನ್ನು ಬೈಯುತ್ತಾ ಎದ್ದು ಹೊರಟುಹೋದರು ಎಂಬ ಸಂದರ್ಭದಲ್ಲಿ ಶುಕಮುನಿಯು ಪರೀಕ್ಷಿತನಿಗೆ ಹೇಳಿದ ಮಾತು.

ಸಾಲದೇ ಇಷ್ಟು ವಿವರಣೆ? ಸ್ಪಷ್ಟತೆಯಿದೆ. ಸಮಗ್ರತೆಯಿದೆ. ಸಾರಲ್ಯವಿದೆ. ಸಂಕ್ಷೇಪವಿದೆ.

**ದೃಷ್ಟಾಂತಗಳ ವಿವರಣೆ** :

ಭಾಗವತವೆಂಬದು ಉಪಮೆ, ರೂಪಕಗಳಿಂದ ಕೂಡಿದ ಕಾವ್ಯ. ಸಾರೋದ್ಧಾರವೂ ಕಾವ್ಯಗುಣದಲ್ಲಿ ಕಡಿಮೆಯಿಲ್ಲ. ಉಪಮಾನ - ಉಪಮೇಯಗಳಲ್ಲಿ ಪ್ರಕೃತಸಂಗತವಾದ ಸಾಮಾನ್ಯ ಧರ್ಮವನ್ನು ಸಮನ್ವಯಿಸಿ ತಿಳಿಯುವುದು ಸುಲಭವೇನಲ್ಲ. ಉದಾಹರಣೆಗೆ - ಸಂಸಾರಮೋಹದ ಬಗೆಗೆ ಪ್ರಹ್ಲಾದನ ಮಾತು -

ತ್ಯಜೇತ ಕೋಶಸ್ಥ ಇವೇಹಮಾನಃ
ಕರ್ಮಾಣಿ ಲೋಭಾದವಿತೃಪ್ತಕಾಮಃ। (ಭಾ.7-6-19)

ಸಂಸಾರದಲ್ಲಿ ಸಿಲುಕಿಕೊಂಡು ನರಳುತ್ತಿರುವ ವ್ಯಕ್ತಿ ಕೋಶಸ್ಥನಂತೆ ಎಂಬ ದೃಷ್ಟಾಂತ ಇಲ್ಲಿದೆ. ಕೋಶಸ್ಥ ಎಂದರೆ 'ಕೋಶಕಾರೀ ಕೀಟ' ಎಂಬ ವಿವರಣೆ

ಸಾರೋದ್ಧಾರದಲ್ಲಿದೆ. 'ಕೋಶಸ್ಥಃ ಕೋಶಕಾರೀ ಕೀಟ ಇವ ಲೋಭಾದೇವ ಅವಿತೃಪ್ತಕಾಮಃ ಕರ್ಮಾಣಿ ಈಹಮಾನಃ' ಎಂಬುದಾಗಿ. ಏನಿದು ಕೋಶಕಾರೀ ಕೀಟ? ಅದಕ್ಕೂ ಸಂಸಾರಿಗೂ ಏನು ಸಾಮ್ಯ? ಎಂಬುದಕ್ಕೆ ವಿವರಣೆ ಬೇಕು. ಇಂತಹ ಸಂದರ್ಭಗಳಲ್ಲಿ ಈ ಅನುವಾದ ಉಪಕರಿಸಿದೆ. ಅನುವಾದಕರೆನ್ನುತ್ತಾರೆ - ಕೋಶ ಎಂದರೆ ಗೂಡು. ತಾನೇ ಗೂಡು ಕಟ್ಟಿಕೊಂಡು ಅದರೊಳಗೆ ಬಂಧಿಯಾದ ರೇಶಿಮೆಹುಳು ಕೋಶಸ್ಥ. ತನ್ನ ಸುತ್ತ ತಾನೇ ಹೆಣೆದುಕೊಂಡ ಬಲೆಯಂತಹ ಗೂಡಿನಲ್ಲಿ ತಾನೇ ಬಂಧಿಯಾಗಿ ಹೊರಗೆ ಬರಲು ಅಶಕ್ತವಾಗುವ ರೇಶಿಮೆ ಹುಳದಂತೆ ಸಂಸಾರಿಯೂ ಬಂಗಾರದ ಸಂಕೋಲೆಯಂತಹ ವಿಷಯಭೋಗ ಸಂಪತ್ತಿನ ಮೋಹದ ಪಂಜರದಲ್ಲಿ ಸಿಕ್ಕಿಹಾಕಿಕೊಂಡು ಹೊರಬರಲಾರದೇ ಸುಖಲೋಭದಿಂದ ಕಾಮ್ಯಕರ್ಮಗಳನ್ನೇ ಮಾಡುತ್ತಾ ಅತೃಪ್ತ ಬಯಕೆಗಳ ಬಂಧಿಯಾಗಿದ್ದಾನೆ.

'ಕ್ರೀಡಾಮೃಗಃ ಪೂರುಷ ಈಶ ಗೀಯತೇ' ಎಂಬ 69ನೇ ಶ್ಲೋಕದಲ್ಲೂ ಸ್ತ್ರೀಜಿತನು ಕ್ರೀಡಾಮೃಗವೆಂಬ ರೂಪಕಕ್ಕೆ 'ಕೈಯಾಟದ ಕೋತಿಯಂತೆ ಕುಣಿಯುವವ'ನೆಂಬ ವಿವರಣೆ ಸಂದರ್ಭೋಚಿತ.

ವೈರಾಗ್ಯಪ್ರಕರಣದಲ್ಲಿ ಸಾರೋದ್ಧಾರವು ಸೌಭರಿಯ ವೈರಾಗ್ಯದ ಮಾತನ್ನು ಉಲ್ಲೇಖಿಸಿದೆ. 'ಅಹೋ ಇಮಂ ಪಶ್ಯತ ಮೇ ವಿನಾಶಂ ...' ನೀರೊಳಗೆ ಜಲಚರ ಮಿಥುನವನ್ನು ಕಂಡು ಎಂಥಾ ಅನರ್ಥವಾಯಿತು? ತಪಸ್ಸೆಲ್ಲ ಕೆಟ್ಟುಹೋಯಿತಲ್ಲಾ! ಎಂದು ಪರಿತಪಿಸುತ್ತಾನೆ ಸೌಭರಿ.

'ಅನುವಾದಕರು ಸಾರೋದ್ಧಾರದಲ್ಲಿಲ್ಲದ ಕೆಲವು ವಿಷಯಗಳನ್ನು ವಿವರಿಸುತ್ತಾರೆ. ಸೌಭರಿಯು ಗೃಹಸ್ಥನಾಗಲು ಕೇವಲ ಮೀನುಗಳ ಪ್ರಣಯಲೀಲೆಯ ದರ್ಶನ ಕಾರಣವಲ್ಲ. ತನ್ನ ಸುಖಪ್ರಾರಬ್ಧವನ್ನು ಮುಗಿಸಿಕೊಳ್ಳಲು ಆತ ಮದುವೆಯ ನಿರ್ಧಾರ ಮಾಡಿದ. ಇಲ್ಲದಿದ್ದರೆ ಕೇವಲ ಜಲಚರ ಪ್ರಣಯ ದರ್ಶನವು ಮಾನವನ ಕಾಮಭಾವನೆಯನ್ನು ಕೆರಳಿಸುವುದುಂಟೇ? ಜಲಚರದರ್ಶನವು ಪ್ರಾರಬ್ಧಭೋಗಕ್ಕೆ ನಿಮಿತ್ತವಾಯಿತು ಎನ್ನಬೇಕು. ಪ್ರಾರಬ್ಧದ ಕೊನೆಯಲ್ಲಿ 'ಇನ್ನು ಸಾಕು ಇದಕ್ಕೆ ಕೊನೆಯಿಲ್ಲ' ಎಂದು ವೈರಾಗ್ಯ ತಾಳಿದ. ಯೋಗಬಲದಿಂದ ಶರೀರ ತ್ಯಜಿಸಿದ. ಶ್ರೌತಾಗ್ನಿಗಳಲ್ಲಿ ಕೂಡಿಸಿದ. ಪತ್ನಿಯರು ಅದೇ ಅಗ್ನಿಯಲ್ಲಿ ಸೇರಿಕೊಂಡರು.

ಇದು ಸೌಭರಿಯ ಸಾಧನೆ. ಆತ ಪ್ರಾರಬ್ಧವನ್ನು ಉಣಲೇಬೇಕಿತ್ತು. ಅದಕ್ಕೆ ಅವನು ಪಶ್ಚಾತ್ತಾಪಪಡಲು ಕಾರಣವಿಲ್ಲ. ಆದರೂ ಅಜ್ಞಾನಿಗಳು ಹೀಗೆ ಸಂಸಾರದಲ್ಲಿ ಅತ್ಯಾಸಕ್ತಿಯುನ್ನು ತಳೆಯಬಾರದೆಂದು ಎಚ್ಚರಿಸುವುದಕ್ಕಾಗಿ ಪಶ್ಚಾತ್ತಾಪದ ಮಾತಿನಂತೆ ಆಡುತ್ತಿದ್ದಾನೆ.

ಧ್ರುವನೂ ಭಗವಂತನಲ್ಲಿ ಧ್ರುವಪದವಿಯನ್ನು ಬೇಡಿ ಪಶ್ಚಾತ್ತಾಪ ಪಟ್ಟ ವೃತ್ತಾಂತ ಭಾಗವತದಲ್ಲಿದೆ. ಇದನ್ನೂ ಸರಿಯಾಗಿ ವಿವೇಚಿಸಿ ಅರ್ಥ ಮಾಡಿಕೊಳ್ಳಬೇಕು. ಪದವಿಯ ಅಧಿಕಾರವುಳ್ಳವರು ಅದನ್ನು ಬೇಡಿ ಪಡೆಯಬೇಕು. ಅದು ತಪ್ಪಲ್ಲ. ಪಶ್ಚಾತ್ತಾಪದ ಮಾತುಗಳೆಲ್ಲ ಅಜ್ಞಜನರನ್ನೂ ಎಚ್ಚರಿಸುವುದಕ್ಕಾಗಿ. ಅವಧೂತರು ಈ ಪ್ರಸಂಗಗಳನ್ನು ವಿಷಯಾಸಕ್ತಿಗೆ ಉದಾಹರಣೆಯಾಗಿ ತೋರಿಸಿರುವುದೂ ಇದೇ ಅಭಿಪ್ರಾಯದಿಂದ. ಪಿಂಗಳೆಯ ಪಶ್ಚಾತ್ತಾಪವಚನದ ಸಂದರ್ಭದ ವಿವರಣೆಯೂ ರೋಚಕ.

ಇಂತಹ ಎಚ್ಚರಿಕೆಯ ವಿವರಣೆ ಸಾರೋದ್ಧಾರ ಓದುಗನಿಗೆ ಅವಶ್ಯಬೇಕು.

ಅನುವಾದಕರ ಭಾಷೆಯ ಸೊಗಸೂ ಓದುಗನ ಮನಸ್ಸನ್ನು ಸೆಳೆದಿಡುತ್ತದೆ. 'ಅಹೋ ಸುಭದ್ರಂ ಸುನಸಂ - ' ಶ್ಲೋಕದ ಅನುವಾದ ನೋಡಿ, "ಆಹಾ! ಈ ಹೆಣ್ಣಿನ ನಗುಮೊಗ ಎಂಥ ಮಾಟವಾದ ಮೂಗಿನಿಂದ ಎಷ್ಟು ಸುಂದರವಾಗಿದೆ! ಎನ್ನುತ್ತಾ ಅವಳ ಚರ್ಮ ಮಾಂಸ ರಕ್ತ ಕೊಬ್ಬು ಮಜ್ಜೆ ಎಲುಬುಗಳ ಗೂಡಿನಲ್ಲಿ ರಮಿಸುವ ಜನರಿಗೂ ಮಲಮೂತ್ರ ಕೀವುಗಳಲ್ಲಿ ರಮಿಸುವ ಕ್ರಿಮಿಗಳಿಗೂ ಇರುವ ಅಂತರವೆಷ್ಟು?"

**ಪ್ರಕರಣಗಳ ಸಾರಾಂಶ :**

ವ್ಯಾಖ್ಯಾನವು ಐದು ಬಗೆಯಂತೆ. ಪದಚ್ಛೇದ, ಪದಾರ್ಥೋಕ್ತಿ, ವಿಗ್ರಹ ಪ್ರದರ್ಶನ, ಸಮರ್ಥನೆ ಹಾಗೂ ಆಕ್ಷೇಪಸಮಾಧಾನ ಎಂಬುದಾಗಿ. ಇದಕ್ಕೆಲ್ಲಕ್ಕೂ ಮುಖ್ಯವಾದುದು ಸಂಗ್ರಹೋಕ್ತಿ. ಒಂದು ಪ್ರಕರಣದ ಸಮಗ್ರ ವಿಷಯವನ್ನು ಸಂಗ್ರಹಿಸಿ ನೀಡುವುದರಿಂದ ಪ್ರಕರಣಪ್ರತಿಪಾದ್ಯದ ಬಗ್ಗೆ ಸಾಮಾನ್ಯಜ್ಞಾನ ವುಂಟಾಗುತ್ತದೆ. ಈ ಜ್ಞಾನವು ಮುಂದಿನ ವಿಸ್ತೃತಾಧ್ಯಯನದಲ್ಲಿ ಸ್ಫುಟ ಗ್ರಹಣಶಕ್ತಿಯನ್ನು ಒದಗಿಸುತ್ತದೆ. ಪ್ರಕೃತ ಗ್ರಂಥದ ಮೂವತ್ತೂ ಪ್ರಕರಣಗಳಲ್ಲಿ ಪ್ರಕರಣಸಾರಾಂಶವು ಬಹಳ ಮುಖ್ಯವೆನಿಸುತ್ತದೆ. ಬರಿಯ ಈ ಪ್ರಕರಣ ಸಾರಾಂಶಗಳನ್ನು ಪ್ರತ್ಯೇಕೀಕರಿಸಿ ಮುದ್ರಿಸಿದರೆ ಅದೇ ಒಂದು ಸಂಗ್ರಹಾತ್ಮಕ ಹೊತ್ತಿಗೆಯಾಗುವ ಅರ್ಹತೆಯನ್ನು ಪಡೆದಿದೆ. ಇಲ್ಲಿನ ಸಂಗ್ರಹಕೌಶಲ ಜಿಜ್ಞಾಸುಗಳಿಗೊಂದು ಕೌತುಕ.

ಈ ಅನುವಾದದಲ್ಲಿ ಕೌತುಕದ ಎರಡು ಪ್ರಮುಖಸಂಗತಿಗಳಿವೆ. ಮೊದಲನೇಯದು ಪ್ರಕರಣ ಸಾರಾಂಶದ ಮೂಲಕ ಕರಾರುವಾಕ್ಕಾದ ಸಂಗ್ರಹ. ಎರಡನೇಯದು 365 ಪದ್ಯಗಳಿಗೂ ನೀಡಿರುವ ಶೀರ್ಷಿಕೆ.

ಆಯಾ ಶ್ಲೋಕದ ಮುಖ್ಯ ಪ್ರತಿಪಾದ್ಯವನ್ನಿಟ್ಟುಕೊಂಡು ಶೀರ್ಷಿಕೆ ನೀಡಿಲ್ಲ. ಅವಧೂತರು ಪ್ರಕೃತ ಪ್ರಕರಣದಲ್ಲಿ ಯಾವ ಉದ್ದೇಶದಿಂದ ಆ ಪದ್ಯವನ್ನು ಉದ್ಧರಿಸಿರುವರೆಂಬ ಹಿನ್ನಲೆಯಲ್ಲಿ ಶೀರ್ಷಿಕೆಗಳನ್ನು ನೀಡಲಾಗಿದೆ. ಆಯಾ ಶೀರ್ಷಿಕೆಗಳು ಶ್ಲೋಕವನ್ನು ಓದುವವನಿಗೆ ಶ್ಲೋಕದಲ್ಲಿ ಗಮನಿಸಬೇಕಾದ ಅಂಶದ ಕಡೆಗೆ ಗಮನವು ಕೇಂದ್ರೀಕೃತವಾಗುವಂತೆ ಮಾಡಿ ಉಪಕರಿಸುತ್ತವೆ. ಸಾರೋದ್ಧಾರದ ಮರ್ಮವನ್ನು ಅರಿಯಬೇಕಾದರೆ ಷೋಡಶೀ, ಚತುರ್ದಶೀ, ಅಧ್ಯಾತ್ಮರಸರಂಜಿನಿಗಳ ಅಧ್ಯಯನವೂ ಬೇಕಾಗುತ್ತದೆ. ಲೇಖಕರು 350ನೇ ಪದ್ಯದ ವಿವರಣೆಯಲ್ಲಿ ಬರೆಯುತ್ತಾರೆ. "ಇದರ ಹೆಚ್ಚಿನ ವಿವರಣೆಗೆ ಅವಧೂತರು ಅನುಗ್ರಹಿಸಿರುವ ಅಧ್ಯಾತ್ಮಾಮೃತರಸರಂಜನಿಯನ್ನು ನೋಡಬೇಕು."

ಬಿಡುಗಡೆಗಾಗಿ ಸಾಗುವ ಸಾಧಕನಿಗಾಗಿ ಭಾಗವತವಿದೆ. ಅವಧೂತರಾದ ವಿಷ್ಣುತೀರ್ಥರು ಸಾಧಕನು ಅವಶ್ಯ ಓದಿ ತಿಳಿದುಕೊಳ್ಳಬೇಕಾದ ವಿಷಯಗಳನ್ನು ತಿಳಿಸುವುದಕ್ಕಾಗಿ ಈ ಸಾರೋದ್ಧಾರ ವ್ಯಾಖ್ಯಾನವನ್ನು ರಚಿಸಿದ್ದಾರೆ. ವಿಷಯಭೂಯಿಷ್ಠವೂ ಗಹನಾರ್ಥವೂ ಆದ ಈ ವ್ಯಾಖ್ಯಾನ ಸರಲವಿವರಣೆಯ ಗ್ರಂಥವಿಲ್ಲದೆ ಸಮಾಜದಿಂದ ದೂರವಾಗಿತ್ತು. ಇದೀಗ ಶ್ರೀ ಹಯವದನ ಪುರಾಣಿಕರ ಸರ್ವಾರ್ಥ ಸಂಸ್ಪರ್ಶಿಯೂ ಸರಲಮನೋಹರವೂ ಆದ ಈ ವಿವರಣೆ -ಅನುವಾದಗಳಿಂದ ಮಹದುಪಕಾರವಾಗಿದೆ. ಸಜ್ಜನ ವಾಚಕರು ಮುಗಿಬಿದ್ದು ಇದರ ಅಧ್ಯಯನ ಮಾಡುವುದರಲ್ಲಿ ಸಂಶಯವಿಲ್ಲ.

ಅಖಿಲ ಭಾರತ ಮಾಧ್ವ ಮಹಾಮಂಡಲವು ಇದನ್ನು ಮುದ್ರಣ ಮಾಡಿಸಿ ಆರಣ್ಯಕಾಚಾರ್ಯರ ಅನುಗ್ರಹವನ್ನು ಸಂಪಾದಿಸಿದೆ. ಷೋಡಶಿಯಂತಹ ಕ್ಲಿಷ್ಟಗ್ರಂಥಗಳಿಗೂ ಇದೇ ರೀತಿಯ ಅನುವಾದವನ್ನೂ ಬರೆಸಿ ಪ್ರಕಟಗೊಳಿಸುವ ಮಹತ್ಕಾರ್ಯ ಅನತಿಕಾಲದಲ್ಲಿ ನಡೆಯಲಿ.

**ಡಾ।। ಹೆಚ್. ಸತ್ಯನಾರಾಯಣಾಚಾರ್ಯ**
ಪ್ರಾಚಾರ್ಯರು, ಪೂರ್ಣಪ್ರಜ್ಞ ವಿದ್ಯಾಪೀಠ

# ಶ್ರೀಮದ್ ಭಾಗವತಸಾರೋದ್ಧಾರಕಾರರು ಅವಧೂತ ಶಿರೋಮಣಿ ಶ್ರೀಜಯತೀರ್ಥ ವಿಷ್ಣುತೀರ್ಥರು - ಅಡವಿಸ್ವಾಮಿಗಳು

ವಿಷ್ಣುತೀರ್ಥಃ ಕಲ್ಪವೃಕ್ಷೋ ವಿಷ್ಣುತೀರ್ಥಶ್ಚ ಕಾಮಧುಕ್
ಚಿಂತಾಮಣಿರ್ವಿಷ್ಣುತೀರ್ಥೋ ಯತೀಂದ್ರಃ ಸರ್ವಕಾಮದಃ ।

❖❖❖

ವರದವಿಷ್ಣುತೀರ್ಥ ಕರುಣದಿ ನೀ ಕೊಡು ಪುರುಷಾರ್ಥ ॥ ಪ ॥

ವರದ ಅಭೀಷ್ಟೆಯ ಕರೆದು ಎನಗೆ ನೀ
ವರದನೆಂಬ ನಿನ್ನ ಬಿರುದು ಕಾಯಬೇಕು ॥ ಅ.ಪ.॥

ಅಜನ ಜನಕನಲ್ಲಿ । ಇರುವಿಯೊ । ವಿಜನದೇಶದಲ್ಲಿ
ಸುಜನರು ಇದ್ದಲ್ಲಿ ಬರುವಿಯೊ । ಭಜನೆ ಮಾಡುವಲ್ಲಿ
ಸುಜನರ ತಾಪಕೆ ವ್ಯಜನನು ನೀನು
ಸುಜನ ಕಲ್ಪತರು ಕುಜನರ ಕುಠಾರ ॥ ೧ ॥

ನಂದನಂದನನು । ಅವ ನಿನ್ನ । ಬಂಧನದಲ್ಲಿಹನು ।
ಅಂಧನಾಗಿ ನಾನು । ಸಂಸೃತಿ । ಬಂಧನದೊಳಗಿಹೆನು
ನೊಂದೆನು ಬೆಂದೆನು ಬಂದೆನು ನಿನ್ನಲಿ
ಬಂಧನ ಬಿಡಿಸೊ ಬಂದಿಹೆ ಬಿಡದೆ ॥ ೨ ॥

ಮರೆತೆನು ನಾ ನಿನ್ನ । ಅವಗುಣ ಮರೆತು ಪಾಲಿಸು ಮುನ್ನ
ಪರತರ ಗುಣ ನಿನ್ನ । ಹೊರತು ಅನ್ಯಗತಿ ಇಲ್ಲೊ ಮುನ್ನ
ಅರಿತು ಅನಂತಾದ್ರಿ ನಿಲಯನ ತೋರಿಸೊ
ತ್ವರಿತ ಮೋದಪುರ ನಿರತ ಸದ್ಗುರುವೆ ॥ ೩ ॥

❖❖❖

ಅವಧೂತಶಿರೋಮಣಿ ಶ್ರೀಜಯಾಚಾರ್ಯರಾಗಿ ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಎಂಬ ಮೂರು ಆಶ್ರಮಗಳನ್ನೂ, ಪರಮಹಂಸ ಶ್ರೀವಿಷ್ಣುತೀರ್ಥರಾಗಿ ಯತ್ಯಾಶ್ರಮ ಧರ್ಮವನ್ನೂ ನಡೆಸಿದವರು ಶ್ರೀಜಯತೀರ್ಥ ವಿಷ್ಣುತೀರ್ಥರು. ಮೊದಲಿನ ಮೂರು ಆಶ್ರಮಗಳ ಬಗ್ಗೆ ಪಂಚರತ್ನ ಕಾವ್ಯದಲ್ಲಿ ಕೊನೆಯ

ಕೊನೆಯ ಯತ್ಯಾಶ್ರಮ ಚರಿತ್ರೆ ವಿಷ್ಣುತೀರ್ಥವಿಜಯ ಕಾವ್ಯದಲ್ಲಿ ದೊರಕುವುದು. ಮತ್ತು ಶ್ರೀಗೋಕಾವಿ ಭೀಮಾಚಾರ್ಯ 'ಅನಂತಾದ್ರೀಶ'ರು ಕನ್ನಡದಲ್ಲಿ ಪಂಚರತ್ನ ಕಾವ್ಯವನ್ನು ಅನುವಾದಿಸಿದ್ದಾರೆ. ಅನೇಕ ಸ್ತೋತ್ರಗಳನ್ನೂ ದೇವರ ನಾಮಗಳನ್ನು ರಚಿಸಿದ್ದಾರೆ.

ಶ್ರೀಜಯತೀರ್ಥರ ಕಾಲ ಕ್ರಿ.ಶ. ೧೭೫೬-೧೮೧೬ ವರದಾನದೀ ತೀರದ ಸಿದ್ಧಾಪುರ ಒಂದು ಕಾಲದಲ್ಲಿ ಸಿದ್ಧಪುರುಷರ ಪುಣ್ಯಕ್ಷೇತ್ರವಾಗಿತ್ತು. ಅಲ್ಲಿ ಬಾಳಾಚಾರ್ಯ ಭಾಗೀರಥೀಬಾಯಿ ದಂಪತಿಗಳು ಬಹುಕಾಲ ಮಕ್ಕಳಿಲ್ಲದೆ ಮಳಖೇಡದ ಶ್ರೀಜಯಮುನಿಗಳ ಸೇವೆ ಮಾಡಿ ಜಯತೀರ್ಥನೆಂಬ ಪುತ್ರ ರತ್ನನನ್ನು ಪಡೆದರು.

ಆ ಕಾಲದ ಪ್ರಸಿದ್ಧ ವಿದ್ವಾಂಸರು ಐಜಿ ವೆಂಕಟರಾಮಾಚಾರ್ಯರು. ಅವರಲ್ಲಿ ಅಧ್ಯಯನ ಮಾಡಿ ಬಾಲಕ ಜಯತೀರ್ಥನು ಷಟ್‌ಶಾಸ್ತ್ರಗಳಲ್ಲಿ ವಿದ್ವತ್ತೆಯನ್ನು ಗಳಿಸಿದನು. ಒಮ್ಮೆ ಗುರುಗಳು ಪಲ್ಲಕ್ಕಿ ಏರಿ ಕುಳಿತು ಬಿಸಿಲು ಏರಿದ ಸಮಯದಲ್ಲಿ ಪಯಣಿಸುತ್ತಿದ್ದಾಗ ಶಿಷ್ಯ ಜಯತೀರ್ಥನು ಬರಿಗಾಲಲ್ಲಿ ನಡೆದು ಬರುತ್ತಿದ್ದ. ಗುರು ನೋಡಿ ತಮ್ಮ ಪಾದುಕೆಗಳನ್ನು ನೀಡಿ ಧರಿಸಲು ಆದೇಶಿಸಿದರು. ಆದರೆ ಶಿಷ್ಯನು ಪಾದುಕೆಗಳನ್ನು ತಲೆಯಲ್ಲಿ ಹೊತ್ತು ನಡೆದನಂತೆ!

ಗುರುವಿನ ಪುತ್ರನಿಗೆ ಬಂದಿದ್ದ ಅಪಮೃತ್ಯು ಭಯವನ್ನು ಉಗ್ರನರಸಿಂಹ ಮಂತ್ರಜಪದಿಂದ ಶಿಷ್ಯನು ಪರಿಹರಿಸಿದನಂತೆ. ಆಗ ಒಂದು ವಾರಕಾಲ ಉಪವಾಸ ಮಾಡಿದ್ದರಿಂದ ನಿಃಶಕ್ತರಾಗಿ ತಾಪದಿಂದ ಬಳಲಿ, ಗುರುಗಳು ದೇವರ ಅಭಿಷೇಕಕ್ಕೆಂದು ಸಿದ್ಧಪಡಿಸಿದ್ದ ಪಂಚಾಮೃತವನ್ನು ಸೇವಿಸಿ, ಮಲಗಿದರು. ಗುರುಗಳು ಆದಿನ ಪಂಚಾಮೃತಾಭಿಷೇಕ ಒಂದನ್ನು ಬಿಟ್ಟು ಬೇರೆ ಎಲ್ಲ ಪೂಜೆ ಮಾಡಿದರು. ಆಗ ಮಂಗಳಾರತಿ ಎತ್ತುವಾಗ ಶ್ರೀಕೃಷ್ಣನ ಬಾಯಿಯಿಂದ ಪಂಚಾಮೃತ ಹೊರಚೆಲ್ಲಿ ಬಂದಿತಂತೆ!

ಮುಂದೆ ಜಯತೀರ್ಥಾಚಾರ್ಯರು ವಿವಾಹ ಮಾಡಿಕೊಂಡು ಅಡವಿ ಕೃಷ್ಣಾಚಾರ್ಯರೆಂಬ ಸುಪುತ್ರನಿಗೆ ಜನ್ಮವಿತ್ತರು.

ಹನ್ನೆರಡು ವರ್ಷಕಾಲ ಮನವಳ್ಳಿಯಲ್ಲಿ ಸುಖವಾಗಿ ರಾಜಭೋಗ ದಿಂದಿದ್ದು ನಿತ್ಯ ಪಾಠಪ್ರವಚನ ನಿತ್ಯಕರ್ಮಾನುಷ್ಠಾನ ಮಾಡುತ್ತ ಅನ್ನ ದಾನಾದಿ ಗಳನ್ನೂ ನಡೆಸುತ್ತ ಹತ್ತಾರು ಶಿಷ್ಯರುಗಳನ್ನು ಸಂಪಾದಿಸಿದರು. ಹನ್ನೆರಡು ಬಾರಿ

ಸುಧಾಮಂಗಳ ಮಾಡಿದರು. ಅಡವಿಕೃಷ್ಣಾಚಾರ್ಯರು ಪುತ್ರರು, ಗೋಕಾವಿ ಅನಂತಾದ್ರಿಭೀಮಾಚಾರ್ಯರು ಮೌದ್ಗರ ಬಾಳಾಚಾರ್ಯರು, ಮೊರಬದ ಶೇಷಾಚಾರ್ಯರು ಮೊರಬದ ರಾಮಾಚಾರ್ಯರು, ಕೌಲಗಿ ವೆಂಕಟಾ ಚಾರ್ಯರು, ಟೊಣಪಿ ಗೋಪಾಲಾಚಾರ್ಯರು, ಅಣ್ಣಿಗೇರಿ ಅಣ್ಣಯಾ ಚಾರ್ಯರು ಮುಂತಾದವರು ಶಿಷ್ಯರಾಗಿದ್ದರು.

ಬದರಿಯಾತ್ರೆಗೆಂದು ಹೊರಟಾಗ ದಾರಿಯಲ್ಲಿ ಒಂದು ಸರ್ಪ ಅಡ್ಡ ಬಂದಿತು. ಟೀಕಾಕೃತ್ಪಾದರೇ ಸರ್ಪರೂಪದಿಂದ ಬಂದು ತಡೆದಿದ್ದರು. ಮಾರನೆ ದಿನವೂ ದಾರಿಯಲ್ಲಿ ಅದೇ ಸರ್ಪ ಕಂಡುಬಂದಿತು. ಅದೂ ಸಾಲದೆಂಬಂತೆ ಸ್ವಪ್ನದಲ್ಲಿಯು ಟೀಕಾಕೃತ್ಪಾದರು ಒಮ್ಮೆ ಸರ್ಪರೂಪದಿಂದ, ಒಮ್ಮೆ ರಾಜವೇಷ ದಿಂದ, ಮತ್ತೊಮ್ಮೆ ಯತಿರೂಪದಿಂದಲೂ ಬಂದು ಸ್ವಪ್ನದಲ್ಲಿ ಸುಧಾಪಾಠ ಹೇಳಿ, ಸುಧಾಪ್ರವಚನ ಮಾಡಬಲ್ಲ ಶಿಷ್ಯ ಪರಂಪರೆಯನ್ನು ಸಿದ್ಧಪಡಿಸಲು ಆದೇಶಿಸಿದರು. ಬದರಿಯಾತ್ರೆಗಿಂತ ಈ ಜ್ಞಾನಕಾರ್ಯ ಮುಖ್ಯ ಎಂದು ಬೋಧಿಸಿದರು. 'ಬದರಿಕಾಶ್ರಮದಲ್ಲಿರುವ ನರನಾರಾಯಣರು ವ್ಯಾಸಮಧ್ವರು ಗಂಗಾನದಿ ಪವಿತ್ರ ಮನೋಹರ ಆಶ್ರಮಗಳು ಅವುಗಳಲ್ಲಿ ಸುರಮುನಿಗಳು! ಇವೆಲ್ಲರೂ ನೀನಿರುವಲ್ಲಿಯೆ ಬಂದು ಸನ್ನಿಹಿತರಾಗುವರು' ಎಂದು ವರವಿತ್ತರು. ಅದು ಹಾಗೇ ಆಯಿತು. ಇದಕ್ಕೆ ಸಾಕ್ಷಿಯಾಗಿ ಸ್ವಪ್ನ ಲಬ್ಧವಾದ ಬದರಿನಾರಾಯಣವಿಗ್ರಹವನ್ನು ಅವಧೂತರು ಪ್ರತಿಷ್ಠೆ ಮಾಡಿ ಪೂಜಿಸಿದರು. ಈ ನೂತನ ಬದರಿಕಾಶ್ರಮದ ಅಡವಿಯಲ್ಲಿ ನೆಲೆಸಿ ಜಯತೀರ್ಥಾಚಾರ್ಯರು 'ಅರಣ್ಯಾಚಾರ್ಯರು' 'ಅಡವಿ ಆಚಾರ್ಯರು' ಎಂದೆನಿಸಿದರು.

**ಗೋವಿಂದನಮೊ ಗೋವಿಂದನಮೊ ಗೋವಿಂದ ನಾರಾಯಣ ॥**
**ಮಂಚ ಬಾರದು ಮಡದಿ ಬಾರಳು ಕಂಚುಗನ್ನಡಿ ಬಾರದು**
**ಸಂಚಿತಾರ್ಥದ ದ್ರವ್ಯಬಾರದು ಮುಂಚೆ ಮಾಡಿರಿ ಧರ್ಮವ ॥**

ಎಂಬ ಪುರಂದರದಾಸರ ವಚನದಂತೆ, ಜಯಾಚಾರ್ಯರು ಬಾಲ್ಯದಿಂದಲೇ ಸ್ವಾಭಾವಿಕವಾಗಿ ವೈರಾಗ್ಯಶಾಲಿಗಳಾಗಿಯೆ ಇದ್ದವರು. ಮೂರುಬಾರಿ ಸರ್ವಸ್ವ ದಾನ ಮಾಡಿದರೆಂದು ಪಂಚರತ್ನ ಕಾವ್ಯ ಹೇಳುತ್ತಿದೆ. ವಿಷ್ಣುತೀರ್ಥವಿಜಯ ಕಾವ್ಯ ಹೇಳುವಂತೆ ಬದರಿಕಾಶ್ರಮ ಸದೃಶವಾದ ಅರಣ್ಯದಲ್ಲಿ ಇಪ್ಪತ್ತುವರ್ಷ ಕಾಲ ಏಕಾಂತ ವಾಸ ಮಾಡುತ್ತ ಶಿಷ್ಯರಿಗೆ ಪಾಠಪ್ರವಚನ ಗ್ರಂಥರಚನ ಕಾರ್ಯಗಳನ್ನು ಮಾಡಿದರು.

ಭಾಗವತದಲ್ಲಿ ಪ್ರತಿ ಅಕ್ಷರ ಪ್ರತಿ ಪದ ಭಾಗವತಧರ್ಮಗಳೆಂಬ ಅನರ್ಘ್ಯರತ್ನಗಳು ತುಂಬಿವೆ. ಅವುಗಳನ್ನು ಜಯಾಚಾರ್ಯರು ಸಂಗ್ರಹಿಸಿ ಮೂವತ್ತು ಪ್ರಕರಣಗಳಾಗಿ ವಿಂಗಡಿಸಿ ಕ್ರಮವಾಗಿ ಪೋಣಿಸಿ 'ಭಾಗವತವನ್ನು ರಚಿಸಿ ಅದಕ್ಕೆ ಸಾರೋದ್ಧಾರವೆಂಬ ವ್ಯಾಖ್ಯಾನರೂಪವಾದ ರತ್ನಹಾರವನ್ನು ಮಾಡಿ ಶ್ರೀಕೃಷ್ಣನಿಗೆ ಅರ್ಪಿಸಿದರು. ಈ ಗ್ರಂಥದಲ್ಲಿ ಹೇಳಿದಂತೆ ತಾವೂ ಆಚರಣೆ ಮಾಡಿದರು, ಶಿಷ್ಯರಿಂದಲೂ ಆಚರಣೆ ಮಾಡಿಸಿದರು.

ಮಧುಕರ ವೃತ್ತಿಯಿಂದ ಭಿಕ್ಷಾನ್ನ ಉಂಡರು.

'ಸ್ನಾನಾನಂತರ ಜಡೆಯಲ್ಲಿದ್ದ ನೀರನ್ನು ತೆಗೆಯದೆ, ಒರೆಸದೆ, ಹಾಗೇ ಜಡೆಯನ್ನು ಸುತ್ತಿಕೊಂಡು ಜಡೆಯಿಂದ ಉದುರುವ ನೀರಹನಿಗಳನ್ನು ಮೈಯೊಳು ಧರಿಸಿದರು, ವ್ಯಾಘ್ರಚರ್ಮನಿರ್ಮಿತ ಕೂರ್ಮಾಸನದಲ್ಲಿ ಕುಳಿತು ಸಚ್ಛಾಸ್ತ್ರ ಪ್ರವಚನ ಮಾಡಿ ಆರುಗಳಿಗೆ ಹೊತ್ತಿರುವಾಗ ಅದನ್ನು ಮುಗಿಸಿ ಭಿಕ್ಷಾನ್ನವನ್ನು ಸ್ವೀಕರಿಸಿದರು! ಸದ್‌ಗೃಹಸ್ಥರು ಮನೆಯಲ್ಲಿ ಪಾಕಮಾಡಿ ನೈವೇದ್ಯ ವೈಶ್ವದೇವಾದಿಗಳನ್ನು ಮಾಡಿ ಶುದ್ಧಮಂಡಲದಮೇಲೆ ಎಲೆಹಾಕಿ ಉಪ್ಪಿನಿಂದ ತುಪ್ಪದವರೆಗೆ ಒಪ್ಪಾಗಿ ಬಡಿಸಿ ಗುರುಗಳಿಗೆ ಎಂದು ಕೃಷ್ಣಾರ್ಪಣ ಮಾಡಿ ಬಿದಿರಿನ ಬುಟ್ಟಿಯಿಂದ ಮುಚ್ಚಿಟ್ಟು ಗುರುಗಳ ಶಿಷ್ಯರನ್ನು ಇದಿರು ನೋಡುತ್ತಾರೆ. ಶಿಷ್ಯರು ಅದನ್ನು ತಂದು ಗುರುಗಳ ಮುಂದೆ ತಂದಿಟ್ಟರೆ ಅದಕ್ಕೆ ಜಲಪ್ರೋಕ್ಷಣ ಮಾಡಿ ಟೀಕಾರಾಯರಿಗೆ ಅರ್ಪಿಸುತ್ತಾರೆ. ಶಿಷ್ಯರೊಂದಿಗೆ, ಆ ಪ್ರಸಾದವನ್ನು ಅನಂತಾದ್ರೀಶನ ಸ್ಮರಣಪೂರ್ವಕ ಉಣ್ಣುತ್ತಾರೆ' ಎಂದು ಅನಂತಾದ್ರೀಶರು ಬಣ್ಣಿಸುತ್ತಾರೆ.

ಮುಂದೆ ಶ್ರೀಮದುತ್ತರಾದಿಮಠದ ಶ್ರೀಸತ್ಯವರತೀರ್ಥರಿಂದ ಯತ್ಯಾಶ್ರಮದೀಕ್ಷೆ ಪಡೆದು ಇಪ್ಪತ್ತು ವರ್ಷಕಾಲ ಮಾದನೂರಿನಲ್ಲಿ ತಪೋನಿರತ ರಾದರು. ಅವರ ತಪಃಶಕ್ತಿಯಿಂದ ಭೀಕರ ಕ್ಷಾಮ ಬಂದ ಕಾಲದಲ್ಲಿಯೂ ಪ್ರತಿದಿನ ದೇವರಬಳಿ ಇಟ್ಟ ತಾಮ್ರದ ಅರ್ಧಾಣೆ ನಾಣ್ಯ ಬಂಗಾರವಾಗುತ್ತಿತ್ತು. ಅದನ್ನು ಮಾರಿ ಅಡವಿಸ್ವಾಮಿಗಳು ಶಿಷ್ಯರ ಪೋಷಣೆ ಮಾಡಿದರು.

ಊರಿನ ದೇಸಾಯರಿಗೆ ಊಟದಲ್ಲಿ ಅನ್ನದ ಅಗುಳು ಎಲ್ಲವೂ ಕೃಮಿ ರೂಪದಿಂದ ಕಂಡುಬರುತ್ತಿದ್ದನ್ನು ಪರಿಹರಿಸಿದರು. ಕೃಮಿಗಳು ಮಾಯ ವಾದವು.

ಬಂಜೆಯರು ಸುಪುತ್ರವತಿಯರಾದರು.

ಇವೆಲ್ಲಕ್ಕಿಂತ ಶ್ರೀವಿಷ್ಣುತೀರ್ಥರು ಮಾಡಿದ ದೊಡ್ಡ ಪವಾಡವೆಂದರೆ ಅವರು ಬಾಳಿದ ಅರವತ್ತು ವರ್ಷಗಳಲ್ಲಿಯೆ ಅದರೈವತ್ತರಷ್ಟು ಭಾಗವತಧರ್ಮ ಪ್ರಸಾರಕಾರ್ಯ ಮಾಡಿದ್ದು, ರಹಸ್ಯಪ್ರಮೇಯ ಗರ್ಭಿತವಾದ, ಜ್ಞಾನಿಗಳಿಂದಲೂ ಪಂಡಿತರಿಂದಲೂ ಸೇವ್ಯವಾದ ಅದ್ಭುತಗ್ರಂಥಗಳನ್ನು ರಚಿಸಿ ಐತಿಹಾಸಿಕವಾಗಿ ದ್ವೈತವೇದಾಂತದ ಟಿಪ್ಪಣಿ ಯುಗದ ಅಂತಿಮಘಟ್ಟವನ್ನು ಪ್ರತಿನಿಧಿಸಿದ್ದು, ಜಿಜ್ಞಾಸುಗಳಿಗೆ ಅಪಾರವಾದ ಉಪಕಾರಗೈದಿದ್ದು, ಕ್ಷುದ್ರ ವಿಷಯಸುಖದತ್ತ ಏನೂ ವಿವೇಚನೆಯೆ ಇಲ್ಲದೆ ಧಾವಿಸುವ ಸುಜೀವರನ್ನು ನಿತ್ಯಸುಖದಾಯಕನಾದ ಭಗವಂತನ ಕಡೆಗೆ ತಿರುಗಿಸಿದ್ದು.

ಅವರು ರಚಿಸಿದ ಉಪಲಬ್ಧ ಕೃತಿಗಳು—

| | |
|---|---|
| **ಅಧ್ಯಾತ್ಮಾಮೃತರಸರಂಜನಿ** | **ಶ್ರೀರಮಾಸ್ತೋತ್ರ** |
| **ಬಿಂಬಸ್ತುತಿ** | **ಭಾಗವತಧರ್ಮಸ್ತೋತ್ರ** |
| **ಮುಕ್ತಾಮಾಲಾ (ಗೀತಾಸಾರೋದ್ಧಾರ)** | **ಅಚ್ಯುತಾನಂತಸ್ತೋತ್ರ** |
| **ಭಾಗವತಸಾರ–ಸಾರೋದ್ಧಾರ** | **ಭಾಗವತಧೃತಸಾರ** |
| **ನ್ಯಾಯಸುಧಾಟಿಪ್ಪಣಿ–ರಸರಂಜನಿ** | **ಸುಮನೋ ರಂಜನಿ** |
| **ತತ್ವಪ್ರಕಾಶಿಕಾ ಟಿಪ್ಪಣಿ** | **ಶ್ರೀಕೃಷ್ಣಾಷ್ಟಕ** |
| **ಷೋಡಶಿ** | **ಧ್ಯಾನಸ್ನಾನವಿಧಿ** |
| **ಚತುರ್ದಶಿ** | **ಆಜ್ಞಾಪತ್ರ** |
| **ಬಿಂಬಾರ್ಪಣವಿಧಿ** | **ಉಪದೇಶಪತ್ರ** |
| **ಸುಮಧ್ವವಿಜಯಪ್ರಮೇಯಫಲಮಾಲಿಕಾ** | **ಜಯತೀರ್ಥಸ್ತೋತ್ರ** |
| **ನ್ಯಾಯಸುಧಾಸ್ತೋತ್ರ** | **ಆತ್ಮಸುಖಬೋಧಿನೀ ಪತ್ರಿಕಾ** |
| **ಜಯತೀರ್ಥಾಷ್ಟಕ** | |

❖❖❖

'ಭಾಗವತಧರ್ಮ' ಎಂದರೆ ಭಾಗವತರು ದೇವರನಾಮಗಳನ್ನು ಹಾಡುವುದೇ ಅಲ್ಲ. ಮಾನವಕುಲದ ಉಳಿವಿಗೇ ಆಧಾರವಾದ ಸನಾತನ ಮಾನವಧರ್ಮ. ಅದು ಒಂದು ದೇಶಕ್ಕೆ ಪಂಗಡಕ್ಕೆ ಗುಂಪಿಗೇ ಸೇರಿದ್ದಲ್ಲ. ಇಡೀ ಮಾನವ ಕುಲಕ್ಕೇ ಸಂಬಂಧಿಸಿದ್ದು, ಸತ್ಯ ಅಹಿಂಸೆ ಬ್ರಹ್ಮಚರ್ಯ ಮೌನ ಸ್ವಾಧ್ಯಾಯ ದ್ವಂದ್ವಸಹನೆ ಆರ್ಜವ ತಪಸ್ಸು ಶೌಚ ಶಮ ದಮ ದಾನ ಶ್ರವಣ ಕೀರ್ತನ ಧ್ಯಾನ ಆತ್ಮಸಮರ್ಪಣೆ ಮುಂತಾದ ಮೂವತ್ತು ಬಗೆಯ ಧರ್ಮಗಳನ್ನು ಮನುಷ್ಯ ನಾದವನು ಆಚರಣ ಮಾಡಲೇಬೇಕು. ಅವುಗಳಿಂದ

ಮಾನವನಲ್ಲಿ ಒಳ್ಳೆಯ ವ್ಯಕ್ತಿತ್ವ ಶೀಲಸ್ವಭಾವಗಳು ರೂಪಿತವಾಗುವುವು. ಪ್ರತಿಯೊಬ್ಬನಿಗೂ ವೈಯಕ್ತಿಕವಾಗಿಯೂ ಸಾಮಾಜಿಕವಾಗಿಯೂ ಉದಾತ್ತವಾದ ಧ್ಯೇಯ ಸಾಧನೆಯಾಗುವುದು.

ಕಾಮ ಕ್ರೋಧ ಮತ್ಸರಾದಿ ಉಪದ್ರವಗಳನ್ನು ಮಾನವ ವೈಯಕ್ತಿಕವಾಗಿ ಪರಿಹರಿಸಿಕೊಳ್ಳದ ವಿನಹ ಸಮಾಜಸೇವೆಗೆ ಸಮರ್ಥನಾಗಲಾರ. ಸಮಾಜಕ್ಕೆ ಆತ ಕಂಟಕನೇ ಆಗುತ್ತಾನೆ.

ಸಮಾಜದಲ್ಲಿ ರಾಷ್ಟ್ರದಲ್ಲಿ ಎಲ್ಲೆಡೆ ಕೊಲೆ ಸುಲಿಗೆ ಅತ್ಯಾಚಾರ ಅನ್ಯಾಯ ಕಲಹ ದಬ್ಬಾಳಿಕೆಗಳು ನಡೆಯುತ್ತಿರುವುದಕ್ಕೆ ವ್ಯಕ್ತಿ ತನ್ನ ಶೀಲ ಸಜ್ಜನಿಕೆಗಳನ್ನು ಗಾಳಿಗೆ ತೂರುವುದೇ ಕಾರಣ. ಹೊರತು ಸ್ವಾರ್ಥಪರರಾದ ರಾಜಕಾರಣಿಗಳು ಹೇಳುವಂತೆ ಜಾತಿಪದ್ಧತಿ ಅಸ್ಪೃಶ್ಯತೆ ಮಡಿಮೈಲಿಗೆ ಮುಂತಾದ ಕಂದಾಚಾರ ಗಳಲ್ಲ.

ಈ ರಾಜಕಾರಣಿಗಳು ಸ್ವಾರ್ಥಕ್ಕಾಗಿ ತಾವು ಜಾತಿಮತಗಳನ್ನೇ ಎತ್ತಿಹಿಡಿದು ಜಾತ್ಯತೀತ ಧರ್ಮನಿರಪೇಕ್ಷ ಪ್ರಗತಿಪರ ಮುಂತಾದ ಹೆಸರಿನಿಂದ ಜಾತಿಮತ ದ್ವೇಷದ ಬೀಜಬಿತ್ತಿ ಹೆಮ್ಮರವಾಗಿ ಬೆಳೆಸುತ್ತಾರೆ.

ಪರಸ್ಪರ ಪ್ರೀತಿಯಿಂದ ಸಹಬಾಳ್ವೆ ಮಾಡುತ್ತಿರುವ ಸತಿಪತಿಗಳಲ್ಲಿ ತಂದೆಮಕ್ಕಳಲ್ಲಿ ಗುರುಶಿಷ್ಯರಲ್ಲಿ ಇರುವ ಹಿರಿಯರು–ಕಿರಿಯರು ಎನ್ನುವ ಪವಿತ್ರ ಸಂಬಂಧಕ್ಕೆ, ಸ್ವಾತಂತ್ರ್ಯ ಸಮಾನತೆ ಮೂಲಭೂತಹಕ್ಕು ಎಂದು ಮುಂತಾದ ಭಾವನೆಯ ಹುಳಿಹಿಂಡುವ ಕಾರ್ಯವನ್ನು ಬಲು ಚಾಣಾಕ್ಷತೆಯಿಂದ ನಡೆಸುತ್ತಲೇ ಬಂದಿದ್ದಾರೆ.

**ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ**

ಶೀಲ–ಸಜ್ಜನಿಕೆಗಳು, ಹಾಳಾದರೆ ಎಲ್ಲರೂ ಹಾಳಾಗುತ್ತಾರೆ, ಉಳಿದರೆ ಎಲ್ಲರೂ ಉಳಿಯುತ್ತಾರೆ,

ಪೂರ್ವಿಕರಿಗೆ ಸಂಪ್ರದಾಯದಲ್ಲಿ ಆಸಕ್ತಿ ಇತ್ತು. ಈಗಿನವರಿಗೆ ಅದಿಲ್ಲ. ಅದರಿಂದ ಧಾರ್ಮಿಕ ಮೌಲ್ಯ ಈಗಬೇಡ. ಅದು ಅನಿಷ್ಟ. ಸಾಮಾಜಿಕ ಮೌಲ್ಯವನ್ನೇ ಉಳಿಸಿಕೊಳ್ಳಬೇಕೆನ್ನುತ್ತಾರೆ. ಆದರೆ ವ್ಯಕ್ತಿಯಲ್ಲಿ ಧಾರ್ಮಿಕ ಮೌಲ್ಯ ಉಳಿದರೇ ಸಮಾಜದಲ್ಲಿ ಸಾಮಾಜಿಕ ಮೌಲ್ಯ ಉಳಿದೀತು ಇಲ್ಲದಿದ್ದರೆ ಇಲ್ಲ.

ವಸ್ತುತಃ 'ಜಾತ್ಯತೀತ' 'ಧರ್ಮನಿರಪೇಕ್ಷ' ಎಂದರೇನು? ಜಾತಿಯನ್ನು ಬಿಡುವುದು ಧರ್ಮವನ್ನು ಬಿಡುವುದೇ ಅಲ್ಲ. ಅದು ಸಾಧ್ಯವೂ ಅಲ್ಲ. ಸರಕಾರ

ಯಾವುದೇ ಒಂದು ಜಾತಿಗೆ ಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಉಳಿದ ಜನರ ಮೇಲೆ ಅದನ್ನು ಹೇರಬಾರದು. ಸಮಾನವಾಗಿ ಕಾಣಬೇಕು. ಎಲ್ಲರಿಗೂ ಸಮಾನ ಅವಕಾಶ ನೀಡಬೇಕು. ಎಲ್ಲರೂ ತಮ್ಮ ತಮ್ಮ ಧರ್ಮದಲ್ಲಿದ್ದು ನೆಮ್ಮದಿಯಿಂದ ಬಾಳಲು ಪ್ರೋತ್ಸಾಹಿಸಬೇಕು.

'ಉಳ್ಳವನು ಇಲ್ಲದವನ ಮೇಲೆ ದಬ್ಬಾಳಿಕೆ ಮಾಡುತ್ತಾನೆ, ಇಲ್ಲದವನು ಉಳ್ಳವನ ಮೇಲೆ ಹರಿಹಾಯುತ್ತಾನೆ. ಆದರಿಂದ ಬಡತನವನ್ನು ನಿರ್ಮೂಲ ಮಾಡಬೇಕು ನಿಜ. ಆದರೂ ಬಡತನ ನಿರ್ಮೂಲನ ಮಾಡಿದ ಮಾತ್ರಕ್ಕೆ ಸಮಾಜದಲ್ಲಿ ಶಾಂತಿ ಸೌಹಾರ್ದಗಳುಂಟಾಗುವುದಿಲ್ಲ. ಸಜ್ಜನರಾದ ಪಾಂಡವರ ಮೇಲೆ ದೌರ್ಜನ್ಯ ನಡೆಸಿದ ದುರ್ಯೋಧನನಿಗೆ ಬಡತನವಿತ್ತೆ? ಅವನು ನಾನೊಬ್ಬನೆ 'ಉಳ್ಳವನಾಗ'ಬೇಕು. ನನ್ನಂತೆ ಪಾಂಡವರೂ ಸುಖಿಸುವುದನ್ನು ನಾನು ಸಹಿಸಲಾರೆ. ಅವರನ್ನು ನಾಶಮಾಡಬೇಕು. ಅದು ನನ್ನಿಂದಾಗುತ್ತಿಲ್ಲ. ನಾನೇ ಬೆಂಕಿಗೆ ಬಿದ್ದು, ಬೆಂದು ನಾಶವಾಗುತ್ತೇನೆ. ವಿಷ ಉಂಡು ಸಾಯುತ್ತೇನೆ' ಎನ್ನುತ್ತಾನೆ. ಬೇರೆ ಉಪಾಯವಿಲ್ಲದೆ ದುರ್ಯೋಧನನನ್ನೇ ಸರ್ವನಾಶಕ್ಕೆ ತಳ್ಳುತ್ತಾನೆ ಶ್ರೀಕೃಷ್ಣ. ಅದರಿಂದ ವ್ಯಕ್ತಿಗಳಲ್ಲಿ ಶೀಲಸಂವರ್ಧನೆಗೇ ಯತ್ನಿಸ ಬೇಕು. ಅದು ಭಾಗವತಧರ್ಮದ ಪ್ರಸಾರದಿಂದ ಮಾತ್ರ ಸಾಧ್ಯ.

ಭಾಗವತಸಾರೋದ್ಧಾರ ಗ್ರಂಥದಲ್ಲಿ ಅಡವಿಸ್ವಾಮಿಗಳು ಹೇಳುವ ಎಲ್ಲ ಮೂವತ್ತು ಭಾಗವತಧರ್ಮಗಳೂ ಸನಾತನಧರ್ಮಗಳೇ ಆಗಿರುವುದರಿಂದ ಅವು ಎಲ್ಲ ಕಾಲಕ್ಕೂ ಪ್ರಸ್ತುತವೇ ಆಗಿವೆ. 'ಪೂರ್ವಿಕರಿಗೆ ಸಂಪ್ರದಾಯದಲ್ಲಿ ಆಸಕ್ತಿ ಇತ್ತು, ನಮಗೆ ಇಲ್ಲ' ಎಂದು ಯಾರೂ ಹೇಳುವಂತಿಲ್ಲ. ಕಾಮ ಕ್ರೋಧಾದಿ ಕಿಚ್ಚಿನಲ್ಲಿ ಸಿಲುಕಿ ಬೇಯದಂತೆ ಭಾಗವತಧರ್ಮಗಳ ಅಮೃತರಸ ಸೇಚನೆ ಮಾಡಿ ರಕ್ಷಣೆ ನೀಡುತ್ತಿದ್ದಾರೆ ಅವಧೂತಶಿರೋಮಣಿ, ವಿಷ್ಣುತೀರ್ಥರು. ಅದನ್ನು ಒಲ್ಲೆವೆಂದರೆ ಅದು ಜಾಣತನವಲ್ಲ.

'ಬುದ್ಧಿಜೀವಿ'ಗಳು ಆಡುವ ಇಂಥ ಮಾತಿಗೆ ಸುಜೀವಿಗಳು ಕಿವಿಗೊಡುವುದಿಲ್ಲ. ಕಿವಿಗೊಡಬಾರದು.

**ಯಸ್ಯ ಪ್ರಚಂಡತಪಸಾ ಶ್ರುತಿಗೀತವೃತ್ತ-**
**ಸ್ತುಷ್ಟೋ ಹರಿಃಕಿಲ ವಶಂವದತಾಮವಾಪ ।**
**ಶ್ರೀಮಧ್ವ ಸನ್ಮತ ಪಯೋನಿಧಿಪೂರ್ಣಚಂದ್ರಃ**
**ಶ್ರೀವಿಷ್ಣುತೀರ್ಥ ಮುನಿರಾಣ್ಮುದಮಾತನೋತು ॥**

**–ಕೆ. ಹಯವದನ ಪುರಾಣಿಕ**

# ವಿಷಯಾನುಕ್ರಮಣಿಕೆ

## (18) ಬಿಂಬೋಪಾಸಕ ಗುರುಪ್ರಾಪ್ತಿಪ್ರಕರಣ

## (19) ಅಧ್ಯಾತ್ಮಪ್ರಕರಣ

## 20. ಧರ್ಮೋಪದೇಶ ಪ್ರಕರಣ

## ಅಹಿಂಸಾ ಧರ್ಮ



## ಬ್ರಹ್ಮಚರ್ಯ ಧರ್ಮ

## ಸಂತೋಷದ ಧರ್ಮ

## ಶೌಚಧರ್ಮ

## ಸಖ್ಯವೆಂಬ ಭಾಗವತಧರ್ಮ



## 'ಇಜ್ಯಾ' ಎಂಬ ಧರ್ಮ, ಸ್ಥೂಲಪೂಜೆ–ಸೂಕ್ಷ್ಮಪೂಜೆ



## ಇಜ್ಯಾಂಗ 'ಅವನತಿ' ಎಂಬ ಭಾಗವತ ಧರ್ಮ

## 27-28 ಕೀರ್ತನ–ಸೇವಾ ಧರ್ಮಗಳು

## 21. ಬಿಂಬೋಪದೇಶ ಪ್ರಕರಣ

## 22. ಬಿಂಬೋಪಾಸನ (ಆತ್ಮಸಮರ್ಪಣ) ಪ್ರಕರಣ

## 23. ಭಕ್ತಿಸ್ತುತಿ ಪ್ರಕರಣ



## 24. ಭಕ್ತಿಕಾರ್ಯ ಪ್ರಕರಣ

## 25. ಅನ್ಯಥಾ ಮತ್ಯಕರಣ ಪ್ರಕರಣ



## 26. ಗುರುವಿಚಾರ ಪ್ರಕರಣ



## 27. ಅಪರೋಕ್ಷಪ್ರಕರಣ

## 28. ಗುಣನಿವೃತ್ತಿಪ್ರಕರಣ



## 29. ನಾಮಪ್ರಶಂಸಾ ಪ್ರಕರಣ

## 30. ಗುರುದಕ್ಷಿಣಾ ಪ್ರಕರಣ



## ಸರ್ವಸಮರ್ಪಣ

# (೧೮) ಬಿಂಬೋಪಾಸಕ ಗುರುಪ್ರಾಪ್ತಿ ಪ್ರಕರಣ

## ಪ್ರಕರಣ ಸಾರಾಂಶ

ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಅದರಲ್ಲಿ ವಿಚಾರ ಮಾಡುವ ಪ್ರಶ್ನೆಗಳು ಇವು—

(೧) ನಾನು ನನ್ನ ಮನಃಶುದ್ಧಿಯನ್ನು ಹೇಗೆ ಸಂಪಾದಿಸಲು ಸಾಧ್ಯ? ಮನಸ್ಸು, ಮತ್ತೆ ಮತ್ತೆ ವಿಷಯಗಳ ಕಡೆಗೆ ಧಾವಿಸುತ್ತಿದೆ!

(೨) ಧನಾರ್ಜನೆ ರಕ್ಷಣೆ ಮುಂತಾದ ಚಿಂತೆ ಹೇಗೆ ದೂರಾದೀತು?

(೩) ಉಪಾಸನೆಯಲ್ಲಿ ಬರುವ ವಿಘ್ನಗಳ ಪರಿಹಾರ ಹೇಗೆ?

(೪) ಯಾವ ಉಪಾಸನೆ ಅಪರೋಕ್ಷಕ್ಕೆ ಸಾಧನ?

(೫) ಬಿಂಬಾಪರೋಕ್ಷ ಲಾಭ ಹೇಗೆ?

(೬) ಭಕ್ತಿಯನ್ನು ವೃದ್ಧಿಪಡಿಸುವುದು ಹೇಗೆ?

(೭) ವೈರಾಗ್ಯವನ್ನು ದೃಢಪಡಿಸುವುದು ಹೇಗೆ?

(೮) ಅಲೌಕಿಕ ಅಧ್ಯಾತ್ಮದ ಸೂಕ್ಷ್ಮ ವಿಷಯಗಗಳನ್ನು ತಿಳಿಯುವುದು ಹೇಗೆ?

(೯) ಬಿಂಬರೂಪ ಹೇಗಿದೆ?

(೧೦) ಬಿಂಬರೂಪ ಎಲ್ಲಿದೆ?

(೧೧) ಬಿಂಬೋಪಾಸನೆ ಯಾವ ರೀತಿ?

(೧೨) ಬಿಂಬೋಪಾಸನೆ ಲಭ್ಯವಾಗಲು ಏನು ಮಾಡಬೇಕು?

(೧೩) ಎಲ್ಲ ಪ್ರಶ್ನೆಗಳಿಗೆ ಉತ್ತರಿಸುವ ಬಿಂಬರೂಪವನ್ನು ತೋರಿಸುವ ಗುರು ಯಾರು?

(೧೪) ಬಿಂಬೋಪಾಸಕ ಗುರು ಸಿಕ್ಕಿದರೆ ಸ್ವರೂಪೋದ್ಧಾರಕರಾದ ಅವರಿಗೆ ಪ್ರತಿಯಾಗಿ ಏನು ಕೊಡಬಹುದು?

ಇತ್ಯಾದಿ ಪ್ರಶ್ನೆಗಳನ್ನು ಮಾಡಿಕೊಳ್ಳಬೇಕು ಪರಿಹಾರಕ್ಕೆ ಪ್ರಯತ್ನಿಸ ಬೇಕು.

ಸಾಧಕನಿಗೆ ಮನಸಿನಲ್ಲಿ ದುರ್ವಿಷಯ ಭೋಗಜನ್ಮ ಪಾಪಗಳಿಂದ ಶುದ್ಧಿಯಾಗಬೇಕು. ಇಲ್ಲದಿದ್ದರೆ ಮನಸು ವಿಷಯಗಳ ಕಡೆಗೇ ಧಾವಿಸುತ್ತದೆ. ಬುದ್ಧಿಯ ವಶದಲ್ಲಿ ನಿಲ್ಲುವುದಿಲ್ಲ. ಅದಕ್ಕೆ ಧ್ಯಾನೋಪಾಸನೆ ಶಾಸ್ತ್ರಶ್ರವಣಾದಿಗಳನ್ನು ಮಾಡಿ ಅಂತಃಕರಣ ಶುದ್ಧಿಯನ್ನು ಸಂಪಾದಿಸಬೇಕು. ಸಾಧಕನಿಗೆ ಧನ ಸಂಪಾದನೆ ರಕ್ಷಣೆ ವಿನಿಯೋಗಾದಿಗಳ ವಿಷಯದಲ್ಲಿ ಬಹಳ ವ್ಯಸನಗಳಿರು ತ್ತವೆ. ಭಕ್ತಿಪೂರ್ವಕ ಶ್ರವಣದಿಂದಲೇ ಶ್ರೀಹರಿ ಚಿತ್ತವನ್ನು ಪ್ರವೇಶಿಸುತ್ತಾನೆ. ಧ್ಯಾನಕ್ಕೆ ಪ್ರತಿಬಂಧಕವಾಗಿ ಅದರಲ್ಲಿ ತುಂಬಿರುವ ಆ ವ್ಯಸನಗಳನ್ನು ದೂರಮಾಡಿ ಚಿತ್ತೈಕಾಗ್ರತೆಯನ್ನು ಅನುಗ್ರಹಿಸು ತ್ತಾನೆ. ವ್ಯಸನಗಳಿಗೆ ಫಲಕಾಮನೆ ಕಾರಣ. ಫಲಕಾಮನೆ ದೂರವಾದರೆ ಅಂತಃಕರಣ ಶುಚಿಯಾಗುವುದು. ಹೀಗಾಗಿ ಇದು ಶೌಚವೆಂಬ ಭಾಗವತಧರ್ಮ.

ಲೋಕದಲ್ಲಿ ನಾವು ಯಾವುದಾದರೂ ಸಾಧನೆಗೆ ಹೊರಟಾಗ ಅದಕ್ಕೆ ಒಂದು ವಿಘ್ನ ಬಂದರೆ ಹೀಗೆ ಪರಿಹಾರ ಮಾಡಬೇಕು. ಇನ್ನೊಂದು ವಿಘ್ನ ಬಂದರೆ ಹೀಗೆ ಪರಿಹಾರವಿರಬೇಕೆಂದು ಮುಂತಾಗಿ ಊಹೆಯಿಂದ ಸಾಧನಪೂರ್ತಿ ಮಾಡಬೇಕಾಗುತ್ತದೆ. ಹಾಗೇ ಅಧ್ಯಾತ್ಮದಲ್ಲಿ ಬರುವ ವಿಘ್ನಗಳಿಗೂ ಶ್ರವಣಾದಿಗಳಿಂದ ಎಷ್ಟೆಷ್ಟು ಮನಃಶುದ್ಧಿ ಉಂಟಾಗುವುದೋ ಅಷ್ಟಷ್ಟು ಬುದ್ಧಿ ಪ್ರತಿಭಾದಿಬಲದಿಂದಲೇ ಕೆಲವಂಶ ಊಹಿಸಿಕೊಳ್ಳಲು ಶಕ್ಯವಿದೆ. ಊಹಿಸಿ ತಿಳಿಯಲಾಗದ ಕೆಲವು ಅಂಶಗಳಲ್ಲಿ ಗುರೂಪದೇಶ ಬೇಕಾಗುತ್ತದೆ.

ಶ್ರೀಹರಿಯನ್ನು ಒಂದು ನಿಮಿಷಾರ್ಧವಾದರೂ ಅಖಂಡವಾಗಿ ಧ್ಯಾನಿಸಬಲ್ಲವನೆ ಬಿಂಬೋಪದೇಶ ಸಮರ್ಥನಾದ ಗುರು. ಅವನು ತನ್ನೆದೆಯಲ್ಲಿ ಹರಿಯನ್ನು ಭಕ್ತಿಪಾಶದಿಂದ ಕಟ್ಟಿ ನಿಲ್ಲಿಸಿಕೊಳ್ಳುತ್ತಾನೆ. ವಿಷಯಾಸಕ್ತಿಯನ್ನು ಪೂರ್ವಜನ್ಮದಲ್ಲಿಯೇ ಬಹುಸಾಧನೆಗಳಿಂದ

ದೂರಮಾಡಿಕೊಂಡು ಹರಿಪಾದ ಸ್ಮರಣೆಯಲ್ಲಿಯೇ ಸುಖಕಾಣು ತ್ತಾನೆ.

ಪ್ರಹ್ಲಾದನು ತಾಯಿಯ ಗರ್ಭದಲ್ಲಿದ್ದಾಗ ನಾರದರು ಬಂದು ಉಪದೇಶ ಮಾಡಿದರು. ಹೀಗೆ ಅನಿಮಿತ್ತವಾದ ದಯೆಯಿಂದ ತಾವೇ ಬಂದು ಬಿಂಬೋಪದೇಶಗೈದು ಭವಭಯಪರಿಹಾರ ಮಾಡುವ ಗುರುಗಳ ಸೇವೆ, ಅವರಲ್ಲಿ ಭಕ್ತಿ, ಆತ್ಯಾವಶ್ಯಕ. ಇದು ಸಖ್ಯ ಎಂಬ ಭಾಗವತಧರ್ಮಾನುಷ್ಠಾನವಾಗಿದೆ. ಹರಿಭಕ್ತಿಯಂತೆ ಗುರುಭಕ್ತಿಯೂ ಮೋಕ್ಷಸಾಧನ ಎಂದು ಪ್ರಹ್ಲಾದನ ದೃಷ್ಟಾಂತ ದಿಂದ ತಿಳಿಯುತ್ತದೆ.

❖❖❖

–೨೦೯–

## ಸಾಧಕನಿಗೆ ಶ್ರವಣಶ್ರದ್ಧೆಯಿಂದಲೇ ಮನಃಶುದ್ಧಿ

**ಶುದ್ಧಿರ್ನೃಣಾಂ ನ ತು ತಥೇಡ್ಯ ದುರಾಶಯಾನಾಂ**
**ವಿದ್ಯಾಶ್ರುತಾಧ್ಯಯನದಾನತಪಃಕ್ರಿಯಾಭಿಃ ।**
**ಸತ್ತ್ವಾತ್ಮನಾಂ ಋಷಭ ತೇ ಯಶಸಿ ಪ್ರವೃದ್ಧ-**
**ಸಚ್ಛ್ರದ್ಧಯಾ ಶ್ರವಣಸಂಭೃತಯಾ ಯಥಾ ಸ್ಯಾತ್ ॥**

(ಭಾ.೧೧.೬.೯)

ಶ್ರೀಮುರಲೀಧರಾಯ ನಮಃ ॥ **ಶ್ರೀಸತ್ಯಜ್ಞಾನತೀರ್ಥಗುರುಭ್ಯೋ ನಮಃ ॥** ತದೇವಂ ಯಥಾಯೋಗ್ಯಸಂಪತ್ತಿಮತಃ ಅನುದಿನಮೇವ ವರ್ಧಮಾನಭಕ್ತ್ಯಾದಿಗುಣವಿಶೇಷಸ್ಯ ಸಾಮಾನ್ಯತಃ ಉಕ್ತಪ್ರಕಾರೇಣ ಶ್ರೀಹರಿಚರಣೋಪಾಸನಾಂ ಆಚರತಃ ಏಕಾಂತದೇಶಂ ಉಪಾಸೀನಸ್ಯ ಅಧಿಕಾರಿಣಃ ಮನೋವೃತ್ತಯಃ ಏವಂ ಪ್ರಚರಂತಿ । **ತಥಾಹಿ—** ಕೀದೃಶೀ ಇಯಂ ಮೇ ಮನಃಶುದ್ಧಿಃ । ಯತ್ತುನಃ ಪುನರಪಿ ವಿಷಯಮೇವ ಅಭಿಧಾವತಿ । ಪ್ರಶಸ್ತಾ ಶುದ್ಧಿಶ್ಚ ಕೇನ ಭವೇತ್ । ಕಿಮೇತಂ ಸಂಸಾರಸನ್ನಿಧಿಂ ಪರಿತ್ಯಜ್ಯ ತೀರ್ಥಯಾತ್ರಾಕಾಯಕ್ಲೇಶಾದಿನಾ ಭವೇತ್ । ಕಿಂ ವಾ ಅನ್ಯೇನ ಕೇನಚಿತ್ ॥ ೧ ॥ ತಥಾ ಅದ್ಯ ಇದಮಸ್ತಿ, ಇದಂ ಚ ನಾಸ್ತಿ, ಇದಂ ಗತಂ, ಇದಂ ಮೃತಂ,

ಇತ್ಯಾದೀನಿ ನಾನಾವ್ಯಸನಾನಿ ಭವಂತಿ । ಏತಾನಿ ಚ ಕಿಂ ತೀರ್ಥಯಾತ್ರಾದಿನಾ ಗತಾನಿ ಭವೇಯುಃ, ಕಿಂವಾ ಅನ್ಯೇನ ಕೇನಚಿದಿತಿ ॥ ೨ ॥ ಕಿಂಚ ಉಪಾಸನಾರ್ಥಂ ಪ್ರಯತನೇ ವಿಘ್ನಾ ಏವ ವಿಶ್ವತಃ ವಿಜಯಂತೇ, ತತ್ಪರಿಹಾರಶ್ಚ ಕೇನ ಭವೇತ್ ॥ ೩ ॥ ತಥಾ ಉಪಾಸನಯಾ ಅಪರೋಕ್ಷಂ ಕೀದೃಶ್ಯಾ ಭವೇತ್ । ವಿನಾ ತೇನ ಮುಕ್ತ್ಯಭಾವಾತ್ । ನ ಚ ಅಪರೋಕ್ಷಮಪಿ ರೂಪಾಂತರವಿಷಯಂ ತತ್ಸಾಧನಂ । ತತಃ ಬಿಂಬವಿಷಯಂ ಜ್ಞಾನಂ ವಿಜ್ಞಾನಪದಬೋಧ್ಯಂ ಸಂಪಾದ್ಯಂ ॥ ೪ ॥ ತಚ್ಚ ಕಥಂ ಭವೇತ್ ॥ ೫ ॥ ಕೀದೃಶೀ ಚೇಯಂ ಮಮ ಭಕ್ತಿಃ । ಯಾ ಭಕ್ತಭಕ್ತಿಸದೃಶೀ । ಯಾ ಚ ಶಾಸ್ತ್ರೇಷು ಆತ್ಮಾತ್ಮೀಯಸಮಸ್ತವಸ್ತುಭ್ಯಃ ಅನೇಕಗುಣಾಧಿಕನಿರಂತರಪ್ರೇಮಪ್ರವಾಹತಯಾ ಗೀಯತೇ, ಸಾ ಪರಮಭಕ್ತಿಃ ಕಥಂ ವಾ ಸ್ಯಾತ್ ॥ ೬ । ಕೀದೃಶಃ ಅಯಂ ಮೇ ವಿರಾಗಃ । ಯಃ ಅಪೇಕ್ಷಿತಾಲಾಭನಿಮಿತ್ತಕುಮಾರವಿರಾಗಸದೃಶಃ । ಯಶ್ಚ ಶಾಸ್ತ್ರೇ ''ಕುಣಪಮಿವ ಕಲೇವರಮಿದಂ ಪಶ್ಯಂತೀ''ತ್ಯಾದಿನಾ ಗೀಯತೇ । ಸೋಽಯಂ ಪ್ರಶಸ್ತಃ ವಿರಾಗಃ ಕಥಂ ಭವೇತ್ । ಯೇನ ಚ ಇದಂ ಸರ್ವಂ ಸಾಧನಜಾತಂ ಉಜ್ಜೀವಿತಂ ಭವತಿ ॥ ೭ ॥ ಅಪಿ ಚ ಮೇ ಮನಃ ಯಥಾ ಲೌಕಿಕೇ ಅರ್ಥೇ ಮಮ ಇದಂ ಪ್ರಯೋಜನಂ, ಮಯಾ ಇದಂ ಸಾಧನೀಯಂ, ತಸ್ಯ ಚ ಅನ್ಯೇನ ವಿಘ್ನೇ ಕೃತೇ ತತ್ರ ಅಸ್ಮಾಭಿಃ ಇದಂ ಉತ್ತರಂ ದೇಯಂ, ತೇನ ಪುನಃ ಪ್ರಕಾರಾಂತರೇ ಕೃತೇ ತತ್ರ ಅಸ್ಮಾಭಿಃ ಇತ್ಥಂ ಕಾರ್ಯಂ, ಇತ್ಯೇವಂ ಅನೇಕವಿಧೋತ್ಪ್ರೇಕ್ಷಾಕ್ಷಮ, ತಥಾ ಅಲೌಕಿಕೇ ಆಧ್ಯಾತ್ಮಿಕೇ ಸೂಕ್ಷ್ಮೇ ತತ್ತ್ವೇ ನ ಭವತಿ । ಇದಂ ಚ ಅತ್ಯಾವಶ್ಯಕಂ । ಅಧ್ಯಾತ್ಮಪ್ರವಣತಾಯಾ ಏವ ಉಪಾಸನಾದ್ಯಂತರಂಗತ್ವಾತ್ ತಚ ಕಥಂ ಸಿದ್ಧ್ಯೇತ್ ॥ ೮ ॥ ಅಸ್ತು ಏತತ್ಸರ್ವಂ ತಾವತ್ । ಯಃ ಸಾಂಪ್ರತಂ ಉಪಾಸ್ಯತೇ ಸಾಮಾನ್ಯತಃ ಉಕ್ತಪ್ರಕರಣ ಮಯಾ ಹರಿಃ । ಸ ಹಿ ಬಿಂಬರೂಪ ಏವ ಉಪಾಸಿತಃ ಮುಕ್ತಿದಃ ಇತಿ ಹ್ಯುಕ್ತಂ । ತಚ್ಚ ರೂಪಂ ಕೀದೃಕ್ ಚಕಾಸ್ತಿ ॥ ೯ ॥ ತತ್ ಕ್ವಾಸ್ತಿ ॥ ೧೦ ॥ ತದುಪಾಸನಮಪಿ ಕಿಂಪ್ರಕಾರಕಂ ॥ ೧೧ ॥ ಕಿಂಚ ತತ್ಪ್ರಾಪ್ತಯೇ ಮಯಾ ಸಾಧನೀಯಂ ಸಾಧನಂ ॥ ೧೨ ॥ ತದೇತಸ್ಯ ಸರ್ವಸ್ಯ ಪ್ರಕಾಶಕ(ಪ್ರದರ್ಶಕ)ಶ್ಚ ಕಃ ॥ ೧೩ ॥ ತಾದೃಶಶ್ಚ ಯದಿ ವಿದ್ಯೇತ, ದೈವಾತ್ ಲಭ್ಯೇತ ಚ ಅಸ್ಮಾಕಂ, ತದಾ ಅಸ್ಮತ್ಸ್ವರೂಪೋದ್ಧಾರಕಂ ನಿರ್ನಿಮಿತ್ತಂ ಉಪಕಾರಿಣಂ ಕಥಂ ವಯಂ ಚ ಪ್ರತಿಕುರ್ಮಃ ॥ ೧೪ ॥ ಇತ್ಯೇವಂವಿಧಾಃ । ತತ್ರ ಸರ್ವತ್ರ ಉತ್ತರಂ ಉತ್ತರೈಃ ಪ್ರಕರಣಃ ವದಿಷ್ಯನ್ ಸರ್ವಸ್ಯಾಪಿ ಏತದೇವ ಮೂಲಮಿತಿ ಆದೌ ಬಿಂಬೋಪಾಸಕಗುರುಪ್ರಾಪ್ತಿಂ ವಕ್ತುಂ ಇದಂ ಆದಿಮಂ ಪ್ರಕರಣಂ । ತತ್ರ ಆದೀ ಆದಿಮಾಂ ಶಂಕಾಂ ಪರಿಹರತಿ ॥ ಶುದ್ಧಿರಿತಿ ॥ ಹೇ ಈಡ್ಯ,

**ದುರಾಶಯಾನಾಂ ಅನಿಗ್ರೃಹೀತಮನಸಾಂ। ನೃಣಾಂ ಪುಂಸಾಂ। ವಿದ್ಯಾದಿಭಿಃ ಪಾವನತಯಾ ಪ್ರಸಿದ್ಧೈರಪಿ । ತಥಾ ತಾದೃಶೀ । ಶುದ್ಧಿಃ । ನ ತು ನೈವ । ಸಾ ಕಾ । ಯಥಾ ಯಾದೃಶೀ ಶುದ್ಧಿಃ। ಸತ್ವಾತ್ಮನಾಂ ನಿಗೃಹೀತಮನಸಾಂ ಪುಂಸಾಂ। ತೇ ತವ। ಯಶಸಿ ವಿಷಯೇ। ನಿತ್ಯಂ ಪ್ರವರ್ಧಮಾನಯಾ ಸತ್ಯಾ ಶ್ರದ್ಧಯಾ। ತತ್ಪೂರ್ವಕಂ ಯಚ್ಛ್ರವಣಂ ಯಶಸಃ, ತೇನ ಸಂಭೃತಯಾ ಅಭಿವ್ಯಕ್ತವಿಶೇಷಯಾ। ಭಕ್ತ್ಯಾ ಸ್ಯಾದಿತಿ। ಅನೇನ ಅತ್ಯಂತಂ ಮನಃಶುದ್ಧಿಃ ಶ್ರದ್ಧಾಪೂರ್ವಕಶ್ರವಣಾದಿಜನ್ಯಭಕ್ತ್ಯೈವ ನ ತು ತೀರ್ಥಯಾತ್ರಾದಿನೇತಿ ಶ್ರವಣಾದಿಕಮೇವ ತದುಪಾಯ ಇತಿ ಪ್ರಥಮಶಂಕಾಪರಿಹಾರಃ ಇತಿ ಜ್ಞೇಯಂ ॥**

❖❖❖

**ದೇವತೆಗಳು ಶ್ರೀಕೃಷ್ಣನನ್ನು ಪರಂಧಾಮಕ್ಕೆ ಕರೆಯುವಾಗ ಹೇಳುತ್ತಾರೆ— ಸ್ತೋತ್ರಾರ್ಹ ಸರ್ವೋತ್ತಮ ಶ್ರೀಕೃಷ್ಣನೇ, ಸಾತ್ವಿಕ ಜನರಿಗೆ ನಿನ್ನ ಮಹಿಮೆಗಳ ಬಗ್ಗೆ ಶ್ರವಣ ಮಾತ್ರದಿಂದ ಉಕ್ಕುವ ಸಾತ್ವಿಕಶ್ರದ್ಧೆಯಿಂದ ಅಂತಃಕರಣವು ಪಾಪಲೇಪರಹಿತವಾಗಿ ಎಷ್ಟು ಶುದ್ಧವಾಗುವುದೋ ಅಷ್ಟು ತಾಮಸಜೀವರಿಗೆ ಧ್ಯಾನೋಪಾಸನೆ ಶಾಸ್ತ್ರಶ್ರವಣ ವೇದಾಧ್ಯಯನ ದಾನ ತಪಸ್ಸು ಪ್ರಾಯಶ್ಚಿತ್ತ ಕರ್ಮಗಳಿಂದಲೂ ಮನಃಶುದ್ಧಿ ಲಭಿಸದು.**

ಸಾಧಕನಿಗೆ ಮನಃಶುದ್ಧಿ ಹೇಗೆ ಎನ್ನುವ ಸಂಶಯಕ್ಕೆ ಪರಿಹಾರವಾಗಿ ದೇವತೆಗಳು ಹೇಳುತ್ತಾರೆ. ಬಿಂಬೋಪಾಸನೆಗೆ ತೊಡಗುವ ಸಾಧಕನಿಗೆ ಮೊದಲಿಗೆ ಮನಸ್ಸಿನಲ್ಲಿ ದುರ್ವಿಷಯ ಭೋಗಜನ್ಯಪಾಪಗಳಿಂದ ಶುದ್ಧಿ ಉಂಟಾಗಬೇಕು, ಇಲ್ಲದಿದ್ದರೆ ಮನಸು ವಿಷಯಗಳ ಕಡೆಗೇ ಧಾವಿಸುತ್ತದೆ. ಬುದ್ಧಿಯ ವಶದಲ್ಲಿ ನಿಲ್ಲುವುದಿಲ್ಲ. ಮನೋನಿಗ್ರಹವು ಸಾಧಕನಿಗೆ ಅಶಕ್ಯವಾಗುವುದು. ಅದಕ್ಕೆ ಅವನು ಭಕ್ತಿಯಿಂದ ಧ್ಯಾನೋಪಾಸನೆ ಶಾಸ್ತ್ರಶ್ರವಣಾದಿಗಳನ್ನು ಮಾಡಿ ಆ ಮೂಲಕವೇ ಮನಸಿನ ಪಾಪಗಳನ್ನು ತೊಡೆದುಕೊಂಡು ಶುದ್ಧಿ ಸಂಪಾದಿಸಬೇಕು. ಆಗಲೇ ಅವನಿಗೆ ಬಿಂಬೋಪಾಸಕ ಗುರು ಪ್ರಾಪ್ತಿಯಾಗುವುದು.

ಆತ್ಮವಿಮರ್ಶೆಯಲ್ಲಿ ಸಾಧಕರಿಗೆ ಬರುವ ಸಂಶಯಗಳ ಸರಮಾಲೆ ಹೀಗೆ—

(೧)ಮನಃಶುದ್ಧಿಯನ್ನು ಹೇಗೆ ಸಂಪಾದಿಸಬೇಕು? ಮತ್ತೆ ಮತ್ತೆ ಮನವೇಕೆ ವಿಷಯಗಳ ಕಡೆಗೆ ಧಾವಿಸುತ್ತದೆ. ಸಂಸಾರವನ್ನು ತೊರೆದು ತೀರ್ಥಯಾತ್ರೆ ತಪಸ್ಸುಗಳನ್ನು ಮಾಡಲೆ?

(೨) ಧನಾರ್ಜನ ಚಿಂತೆ ಕಳೆದು, ಮನಸಿಗೆ ನೆಮ್ಮದಿ ಹೇಗೆ ಬಂದೀತು? ತೀರ್ಥಯಾತ್ರಾದಿಗಳಿಂದಲೇ ಚಿಂತೆಕಳೆದೀತೆ?

(೩) ಉಪಾಸನಾ ಪ್ರಯತ್ನಕ್ಕೆ ವಿಘ್ನಗಳ ಪರಿಹಾರ ಹೇಗೆ?

(೪) ಯಾವ ರೀತಿಯಉಪಾಸನೆ ಅಪರೋಕ್ಷ ಸಾಧನವಾದೀತು?

(೫) ಬಿಂಬಾಪರೋಕ್ಷ ಲಾಭ ಹೇಗೆ? ಬೇರೆ ಅಪರೋಕ್ಷ ಮೋಕ್ಷಸಾಧನ ವಲ್ಲ ತಾನೆ?

(೬) ಭಕ್ತಿಯನ್ನು ಭಕ್ತರಾದ ದುರ್ಗಾವಿನಾಯಕರಲ್ಲಿರುವುದಕ್ಕಿಂತ ಹೆಚ್ಚಾಗಿ ವೃದ್ಧಿಪಡಿಸುವುದು ಹೇಗೆ? ಅದು ನಿರಂತರ ಪ್ರೇಮ ಪ್ರವಾಹರೂಪ ಹೇಗಾದೀತು?

(೭) ವೈರಾಗ್ಯವನ್ನು ಹೆಚ್ಚಿಸುವುದು ಹೇಗೆ? ಶರೀರವನ್ನು ಹೆಣಕ್ಕೆ ಸಮಾನ ವಾಗಿ ಕಾಣುವಂಥ ವೈರಾಗ್ಯಬೇಕು.

(೮) ಅಲೌಕಿಕ ಅಧ್ಯಾತ್ಮ ಸೂಕ್ಷ್ಮ ವಿಷಯಗಳನ್ನು ತಿಳಿಯುವ ಸಾಮರ್ಥ್ಯ ಹೇಗೆ ಸಾಧ್ಯ ? ಲೌಕಿಕ ವಿಷಯದಲ್ಲಿ ಸ್ವಂತ ಬುದ್ಧಿಕೌಶಲ್ಯದಿಂದ ಎಲ್ಲವನ್ನೂ ತಿಳಿಯಬಹುದು.

(೯) ಬಿಂಬರೂಪ ಹೇಗಿದೆ? ಮೋಕ್ಷದಾಯಕನು ಬಿಂಬರೂಪನೆ ತಾನೆ?

(೧೦) ಅದೆಲ್ಲಿದೆ?

(೧೧) ಅದರ ಉಪಾಸನೆ ಯಾವ ರೀತಿ ಮಾಡಬೇಕು ?

(೧೨) ಉಪಾಸನೆ ಸಿಗಲು ಏನು ಸಾಧನಗಳ ಅನುಷ್ಠಾನ ಮಾಡಬೇಕು?

(೧೩) ಈ ಎಲ್ಲಕ್ಕೂ ಉತ್ತರಿಸಿ, ಬಿಂಬದರ್ಶನ ಮಾಡಿಸುವ ಗುರು ಯಾರು?

(೧೪) ಸ್ವರೂಪೋದ್ಧಾರಕನಾದ ಅಂಥ ಗುರು ಸಿಕ್ಕಿದರೆ ಅವರಿಗೆ ಪ್ರತಿಯಾಗಿ ಏನು ನೀಡಬೇಕು?

ಪ್ರಕೃತದಲ್ಲಿ ದೇವತೆಗಳ ಈ ಮಾತಿನಿಂದ, 'ಶ್ರದ್ಧಾಪೂರ್ವಕ ಹರಿಗುಣ

ಶ್ರವಣದಿಂದಲೆ ಭಕ್ತಿಯನ್ನು ಸಂಪಾದಿಸಿದರೇ ಒಳ್ಳೆಯ ಮನಃಶುದ್ಧಿ ಹೊರತು ತೀರ್ಥಯಾತ್ರಾದಿಗಳಿಂದ ಅಲ್ಲ' ಎಂದು ಮೊದಲನೇ ಸಂಶಯಕ್ಕೆ ಪರಿಹಾರ ಸಿದ್ಧವಾಗುವುದು.

❖❖❖

–೨೧೦–

**ಶ್ರವಣದಿಂದಲೆ ದ್ರವ್ಯಾರ್ಜನ ಚಿಂತೆಯ ಪರಿಹಾರ**

**ಸಂಕೀರ್ತ್ಯಮಾನೋ ಭಗವಾನನಂತಃ**
**ಶ್ರುತಾನುಭಾವೋ ವ್ಯಸನಂ ಹಿ ಪುಂಸಾಂ ।**
**ಪ್ರವಿಶ್ಯ ಚಿತ್ತಂ ವಿಧುನೋತ್ಯಶೇಷಂ**
**ಯಥಾ ತಮೋಽರ್ಕೋಽಭ್ರಮಿವಾತಿವಾತಃ ॥** (ಭಾ.೧೨.೧೨.೪೭)

**ದ್ವಿತೀಯಾಮಪಿ ನಿರಾಕರೋತಿ ॥ ಸಂಕೀರ್ತ್ಯಮಾನ ಇತಿ ॥ ಯೈಃ ಪುಂಭಿಃ । ಅನಂತಃ ಭಗವಾನ್ । ಶ್ರುತಃ ಅನುಭಾವೋ ಯಸ್ಯ । ಯೈಃ ಸಂ ಸಮ್ಯಕ್ ಮಾಹಾತ್ಮ್ಯಕಥನಪೂರ್ವಕಂ, ಕೀರ್ತ್ಯಮಾನಃ ಪ್ರತಿಪಾದ್ಯಮಾನಶ್ಚ ಭವತಿ । ತೇಷಾಂ ಪುಂಸಾಂ । ಚಿತ್ತಂ ಪ್ರವಿಶ್ಯ । ತತ ಏವ ಪ್ರಸನ್ನಃ ಸನ್ । ಅರ್ಕಃ ತಮೋ ಯಥಾ ಯದ್ವತ್ । ಅತಿಶಯಿತಃ ವಾತಃ ಮೇಘಮಿವ । ಅಶೇಷಮಪಿ ವ್ಯಸನಂ । ವಿಧುನೋತಿ ಪರಿಹರತಿ । ಬಹುಭಾಗವತಜನಾನುಭವಸಿದ್ಧಮಿದಮಿತಿ ಹಿಶಬ್ದೇನಾಹ । ಅನೇನ ಪೂರ್ವತ್ರೇವ ಅತ್ರಾಪಿ ತದೇವ ಪ್ರಸಾದದ್ವಾರಾ ಉಪಾಯ ಇತಿ ದ್ವಿತೀಯಶಂಕಾಪರಿಹಾರ ಇತಿ । ಅನೇನ ಲಭ್ಯಃ ಶೌಚಾಖ್ಯಃ ಭಾಗವತಧರ್ಮಸ್ತು ಪ್ರದರ್ಶ್ಯತೇ ತದವಸರ ಇತಿ ॥**

❖❖❖

ಸಾಧಕನಿಗೆ ಬರುವ ಈ ಸಂಶಯಗಳ ಸರಮಾಲೆಯಲ್ಲಿ ಮೊದಲನೆ ಸಂಶಯಕ್ಕೆ ದೇವತೆಗಳೇ ಪರಿಹಾರ ಹೇಳಿದ್ದಾರೆ. ಇದೀಗ ಎರಡನೆ ಸಂಶಯಕ್ಕೆ ಸೂತರು ಹೇಳುತ್ತಾರೆ—ಭಗವಾನ್ ಅನಂತನ ಮಹಿಮೆಗಳನ್ನು ಭಕ್ತಿಯಿಂದ ಶ್ರವಣ ಮಾಡಿದರೆ ಅವನು ಚಿತ್ತದಲ್ಲಿ ಪ್ರವೇಶಿಸಿ ಸೂರ್ಯನು ಕತ್ತಲನ್ನು ಹೇಗೋ, ಬಿರುಗಾಳಿ ಮೋಡವನ್ನು ಹೇಗೋ ಹಾಗೇ ಸಾಧಕರ ಸಮಸ್ತ ವ್ಯಸನಗಳನ್ನು ದೂರಮಾಡುವನು. ಇದು ಎಲ್ಲ ಭಾಗವತರಿಗೆ ಅನುಭವಸಿದ್ಧವೇ ಇದೆ.

ಸಾಧಕನಿಗೆ ಮನಸಿನಲ್ಲಿ ಅನೇಕ ಆರ್ಥಿಕ ವ್ಯಸನಗಳಿರುತ್ತವೆ. ನನ್ನಲ್ಲಿ ಈ ಧನಸಂಪತ್ತು ಇದೆ. ಈ ಸಂಪತ್ತು ಇಲ್ಲ, ಇವು ಕಳೆದುಹೋದುವು. ಇವರು ಬಂಧುಗಳು ಸ್ನೇಹಿತರು ಮೃತರಾದರು, ಎಂದು ನಾನಾ ವ್ಯಸನಗಳು, ತೀರ್ಥಯಾತ್ರಾದಿ ಕಾಯಕ್ಲೇಶಗಳಿಂದ ಇವನ್ನು ದೂರಮಾಡಿಕೊಳ್ಳಬೇಕೆ ಅಥವಾ ಬೇರೇನಾದರೂ ಉಪಾಯ ಉಂಟೆ? ಎಂದು ಅವನು ಚಿಂತಿಸುತ್ತಾನೆ.

ಇದಕ್ಕೆ ಏನು ಪರಿಹಾರ ಎಂದರೆ ಭಗವಾನ್ ಅನಂತನ ಅನಂತ ಮಹಿಮೆಗಳ ಭಕ್ತಿಪೂರ್ವಕ ಶ್ರವಣದಿಂದಲೆ ಎಲ್ಲ ವ್ಯಸನಗಳು ದೂರವಾಗುತ್ತವೆ. ಭಗವಾನ್ ಅನಂತನು ಪ್ರಸನ್ನನಾಗಿ ಚಿತ್ತದಲ್ಲಿ ಪ್ರವೇಶಿಸುತ್ತಾನೆ. ಧ್ಯಾನಕ್ಕೆ ಪ್ರತಿಬಂಧಕವಾಗಿ ಅದರಲ್ಲಿ ತುಂಬಿರುವ ಪಾಪಜನ್ಯವಾದ ಎಲ್ಲ ಬಗೆಯ ವ್ಯಸನಗಳನ್ನು ಹೊರಗೆ ಹಾಕುತ್ತಾನೆ. ಚಿತ್ತೈಕಾಗ್ರತೆಯನ್ನು ಅನುಗ್ರಹಿಸುತ್ತಾನೆ ಎಂದು.

ಎಲ್ಲ ವ್ಯಸನಗಳಿಗೂ ಕರ್ಮಫಲಕಾಮನೆಯೆ ಕಾರಣ. ಫಲಕಾಮನೆ ದೂರವಾದರೆ ಅಂತಃಕರಣ ಶುಚಿಯಾಗುವುದು. ಸಾಧಕನಿಗೆ ಬರುವ ದ್ರವ್ಯಾರ್ಜನೆಯ ಚಿಂತೆಯನ್ನು ಹೇಗೆ ಅವನು ದೂರಮಾಡಿಕೊಳ್ಳಬೇಕು ಎನ್ನುವ ಆತ್ಮವಿಮರ್ಶೆಯಲ್ಲಿ ಬರುವ ಎರಡನೆ ಸಂಶಯ ಪರಿಹಾರವಾಗುವುದು. ಹೀಗಾಗಿ ಇದು ಶೌಚವೆಂಬ ಭಾಗವತಧರ್ಮ ನಿರೂಪಣೆಯೇ ಆಯಿತು. ಇದನ್ನು ಮುಂದೆ ವಿವರವಾಗಿ ಹೇಳುತ್ತೇವೆ.

❖❖❖

## –೨೧೧–

### ನಿರಂತರ ಹರಿಸ್ಮರಣೆಯೆ ಎಲ್ಲ ಚಿಂತೆಗಳಿಗೂ ಪರಿಹಾರ

**ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ**
**ಕ್ಷಿಣೋತ್ಯಭದ್ರಾಣಿ ಶಮಂ ತನೋತಿ ಚ ।**
**ಸತ್ವಸ್ಯ ಶುದ್ಧಿಂ ಪರಮಾಂ ಚ ಭಕ್ತಿಂ**
**ಜ್ಞಾನಂ ಚ ವಿಜ್ಞಾನ ವಿರಾಗಯುಕ್ತಂ ॥**

(ಭಾ.೧೨.೧೨.೫೪)

ಇದಾನೀಂ ಶಂಕಾಪಂಚಕಂ ಪರಾಕರೋತಿ ॥ **ಅವಿಸ್ಮೃತಿರಿತಿ ॥** ಕೃಷ್ಣಪದಾರವಿಂದಯೋಃ ಅವಿಸ್ಮೃತಿಃ ಸ್ಮರಣಂ ಶ್ರವಣಾದಿಸಾಧ್ಯಂ ದ್ವಿವಿಧಂ। ಸ್ಮೃತಿರಿತ್ಯೇವ ವಕ್ತವ್ಯೇ ವಿಸ್ಮೃತಿಃ ಸರ್ವಥಾ ನ ಕರ್ತವ್ಯಾ, ಸ್ಮೃತಿರಪಿ ನ ಕಾದಾಚಿತ್ಕೀ ನಾಪ್ಯನಾದರವತೀ ಕಿಂತು ಸಾರ್ವಕಾಲೀನಾ ಪರಮಾದರ ಪೂರ್ವಿಕೈವ ಕರ್ತವ್ಯೇತಿ ಸೂಚನಾಯ ಇತ್ಥಮುಕ್ತಿರಿತಿ ಜ್ಞಾತವ್ಯಂ (ಮಂತವ್ಯಂ)।

ಕೃಷ್ಣಪದಾರವಿಂದಯೋಃ ಅವಿಸ್ಮೃತಿಃ ಏಕೈವ ಸರ್ವತ್ರ ಉಪಾಯ ಇತಿ **ಸಾಮಾನ್ಯತಃ** ಪರಿಹಾರಃ। ಯಾ ನಿರಂತರಂ ಕ್ರಿಯಮಾಣಾ ಉಪಾಸನಾ ಸೈವ ತತಃ ಅಧಿಕಂ ಕ್ರಿಯಮಾಣಾ ಶ್ರೀಕೃಷ್ಣಪದಾರವಿಂದಯೋಃ ಅವಿಸ್ಮೃತಿಃ ಸ್ವವಿಘ್ನಪ್ರಾಪಕಾಣಿ ಪಾಪಾನಿ ನಾಶಯತೀತಿ ಪ್ರಥಮಾಯಾಃ ಶಂಕಾಯಾಃ ಪರಿಹಾರಃ। ಸೈವ ಆದರನೈರಂತರ್ಯಾಭ್ಯಾಂ ವಿಶೇಷಿತಾ ಅವಿಸ್ಮೃತಿಃ ಜ್ಞಾನಂ ಅಪರೋಕ್ಷಂ ಚ ತನೋತೀತಿ ದ್ವಿತೀಯಾಯಾಃ। ಸೈವ ವಿರಾಗಭಕ್ತಿವಿಶೇಷಾಭ್ಯಾಂ ವಿಶೇಷಿತಾ ಅವಿಸ್ಮೃತಿಃ ವಿಜ್ಞಾನಂ ಚ ತನೋತೀತಿ ತೃತೀಯಾಯಾಃ। ಸೈವ ವಿರಾಗಜ್ಞಾನಾಭ್ಯಾಂ ವಿಶೇಷಾಭ್ಯಾಂ ವಿಶೇಷಿತಾ ಅವಿಸ್ಮೃತಿಃ ಪರಮಾಂ ಭಕ್ತಿಂ ತನೋತೀತಿ **ಚತುರ್ಥ್ಯಾಃ**। ಸೈವ ಜ್ಞಾನಭಕ್ತಿಭ್ಯಾಂ ವಿಶೇಷಾಭ್ಯಾಂ ವಿಶೇಷಿತಾ ಪ್ರಾವಣ್ಯರೂಪಾ ಅವಿಸ್ಮೃತಿಃ ವಿರಾಗಮಪಿ ತನೋತೀತಿ ಪಂಚಮ್ಯಾಃ ಇತಿ ಜ್ಞೇಯಂ ॥

❖❖❖

ಮೂರರಿಂದ ಏಳರವರೆಗಿನ ಎಲ್ಲ ಐದೂ ಶಂಕೆಗಳಿಗೆ ಪರಿಹಾರವನ್ನು ಸೂತರು ಹೇಳುತ್ತಾರೆ,

ಶ್ರೀಕೃಷ್ಣನ ಪಾದಕಮಲಗಳನ್ನು ಮರೆಯದೇ ಸದಾ ಸ್ಮರಿಸಬೇಕು ಎಂದಾದರೊಮ್ಮೆ ಸ್ಮರಣೆ ಮಾಡಿದರೆ ಸಾಲದು. ಅನಾದರದಿಂದ ಮಾಡಿದ ಸ್ಮರಣೆ ಪಾಪಪರಿಹಾರಕವಲ್ಲ. ಸದಾ ಸ್ಮರಣೆಬೇಕು. ಮರೆವು ಸರ್ವಥಾ ಇರಬಾರದು. ಇಂಥ 'ಅ-ವಿಸ್ಮೃತಿ' ಇದ್ದರೆ ಸರ್ವಕಾಲದಲ್ಲಿ ಪರಮಾದರದಿಂದ ಶ್ರೀಕೃಷ್ಣನ ಪಾದಾರವಿಂದಗಳನ್ನು ಭಕ್ತಿಯಿಂದ ಸದಾ ಸ್ಮರಿಸುತ್ತಿದ್ದರೆ, ಅದು ಧ್ಯಾನವಿಘ್ನಕರ ವಾದ ಎಲ್ಲ ಪಾಪಗಳನ್ನು ನಾಶಪಡಿಸುವುದು. ಅದೇ ಸಾಧಕನ ಆತ್ಮವಿಮರ್ಶೆಯ ಎಲ್ಲ ಶಂಕೆಗಳಿಗೂ ಸಾಮಾನ್ಯ ಪರಿಹಾರ.

ಮತ್ತು ಇದು ಮೂರನೆ ಸಂಶಯಕ್ಕೆ ಪರಿಹಾರ. ಸಾಧಕನಿಗೆ ಮನೋಬಲ

ಉಂಟಾಗುವುದು. ಉಪಾಸನೆಗಾಗಿ ಯತ್ನಿಸುವಲ್ಲಿ ವಿಘ್ನಗಳು ಬರಬಹುದೆಂಬ ಶಂಕೆ ಇಲ್ಲವಾಗುವುದು.

ಆದರದಿಂದ ನಿರಂತರ ಧ್ಯಾನಮಾಡದೆ ಅಪರೋಕ್ಷಬಾರದು. ಅಪರೋಕ್ಷ ಜ್ಞಾನಬಾರದೆ ಮೋಕ್ಷ ಸಿಗಲಾರದು. ಇದು ಯಾವ ರೀತಿಯ ಉಪಾಸನೆ ಅಪರೋಕ್ಷಕ್ಕೆ ಸಾಧನವಾದೀತೆಂಬ ನಾಲ್ಕನೆ ಸಂಶಯಕ್ಕೆ ಪರಿಹಾರ.

ಆ ಅಪರೋಕ್ಷವೂ ಬೇರೆ ರೂಪಗಳ ವಿಷಯದಲ್ಲಿ ಬಂದರೆ ಅದು ಮೋಕ್ಷಸಾಧನವಾಗಲಾರದು. ಬಿಂಬವಿಷಯದಲ್ಲಿಯೇ ಅಪರೋಕ್ಷ ಬರಬೇಕು. ಬರುತ್ತದೆ. ಇದು ಐದನೆ ಸಂಶಯಕ್ಕೆ ಪರಿಹಾರ.

ಈ ಬಿಂಬಾಪರೋಕ್ಷವೇ 'ವಿಜ್ಞಾನ' ಅದು ಬರಬೇಕು. ಅದರಿಂದ ಬರುವ ಭಕ್ತಿಯೂ ನ್ಯಾಯಸುಧೆಯಲ್ಲಿ ಹೇಳಿದಂತೆ 'ಆತ್ಮಾತ್ಮೀಯ ಸಮಸ್ತ ವಸ್ತುಭ್ಯೋಽನೇಕ ಗುಣಾಧಿಕನಿರಂತರ ಪ್ರೇಮಪ್ರವಾಹ' ರೂಪವಾಗಿರಬೇಕು. ಆಗಿರುತ್ತದೆ. ಇದು ಆರನೆ ಸಂಶಯಕ್ಕೆ ಪರಿಹಾರ.

ವೈರಾಗ್ಯವೂ ಕೂಡ ಬೇಡಿದ್ದು ಸಿಗದಾಗ ರಂಪ ಮಾಡುವ ಮಗುವಿನ ವೈರಾಗ್ಯದಂತಲ್ಲದೆ, ಶರೀರವನ್ನು ಹೆಣದಂತೆ ಕಾಣುವ ಶಾಸ್ತ್ರೋಕ್ತವಾದ ಪ್ರಶಸ್ತವಾದ ಹೆಚ್ಚಿನ ವಿರಕ್ತಿಯೇ ಆಗಿರಬೇಕು. ಅದೂ ಹೇಗೆ ಲಭಿಸೀತು? ಅದು ಹರಿಸ್ಮರಣೆಯಿಂದ ಲಭಿಸುತ್ತದೆ ಎಂದು ಏಳನೆ ಸಂಶಯಕ್ಕೆ ಪರಿಹಾರ ಲಭಿಸಿದಾಗಲೇ ನನ್ನ ಎಲ್ಲ ಸಾಧನೆಗಳು ಸಾರ್ಥಕವಾಗಬಲ್ಲವು ಎಂದು, ಸಾಧಕನು ಅಪೇಕ್ಷಿಸುವ ಅಪರೋಕ್ಷಜ್ಞಾನ ವೈರಾಗ್ಯಭಕ್ತಿಗಳೂ ಕೂಡ ಅವಿಸ್ಮೃತಿಯಿಂದ ಲಭ್ಯವಾಗುವುವು.

ಹೀಗೆ ಮೂರರಿಂದ ಏಳರವರೆಗಿನ ಸಾಧಕನ ಆತ್ಮವಿಮರ್ಶೆಯ ಎಲ್ಲ ಸಂಶಯಗಳಿಗೆ ಸೂಕ್ತ ಪರಿಹಾರ ಹೇಳಿದ್ದಾರೆ.

❖❖❖

–೨೧೨–

**ಶ್ರವಣಾದಿಗಳಿಂದ ಸೂಕ್ಷ್ಮ ತತ್ವಗಳ ದರ್ಶನ**

ಯಥಾಯಥಾಽಽತ್ಮಾ ಪರಿಮೃಜ್ಯತೇಽಸೌ
ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।

**ತಥಾ ತಥಾ ಪಶ್ಯತಿ ತತ್ವ ಸೂಕ್ಷ್ಮಂ**
**ಚಕ್ಷುರ್ಯಥೈವಾಂಜನಸಂಪ್ರಯುಕ್ತಂ ॥** (ಭಾ.೧೧.೧೪.೨೬)

**ಅಷ್ಟಮೀಂ ನಿರಾಚಷ್ಟೇ ॥ ಯಥಾ ಯಥೇತಿ ॥ ಆತ್ಮಾ ಮನಃ । ಮಮ ಪುಣ್ಯಕಥಾನಾಂ ಪುನಃ ಪುನಃ ಶ್ರವಣೇನ ಪುನಃ ಪುನಃ ಅಭಿಧಾನೇನ ಚ ಇತ್ಯೇವಂ ಶ್ರವಣೈಃ ಅಭಿಧಾನೈಶ್ಚ । ತದಭಿವೃದ್ಧಯಾ ಭಕ್ತ್ಯೇತಿ ಯಾವತ್ । ಯಥಾ ಯಥಾ ಪರಿಮೃಜ್ಯತೇ ಶೋಧ್ಯತೇ । ತಥಾತಥಾ ಶುದ್ಧಿವಿಶೇಷಂ ಅನುಸೃತ್ಯ । ತತ್ವಸೂಕ್ಷ್ಮಂ ಸೂಕ್ಷ್ಮತತ್ವಂ ಪಶ್ಯತಿ ಜಾನಾತಿ । ಅಂಜನೇನ ಸಂಸ್ಕೃತಂ ಚಕ್ಷುಃ ಯಥಾ ಅತಿಸೂಕ್ಷ್ಮಮಪಿ ಪದಾರ್ಥಂ ಗೃಹ್ಣಾತಿ ತಥೈವೇತಿ ಕಿಮಾಶ್ಚರ್ಯಂ ತತ್ರೇತಿ । ತತ್ರ ಶ್ರವಣಾದ್ಯಭ್ಯಾಸಜನ್ಯಭಕ್ತಿರೇವ ಉಪಾಯ ಇತಿ ಪರಿಹಾರೋ ದ್ರಷ್ಟವ್ಯಃ । ಅತ್ರ ಅಧ್ಯಾತ್ಮವಿಷಯೇ ಜ್ಞಾತವ್ಯಾಃ ವಿಶೇಷಾಃ ದ್ವಿವಿಧಾಃ । ಶಿಷ್ಯಸ್ಯ ಬುದ್ಧ್ಯೈವ ಪ್ರತಿಭಾಬಲೇನ ಮನಃಶುದ್ಧಿಸಚಿವೇನ ಉತ್ಪ್ರೇಕ್ಷ್ಯ ಜ್ಞಾತುಂ ಶಕ್ಯಾಃ ಅಶಕ್ಯಾಶ್ಚೇತಿ । ತತ್ರ ಆದ್ಯಾನಾಮೇವ ಅತ್ರ ಅವಗಮ ಇತಿ ತದ್ವಿಷಯಿಣ್ಯಾ ಏವ ಅಷ್ಟಮ್ಯಾಃ ಪರಿಹಾರಃ । ದ್ವಿತೀಯಾನಾಂ ತು ಗುರೂಪದೇಶೇನೈವೇತಿ ದ್ವಿತೀಯವಿಷಯಿಣ್ಯಾಃ ತೇನೈವ ಪರಿಹಾರ ಇತಿ ವಿಶೇಷೋ ಜ್ಞೇಯಃ ॥**

❖❖❖

**ಉದ್ಧವನಿಗೆ ಶ್ರೀಕೃಷ್ಣನು ಉಪದೇಶಿಸುತ್ತಾನೆ—ನನ್ನ ಪುಣ್ಯ ಕಥಾಶ್ರವಣ ಕೀರ್ತನಗಳಿಂದ ಭಕ್ತನ ಅಂತಃಕರಣ ಎಷ್ಟೆಷ್ಟು ನಿರ್ಮಲವಾಗುವುದೋ ಅಷ್ಟಷ್ಟು ಭಗವಂತನ ಸೂಕ್ಷ್ಮತತ್ವವನ್ನು ಭಕ್ತನು ಕಾಣುತ್ತಾನೆ, ಅಂಜನ ಹಾಕಿದಾಗ ಕಣ್ಣು ಹೇಗೆ ಅತಿಸೂಕ್ಷ್ಮವಿಷಯಗಳನ್ನು ಕಾಣುವುದೋ ಹಾಗೆ.**

ಲೌಕಿಕದಲ್ಲಿ ನಮ್ಮ ಪ್ರವೃತ್ತಿಗಳು ಹೀಗಿರುತ್ತವೆ, ನನಗೆ ಇದರಿಂದ ಪ್ರಯೋಜನವಿದೆ. ಇದನ್ನು ನಾನು ಸಾಧಿಸಬೇಕು. ಇದಕ್ಕೆ ಯಾರಾದರೂ ವಿಘ್ನ ಮಾಡಿದರೆ ಅದಕ್ಕೆ ಹೀಗೆ ಪ್ರತಿಕ್ರಿಯೆ ಮಾಡಬೇಕು. ಅವನು ಇನ್ನೊಂದು ಬಗೆಯಿಂದ ವಿಘ್ನಮಾಡಿದರೆ ಅವನಿಗೆ ಇನ್ನೊಂದು ಬಗೆಯಿಂದ ಹೀಗೆ ಪ್ರತಿಕ್ರಿಯೆ ಮಾಡಬಹುದೆಂದು ಊಹಿಸಿಕೊಳ್ಳಲು ಶಕ್ಯವಿದೆ. ಆದರೆ ಅಲೌಕಿಕ ಆಧ್ಯಾತ್ಮಿಕ ಸೂಕ್ಷ್ಮ ತತ್ವಗಳ ಬಗ್ಗೆ ಊಹೆ ಏನು ನಡೆಯಲಾರವು. ಆಧ್ಯಾತ್ಮಿಕ ವಿಷಯದಲ್ಲಿ ಮುನ್ನಡೆಯುವುದಂತೂ ಅತ್ಯಾವಶ್ಯಕವೆಂದಮೇಲೆ ಆ ವಿಷಯದಲ್ಲಿ ಉಪಾಸನೆ ಹೇಗೆ ಸಿದ್ಧಿಸುವುದು? ಎಂಬ ಸಮಸ್ಯೆ ಸಾಧಕನ

ಆತ್ಮವಿಮರ್ಶೆಯಲ್ಲಿ ಬರುವ ಎಂಟನೆ ಸಂಶಯ. ಇದಕ್ಕೆ ಶ್ರೀಕೃಷ್ಣನು ಉದ್ಧವನಿಗೆ ಹೇಳುವ ಪರಿಹಾರವು ಹೀಗೆ—

ಅಧ್ಯಾತ್ಮವಿಷಯದಲ್ಲಿ ತಿಳಿಯಬೇಕಾದ ಅಂಶಗಳು ಎರಡು ವಿಧವಾಗಿವೆ. ಹರಿಕಥಾಶ್ರವಣ ಕೀರ್ತನೆಗಳಿಂದ ಎಷ್ಟೆಷ್ಟು ಮನಃಶುದ್ಧಿ ಉಂಟಾಗುವುದೋ ಅಷ್ಟಷ್ಟು ಸಾಧಕನು ತನ್ನ ಬುದ್ಧಿಯಿಂದಲೇ ಪ್ರತಿಭಾ ಬಲದಿಂದ ಊಹಿಸಿ ಕೆಲವು ಅಂಶಗಳನ್ನು ತಿಳಿಯುವುದು ಶಕ್ಯವಿದೆ. ಅವುಗಳ ವಿಷಯದಲ್ಲಿ ಉಪಾಸನೆ ಅವನಿಗೆ ಸಿದ್ಧಿಸುವುದು. ಇನ್ನು ಊಹಿಸಿ ತಿಳಿಯಲು ಅಶಕ್ಯವಾದ ಅಂಶಗಳಲ್ಲಿ ಗುರೂಪದೇಶದಿಂದ ತಿಳಿದು ಉಪಾಸನೆ ಮಾಡಬೇಕು. ಹೀಗೆ ಇಲ್ಲಿ ಎಂಟನೆ ಸಂಶಯಕ್ಕೆ ಶ್ರೀಕೃಷ್ಣ ಪರಿಹಾರ ಹೇಳಿದ್ದಾನೆ. ಕೆಲವು ವಿಷಯಗಳನ್ನು ಶಿಷ್ಯನು ತಾನೆ ತಿಳಿದುಕೊಳ್ಳಬಲ್ಲ. ಕೆಲವನ್ನು ಗುರೂಪದೇಶದಿಂದ ತಿಳಿಯಬೇಕು ಎಂದು.

❖❖❖

—೨೧೩—

**ಬಿಂಬೋಪಾಸಕ ಗುರುವಿನ ಲಕ್ಷಣ**

**ತ್ರಿಭುವನವಿಭವಹೇತುಭಿರ್ವಿಕುಂಠ-**
**ಸ್ಮೃತಿಭಿರಜೇಶ ಸುರಾದಿಭಿರ್ವಿಮೃಗ್ಯಾತ್ ।**
**ನ ಚಲತಿ ಭಗವತ್ ಪದಾರವಿಂದಾತ್**
**ಲವನಿಮಿಷಾರ್ಧಮಪಿ ಸ್ಮ ವೈಷ್ಣವಾಗ್ರ್ಯಃ ॥** (ಭಾ.೧೧.೨.೫೩)

**ತದೇತಸ್ಯ ಸರ್ವಸ್ಯ ಪ್ರದರ್ಶಕಶ್ಚ ಕ ಇತಿ ತ್ರಯೋದಶೀಂ ಶಂಕಾಂ ಪರಿಹರ್ತುಂ ಬಿಂಬೋಪಾಸಕೋ ಗುರುರೇವ ಪ್ರದರ್ಶಕ ಇತಿ ಭಾವೇನ ದೈವಾತ್ ಲಭ್ಯಮಾನೋಽಪಿ ಬಿಂಬೋಪಾಸಕಃ ವೈಷ್ಣವೋತ್ತಮಃ ಗುರುಃ ಈದೃಶ ಇತಿ ತಲ್ಲಕ್ಷಣಮಾಹ ॥ ತ್ರಿಭುವನೇತಿ ದ್ವಾಭ್ಯಾಂ ॥ ವಿಕುಂಠಾ ಅಕುಂಠಿತಾ ಸ್ಮೃತಿಃ ಭಗವದ್ವಿಷಯಿಣೀ ಯೇಷಾಂ ತೈಃ। ಅಜಶ್ಚ ಈಶಶ್ಚ ಸುರಾಶ್ಚ। ಯಃ ನ ಚಲತಿ ಸ ವೈಷ್ಣವೇಷು ಅಗ್ರ್ಯಃ। ಸ್ಮೇತಿ ಪ್ರಸಿದ್ಧಂ ಏತದಿತಿ ದ್ಯೋತಯತಿ ನಿಮಿಷಾರ್ಧಮಪೀತ್ಯಾದಿನಾ ಕಿಮು ತತೋಽಧಿಕೇ ಕಾಲೇ ಯಃ ಭಗವತ್ಪದಾರವಿಂದಾತ್ ನ ಚಲತಿ ಸ ವೈಷ್ಣವಾಗ್ರ್ಯ ಇತಿ ವಕ್ತವ್ಯಮಿತಿ ಸೂಚಯತಿ ॥**

❖❖❖

ಬಿಂಬೋಪಾಸಕ ಗುರುವಿನ ಲಕ್ಷಣವನ್ನು ವಿದೇಹರಾಜನಿಗೆ ಕವಿ ಎಂಬ ಮುನಿ ಹೇಳುತ್ತಾರೆ—

ಬಿಂಬೋಪಾಸನೆಗೆ ಹೊರಡುವ ಸಾಧಕನಿಗೆ ಇದಿರಾಗುವ ಸಮಸ್ಯೆಗಳಿಗೆ ಜಿಜ್ಞಾಸೆಗಳಿಗೆ ಪರಿಹಾರಗಳನ್ನು ಹೇಳಿದ್ದಾಯಿತು. ಸಾಮಾನ್ಯ ರೂಪದಿಂದ ಉಪಾಸಿತನಾಗುವ ಹರಿ ಬಿಂಬರೂಪನೂ ಆಗಿದ್ದಾನೆ, ಬಿಂಬರೂಪದಿಂದ ಉಪಾಸನೆ ಮಾಡಿದರೇ ಅವನು ಮೋಕ್ಷದಾಯಕನಾಗುತ್ತಾನೆ ಎಂದೂ ಹೇಳಿದ್ದಾಯಿತು.

ಆ ಬಿಂಬರೂಪ ಹೇಗೆ ಬೆಳಗುತ್ತದೆ, ಅದು ಎಲ್ಲಿರುತ್ತದೆ, ಅದರ ಉಪಾಸನೆ ಹೇಗೆ ಮಾಡಬೇಕು ಅದರ ಪ್ರಾಪ್ತಿಗೆ ಸಾಧನವೇನು ಎಂದು ಮುಂತಾಗಿ ಎಲ್ಲ ವಿವರಗಳನ್ನು ಹೇಳುವವರಾರು ಎಂಬುದನ್ನೂ ಅಂತಹ ಗುರು ದೊರೆತರೆ ಅಂಥಹ ನಿರ್ನಿಮಿತ್ತೋಪಕಾರಿ ಸ್ವರೂಪೋದ್ಧಾರಕ ಗುರುಗಳಿಗೆ ತಕ್ಕ ಸೇವೆಯನ್ನು ಹೇಗೆ ಮಾಡಬೇಕು ಎನ್ನುವುದನ್ನೂ ಮುಂದೆ ಹೇಳಬೇಕಾಗಿದೆ. ಮೊದಲಿಗೆ ಬಿಂಬೋಪಾಸಕ ಗುರುವಿನ ಲಕ್ಷಣವನ್ನು ಕವಿಮುನಿ ಹೇಳುವಂತೆ ಹೀಗೆ ತಿಳಿಯ ಬೇಕು—

**ತಡೆಯಿಲ್ಲದ ಶಕ್ತಿಉಳ್ಳ 'ವಿಕುಂಠ'ನಾಮಕ ಹರಿಯ ಸ್ಮರಣೆ ಮಾಡುತ್ತ ಮೂಲೋಕಕ್ಕೂ ಜ್ಞಾನಭಕ್ತ್ಯಾದಿ ಸಂಪತ್ತನ್ನು ನೀಡುವವರು ಬ್ರಹ್ಮರುದ್ರಾದಿ ದೇವತೆಗಳು ಮುಂತಾದವರು. ಅವರೂ ಕೂಡ ಹರಿಪಾದಾರವಿಂದವನ್ನು ಹುಡುಕುತ್ತಲೆ ಇದ್ದಾರೆ. ಅಂತಹ ಹರಿಯನ್ನು ಒಂದು ನಿಮಿಷಾರ್ಧವಾದರೂ ಬಿಡದೆ ಸ್ಮರಿಸುವವನು ವೈಷ್ಣವೋತ್ತಮನೆಂದಮೇಲೆ ಇನ್ನೂ ಹೆಚ್ಚು ಕಾಲ ಸ್ಮರಿಸುವವನು ವೈಷ್ಣವಾಗ್ರೇಸರನೆಂದು ಬೇರೇನು ಹೇಳಬೇಕು?**

❖❖❖

**—೨೧೪—**

**ಭಕ್ತಿಪಾಶದಿಂದ ಕಟ್ಟಿದವನೇ ಬಿಂಬೋಪಾಸಕ ಗುರು**

**ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾತ್**
**ಹರಿರವಶಾಭಿಹಿತೋऽಪ್ಯಘೌಘನಾಶಃ ।**

ಪ್ರಣಯರಶನಯಾ ಧೃತಾಂಘ್ರಿಪದ್ಮಃ
ಸ ಭವತಿ ಭಾಗವತಪ್ರಧಾನ ಉಕ್ತಃ ॥

(ಭಾ.೧೧.೨.೫೫)

ಯತಃ ಅವಶೇನ ಅಭಿಹಿತೋಽಪಿ ಅಘೌಘನಾಶಕಃ, ಅತಃ ಸಾಕ್ಷಾತ್ ಹರಿಶಬ್ದಾರ್ಥೇಷು ಮುಖ್ಯಃ ಭಗವಾನ್ । ಯಸ್ಯ ಹೃದಯಂ ನ ವಿಸೃಜತಿ । ಸ ಭಾಗವತಾನಾಂ ಪ್ರಧಾನಃ । ನಾಸ್ಮಾಭಿರೇವ ತಥಾ ಉಚ್ಯತೇ । ಕಿನ್ನಾಮ । ಪ್ರಾಚೀನೈರಪಿ ಉಕ್ತೋ ಭವತಿ । ಕುತಃ ನ ವಿಸೃಜತಿ ಇತ್ಯತಃ ಭಕ್ತಿಪಾಶೇನ ಬದ್ಧತ್ವಾತ್ ಇತ್ಯಾಶಯೇನೋಕ್ತಂ ಪ್ರಣಯೇತಿ ॥

❖❖❖

ಕವಿಮುನಿ ವಿದೇಹರಾಜನಿಗೆ ಹೇಳುತ್ತಾರೆ—ಭಕ್ತಿಪರವಶತೆಯಿಂದ ನಾಮೋಚ್ಚಾರಣ ಮಾಡಿದರೆ ಎಲ್ಲ ಪಾಪಗಳನ್ನು ಪರಿಹರಿಸುವವನು ಸಾಕ್ಷಾತ್ ಶ್ರೀಹರಿ, ತನ್ನ ಪಾದಕಮಲಗಳನ್ನು ಭಕ್ತನು ಭಕ್ತಿಪಾಶದಿಂದ ಕಟ್ಟಿ ಹೃದಯ ದೊಳಗೆ ನಿಲಿಸಿಕೊಂಡರೆ, ಅಲ್ಲಿಂದ ಕದಲುವುದಿಲ್ಲ. ಅಂಥ ಭಕ್ತನೆ ವೈಷ್ಣವಾಗ್ರೇಸರ. ಇದು ನಾವು ಮಾತ್ರ ಹೇಳಿದ ಮಾತಲ್ಲ. ಪ್ರಾಚೀನರಿಂದಲೂ ಅವನು ಹೀಗೆ ಉಕ್ತನಾಗಿರುವನು.

ಹೀಗೆ ಹದಿಮೂರನೇ ಪ್ರಶ್ನೆಗೆ ಉತ್ತರವಾಗಿ ಬಿಂಬೋಪಾಸಕ ಗುರುವಿನ ಮುಖ್ಯಲಕ್ಷಣವನ್ನು ಭಾಗವತದಲ್ಲಿ ಎರಡು ಶ್ಲೋಕಗಳಿಂದ ಕವಿಮುನಿ ವಿದೇಹ ರಾಜನಿಗೆ ಹೇಳಿದ್ದಾರೆ.

❖❖❖

—೨೧೫—

**ವಿಷಯಾಸೆಗೆ ಬಲಿಯಾಗದವನೆ ಬಿಂಬೋಪಾಸಕ ಗುರು**

ಕೃಷ್ಣಾಂಘ್ರಿಪದ್ಮಮಧುಲಿಣ್ನಪುನರ್ವಿಸೃಷ್ಟ-
ಮಾಯಾಗುಣೇಷು ರಮತೇ ವೃಜಿನಾವಹೇಷು ।
ಅನ್ಯಸ್ತು ಕಾಮಹತ ಆತ್ಮರಜಃ ಪ್ರಮಾರ್ಷ್ಟುಂ
ಈಹೇತ ಕರ್ಮ ಯತ ಏವ ರಜಃ ಪುನಃ ಸ್ಯಾತ್ ॥

(ಭಾ.೬.೩.೩೦)

**ಏವಂ ಬಿಂಬೋಪಾಸಕಸ್ಯ ವೈಷ್ಣವೋತ್ತಮಸ್ಯ ಲಕ್ಷಣಂ ಅಭಿಧಾಯ ತತ್ಪ್ರವೃತ್ತಿಪ್ರಕಾರಮಪಿ ದರ್ಶಯತಿ ॥ ಕೃಷ್ಣಾಂಘ್ರೀತಿ ॥ ಜನ್ಮಾಂತರಾಚೀರ್ಣ-ಸುಬಹುಸಾಧನಃ । ಈಷತ್ಕರ್ಮವಶಾತ್ ಅಲಬ್ಧಪರಪಾರಃ ಪೂರ್ವಸಂಸ್ಕಾರ-ವಶಾತ್ ತಮೇವ ಮಾರ್ಗಂ ಮಾರ್ಗಮಾಣಃ ಈಷತ್ಸಂಗವಶಾತ್ ಕಿಂಚಿತ್ ಶ್ರವಣಾದಿಕಂ ನಿಮಿತ್ತೀಕೃತ್ಯ ಲಬ್ಧಮನೋರಥಃ ಅನ್ಯತ್ ಅಗಣಯನ್ ಶ್ರೀಹರಿಚರಣಗತ ಮನೋವೃತ್ತಿಃ ತದ್ಗುಣವಿಶೇಷವಿಚಿಂತನ ಏವ ಲಬ್ಧರುಚಿಃ ಪುನಃ ಪುನಃ ಅಂತರಾಯವಿಹತೋಽಪಿ ನ ಸ್ವಮಾರ್ಗಾತ್ ಪ್ರಚಲತಿ । ಯಃ ಈದೃಶಃ ಸ ಏವ ಬಿಂಬೋಪಾಸಕೋ ಭವತಿ । ಸ ಚ ಅಸ್ಮಿನ್ ಜನ್ಮನ್ಯಪಿ ಪುನಃ । ಕೃಷ್ಣಾಂಘ್ರಿಪದ್ಮಯೋಃ ಯನ್ಮಧು ತತ್ರತ್ಯಃ ಗುಣವಿಶೇಷಃ ತದ್ಗ್ರಾಹೀ ಭಾಗವತೋ ಜನಃ । ಏಕದಾ ಪೂರ್ವಜನ್ಮನಿ । ವಿಸೃಷ್ಟಾಃ ಪರಿತ್ಯಕ್ತಾಃ ಯೇ ಮಾಯಾಗುಣಾಃ ಪ್ರಾಕೃತವಿಷಯಾಃ ತೇಷು । ಪುನಃ ನ ರಮತೇ ಅನ್ಯವತ್ ಆಸಕ್ತೋ ನ ಭವತಿ । ತತ್ರ ಹೇತುಃ । ವೃಜಿನಾವಹೇಷ್ವಿತಿ ॥ ಪೂರ್ವಸಂಸ್ಕಾರವಶಾತ್ ಪಾಪಕಾರ್ಯ ದುಃಖಸಾಧನತಯಾ ಅನುಸಂಹಿತೇಷ್ವಿತಿ । ಅಸ್ಮಾತ್ ಅನ್ಯೋ ಜನಸ್ತು । ಯತಃ ಕರ್ಮಣಃ । ರಜಃ ಪಾಪಂ । ತತ್ಕಾರ್ಯದುಃಖಂ ಸ್ಯಾತ್ । ತಾದೃಶಮೇವ ಕರ್ಮ । ಆತ್ಮನಃ ರಜಃ ದುಖಂ । ಪ್ರಮಾರ್ಷ್ಟುಂ ಪರಿಹರ್ತುಂ । ಈಹೇತ ಇತಿ । ತತ್ರ ಹೇತುಃ ॥ ಕಾಮಹತ ಇತಿ ॥ ಕಾಮೇನ ಹತಃ ವಿಗತಾನುಸಂಧಾನ ಇತಿ । ಕೇವಲಂ ಪ್ರಾಣಧಾರಣೌಪಯಿಕೀ ಲೌಕಿಕೀ ತೇಷಾಂ ಪ್ರವೃತ್ತಿರಿತಿ ಭಾವಃ ॥**

❖❖❖

**ಬಿಂಬೋಪಾಸಕ ವೈಷ್ಣವೋತ್ತಮನ ಪ್ರವೃತ್ತಿ ಹೇಗೆ ಇರುತ್ತದೆ ಎಂದು ಯಮನು ತನ್ನ ಭಟರಿಗೆ ಹೇಳುತ್ತಾನೆ—ಕೃಷ್ಣನ ಪಾದಕಮಲಗಳಲ್ಲಿ ದುಂಬಿಯಂತಿರುವ ಸಜ್ಜನನು ಪಾಪಕರ ತುಚ್ಛ ಎಂಬ ಭಾವನೆಯಿಂದ ಒಮ್ಮೆ ಪೂರ್ವಜನ್ಮದಲ್ಲಿಯೇ ಪರಿತ್ಯಜಿಸಿರುವ ವಿಷಯಪದಾರ್ಥಗಳಲ್ಲಿ ತಿರುಗಿ ಆಸಕ್ತಿ ಮಾಡುವುದಿಲ್ಲ. ದುರ್ಜನನು ಅದೇ ವಿಷಯಾಸಕ್ತಿಗೆ ಬಲಿಯಾಗಿ ತನ್ನ ಪಾಪಗಳನ್ನು ಕಳೆದುಕೊಳ್ಳಲು ಪುನಃ ಪುನಃ ಪ್ರಾಯಶ್ಚಿತ್ತಕರ್ಮ ಮಾಡುತ್ತಾನೆ. ಆದರೆ ಅದರಿಂದ ಪುನಃ ಪಾಪ ಅಂಟಿಕೊಳ್ಳುತ್ತದೆ.**

ಜನ್ಮಾಂತರಗಳಲ್ಲಿ ಬಹಳ ಸಾಧನೆ ಮಾಡಿದ್ದರೂ ಸ್ವಲ್ಪ ಕರ್ಮವಶದಿಂದ ಮುಕ್ತಿ ಹೊಂದದಿರುವವನು ಸಜ್ಜನನು ಪೂರ್ವಜನ್ಮ ಸಂಸ್ಕಾರ ಬಲದಿಂದ ಮುಕ್ತಿಮಾರ್ಗದಲ್ಲಿಯೆ ಮುನ್ನಡೆಯುತ್ತಾನೆ. ಸಜ್ಜನ ಸಂಗವು ಸ್ವಲ್ಪವಾದರೂ ದೊರೆತಾಗ ಅವರಿಂದ ಲಭ್ಯವಾದ ಶ್ರವಣಾದಿಗಳಿಂದ ಅವನ ಮನೋರಥ

ಈಡೇರಿದಂತಾಗಿರುವುದರಿಂದ ಬೇರೆ ವಿಷಯಪದಾರ್ಥಗಳ ಬಗ್ಗೆ ಏನೂ ಆಸಕ್ತಿ ಮಾಡುವುದಿಲ್ಲ. ಹರಿಪಾದಸ್ಮರಣದಲ್ಲಿಯೇ ಸುಖಕಾಣುತ್ತಾನೆ. ಮತ್ತೆಮತ್ತೆ ಬಂದೊದಗುವ ವಿಘ್ನಗಳ ಹೊಡೆತಕ್ಕೆ ಹೆದರದೆ ಭಕ್ತಿಮಾರ್ಗದಲ್ಲಿಯೆ ಮುಂದೆ ಸಾಗುತ್ತಾನೆ. ಇಂಥವನೇ ಬಿಂಬೋಪಾಸಕನೆನಿಸುತ್ತಾನೆ. ಅವನು ಈ ಜನ್ಮ ದಲ್ಲಿಯೂ ಹರಿಪಾದಕಮಲ ಭಕ್ತಿರಸವನ್ನು ಸವಿಯುತ್ತ ಹಿಂದಿನ ಜನ್ಮದಲ್ಲಿಯೇ ಅಸಾರವೆಂದು ಬಿಟ್ಟಿದ್ದ ವಿಷಯಗಳನ್ನು ದುರ್ಜನನಂತೆ ತಿರುಗಿ ಉಣಲು ತೊಡಗುವುದಿಲ್ಲ. ಆದರಲ್ಲಿ ಆಸಕ್ತಿ ತೋರುವುದಿಲ್ಲ. ಹೀಗೆ ಹದಿಮೂರನೆ ಪ್ರಶ್ನೆಗೆ ಉತ್ತರವಾಗಿ ಬಿಂಬೋಪದೇಶಕ ಗುರು ಹೀಗೆ ಇರುತ್ತಾನೆ ಎಂದು ಅವನ ಲಕ್ಷಣಗಳನ್ನು ಎರಡು ಶ್ಲೋಕಗಳಿಂದ ತಿಳಿಯಬಹುದು. ಪ್ರಕೃತ ಶ್ಲೋಕ ಗುರುವಿನ ವಿಲಕ್ಷಣ ಪ್ರವೃತ್ತಿಯನ್ನು ಬಣ್ಣಿಸುತ್ತದೆ.

❖❖❖

## –೨೧೬–

**ಹರಿಭಕ್ತನಿಗೆ ಎಂದೂ ನರಕ ಭಯವಿಲ್ಲ**

**ನ ವೈ ಜನೋ ಜಾತು ಕಥಂಚನಾವ್ರಜೇತ್**
**ಮುಕುಂದಸೇವ್ಯನ್ಯವದಂಗ ಸಂಸೃತಿಂ ।**
**ಸ್ಮರನ್ಮುಕುಂದಾಂಘ್ರ್ಯುಪಗೂಹನಂ ಪುನ-**
**ರ್ವಿಹಾತುಮಿಚ್ಛೇನ್ನ ರಸಗ್ರಹೀ ಜನಃ ॥** (ಭಾ.೧.೫.೧೯)

**ಏವಂವಿಧಾ ಪ್ರವೃತ್ತಿಃ ಭಾಗವತಜನೇಷು ಪ್ರಮಾಣಪ್ರಮಿತೇತ್ಯಾ-ಶಯೇನಾಹ॥ ನ ವಾ ಇತಿ॥ ಹೇ ಅಂಗ ಪ್ರಿಯೇತಿ ನಾರದಕೃತವ್ಯಾಸ ಸಂಬೋಧನಂ। ಯತಃ ರಸಗ್ರಹೀ ಸಾರಗ್ರಾಹೀ। ಭಾಗವತೋ ಜನಃ। ಮುಕುಂದಪಾದಾರವಿಂದಸ್ಮರಣಸುಖಂ। ಪುನಃ ಪುನಃ ಸ್ಮರನ್। ವಿಹಾತುಂ ನೇಚ್ಛೇತ್। ಅತಃ ಮುಕುಂದಸೇವೀ ಜನಃ। ಜಾತು ಕದಾಚಿದಪಿ ಕಥಂಚನ ಕೇನಾಪಿ ಪ್ರಕಾರೇಣ। ಅನ್ಯವತ್ ಇತರಜನವತ್। ಸಂಸಾರಂ ನಾವ್ರಜೇತ್। ವೈ ಪ್ರಮಾಣಪ್ರಮಿತಮೇತತ್॥**

**ನಾರದರು ಶ್ರೀವ್ಯಾಸರ ಮುಂದೆ ಹೇಳುತ್ತಾರೆ—ಮುಕುಂದನ ಆರಾಧಕನು ಎಂದೂ ಕೂಡ ಬೇರೆಯವರಂತೆ ಸಂಸಾರವನ್ನು ಯಾವ ಕಾರಣಕ್ಕೂ**

**ಹೊಂದುವುದಿಲ್ಲ. ಏಕೆಂದರೆ, ಸಾರಗ್ರಾಹಿಯಾದ ಭಕ್ತನು ಮುಕುಂದನ ಚರಣಾರವಿಂದವನ್ನು ಮನಸಿನಿಂದ ಆಲಿಂಗಿಸಿ ಸುಖವನ್ನು ಅನುಭವಿಸುವುದರಿಂದ ಪುನಃ ಅದನ್ನು ಬಿಡಲು ಬಯಸುವುದಿಲ್ಲ. ಇದಕ್ಕೆ ಪ್ರಮಾಣ—**

'ನಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ'

'ಮಂಗಳಕರವಾದ ಧ್ಯಾನಯೋಗವನ್ನು ಮಾಡಿದವನು' ಯಾರೂ ದುರ್ಗತಿಯನ್ನು ಹೊಂದುವುದಿಲ್ಲ'. (ಗೀತಾ. ೬.೪೦)

❖❖❖

–೨೧೬–

**ಬಂಧಕವಾಗದಂತೆ ಕರ್ಮಮಾಡುವವನು ಜೀವನ್ಮುಕ್ತ**

**ಮುಕ್ತೋಽಪಿ ತಾವದ್ ಬಿಭೃಯಾತ್ ಸ್ವದೇಹಂ**
**ಆರಬ್ಧಮಶ್ನನ್ನಭಿಮಾನ ಶೂನ್ಯಃ ।**
**ಯಥೋಪಯಾತಂ ಪ್ರತಿಯಾತನಿದ್ರಃ**
**ಕಿಂತ್ವನ್ಯ ದೇಹಾಯ ಗುಣಾನ್ನ ವೃಂಕ್ತೇ ।** (ಭಾ.೫.೧.೧೬)

ಉಭಯತ್ರ ಭಾಗವತಜನಸ್ಯ ಲೌಕಿಕೀ ಪ್ರವೃತ್ತಿಃ ಅಬಂಧಿಕಾ ಇತ್ಯನ್ಯತೋ ವಿಲಕ್ಷಣೇತ್ಯಭಿಹಿತಂ ತತ್ಸ್ಫುಟೀಕರೋತಿ ॥ **ಮುಕ್ತೋಽಪೀತಿ** ॥ ಜೀವನ್ಮುಕ್ತೋಽಪಿ । ಸ್ವದೇಹಂ ತಾವತ್ ಬಿಭೃಯಾದೇವ । ಕುತಃ । ಯತಃ ತ್ರಿವಿಧಸ್ಯ ಕರ್ಮಣಃ ಮಧ್ಯೇ ಸಂಚಿತಸ್ಯ ಜ್ಞಾನೇನೈವ ವಿನಾಶೇಽಪಿ ಪ್ರಾರಬ್ಧಸ್ಯ ಭೋಗೇನೈವ ನಾಶಃ ಅತ ಇತಿ । ಏತದೇವಾಹ ॥ **ಪ್ರಾರಬ್ಧಮಶ್ನನ್ನೇವೇತಿ** ॥ ಆಗಾಮಿನಃ ಕಾ ಗತಿಃ । ನ ತಾವತ್ ಪೂರ್ವಸ್ಯೇವ ಜ್ಞಾನೇನ ನಾಶಃ । ಜ್ಞಾನಸದ್ಭಾವದಶಾಯಾಂ ಉತ್ಪದ್ಯಮಾನಸ್ಯ ಜ್ಞಾನೇನ ನಾಶಾಯೋಗಾತ್ । ನಾಪಿ ದ್ವಿತೀಯಸ್ಯೇವ ಭೋಗೇನ । ಕದಾಪಿ ಮುಕ್ತ್ಯಭಾವಪ್ರಸಂಗಾತ್ । ಇತ್ಯತಃ ಉಭಯಸ್ಮಾದಪಿ ವಿಶೇಷೋಽಸ್ತೀತ್ಯಾಹ ॥ **ಕಿಮಿತಿ** ॥ ತಂ ವಿಶೇಷಂ ಸ್ಪಷ್ಟಯತಿ ॥ **ಅನ್ಯೇತಿ** ॥ ಅನ್ಯದೇಹಾಯ ತತ್ಪ್ರಾಪ್ತಯೇ । ಗುಣಾನ್ ವಿಷಯಾನ್ । ನ ವೃಂಕ್ತೇ ನ ಅನುಭವತೀತಿ । ಇದಮುದಿತಂ **ಭವತಿ**— ಯತ್ ರಾಗದ್ವೇಷಾಭ್ಯಾಂ ಕ್ರಿಯತೇ, ತದೇವ ಹಿ ಬಂಧಕಂ ಸ್ಯಾತ್ । ತೌ ಚ ನ ಸ್ತ ಏವ । ತತಃ ತಸ್ಯ ಸ್ಥಿತಸ್ಯಾಪಿ ಫಲಾನನುಭಾವಕತ್ವರೂಪೋ ವಿಶೇಷ ಇತಿ । ಅತ ಏವ ಹಿ ಪ್ರತಿಯಾತಾ ನಿದ್ರಾ ಅಜ್ಞಾನಂ ತತ್ಕಾರ್ಯಭೂತಃ ರಾಗಾದಿಃ ಯಸ್ಮಾತ್ ಸ ಇತ್ಯುಕ್ತಂ । ತದಪಿ ಕುತಃ

**ಇತ್ಯತಃ ಅಭಿಮಾನಶೂನ್ಯ ಇತಿ ॥ ಅಭಿಮಾನಾದೇವ ಹಿ ರಾಗಾದಿಃ । ತರ್ಹಿ ತದಾಚರಣಮಪಿ ಕೀದೃಶಮಿತ್ಯತ ಉಕ್ತಂ ॥ ಯಥೋಪಯಾತಮಿತಿ ॥ ಯಥೋಪಯಾತಂ ಯದೃಚ್ಛಯಾ ಪ್ರಾಪ್ತಂ । ಅಶ್ನನ್ ಅನುಭವನ್ನಿತಿ । ಅನೇನ ರಾಗದ್ವೇಷಪೂರ್ವಕತ್ವಾಭಾವೇನ ನ ತತ್ಕರ್ಮಣಃ ಬಂಧಕತ್ವಮಿತ್ಯುಕ್ತಂ ಸ್ಪಷ್ಟೀಕೃತಂ ಭವತಿ ॥**

❖❖❖

**ಬ್ರಹ್ಮದೇವರು ಪ್ರಿಯವ್ರತ ರಾಜನಿಗೆ ಹೇಳುತ್ತಾರೆ—ಜೀವನ್ಮುಕ್ತನೂ ಕೂಡ ಪ್ರಾರಬ್ಧವನ್ನು ಉಣ್ಣುತ್ತ ತನ್ನ ಶರೀರವನ್ನು ಧರಿಸುತ್ತಾನೆ. ಆದರೆ ಎಲ್ಲರಂತಲ್ಲ. ಅವನು ಅಜ್ಞಾನವನ್ನು ಕಳೆದುಕೊಂಡವನು. ಅದರಿಂದ ಆಗಾಮಿಕರ್ಮಕ್ಕೆ ಫಲವಿಷಯದಲ್ಲಿ ಸಂಚಿತಕರ್ಮ ಪ್ರಾರಬ್ಧಕರ್ಮಗಳಿಗಿಂತ ಬಹಳ ವೈಲಕ್ಷಣ್ಯ ಏದೆ. ಅವನು ಶರೀರದಿಂದ ಜನ್ಮಾಂತರ ಪ್ರಾಪ್ತಿಯಾಗುವಂತೆ ವಿಷಯಗಳನ್ನು ಆಸಕ್ತಿಯಿಂದ ಅನುಭವಿಸುವುದಿಲ್ಲ.**

ಅವನು ಅಭಿಮಾನ ಶೂನ್ಯ. ಶರೀರಾದಿಗಳಲ್ಲಿ ನಾನು ನನ್ನದೆಂಬ ದುರಭಿಮಾನ ಅವನಿಗೆ ಇಲ್ಲ. ಕೇವಲ ಹರೀಚ್ಛೆಯಿಂದ ಬಂದದ್ದನ್ನೇ ರಾಗದ್ವೇಷ ಗಳಿಲ್ಲದೆ ಅನುಭವಿಸುತ್ತಾನೆ. ಅದು ಲೇಪವಾಗದಂತೆ ನಡೆದುಕೊಳ್ಳುತ್ತಾನೆ.

ರಾಗದ್ವೇಷಪೂರ್ವವಾಗಿ ಮಾಡಿದ ಕರ್ಮವೇ ಬಂಧಕವಾಗಿ ಜನ್ಮಾಂತರಕ್ಕೆ ಕಾರಣವಾಗುವುದು. ಜ್ಞಾನಿಗೆ, ಜೀವನ್ಮುಕ್ತನಿಗೆ ರಾಗದ್ವೇಷಗಳಿಲ್ಲದಿರುವುದರಿಂದ ಆಗಾಮಿಕರ್ಮವು ತನ್ನ ಫಲವನ್ನು ಕೊಡಲಾರದೆ ಹೋಗುವುದು. ಇದನ್ನೇ ಅಶ್ಲೇಷವೆನ್ನುತ್ತಾರೆ.

ಪ್ರಾರಬ್ಧಕರ್ಮಕ್ಕೆ ಜ್ಞಾನದಿಂದ ವಿನಾಶ, ಆಗಾಮಿಕರ್ಮಕ್ಕೆ ಜ್ಞಾನದಿಂದ ಅಶ್ಲೇಷ ಎಂದು ವ್ಯವಸ್ಥೆ. ಹೀಗೆ ಅಲ್ಲದಿದ್ದರೆ ಆಗಾಮಿಕರ್ಮಕ್ಕೆ ಪ್ರಾರಬ್ಧದಂತೆ ಭೋಗದಿಂದ ನಾಶವೆನ್ನಲೂ ಬರುವುದಿಲ್ಲ, ಸಂಚಿತದಂತೆ ಜ್ಞಾನದಿಂದ ನಾಶವೂ ಆಗದು. ದೇಹವಿರುವಷ್ಟು ಕಾಲ ಮುಂದೆ ಕರ್ಮವನ್ನು ಮಾಡುತ್ತಲೇ ಇರುವುದರಿಂದ ಅದರಿಂದ ಬರುವ ಆಗಾಮಿಕರ್ಮ ಭೋಗಿಸಿ ಮುಗಿಸಲು ಸಾಧ್ಯವಾಗದಿರುವುದರಿಂದ ಎಂದಿಗೂ ಮುಕ್ತಿಯಾಗದೆ ಹೋದೀತು. ಆದರಿಂದ ಜ್ಞಾನಿಯು ಅಭಿಮಾನ ಶೂನ್ಯವಾಗಿ ರಾಗದ್ವೇಷಗಳಿಲ್ಲದೆ ನಿವೃತ್ತಕರ್ಮವನ್ನೇ ಮಾಡುವುದರಿಂದ ಅದು ಮೋಕ್ಷದಲ್ಲಿ ಆನಂದವೃದ್ಧಿಗೇ ಕಾರಣವಾಗುವುದು.

## –೨೧೮–

## ಭಾಗವತರ ಸೇವೆಯೇ ಸಖ್ಯಭಕ್ತಿ ಎಂಬ ಭಾಗವತಧರ್ಮ

ಏವಂ ಜನಂ ನಿಪತಿತಂ ಪ್ರಭವಾಹಿಕೂಪೇ
ಕಾಮಾಭಿಕಾಮಮನು ಯಃ ಪ್ರಪತನ್ ಪ್ರಸಂಗಾತ್ ।
ಕೃತ್ವಾತ್ಮಸಾತ್ ಸುರರ್ಷಿಣಾ ಭಗವನ್ ಗೃಹೀತಃ
ಸೋಽಹಂ ಕಥಂ ನು ವಿಸೃಜೇ ತವ ಭೃತ್ಯಸೇವಾಂ ॥ (ಭಾ.೭.೯.೨೮)

ಯಥಾ ಹರೌ ಭಕ್ತಿಃ ಸರ್ವಪುರುಷಾರ್ಥಪ್ರದಾ ತಥಾ ಉಕ್ತಲಕ್ಷಣಾದಿನಾ ಜ್ಞಾಪ್ಯೇ ಪರಮಭಾಗವತೇ ದೈವಾಲ್ಲಬ್ಧೇ ಗುರೌ ಭಕ್ತಿರಪೀತಿ ಸರ್ವಥಾ ಸಾ ಸಂಪಾದ್ಯೇತಿ ಭಾವೇನಾಹ ॥ ಏವಮಿತಿ ॥ ಹೇ ಭಗವನ್, ಯಃ ಅಹಂ । ಪೂರ್ವೋಕ್ತರೀತ್ಯಾ । ಪ್ರಕೃಷ್ಟೇ ಸಂಸಾರಾಖ್ಯೇ ಅಹಿಸದೃಶಸ್ತ್ರೀಪುತ್ರಾದಿಭಿಃ ಯುಕ್ತೇ ಕೂಪೇ । ನಿಪತಿತಂ । ತಥಾಪಿ ಕಾಮಾಭಿಕಾಮಂ ವಿಷಯಾನ್ ಇಚ್ಛಂತಂ ಜನಂ । ಅನು ಅನುಸೃತ್ಯ । ತದ್ವತ್ ತಸ್ಮಿನ್ನೇವ ಕೂಪೇ । ಪತಮಾನೋಽಪಿ । ಸುರರ್ಷಿಣಾ ನಾರದೇನ । ಪ್ರಸಂಗಾತ್ ಮಮ ಮಾತುರರ್ಥೇ । ಮಾಂ ಆತ್ಮಸಾತ್ಕೃತ್ವಾ ಆತ್ಮೀಯೇಷು ಅಯಮೇಕ ಇತಿ ಬುದ್ಧಿಂ ಕೃತ್ವಾ । ತತ್ತ್ವೋಪದೇಶರೂಪಂ ಹಸ್ತಾವಲಂಬನಂ ದತ್ವಾ ಗೃಹೀತಃ, ತಸ್ಮಾದೇವ ಕೂಪೇ ನ ಪತಿತಃ । ಯತಃ ಅತಃ । ಸೋಽಹಂ ತೇನ ಉದ್ಧೃತಃ ಅಹಂ । ನು ಇದಾನೀಂ । ತವ ಭೃತ್ಯಾನಾಂ ಭಾಗವತಾನಾಂ ಸೇವಾಂ । ಕಥಂ ವಿಸೃಜೇ ಇತಿ । ನಿರ್ನಿಮಿತ್ತಂ ಭವಭಯಪರಿಹಾರಕರೂಪತಯಾ ತತ್ಸೇವಾಯಾ ಆವಶ್ಯಕತ್ವಕಥನೇನ ತತ್ರ ಭಕ್ತಿಃ ಆವಶ್ಯಕೀತಿ ಸೂಚನೇನ ದ್ವಿತೀಯೇ ನವಕೇ ಸಖ್ಯಾಖ್ಯಃ ಭಾಗವತೋ ಧರ್ಮಃ ಪ್ರದರ್ಶಿತೋ ಭವತಿ ॥

❖❖❖

ಪ್ರಹ್ಲಾದನು ಶ್ರೀನೃಸಿಂಹನ ಮುಂದೆ ಹೇಳುತ್ತಾನೆ—ನಾನು ತಾಯಿಯ ಗರ್ಭದಲ್ಲಿದ್ದಾಗ ಜನನ ಮರಣರೂಪ ಸಂಸಾರವೆಂಬ, ಹೆಬ್ಬಾವುಗಳಂಥ ಪತ್ನೀಪುತ್ರಾದಿಗಳಿಂದ ಕೂಡಿದ ಹಾಳು ಬಾವಿಯಲ್ಲಿ ವಿಷಯಾಸಕ್ತರಾದ ಬೇರೆ ಜನರಂತೆ ಬೀಳಲಿದ್ದೆ. ಆದರೂ ನಾರದರು ಪ್ರಸಂಗಾತ್ ನನ್ನ ತಾಯಿಗೆ ಉಪದೇಶ ನೀಡುವಾಗ ನನ್ನನ್ನು 'ನಿನ್ನವರಲ್ಲಿ ಇವನೂ ಒಬ್ಬನೆಂ'ದು ದಯೆ ದೋರಿ, ತತ್ತ್ವೋಪದೇಶದ ಕರಾವಲಂಬನೆ ನೀಡಿ ಉದ್ಧರಿಸಿದರು. ಸಂಸಾರಕೂಪ

**ಪತನದಿಂದ ನಾನು ಪಾರಾದೆ. ಹಿಂದೆ ನಿನ್ನ ಭೃತ್ಯರಾದ ನಾರದರಿಂದ ಉದ್ಧೃತನಾದ ನಾನು ಈಗ ನಿನ್ನ ಭೃತ್ಯರಾದ ಭಾಗವತರ ಸೇವೆಯನ್ನು ಹೇಗೆ ತಾನೆ ಬಿಡಬಲ್ಲೆ?**

ನಿರ್ನಿಮಿತ್ತವಾದ ದಯೆಯಿಂದ ತಾನಾಗಿಯೇ ಬಂದು ಭವಭಯವನ್ನು ಪರಿಹರಿಸುವ ಭಾಗವತರ ಸೇವೆ ಸಾಧಕನಿಗೆ ಅತ್ಯಾವಶ್ಯಕವಾಗಿದೆ. ಅವರಲ್ಲಿ ಭಕ್ತಿ ಮಾಡುವುದು ದ್ವಿತೀಯ ನವಕದಲ್ಲಿ ಬರುವ 'ಸಖ್ಯ'ವೆಂಬ ಭಾಗವತ ಧರ್ಮಾನುಷ್ಠಾನವಾಗಿದೆ. ಮತ್ತು ಹರಿಭಕ್ತಿಯಂತೆ ಗುರುಭಕ್ತಿಯೂ ಪುರುಷಾರ್ಥ ಸಾಧನವಾಗಿದ್ದು ಅವಶ್ಯ ಮಾಡಬೇಕಾದುದೆಂದೂ ಹೇಳಿದಂತಾಯಿತು.

❖❖❖

—೨೧೯—

**ಹರಿಭಕ್ತರ ಸಂಗ ಹರಿಭಕ್ತಿಕಾರಣ**

**ಸೋಽಹಂ ಪ್ರಿಯಸ್ಯ ಸುಹೃದಃ ಪರದೇವತಾಯಾ**
**ಲೀಲಾಕಥಾಸ್ತವ ನೃಸಿಂಹ ವಿರಿಂಚಿ ಗೀತಾಃ ।**
**ಅಂಜಸ್ತರಾಮ್ಯನುಗೃಣನ್ ಗುಣ ವಿಪ್ರಮುಕ್ತೋ**
**ದುರ್ಗಾಣಿ ತೇ ಪದಯುಗಾಲಯಹಂಸಸಂಗಃ ॥** (ಭಾ.೭.೯.೧೮)

ಶ್ರೀಹರಿಭಕ್ತೇರಿವ ಗುರುಭಕ್ತೇರಪಿ ಪುರುಷಾರ್ಥಸಾಧನತ್ವಾತ್ ಅವಶ್ಯಂ ಸಾ ಸಂಪಾದನೀಯೇತ್ಯಭಿಹಿತಂ । ಸಾ ಕಿಂ ಗುರುಭಕ್ತಿಃ ಸಾಕ್ಷಾತ್ಪುರುಷಾರ್ಥಸಾಧನಂ, ಕಿಂ ವಾ ಕಿಂಚಿದ್ ದ್ವಾರೀಕೃತ್ಯೇತ್ಯತಃ ಶ್ರೀಹರಿಭಕ್ತಿದ್ವಾರೇಣೈವೇತ್ಯಾಹ ॥ **ಸೋಽಹಮಿತಿ** ॥ ಹೇ ನೃಸಿಂಹ । ತವ ಪಾದಯೋಃ ಯುಗಮೇವ ಆಶ್ರಯೋ ಯೇಷಾಂ ತೇ ಹಂಸಾಃ ಭಾಗವತಧರ್ಮಾನುಷ್ಠಾನೇನ ಶುದ್ಧಾಂತಃಕರಣಾಃ ತೇಷು ಭಾಗವತೇಷು ಸಂಗಃ ಸಮ್ಯಕ್ ಆದರಪೂರ್ವಕಂ ಗಚ್ಛತಿ ಮನಸೇತಿ ಸಂಗಃ । ಭಕ್ತಿಮಾನಿತಿ ಯಾವತ್ । ತಾದೃಶೋ ಭೂತ್ವಾ । ತವ । ಲೀಲಾಃ ಚರಿತ್ರಾಣಿ ತತ್ಪ್ರತಿಪಾದಿಕಾಃ ಕಥಾಃ । ಗೃಣನ್ ಕೀರ್ತಯನ್ । ತೇನ ಚ ಭಕ್ತಿವಿಶೇಷವಾನ್ ಭೂತ್ವಾ । ಗುಣವಿಪ್ರಮುಕ್ತಃ ವಿಷಯಸಂಗವರ್ಜಿತಃ । ಸರ್ವಾಣ್ಯಪಿ ದುರ್ಗಾಣಿ ಅಂಜಸೈವ ತರಾಮೀತಿ । ಅನೇನ ಗುರುಭಕ್ತಿಃ ಹರಿಭಕ್ತಿಮೇವ ಜನಯತಿ । ಸಾಚ ಸರ್ವಪುರುಷಾರ್ಥಪ್ರದೇತಿ ಸೂಚಿತಂ ಭವತಿ ॥

❖❖❖

ಪ್ರಹ್ಲಾದನು ಶ್ರೀನೃಸಿಂಹನನ್ನು ಸ್ತುತಿಸುತ್ತಾನೆ— ಹೇ ನೃಸಿಂಹ, ಪ್ರಿಯ ಹಿತೈಷಿಯೂ ಪರದೇವತೆಯೂ ಆದ ನಿನ್ನ, ಬ್ರಹ್ಮದೇವರೂ ಕೊಂಡಾಡುವ ಲೀಲಾಕಥೆಗಳನ್ನು ಕೇಳಿ ನಾನೂ ಶಕ್ತ್ಯನುಸಾರ ಕೊಂಡಾಡುವೆನು. ಆದರಿಂದ ವಿಶೇಷಭಕ್ತಿಯನ್ನು ಪಡೆದು ವಿಷಯಸಂಗವನ್ನು ವರ್ಜಿಸುವೆನು. ನಿನ್ನ ಚರಣಯುಗಲವನ್ನಾಶ್ರಯಿಸಿದ, ಭಾಗವತಧರ್ಮಾನುಷ್ಠಾನದಿಂದ ಶುದ್ಧಾಂತಃಕರಣರಾದ, ಭಕ್ತರ ಸಂಗವನ್ನು ಮಾಡಿ ಅವರಲ್ಲಿ ಭಕ್ತಿ ಮಾಡಿದವನು ನಾನು ನಿನ್ನ ಲೀಲಾಚರಿತ್ರೆಗಳನ್ನು ಹಾಡಿ ಎಲ್ಲ ನರಕಾದ್ಯನರ್ಥಗಳನ್ನೂ ಬಿಡಲಾಗದ ಪತ್ನೀಪುತ್ರಾದಿ ಪಾಶಬಂಧವನ್ನೂ ಸಂಪೂರ್ಣವಾಗಿ ದಾಟಿ ಬಿಡುವೆನು'.

ಇದರಿಂದ ಗುರುಭಕ್ತಿಯು ಹರಿಭಕ್ತಿಯನ್ನು ಹುಟ್ಟಿಸುವುದು, ಹರಿಭಕ್ತಿ ಸಕಲ ಅಭೀಷ್ಟಗಳನ್ನು ಕಳೆದು ಪುರುಷಾರ್ಥಗಳನ್ನು ನೀಡುವುದೆಂದು ಹೇಳಿದಂತಾಯಿತು.

❖❖❖

## –೨೨೦–

### ವಿಷಯಾಸಕ್ತಿ ಎಲ್ಲ ತಾಪತ್ರಯಗಳಿಗೆ ಕಾರಣ

ಕಸ್ತಂ ತ್ವನಾದೃತ್ಯ ಪರಾನುಚಿಂತಾಂ
ಋತೇ ಪಶುತ್ವಮಸತೀಂ ನಾಮ ಯುಂಜ್ಯಾತ್ ।
ಪಶ್ಯನ್ ಜನಂ ನಿಪತಿತಂ ಭವವೈತರಣ್ಯಾಂ
ಸ್ವಕರ್ಮಜಾನ್ ಪರಿತಾಪಾನ್ ಜುಷಾಣಂ ॥ (ಭಾ.೨.೨.೮)

ತದೇವಂ ಭಾಗವತೋತ್ತಮೇಷು ಭಕ್ತಿಃ ಆವಶ್ಯಕೀ । ಸಾಚ ಹರಿಭಕ್ತಿದ್ವಾರಾ ಸರ್ವಪುರುಷಾರ್ಥಪ್ರದೇತ್ಯಭಿಹಿತಂ । ತತ್ಕಥಮಿತ್ಯತಃ ಮಿಥ್ಯಾಜ್ಞಾನಸ್ಯ ಪುರುಷಾರ್ಥಪ್ರತಿಬಂಧಕಸ್ಯ ನಾಶನಂ ತಾವತ್ ತದುಪದೇಶೇನೈವ ಭವತಿ । ತತಃ ತನ್ನಿವೃತ್ತಯೇ ತತ್ರ ಭಕ್ತಿಃ ಆವಶ್ಯಕೀ । ತದರ್ಥಂ ಸಂತತಂ ತತ್ಸೇವನಂ ಆವಶ್ಯಕಮಿತಿ ವದಿಷ್ಯನ್ ಮಿಥ್ಯಾಜ್ಞಾನತ್ಯಜನೇ ಆದರಜನನಾಯ ಮಿಥ್ಯಾಜ್ಞಾನಿನಃ ತಾವತ್ ನಿಂದತಿ ॥ ಕಸ್ತಮಿತಿ ॥ ತತ್ತತ್ಕ್ರಿಯಾಕಾರಕತಯಾ ತೇಷು ತೇಷು ಪದಾರ್ಥೇಷು ಸ್ಥಿತಂ ತತ್ತನ್ನಾಮಕಂ ಸರ್ವಪುರುಷಾರ್ಥಪ್ರದಂ ತತ ಏವ ಸರ್ವೇಷಾಂ ಅನಿಮಿತ್ತಬಂಧುಮಪಿ ಹರಿಂ ಈದೃಶತಯಾ ಕದಾಪ್ಯನನು-

**ಸಂಧಾಯ, ಅನೀದೃಶಾನಾಂ ಈದೃಶತಯಾ ಅನುಸಂಧಾನಂ ಪಶುತ್ವಂ ವಿನಾ ಕಃ ಮನುಷ್ಯಃ ನಾಮ ಕುರ್ಯಾತ್ । ತಥಾ ಕುರ್ವಾಣಃ ಪಶುರೇವೇತಿ । ಕುತಃ ಸ ಪಶುಃ ಇತ್ಯತಃ ಯಥಾಹಿ ಪಶುಃ ಕೂಪಾದಿಕೇ ಪತಿತಂ ತತ್ರ ದುಃಖಾನಿ ಅನುಭವಂತಂ ಅನ್ಯಂ ಪಶುಂ ದೃಷ್ಟ್ವಾ ಕೂಪಾದಿಕಂ ಅನರ್ಥಸಾಧನಮಿತಿ ಜಾನನ್ನಪಿ ತತ್ರ ಪುನಃ ಸ್ವಯಂ ನಿಪತತಿ । ತಥಾ ಹರಿಂ ಅನಾದೃತ್ಯ, ಪರಾನುಚಿಂತಾಂ । ಪರಸ್ಯ ನಾರಕಂ ದುಃಖಂ ಭವತೀತಿ ಜಾನನಪಿ ಪುನಃ ಸ್ವಯಂ ಪರಿತ್ಯಜ್ಯ ಸ್ಥಿತ ಇತಿ ತತ್ಸದೃಶತ್ವಾದಿತ್ಯಾಶಯೇನಾಹ ।। ಪಶ್ಯನ್ನಿತಿ ।। ಯಥಾಹುಃ—**

ಚತುರ್ವೇದ್ಯಪಿ ಯೋ ವಿಪ್ರೋ ವಾಸುದೇವಂ ನ ವಿಂದತಿ ಃ
ವೇದವಾದಭರಾಕ್ರಾಂತಃ ಸ ವೈ ಬ್ರಾಹ್ಮಣಗರ್ದಭ ಇತಿ ।।

❖❖❖

**ಶುಕಮುನಿ ಹೇಳುತ್ತಾರೆ—ಎಲ್ಲರೊಳಗೇ ಇದ್ದು ಆಯಾ ಹೆಸರುಗಳಿಂದ ಮೋಕ್ಷಸಾಧನ ಕಾರ್ಯಗಳನ್ನು ಮಾಡುತ್ತ ಮಾಡಿಸುತ್ತ ಸರ್ವಪುರುಷಾರ್ಥ ಪ್ರದನಾಗಿರುವ ಅನಿಮಿತ್ತ ಬಂಧು ಬಿಂಬಮೂರ್ತಿಯಾದ ಶ್ರೀರಮಣನನ್ನು ಆದರಿಸದೆ, ಸರ್ವಗುಣಪೂರ್ಣನು ಅವನೇ ಎಂದು ಯಥಾರ್ಥವಾಗಿ ಚಿಂತಿಸದೆ, ದುರ್ವಿಷಯದಲ್ಲಿ ಆಸಕ್ತನಾಗುವವನು ಮನುಷ್ಯನಲ್ಲ, ಕೇವಲ ಪಶುವೆ ಸರಿ, ಏಕೆಂದರೆ ಸಂಸಾರವೆಂಬ ವೈತರಣಿಯ ಆಳದಲ್ಲಿ ಬಿದ್ದು ದುರ್ವಿಷಯಗಳನ್ನು ಉಣ್ಣುತ್ತ ಪೂರ್ವಕರ್ಮಫಲವಾಗಿ ಬರುವ ತಾಪತ್ರಯಗಳನ್ನು ಅನುಭವಿಸು ತ್ತಿರುವ ಅಜ್ಞ ಮಾನವರನ್ನು ನೋಡಿ ನೋಡಿಯೂ ಯಾವ ವಿವೇಕಿಯು ಅವರಂತೇ ಮತ್ತೆಮತ್ತೆ ವಿಷಯ ಚಿಂತನೆಯನ್ನೇ ಮಾಡಿಯಾನು? ಒಂದು ಪಶು ಬಾವಿಯ ಆಳದಲ್ಲಿ ಬಿದ್ದು ದುಃಖಿಸುವುದನ್ನು ನೋಡಿಯೂ ಇನ್ನೊಂದು ಅಜ್ಞ ಪಶು ತಾನೂ ಅದರಲ್ಲಿ ಬೀಳುತ್ತದೆ. ಹಾಗೇ ಪಶುತ್ವವಿಲ್ಲದೆ ವಿವೇಕಿಯಾದ ಮಾನವನು ಮಾಡಬಹುದೆ?**

ಚತುರ್ವೇದ್ಯಪಿ ಯೋ ವಿಪ್ರೋ ವಾಸುದೇವಂ ನ ವಿಂದತಿ ।
ವೇದಭಾರಭರಾಕ್ರಾಂತಃ ಸ ವೈ ಬ್ರಾಹ್ಮಣಗರ್ದಭಃ ।।

ನಾಲ್ಕು ವೇದ ಓದಿಯೂ ವಿಪ್ರನು ಬಿಂಬಾನುಸಂಧಾನ ಮಾಡದಿದ್ದರೆ ಅವನು ವೇದಪುಸ್ತಕಗಳ ಬಾರ ಹೊರುವ ಬ್ರಾಹ್ಮಣಕತ್ತೆಯೆ ಸರಿ.

ಅನಿಮಿತ್ತ ಬಂಧುವಾದ ಬಿಂಬಮೂರ್ತಿಯಾದ ಶ್ರೀವಾಸುದೇವನ ವಿಷಯದಲ್ಲಿ ಅಜ್ಞಾನ ಮಿಥ್ಯಾಜ್ಞಾನಗಳು ಪುರುಷಾರ್ಥಪ್ರತಿಬಂಧಕವಾಗಿವೆ. ಭಾಗವತೋತ್ತಮರ ಉಪದೇಶಗಳಿಂದಲೇ ಈ ಪ್ರತಿಬಂಧಕ ನಿವೃತ್ತಿ ಸಾಧ್ಯ. ಅದಕ್ಕೆ ಅವರ ಸೇವೆಯನ್ನು ಸಾಧಕನು ಸದಾ ಮಾಡುತ್ತಿರಬೇಕು. ಅವರಲ್ಲಿ ಭಕ್ತಿ ಮಾಡುವುದೇ ಮಿಥ್ಯಾಜ್ಞಾನ ಪರಿಹಾರಕವಾಗಿದೆ.

❖❖❖

–೨೨೧–

## ಗುರುಭಕ್ತಿ ಇಲ್ಲದವ ಯಾತ್ರೆ ಮಾಡಿ ಫಲವಿಲ್ಲ

**ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ**
**ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ ।**
**ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿತ್**
**ಜನೇಷ್ವಭಿಜ್ಞೇಷು ಸ ಏವ ಗೋಖರಃ ॥** (ಭಾ.೧೦.೭೨.೧೩)

**ನನ್ವಸ್ತು ಮಿಥ್ಯಾಜ್ಞಾನಂ ಪುರುಷಾರ್ಥಪ್ರತಿಬಂಧಕಮಿತಿ ಪುರುಷಾರ್ಥಾರ್ಥಿನಾ ತತ್ಪರಿತ್ಯಾಜ್ಯಮಿತಿ । ತನ್ನಿವೃತ್ತಯೇ ಪ್ರಯತಿತವ್ಯಮಿತಿ ಚ । ತಥಾಪಿ ತನ್ನಿವೃತ್ತಿಃ ಸದುಪದೇಶೇನೈವೇತಿ ಕುತಃ । ಭಾಗೀರಥ್ಯಾದೀನಾಂ ಕ್ಷೇತ್ರಮೂರ್ತೀನಾಂ ವಾ ಸೇವಯಾ ತನ್ನಿವೃತ್ತ್ಯುಪಪತ್ತೇರಿತಿ ಚೇತ್ । ಸತ್ಯಂ । ಅನ್ಯತೋಽಪಿ ತನ್ನಿವೃತ್ತಿರಿತಿ । ತಥಾಪಿ ಸದುಪದೇಶಃ ಆವಶ್ಯಕಃ । ಯತಃ ತತ್ಸೇವಯಾ ಮಿಥ್ಯಾಜ್ಞಾನನಿವೃತ್ತಿಃ ಭವಂತೀ ಅಪಿ ದ್ವಾರಾಂತರಂ ಅಪೇಕ್ಷತೇ । ನ ಹಿ ತೀರ್ಥಸ್ನಾನಾದಿಕಂ ವಾ ಪ್ರತೀಕದರ್ಶನಾದಿಕಂ ವಾ ಸಾಕ್ಷಾನ್ಮಿಥ್ಯಾ-ಜ್ಞಾನನಿವರ್ತಕಂ । ದ್ವಾರಂ ಚ ಸಮ್ಯಗ್ಜ್ಞಾನಮೇವ । ಶುಕ್ತಿರಜತಾದಿಜ್ಞಾನೇ ತಥಾ ದರ್ಶನಾತ್ । ತಚ್ಚ ಸದುಪದೇಶಂ ವಿನಾ ನ ಭವತಿ । ಉಪದೇಶಶ್ಚ ಪ್ರಸಾದಪೂರ್ವಕ ಏವ ಫಲಪ್ರದಃ । ಪ್ರಸಾದಶ್ಚ ನ ತತ್ರ ಭಕ್ತಿಂ ವಿನಾ ಜಾಯತೇ । ಭಕ್ತಿಶ್ಚ ನ ತತ್ಸೇವಾಂ ವಿನಾ ಇತ್ಯತಃ ತತ್ಪರಿತ್ಯಾಗೇನ ತದನುಸಾರೇಣ ಕೇವಲಂ ಕಾಲವಿಲಂಬೇನ ಶ್ರಮ ಏವ ಅಧಿಕೋ ಲಾಭ ಇತಿ ಸದುಪದೇಶ ಏವ ಅನುಸರಣೀಯಃ ಪ್ರೇಕ್ಷಾವತಾ ಇತಿ । ಯಥಾಹುಃ—**

**''ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ಇತಿ ।**

ಕಿಂ ತನ್ಮಿಥ್ಯಾಜ್ಞಾನಂ ಯನ್ನಿವೃತ್ತಯೇ ಸದುಪದೇಶಃ ಆವಶ್ಯಕಃ ತದರ್ಥಂ ತದ್ಭಕ್ತ್ಯಾದಿಕಂ ಚ। ಇತ್ಯತಃ ಏತದೇವ ಮಿಥ್ಯಾಜ್ಞಾನಮಿತಿ ಭಾವೇನ ಲೇಶತಃ ತದ್ದರ್ಶಯತಿ। **ಯಸ್ಯೇತಿ**॥ ವಾತಾದಯಃ ತ್ರಯೋ ಧಾತವಃ ಯಸ್ಮಿನ್। ಕುಣಪೇ ದೇಹೇ। ಯಸ್ಯ ಆತ್ಮೇತಿ ಅಹಮಿತಿ ಬುದ್ಧಿಃ। ಕಲತ್ರಾದಿಷು। ಸ್ವಧೀಃ ಸ್ವೇ ಸ್ವಕೀಯಾ ಇತಿ ಮಮ ಏತೇ ಇತಿ ಬುದ್ಧಿಃ। ಭೌಮೇ ಶಿಲಾದೌ ಪ್ರತಿಮಾದೌ। ಇಜ್ಯಃ ಪೂಜ್ಯ ಇತಿ ಧೀಃ। ಸಲಿಲೇ। ತೀರ್ಥಂ ಪಾವನಮಿತಿ ಬುದ್ಧಿಃ। ಅನೇನ ಪರಾನುಚಿಂತಾಮಿತ್ಯೇತತ್ ವಿಶದೀಕೃತಂ ಭವತಿ। ಅಭಿಜ್ಞೇಷು ಭಗವತ್ತತ್ತ್ವಂ ಜಾನತ್ಸು। ಜನೇಷು। ಕರ್ಹಿಚಿತ್ ಕದಾಪಿ। ಇಜ್ಯಧೀಃ ತೀರ್ಥಬುದ್ಧಿಶ್ಚ ನಾಸ್ತಿ। ಸ ಏವ ಗೋಖರಃ ಆರಣ್ಯಕೋ ಮೃಗವಿಶೇಷಃ। ನೃಷು ಶ್ವಭಕ್ಷಕಃ ಶ್ವಪಚಾಪರಪರ್ಯಾಯಃ ಚಂಡಾಲಃ ನೀಚತ್ವೇ ಪರಮಾವಧಿರಿವ ಪಶುಷು ಚ ಅಸ್ಥಿಭಕ್ಷಕಃ ಗೋಖರಾಪರಪರ್ಯಾಯಃ ಗರ್ದಭಃ ನೀಚತ್ವೇ ಚರಮಾವಧಿಃ। ಅನೇನ ಪೂರ್ವೋಕ್ತಂ ಪಶುತ್ವಂ ವಿವೃತಂ ಭವತಿ। ಅತ ಏವ ಶ್ವಚಂಡಾಲಃ ಗೋಖರ ಇತಿ ದ್ವಿಪದೇಷು ನೀಚತ್ವೇ ಶ್ವಚಂಡಾಲಃ ಚರಮಾವಧಿತಯಾ, ಚತುಷ್ಪಾದೇಷು ನೀಚತ್ವೇ ಗೋಖರಃ ಚರಮಾವಧಿತಯಾ ಚ ಉಕ್ತ ಇತಿ।

''ಶ್ವವಿಡ್ವರಾಹೋಷ್ಟ್ರಖರೈಃ ಸ ತುಲ್ಯಃ ಪುರುಷಃ ಪಶುಃ'

ಇತ್ಯಾದಾವಿವ ಖರ ಇತ್ಯೇವ ಪ್ರಯೋಗಂ ವಿಹಾಯ, ಗೋಖರ ಇತಿ ವಿಶೇಷಪ್ರಯೋಗೋಽಪಿ ಇಮಮೇವಾರ್ಥಂ ಸೂಚಯತಿ।

**ಇದಮುಕ್ತಂ ಭವತಿ—**

ದೇಹೇ ಅಹಮಿತಿ। ದೇಹಸಂಬಂಧಿಷು ಮಮೇತಿ। ಪ್ರತಿಮಾದೌ ದೇವತೇಯಮಿತಿ। ಯದ್‌ದ್ರವತೀತಿ ಪ್ರತ್ಯಕ್ಷತಃ ದೃಶ್ಯತೇ ತದೇವ ತೀರ್ಥಂ ಪಾವನಮಿತಿ। ಸ್ವೋತ್ತಮೇ ಸ್ವತಃ ನೀಚೋಽಯಮಿತಿ। ಸ್ವತಃ ನೀಚೇಽಪಿ ಉತ್ತಮೋಽಯಮಿತಿ। ಅಸಮೇ ಸಮ ಇತಿ। ಸಮೇ ಚ ಅಸಮ ಇತಿ। ಏವಮನಾದಿಕಂ ಮಿಥ್ಯಾಜ್ಞಾನಂ ಪುರುಷಾರ್ಥಪ್ರತಿಬಂಧಕಂ ಸದುಪದೇಶೇನೈವ ನಿವರ್ತನೀಯಂ ಸಮ್ಯಗ್ಜ್ಞಾನಜನನದ್ವಾರಾ। ತಚ್ಚ ಪ್ರಾಗೇವ ಸೂಚಿತಂ। ತತಃ ಭಕ್ತಿಪೂರ್ವಕಂ ತತ್ಸೇವಯಾ ಸತಿ ಪ್ರಸಾದೇ ಮಿಥ್ಯಾಜ್ಞಾನನಿವೃತ್ತೌ ಪರಮಪುರುಷಾರ್ಥಲಾಭಶ್ಚ ಭವತೀತಿ ಸತ್ಸು ಭಕ್ತಿಃ ಆವಶ್ಯಕೀತಿ॥

ಶಮಂತಪಂಚಕದಲ್ಲಿ ಸೂರ್ಯಗ್ರಹಣಕಾಲದಲ್ಲಿ ಶ್ರೀಕೃಷ್ಣನು ತನ್ನನ್ನು ಕಾಣಲು ಬಂದ ಋಷಿಮುನಿಗಳನ್ನು ಹೊಗಳುತ್ತ ನುಡಿದ—ಯಾರಿಗೆ ವಾತಪಿತ್ತ

**ಶ್ಲೇಷ್ಮಗಳೆಂಬ ತ್ರಿಧಾತುಗಳಿಂದಾದ ಶರೀರವೆ ಆತ್ಮ, ಹೆಂಡಿರು ಮಕ್ಕಳೆ ಆತ್ಮೀಯರು, ಮಣ್ಣು ಕಲ್ಲುಗಳಿಂದಾಗಿರುವ ಮೂರ್ತಿಯೆ ದೇವರು, ಹರಿಯುವ ನೀರೇ ತೀರ್ಥ ಎಂಬ ಭಾವನೆ ಇರುವುದೋ, ಜ್ಞಾನಿಗಳಾದ ಸುಜನರಲ್ಲಿ ಆದರಭಾವನೆ ಇಲ್ಲವೊ, ಅವನೇ ಪ್ರಾಣಿಗಳ ಎಲುಬನ್ನೂ ಕೂಡ ತಿನ್ನುವ ಕತ್ತೆಗೊರವನ ಜಾತಿಗೆ ಸೇರುವವನು, ನೀಚ ಮೃಗ ಸಮಾನನು.**

ಮನುಷ್ಯರಲ್ಲಿ ನಾಯಿಯನ್ನು ತಿನ್ನುವ ಹೊಲೆಯನಂತೆ ಪಶುಗಳಲ್ಲಿ ಎಲುಬನ್ನೂ ತಿನ್ನುವ ಕತ್ತೆಗೊರವ, ಬಲು ನೀಚ, ಹಾಗೇ ದೇಹವನ್ನು ನಾನೆನ್ನುವುದು ದೇಹಸಂಬಂಧಿಗಳನ್ನು ನನ್ನವರೆನ್ನುವುದು ಪ್ರತಿಮೆಯನ್ನೇ ದೇವರೆನ್ನುವುದು, ಹರಿವ ನೀರೆ ಗಂಗಾದಿ ಪುಣ್ಯತೀರ್ಥ ಎನ್ನುವುದು ಸ್ವೋತ್ತಮರನ್ನು ಕಡಿಮೆ ಮಾಡಿ, ಕಡಿಮೆಯವರನ್ನು ಉತ್ತಮರೆನ್ನುವುದು, ಸಮರನ್ನು ಅಸಮರೆಂದು ಅಸಮರನ್ನು ಸಮರೆಂದು ಎಣಿಸುವುದು ಇವೆಲ್ಲವೂ ಮಿಥ್ಯಾಜ್ಞಾನಗಳೆ, ಅವುಗಳಿಂದ ಅನರ್ಥವೇ ಆಗುವುದು. ಪುರುಷಾರ್ಥ ವೇನಾದರೂ ಬರುವುದಿದ್ದರೆ ಅದಿಲ್ಲವಾಗುವುದು.

ಈ ಮಿಥ್ಯಾಜ್ಞಾನ ಹೋಗಬೇಕಾದರೆ ಅದು ಭಾಗವತೋತ್ತಮರ ಉಪದೇಶದಿಂದಲೆ. ಆಗಲೆ ತತ್ವಜ್ಞಾನ ಹುಟ್ಟುವುದು. ತತ್ವಜ್ಞಾನದಿಂದ ಮಿಥ್ಯಾಜ್ಞಾನ ನಾಶವಾಗುವುದು.

ಭಾಗೀರಥ್ಯಾದಿ ತೀರ್ಥಸ್ನಾನದಿಂದಲೂ ವೆಂಕಟೇಶಾದಿ ಕ್ಷೇತ್ರಮೂರ್ತಿ ದರ್ಶನದಿಂದಲೂ ಮಿಥ್ಯಾಜ್ಞಾನ ನಾಶವು ಸಾಧ್ಯವಿದೆ ಎಂದು ನಂಬಬಾರದು. ಅದು ಕುರುಡು ನಂಬಿಕೆಯಾಗುವುದು. ಏಕೆಂದರೆ ವಸ್ತುತಃ ತೀರ್ಥವೇ ದೇವತೆಯಲ್ಲ. ಮೂರ್ತಿಯೇ ದೇವರಲ್ಲ. ತೀರ್ಥದಲ್ಲಿ ದೇವತೆಯನ್ನು ಮೂರ್ತಿಯಲ್ಲಿ ದೇವರನ್ನು ಆರಾಧಿಸಬೇಕು.

ಅವರೂ ಕೂಡ ಪ್ರತ್ಯಕ್ಷವಾಗಿ ಬಂದು ಉಪದೇಶ ಮಾಡಿ ತಾವೇ ಮಿಥ್ಯಾಜ್ಞಾನವೆಂಬ ಮನಸಿನ ಕೊಳೆಯನ್ನು ತೊಳೆಯದೆ ಭಾಗವತೋತ್ತಮರನ್ನು ನಮಗೆ ಉಪದೇಶ ಮಾಡಲು ದೊರಕಿಸಿಕೊಡುತ್ತಾರೆ. ಅವರ ಉಪದೇಶ ನಮಗೆ ಲಭಿಸುವಂತೆ ಅನುಗ್ರಹಿಸುತ್ತಾರೆ. ಆ ಭಾಗವತೋತ್ತಮರನ್ನು ಭಕ್ತಿಯಿಂದ ನಾವು

ಸೇವಿಸಬೇಕು. ಅವರು ಪ್ರಸನ್ನರಾಗಿ ಪ್ರೀತಿಯಿಂದ ಉಪದೇಶಿಸುವುದನ್ನು ಕೇಳಬೇಕು.

ಹೀಗೆ ಮಾಡದೆ ತೀರ್ಥಸ್ನಾನ ಕ್ಷೇತ್ರದರ್ಶಗಳನ್ನೇ ಮಾಡುತ್ತಿದ್ದರೆ ಅದು ಕೇವಲ ಕಾಲಕ್ಷೇಪ, ಕೇವಲ ಶ್ರಮವಾಗುವುದು. ಬಹುಕಾಲ ತೀರ್ಥಕ್ಷೇತ್ರ ಸೇವನೆ ಮಾಡಿದರೂ ಕರುಣೆಯಿಂದ ಭಗವದ್ಭಕ್ತರ ಸಂಗವನ್ನು ದೊರಕಿಸುವ ಮೂಲಕವೇ ತಾನೆ ಅವರನ್ನು ಪಾವನಗೊಳಿಸುತ್ತಾರೆ ದೇವತೆಗಳು?

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥

(ಭಾ.೧೦.೭೨.೧೧)

ಶ್ರೀಕೃಷ್ಣ ಋಷಿಮುನಿಗಳನ್ನು ಪ್ರಶಂಸಿಸುತ್ತಾನೆ—'ನೀರೇ ತೀರ್ಥವಲ್ಲ, ಪ್ರತಿಮೆಯೆ ದೇವರಲ್ಲ. ಅವು ಬಹುಕಾಲ ಸೇವಿಸಿದರೂ ಸಾಧು ಜನರ ಸಂಗವನ್ನು ಒದಗಿಸುವ ಮೂಲಕ ಬಹುಕಾಲಾನಂತರವೇ ಭಕ್ತರನ್ನು ಪಾವನ ಮಾಡುತ್ತಾರೆ. ಸಾಧುಜನರು ಮಾತ್ರ ದರ್ಶನದಿಂದ ಪ್ರಸನ್ನರಾಗಿ ಒಡನೆ ಉಪದೇಶದಿಂದ ಪಾವನ ಮಾಡುತ್ತಾರೆ'.

'ನೀರನ್ನೇ ತೀರ್ಥವೆಂದು ಕಲ್ಲನ್ನೆ ದೇವರೆಂದು ಪೂಜಿಸಿದರೆ ಅದು ಕೇವಲ ವ್ಯರ್ಥ. ಶ್ರಮ ಮಾತ್ರವಲ್ಲ, ಈ ಅನ್ಯಥೋಪಾಸನೆಗೆ ಮುನಿದು ದೇವತೆಗಳು ಶಾಪ ಕೊಡುತ್ತಾರೆ. ಪೂರ್ವಪುಣ್ಯದಿಂದ ಭಾಗವತರ ಸಂಗವಾಗುವ ಯೋಗವಿದ್ದರೆ ಅದನ್ನೂ ತಡೆಯುತ್ತಾರೆ' ಎಂದು ಭಾಗವತ ತಾತ್ಪರ್ಯದಲ್ಲಿ ಗರುಡ ಸ್ಕಾಂದ ವಾಮನ ಪುರಾಣವಚನಗಳನ್ನು ಉದಾಹರಿಸಿ 'ಸರಿಯಾದ ತೀರ್ಥಯಾತ್ರೆಯನ್ನು ಗುರುಗಳ ಮಾರ್ಗದರ್ಶನದಲ್ಲಿಯೇ ಮಾಡಬೇಕೆಂ'ದು ಶ್ರೀಮದಾಚಾರ್ಯರು ಎಚ್ಚರಿಸಿದ್ದಾರೆ.

❖❖❖

## (೧೯) ಅಧ್ಯಾತ್ಮ ಪ್ರಕರಣ

ಬಿಂಬನು ಜೀವರಿಗೆ ಪರದೇವತೆ. ನಿಷ್ಪಕ್ಷಪಾತಿ ಕೃಪಾಳುವಾದ ಸದ್ಗುರು, ಲೋಕೋತ್ತರ ಪಿತ, ಲೋಕೋತ್ತರ ಮಾತೆ ಲೋಕೋತ್ತರ ಸಖ ಲೋಕೋತ್ತರ ರಕ್ಷಕ ಹೀಗೆ ಉಪಾಸನೆ ಮಾಡಬೇಕೆನ್ನುವುದು ಬಿಂಬೋಪಾಸಕ ಗುರು ನೀಡುವ ಮೊದಲನೆ ಉಪದೇಶ. ಬಿಂಬನು ಪರಮಕೃಪಾಳು, ಪಕ್ಷಪಾತ ವಿಲ್ಲದವನು. ಅವನಿಗೆ ಮಾಡಿದ ಸೇವೆ ಎಂದೂ ನಿಷ್ಫಲವಾಗುವು ದೆಂದಿಲ್ಲ.

ಸೇವೆಗೆ ಅನುಗುಣವಾಗಿಯೆ ಫಲ ನೀಡುತ್ತಾನೆ. ಸಮುದ್ರಮಥನ ದಿಂದ ಬಂದ ಅಮೃತವನ್ನು ದೇವತೆಗಳು ಕುಡಿದರು. ದೈತ್ಯರಿಗೆ ಅದು ಸಿಗಲಿಲ್ಲ. ಏಕೆಂದರೆ ದೇವತೆಗಳು ಭಕ್ತಿಯಿಂದ ಮಥನ ಮಾಡಿದರು. ಅಸುರರಿಗೆ ಭಕ್ತಿ ಇರಲಿಲ್ಲ. ಹರಿ ನಿಷ್ಪಕ್ಷಪಾತಿ, ದೇವತೆಗಳು–ದೈತ್ಯರೆಂದು ಭೇದಭಾವವಿಲ್ಲ. ಕಲ್ಪವೃಕ್ಷದಂತೆ ಮೇಲುನೋಟಕ್ಕೆ ಕಾಣುವ ಶ್ರೇಷ್ಠತ್ವ ಕನಿಷ್ಠತ್ವಗಳು ಹರಿಯ ಅನುಗ್ರಹಕ್ಕೆ ಕಾರಣವಾಗುವುದಿಲ್ಲ.

ಬಲಿಯು ಅಸುರನಾದರೂ ಅವನಲ್ಲಿ ಧನಮದವನ್ನು ಬಲಾತ್ಕಾರ ವಾಗಿ ಕಳೆಯುವ ಅನುಗ್ರಹವನ್ನೇ ಮಾಡಿದ್ದಾನೆ ವಾಮನ. ಧನವನ್ನು ಕಸಿಯದೆ ಧನಮದವನ್ನು ಅಳಿಸಲಾಗುವುದಿಲ್ಲವೆಂದು ಧನವನ್ನು ಕಸಿದಿದ್ದಾನೆ. ಅದರಿಂದ ಅದು ಅನುಗ್ರಹವೆ. ಧನವನ್ನು ಕಸಿದರೂ ಬಲಿಯ ಭಕ್ತಿಯು ಸ್ಥಿರವಾಗಿಯೇ ಇತ್ತು. ಇದನ್ನು ಲೋಕಕ್ಕೆ ತೋರಿಸುತ್ತ ಮದವನ್ನಿಳಿಸಿ ಹರಿ ಬಲಿಗೆ ಮಹಾಅನುಗ್ರಹ ಮಾಡಿದ್ದಾನೆ. ನಿಷ್ಪಕ್ಷಪಾತ ಬುದ್ಧಿಯಂತೆ ಮಹಾಕೃಪಾಳುತ್ವವೂ ಹರಿಯಲ್ಲಿ ಬಲಿಯ ವಿಷಯದಲ್ಲಿ ಸ್ಪಷ್ಟಗೋಚರಿಸುತ್ತಿದೆ.

ಲಕ್ಷ್ಮೀದೇವಿಯ ಪತಿಭಕ್ತಿಯನ್ನೂ ಶ್ರೀಕೃಷ್ಣ ಪರೀಕ್ಷಿಸುವ ಮೋಹಕ ಲೀಲೆಯನ್ನೂ ತೋರಿದ್ದಾನೆ. ತನ್ನ ನಿಷ್ಪಕ್ಷಪಾತ

ಬುದ್ಧಿಯನ್ನೂ ದೇವಿಯ ಅಚಲವಾದ ಪತಿಭಕ್ತಿಯನ್ನೂ ಲೋಕಕ್ಕೆ ತೋರಿಸಿದ್ದಾನೆ.

ಪೂತನೆಯನ್ನು ಕೊಂದು ಅವಳ ಶರೀರದಲ್ಲಿದ್ದ ಉರ್ವಶಿಗೆ ಅನುಗ್ರಹ ಮಾಡಿದ್ದಾನೆ, ಕೃಪಾಳು ಶ್ರೀಕೃಷ್ಣ.

ಹರಿಯೆ ಜೀವರ ಅಂತರ್ಯಾಮಿ, ಅದರಿಂದ ಅಧ್ಯಾತ್ಮದಲ್ಲಿ ಅವನೆ ಮುಖ್ಯವಾಗಿ ತಾಯಿ ತಂದೆ ಗುರು ಎಲ್ಲವೂ ಆಗಿದ್ದಾನೆ. ಭಕ್ತರಲ್ಲಿ ನಿಷ್ಪಕ್ಷಪಾತ ಬುದ್ಧಿಯಿಂದ ಅನುಗ್ರಹ ಮಾಡುವ ದಯಾಳುವೂ ಆಗಿದ್ದಾನೆ. ಇದೆಲ್ಲವನ್ನೂ ಅನುಸಂಧಾನ ಮಾಡಿದರೆ ಹರಿಭಜನೆ ಸಫಲವಾಗುವುದು.

ಷೋಡಶ ಕಲಾತ್ಮಕವಾದ ಮನುಷ್ಯಶರೀರವನ್ನು ನಿರ್ಮಾಣ ಮಾಡಿ ಮೋಕ್ಷಸಾಧನೆಯನ್ನು ಮಾಡಿಸುವ ಹರಿಯೆ ಮುಖ್ಯವಾಗಿ ತಂದೆ. ಆ ಶರೀರ ಅವನೆ ನಿರ್ಮಿಸಿದ್ದು ಅವನಿಗೇ ಅಧೀನ ವಾಗಿರುವುದರಿಂದ ಅದರೊಳಗಿರುವಾಗ ಅವನಿಗೆ ಅದರಿಂದ ದುಃಖ ಬರಲು ಶಕ್ಯವೇ ಇಲ್ಲ. ಅವನು ಸುಖವನ್ನೇ ಉಣ್ಣುತ್ತಾನೆ.

ಹೀಗೆ ಈ ಪ್ರಕರಣದಲ್ಲಿ 'ಶಮ' ಅಂದರೆ ಭಗವನ್ನಿಷ್ಠೆಯಿಂದ 'ಅಭಯ' ಸಂಸಾರ ಭಯವಿಲ್ಲದಿರುವುದು ಮತ್ತು 'ಆತ್ಮ ವಿಮರ್ಶೆ' ಎಂಬ ಭಾಗವತಧರ್ಮಾನುಷ್ಠಾನ ಉಕ್ತವಾದಂತಾ ಯಿತು.

ಅಲೌಕಿಕವಾದ ಮುಖ್ಯವಾದ ತಂದೆ ತಾಯಿ ಬಂಧು ಗುರು ಪರದೈವ ವೆಲ್ಲವೂ ಹರಿಯೇ ಇರುವಾಗ ಸಂಸಾರಭಯವೆಲ್ಲಿ? ಎಂದು ಗುರುಉಪದೇಶಿಸುವುದರಿಂದ ಆತ್ಮವಿಮರ್ಶೆಯಲ್ಲಿ ಅಲೌಕಿಕ ಅಧ್ಯಾತ್ಮ ಸೂಕ್ಷ್ಮ ವಿಷಯಗಳಲ್ಲಿ ಕೆಲವಂಶವನ್ನು ಶಿಷ್ಯನು ತನ್ನ ಬುದ್ಧಿ ಪ್ರತಿಭೆಯಿಂದ ತಿಳಿದರೂ ಕೆಲವಂಶ ಅವನಿಗೆ ಗುರುವಿನಿಂದಲೇ ತಿಳಿದುಬರಬೇಕು ಎನ್ನುವ ಎಂಟನೆ ಪ್ರಶ್ನೆಗೆ ಸಮಾಧಾನ ಸಿಕ್ಕಿದಂತಾಗಿದೆ.

❖❖❖

-೨೨೨-

**ಲೋಕೋತ್ತರ ಆಪ್ತಬಂಧುವು ಶ್ರೀಹರಿ**

ಭವಾಯ ನಸ್ತ್ವಂ ಭವ ವಿಶ್ವಭಾವನ
ತ್ವಮೇವ ಮಾತಾತ್ಮಸುಹೃತ್‌ಪತಿಃ ಪಿತಾ ।
ತ್ವಂ ಸದ್ಗುರುರ್ನಃ ಪರಮಂ ಚ ದೈವತಂ
ಯಸ್ಯಾನುವೃತ್ತ್ಯಾ ಕೃತಿನೋ ಬಭೂವಿಮ ॥

(ಭಾ.೧.೧೦.೪೪)

ಶ್ರೀಕೃಷ್ಣೋ ವಿಜಯತೇ ॥ ಏವಂ ದೈವಾಲ್ಲಬ್ಧೋ ಬಿಂಬೋಪಾಸಕೋ ಗುರುಃ ಬಿಂಬೋಪದೇಶಂ ಕರಿಷ್ಯನ್ ತಸ್ಯ ಅಂತರಂಗಮಧ್ಯಾತ್ಮಪ್ರಾವಣ್ಯಮಿತಿ ತತ್ಪ್ರಾಪ್ತಯೇ ಅಧ್ಯಾತ್ಮಮುಪದಿಶತಿ ವಿಶೇಷ ಜಿಜ್ಞಾಸವೇ ಶಿಷ್ಯಾಯ। ತದರ್ಥಮಿದಂ ಪ್ರಕರಣಂ। ಪೂರ್ವಪ್ರಕರಣೇ ಗುರುಭಕ್ತಿಃ ಹರಿಭಕ್ತಿಂ ಜನಯತೀತ್ಯುಕ್ತಂ। ತಸ್ಯಾಂ ಚ ಹರಿಭಕ್ತೌ ಸಾಧನವಿಶೇಷಕಥನೇನ ವಿಶೇಷಂ ತತ್ರಾದಾವಾಹ ॥ **ಭವಾಯೇತಿ** ॥ ಹೇ ವಿಶ್ವಭಾವನ ಜಗದುದ್ಭವಾದಿಪ್ರದ । ತ್ವಂ ನಃ ಭವಾಯ ಭಕ್ತ್ಯಾದಿರೂಪಮಂಗಲಾರ್ಥಂ ಭವ। ಯಸ್ಯ ತವ। ಅನುವೃತ್ತ್ಯಾ ಸೇವಯಾ ಭಕ್ತ್ಯಾದಿಪೂರ್ವಕಯಾ। ವಯಂ ಕೃತಿನಃ ಪ್ರಾಪ್ತಪುರುಷಾರ್ಥಾಃ। ಬಭೂವಿಮ। ಸಃ ತ್ವಂ। ನಃ ಅಸ್ಮಾಕಂ ಸರ್ವೇಷಾಂ। ಪರಮಂ ದೈವತಂ 'ತ್ರಿವಿಧಾಪಿ ದೇವತಾ। ನ ಕೇವಲಂ ದೈವಂ। ಸದ್ಗುರುಶ್ಚ। ಸನ್ ಕೃಪಾಲುತ್ವಾದಿಗುಣ ವಿಶಿಷ್ಟೋ ಗುರುಶ್ಚ। ತ್ವಮೇವ ಪಿತಾ ಮಾತಾ। ಆತ್ಮನಾ ಸ್ವಯಮೇವ ನಿರ್ನಿಮಿತ್ತಂ ಸುಹೃತ್। ಪತಿಃ ಸ್ವಾಮೀ ಚೇತಿ। ಅನೇನ ಪಿತೃತ್ವಾದ್ಯನೇಕವಿಧಸಂಬಂಧಾದಿಕಮವಶ್ಯಮನುಸಂಧೇಯಮಿತಿ ಸೂಚಿತಂ ಭವತಿ। ಅಸಾಧಾರಣ್ಯೇನ ಪಿತೃತ್ವಾದಿಸ್ಮೃತೌ ತದುಪಾಸನೇ ವಾ ನಿಯಮಃ ನಾನ್ಯತ್ರೇತಿ ಮಂತವ್ಯಂ ॥

❖❖❖

ಶ್ರೀಕೃಷ್ಣ ಹಸ್ತಿನಾವತಿಯಿಂದ ದ್ವಾರಕೆಗೆ ಹಿಂತಿರುಗಿದಾಗ ಪ್ರಜೆಗಳು ಇದಿರುಗೊಂಡು ಹೇಳಿದರು— 'ಹೇ ಜಗತ್‌ಕರ್ತನಾದ ಶ್ರೀಕೃಷ್ಣನೆ, ನೀನು ನಮಗೆ ಜ್ಞಾನಭಕ್ತ್ಯಾದಿ ಮಂಗಲಪ್ರದನಾಗು. ನಿನ್ನ ಭಕ್ತಿಪೂರ್ವಕ ಸೇವೆಯಿಂದ ನಾವು ಪುರುಷಾರ್ಥ ಭಾಗಿಗಳಾಗಿ ಕೃತಕೃತ್ಯರೆನಿಸುವೆವು ನೀನು ನಮಗೆಲ್ಲರಿಗೂ

**ಪರದೇವತೆ ಕೃಪಾಳುತ್ವಾದಿ ಗುಣಉಳ್ಳ ಸದ್ಗುರು. ಲೋಕೋತ್ತರ ಮಾತೆ ಲೋಕೋತ್ತರ ಸಖ, ಲೋಕೋತ್ತರ ಪಿತ, ಲೋಕೋತ್ತರ ರಕ್ಷಕನಾಗಿರುವೆ.**

ಲೌಕಿಕ ತಂದೆ ತಾಯಿ ಬಂಧು ಮಿತ್ರರಂತಲ್ಲದೆ, ಲೋಕೋತ್ತರ ಅಸಾಧಾರಣ ತಂದೆ ತಾಯಿ ಮುಂತಾದ ಸಂಬಂಧಿಯು ಶ್ರೀಹರಿ ಎಂದು ಉಪಾಸನೆ ನಿಯಮೇನ ಮಾಡಬೇಕೆಂದು ಬಿಂಬೋಪಾಸಕ ಗುರು ನೀಡುವ ಮೊದಲನೆ ಉಪದೇಶವಿದು. ಹರಿಭಕ್ತಿಗೆ ಇದು ವಿಶೇಷ ಸಾಧನವಾಗುವುದು.

❖❖❖

## –೨೨೩–

**ವೈಷಮ್ಯ ಮಾಡದೆ ಸಾಧನೆಗೆ ಫಲನೀಡುವ ಶ್ರೀಹರಿ**

**ನ ಬ್ರಹ್ಮಣಃ ಸ್ವಪರಭೇದಮತಿಸ್ತವ ಸ್ಯಾತ್**
**ಸರ್ವಾತ್ಮನಃ ಸಮದೃಶಃ ಸ್ವಸುಖಾನುಭೂತೇಃ ।**
**ಸಂಸೇವಯಾ ಸುರತರೋರಿವ ತೇ ಪ್ರಸಾದಃ**
**ಸೇವಾನುರೂಪ ಉದಯೋ ನ ವಿಪರ್ಯಯೋಽತ್ರ ॥**

(ಭಾ.೧೦.೭೨.೬)

**ವಿಷಮದೃಷ್ಟೌ ಪುರುಷೇ ಭಕ್ತಿಃ ನ ಭವತ್ಯೇವ । ಭವಂತ್ಯಪಿ ಮಂದೈವೇತಿ ಅವಿಷಮತ್ವಾನುಸಂಧಾನಂ ಭಕ್ತೌಸಾಧನಮಿತಿ ಭಗವತೋಽವಿಷಮತ್ವಮಾಹ । ನ ಬ್ರಹ್ಮಣ ಇತಿ ॥ ಬ್ರಹ್ಮಣಃ ಪೂರ್ಣಸ್ಯ ತವಾಯಂ ಸ್ವಃ ಸ್ವೀಯಃ ಸ ತು ಪರಃ ಪರಕೀಯಃ ಇತಿ ಭೇದಬುದ್ಧಿರ್ನ ಸ್ಯಾತ್ । ಕುತಃ । ಸಮದೃಶಃ ಸರ್ವಭೂತಾನ್ಯೇಕಾಕಾರತಯಾ ಪಶ್ಯತೀತಿ । ತರ್ಹಿ ಕೇಷಾಂಚಿತ್ಫಲಂ ಭವತಿ ಪರೇಷಾಂ ನೇತೀದಂ ವೈಷಮ್ಯಂ ಕಿಂಮೂಲಮಿತ್ಯತ ಆಹ ॥ ಸುರತರೋರಿತಿ ॥ ಸುರತರೋಃ ಪ್ರಸಾದಃ ಯಥಾ ಸಂಸೇವಯೈವ ಭವತಿ । ತಥಾ ತೇ ಪ್ರಸಾದೋಽಪಿ ಸೇವಾನುರೂಪಃ ಸೇವಾಜನ್ಯ ಏವ ಉದಯಃ ಫಲಂ ತು ಪ್ರಸಾದಜನ್ಯಮಿತಿ ಪ್ರಸಿದ್ಧಮೇವ । ಯತ ಏವಮತೋ ಯತ್ರ ಯಸ್ಮಿನ್ಪುರುಷೇ ವಿಪರ್ಯಯಃ ಸೇವಾಭಾವಃ ಅತ್ರ ಅಸ್ಮಿನ್ಪುರುಷೇ । ವಿಪರ್ಯಯಃ ಪ್ರಸಾದಾಭಾವಃ ಯತ್ರ ಪ್ರಸಾದಾಭಾವಃ ಅತ್ರ ಅಸ್ಮಿನ್ವಿಪರ್ಯಯಃ ಫಲಸ್ಯಾಪ್ಯಭಾವ ಇತಿ । ಅತ್ರ ಫಲೇ ವಿಪರ್ಯಯೋ ವ್ಯತ್ಯಾಸಃ ನ ನಾಸ್ತ್ಯೇವೇತಿ ॥**

❖❖❖

ಧರ್ಮರಾಜನು ಶ್ರೀಕೃಷ್ಣನಲ್ಲಿ ರಾಜಸೂಯ ಯಾಗಕ್ಕೆ ಅನುಮತಿಯನ್ನು ಕೇಳುತ್ತಾನೆ—ಹೇ ಕೃಷ್ಣ, ಸ್ವಯಂಪೂರ್ಣನೆ ಆಗಿರುವ ನಿನಗೆ ಅಭೀಷ್ಟ ನೀಡುವಲ್ಲಿ ಇವನು ನನ್ನವನು ಇವು ನನ್ನವನಲ್ಲ ಎನ್ನುವ ಪಕ್ಷಪಾತ ಬುದ್ಧಿ ಇರುವುದಿಲ್ಲ. ಯೋಗ್ಯತೆಯನ್ನು ಮೀರಿ ಯಾರಲ್ಲಿಯೂ ನೀನು ಪಕ್ಷಪಾತ ಮಾಡುವುದಿಲ್ಲ. ಏಕೆಂದರೆ ನೀನು ಸರ್ವೇಶ್ವರ. ಸ್ವರೂಪಭೂತಪೂರ್ಣ ಸುಖವನ್ನಲ್ಲದೆ ಅನ್ಯರಿಂದ ಬರುವ ಸುಖವನ್ನು ಅನುಭವಿಸುವವನಲ್ಲ. ಆದರಿಂದ ಎಲ್ಲ ಜನರನ್ನೂ ಅವರವರ ಸಾಧನೆಗೆ ತಕ್ಕಂತೆ ಸಮವಾಗಿಯೆ ಕಾಣುವವನು. ಕೆಲವರಿಗೆ ಅವರ ಸಾಧನೆಗೆ ಫಲ ಸಿಗದಿರುವುದು, ಕೆಲವರಿಗೆ ಸಿಗುವುದು, ಕಲ್ಪವೃಕ್ಷದಂತೆ ಅವರವರು ಮಾಡುವ ಸೇವೆಗೆ ನೀನು ಅನುರೂಪವಾಗಿರುವುದರಿಂದ. ಆದರಿಂದ ನೀನು ನಿಷ್ಪಕ್ಷಪಾತಿ. ನಿನ್ನ ಸೇವೆ ಚೆನ್ನಾಗಿ ಮಾಡಿದರೆ ಅದು ನಿಷ್ಫಲವಾಗುವುದೆಂದಿಲ್ಲ. ಸೇವೆ ಮಾಡಿದರೂ ಫಲ ಸಿಗದಿದ್ದರೆ ಅದು ಸೇವೆ ನಿನಗೆ ತೃಪ್ತಿಕರವಾಗಿಲ್ಲದಿರುವುದರಿಂದ ಎಂದು ತಿಳಿಯಬೇಕು.

❖❖❖

—೨೨೪—

**ಸಾಧನೆಗನುಗುಣ ಫಲಕ್ಕೆ ಸಮುದ್ರಮಥನ ದೃಷ್ಟಾಂತ**

ಏವಂ ಸುರಾಸುರಗಣಾಃ ಸಮದೇಶಕಾಲ
ಹೇತ್ವರ್ಥಯೋಗಗತಯೋಽಪಿ ಫಲೇ ವಿಕಲ್ಪಾಃ ।
ತತ್ರಾಮೃತಂ ಸುರಗಣಾಃ ಫಲಮಂಜಸಾಽಽಪು-
ರ್ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ ॥

(ಭಾ.೮.೮.೭೩)

ನನು ಭಗವತ್ಸೇವಯಾ ಪ್ರಸಾದದ್ವಾರಾ ಫಲಂ ಭವತಿ ಸೇವಾಭಾವೇ ಚ ಪ್ರಸಾದಾಭಾವೇನ ಫಲಂ ನ ಭವತೀತಿ ಸೇವಾಭಾವಾಭಾವಾಭ್ಯಾಮೇವ ಫಲಭಾವಾಭಾವಾವಿತಿ ನ ಭಗವತೋ ವೈಷಮ್ಯಮಿತ್ಯಭಿಹಿತಂ। ಕುತ್ರೈದ್‌ದೃಷ್ಟಮಿತ್ಯತೋ ದರ್ಶಯತಿ ॥ ಏವಮಿತಿ ॥ ಯದ್ಯಪ್ಯೇವಂ

**ಪೂರ್ವೋಕ್ತರೀತ್ಯಾ ವಿಚಾರಣೇ ಕೃತೇ। ಸುರಾಣಾಮಸುರಾಣಾಂ ಚ ಯೇ ಗಣಾಸ್ತೇ ಉಭಯೇಽಪಿ। ಸಮಾಃ ಸಮಾನಾಃ। ದೇಶಕಾಲೌ ಪ್ರಸಿದ್ಧೌ। ಹೇತುಃ ಮಂದರಾದಿಸಾಧನಂ। ಅರ್ಥಃ ಪ್ರಯೋಜನಂ। ಅಮೃತಲಾಭಲಕ್ಷಣಂ ಉದ್ದೇಶ್ಯಂ। ಯೋಗಾಃ ಪರಸ್ಪರವೈರಾನಾವಿಷ್ಕರಣೇನಾವಸ್ಥಾನಾದಯಃ। ಗತಯಃ ಆಕರ್ಷಣಾದಯಃ ಶಾರೀರವ್ಯಾಪಾರಾಶ್ಚ ಯೇಷಾಂ ತೇ ತಥಾ। ತಥಾಪಿ ಫಲೇ ವಿಷಯೇ। ವಿಕಲ್ಪಾಃ ವಿ ವಿರುದ್ಧೌ ಭಿನ್ನೌ ಕಲ್ಪೌ ಪ್ರಕಾರೌ ಯೇಷಾಂ ತೇ ತಾದೃಶಾ ಅಭವನ್। ನನು ಯಥಾ ದೇವಾ ಐರಾವತಂ ವಾರಣಂ ಅಗೃಹ್ಣಂಸ್ತಥಾ ದೈತ್ಯಾ ಅಪಿ ವಾರುಣೀಂ ಜಗೃಹುರೇವ। ತತಃ ಕಥಂ ಫಲೇ ವಿಕಲ್ಪಾ ಇತ್ಯತ ಉಕ್ತಂ॥ ವೀತಿ॥ ವಿಶಿಷ್ಟೇ ಉದ್ದೇಶ್ಯೇ ತೌ ಕೌ ವಿರುದ್ಧೌ ಕಲ್ಪಾವಿತ್ಯತ ಆಹ॥ ತತ್ರೇತಿ। ಸಮದೇಶತ್ವಾದೌ ಸತ್ಯಪಿ ಸುರಗಣಾ ಅಮೃತಂ ಫಲಮಾಪುಃ। ದೈತ್ಯಾಸ್ತು ನಾಪುರಿತಿ। ಅನೇನ ಫಲಭಾವಾಭಾವಲಕ್ಷಣೌ ವಿರುದ್ಧೌ ಕಲ್ಪಾವಿತ್ಯುಕ್ತಂ ಭವತಿ। ತತ್ರ ಹೇತುಃ ಯತ್ವಾದಪಂಕಜರಜಃಶ್ರಯಣಾದಿತಿ॥ ದ್ವೇಷಿಣಾಂ ದೈತ್ಯಾನಾಂ ತು ತದಭಾವಃ ಸುಪ್ರಸಿದ್ಧ ಇತಿ ಕಂಠತೋ ನೋಕ್ತಿಃ। ಅನೇನ ಸೇವಾಭಾವಾಭಾವಾಭ್ಯಾಮೇವ ತೌ ದೇವದೈತ್ಯಯೋರ್ದೃಷ್ಟಾವಿತಿ ಸೂಚಿತಂ ಭವತಿ॥**

❖❖❖

ಶುಕಮುನಿ ಹೇಳುತ್ತಾರೆ—ಕ್ಷೀರಸಮುದ್ರಮಥನದಲ್ಲಿ ದೇವತೆಗಳಿಗೂ ಅಸುರರಿಗೂ ದೇಶಕಾಲಾದಿಗಳೆಲ್ಲ ಸಮವಾಗಿಯೆ ಇದ್ದುವು. 'ದೇಶ'ವು ಕ್ಷೀರಸಮುದ್ರತೀರ. 'ಕಾಲ' ಮಥನದ ಸಮಯ. 'ಹೇತು' ಸಾಧನವಾದ ಮಂದರಪರ್ವತ, ವಾಸುಕಿ ಹಗ್ಗ, ಪರ್ವತದಲ್ಲಿದ್ದ ಓಷಧಿ ದ್ರವ್ಯಗಳು 'ಅರ್ಥ' ಉದ್ದಿಷ್ಟವಾದ ಅಮೃತರೂಪ ಪ್ರಯೋಜನ, 'ಯೋಗ' ಪರಸ್ಪರ ವೈರವನ್ನು ಮರೆತು ಮಾಡಿದ ಯತ್ನ, 'ಗತಿ' ಮಥನರೂಪ ಶರೀರವ್ಯಾಪಾರ—ಇವೆಲ್ಲವೂ ಸಮಾನವೇ ಇದ್ದರೂ 'ಫಲ'ದಲ್ಲಿ ಅಮೃತವನ್ನು ಹೊಂದುವ ವಿಷಯದಲ್ಲಿ 'ವಿಕಲ್ಪ' ವ್ಯತ್ಯಾಸ ಉಂಟಾಗಿತ್ತು. ದೇವತೆಗಳಿಗೆ ಅಮೃತ ಸಿಕ್ಕಿತು. ಅಸುರರಿಗೆ ಸಿಗಲಿಲ್ಲ. ಇದಕ್ಕೆ ಕಾರಣವು ದೇವತೆಗಳು ಹರಿಪಾದ ಪಂಕಜ ರಜವನ್ನು ಆಶ್ರಯಿಸಿ ಭಕ್ತಿಯಿಂದ ಮಥನಕಾರ್ಯ ನಡೆಸಿದರು. ಅದು ಹರಿಗೆ ತೃಪ್ತಿಕರವಾಯಿತು. ಅಸುರರು ಭಕ್ತಿಯಿಂದ ಮಥನ ಮಾಡಲಿಲ್ಲ. ಆದರಿಂದ ಅದು ಹರಿಗೆ ತೃಪ್ತಿಕರವಾಗಲಿಲ್ಲ. ಫಲದಲ್ಲಿ ಹೀಗೆ ವ್ಯತ್ಯಾಸವಾದುದು ಹರಿಯ

ಪಕ್ಷಪಾತ ಬುದ್ಧಿಯಿಂದಲ್ಲ. ಅವನಿಗೆ ದೇವತೆಗಳೇ ತನ್ನವರು, ದೈತ್ಯರು ಅಲ್ಲ ಎನ್ನುವ ಭೇದಭಾವವಿಲ್ಲ.

❖❖❖

–೨೨೫–

## ಸೇವಾನುರೂಪ ಫಲಕ್ಕೆ ಕಲ್ಪವೃಕ್ಷ ದೃಷ್ಟಾಂತ

ನೈಷಾ ಪರಾವರಮತಿರ್ಭವತೋ ನನು ಸ್ಯಾ-
ಜ್ಜಂತೋರ್ಯಥಾತ್ಮಸುಹೃದೋ ಜಗತಸ್ತಥಾಪಿ ।
ಸಂಸೇವಯಾ ಸುರತರೋರಿವ ತೇ ಪ್ರಸಾದಃ
ಸೇವಾನುರೂಪ ಉದಯೋ ನ ಪರಾವರತ್ವಂ ॥

(ಭಾ.೭.೯.೨೭)

ತಥಾಪಿ ಬ್ರಹ್ಮಣಃ ಪ್ರಕಾರಾಂತರೇಣ ವಿಷಮತಾ । **ತಥಾಹಿ—** ಯತ್ರೋಭಾಭ್ಯಾಮಪಿ ಸೇವಾ ಕೃತಾ ತಥಾಪಿ ಫಲಮೇಕಸ್ಯಾಲ್ಪಂ । ಅನ್ಯಸ್ಯ ಮಹತ್ತತ್ರ ಕಥಂ । ನ ಚ ಪೂರ್ವತ್ರೇವಾತ್ರ ಸಮಾಧಾನಂ । ಪೂರ್ವಂ ಹಿ ಸೇವಾಭಾವಾಭಾವಾಭ್ಯಾಂ ಫಲಭಾವಾಭಾವಾವಿತಿ ವೈಷಮ್ಯಂ ಪರಿಹೃತಂ । ನ ಚಾತ್ರ ತಥಾಸ್ತಿ । ಉಭಯತ್ರೋಭಯೋರಪಿ ಸದ್ಭಾವಾತ್ । ಪರಂತು ಫಲೇಽಲ್ಪತ್ವಮಹತ್ವಲಕ್ಷಣಂ ವೈಷಮ್ಯಮಾತ್ರಮಸ್ತಿ । ತಚ್ಚ ಬ್ರಹ್ಮಣಃ ಅಯಂ ಪರಃ ಅಸಾವಪರ ಇತಿ ಮತಿಂ ವಿನಾ ನೋಪಪದ್ಯತ ಇತಿ ತತ್ರಾಹ ॥ **ನೈಷೇತಿ** ॥ ಯದ್ಯಪಿ ಜಗತ ಏವಾತ್ಮನಾ ಸ್ವತ ಏವ ನಿರ್ನಿಮಿತ್ತಂ ಸುಹೃದಃ ಭವತಃ ತವ । ಜಂತೋರ್ಯಥಾ ಮನುಷ್ಯಮಾತ್ರಸ್ಯೇವ। ಅಯಂ ಪರಃ ಅಸಾವಪರ ಇತ್ಯೇವಂರೂಪಾ ಮತಿಃ ವೈಷಮ್ಯಂ ನಾಸ್ತಿ। ತಥಾಪಿ । ಉದಯಃ ಫಲಂ ತಾವತ್ತಾರತಮ್ಯೇನ ಭವತ್। ತೇ ಪ್ರಸಾದಾನುರೂಪಃ। ಪ್ರಸಾದಶ್ಚ ಸೇವಾನುರೂಪಃ। ಸುರತರೋಃ ಪ್ರಸಾದ ಇವ। ನ ತು ಪರಾವರತ್ವಮಪೇಕ್ಷ್ಯೇತಿ ॥ ಇದಮುದಿತಂ **ಭವತಿ—** ದೈವಾದಾಗತಸ್ಯ ಕಲ್ಪತರೋಃ ಸೇವಾ ಬಹುಭಿಃ ಕೃತಾ । ಸೇವಯಾ ಚ ಫಲಂ ಪ್ರಾಪ್ತಂ ತದಪಿ ತಾರತಮ್ಯೇನೈವ । ಏಕಸ್ಯ ರಾಜತ್ವಂ ಅನ್ಯಸ್ಯ ಅಮಾತ್ಯತ್ವಮಿತ್ಯಾದಿ । ತತ್ರ ದ್ರಷ್ಟವ್ಯಂ ತತ್ತಾರತಮ್ಯಂ ಕಿಂನಿಮಿತ್ತಮಿತಿ । ಪ್ರಸಾದತಾರತಮ್ಯಾಧೀನಮಿತಿ ಚೇತ್। ಹಂತ ತರ್ಹಿ ಮನಸಾಪಿ ಸ್ಮರ್ತುಮಯೋಗ್ಯಃ ಸುರತರೌ ನಿಹಿತೋ

**ದೋಷಃ । ಸೇವಾನುರೂಪೋ ಹಿ ಪ್ರಸಾದ ಇತಿ ಕಥಂ ಸುರತರೌ ದೋಷ ಇತಿ ಚೇತ್ । ಸಮಃ ಸಮಾಧಿರಿತಿ ॥**

❖❖❖

ಪ್ರಹ್ಲಾದನು ಶ್ರೀನೃಸಿಂಹನಿಗೆ ಹೇಳುತ್ತಾನೆ—ಯದ್ಯಪಿ, ದೇವ ದಾನವರಿಬ್ಬರೂ ಸಮುದ್ರಮಥನಕಾರ್ಯ ಮಾಡಿದ್ದರು. ಆಗ ದಾನವರಿಗೆ ವಾರುಣಿ ಹೆಂಡವೆಂಬ ಅಲ್ಪಫಲ ದೊರಕಿತು. ದೇವತೆಗಳಿಗೆ ಅಮೃತವೆಂಬ ಶ್ರೇಷ್ಠಫಲ ದೊರಕಿತು. ಇದಕ್ಕೆ ಕಾರಣ ನಿನ್ನ 'ಪರ ಅವರ ಮತಿ'ಯೆ. ಅಂದರೆ 'ದೇವತೆಗಳು ಮಿತ್ರಕುಲದವರು. ದಾನವರು ಶತ್ರುಕುಲದವರೆ'ನ್ನುವ ಪಕ್ಷಪಾತ ನೀತಿಯೆ ತಾನೆ? ಎಂಬ ಸಂದೇಹ ಅಜ್ಞರಿಗೆ ಬರುವುದು ಸಹಜ. ಆದರೂ ವಸ್ತುತಃ ಜಗತ್ತಿಗೇ ನೀನು 'ಆತ್ಮಸುಹೃತ್' ಸ್ವಾಮಿಯೂ ಅನಿಮಿತ್ತ ಬಂಧುವೂ ಆಗಿರುವವನು. ನಿನಗೆ ಕುಲ ರೂಪ ಸಂಪದಾದಿಗಳಲ್ಲಿ ಇವನು ಮೇಲು. ಇವನು ಕೀಳೆಂದು ಪಕ್ಷಪಾತ ಮಾಡುವ ಬುದ್ಧಿ ಇಲ್ಲ. ಅಜ್ಞ ಮಾನವನಿಗಿರುವಂತೆ ನಿನಗೆ ಅದು ಇರಲು ಶಕ್ಯವಿಲ್ಲ. ಆದರೂ ನೀನು ಸೇವೆಗೆ ಅನುಗುಣವಾಗಿಯೆ ಅದರ ಫಲದಲ್ಲಿ ಹೆಚ್ಚುಕಡಿಮೆ ಮಾಡುವಿ, ಕಲ್ಪವೃಕ್ಷದಂತೆ. ಕಲ್ಪವೃಕ್ಷವನ್ನು ಸೇವಿಸಿ ಒಬ್ಬನು ರಾಜನಾದರೆ ಇನ್ನೊಬ್ಬನು ಮಂತ್ರಿಯಾಗುವನು. ಮತ್ತೊಬ್ಬನು ಸೇವಕನಾಗುವನು. 'ಕಲ್ಪವೃಕ್ಷವೂ ಪಕ್ಷಪಾತ ಮಾಡುತ್ತದೆ!' ಎಂದರೆ ಅದು ಅದಕ್ಕೆ ದೊಡ್ಡ ಅಪಚಾರವಾಗುವುದು, ಹಾಗೇ ಸೇವೆಗೆ ತಕ್ಕಂತೆ ದೊಡ್ಡ ಸಣ್ಣ ಫಲನೀಡುವ ನಿನಗೂ ಕೂಡ 'ನ ಪರಾವರತ್ವಂ' ಮೇಲುನೋಟಕ್ಕೆ ಕಾಣುವ ಶ್ರೇಷ್ಠತ್ವ ಕನಿಷ್ಠತ್ವಗಳು ಸೇವಕರ ವಿಷಯದಲ್ಲಿ ಅನುಗ್ರಹಕ್ಕೆ ಕಾರಣವಾಗಲಾರವು.

❖❖❖

## –೨೨೬–

**ತಾನು ಕಲ್ಪವೃಕ್ಷದಂತೆ ಎಂದು ಗೋಪಿಯರಿಗೆ ಕೃಷ್ಣನ ಉಪದೇಶ**

**ನಾಹಂ ತು ಸಖ್ಯೋ ಭಜತೋಽಪಿ ಜಂತೂನ್**
**ಭಜಾಮ್ಯಮೀಷಾಮನುವೃತ್ತಯೋ ಯಥಾ ।**
**ತಥೈವ ಮತ್ತಃ ಫಲಸಂಪದಃ ಸ್ಯುಃ**
**ಉಚ್ಚಾವಚಾಃ ಕಲ್ಪತರೋರಿವಾರ್ಥಿನಾಂ ॥** (ಭಾ.೧೦.೩೦.೨೦)

**ಬುದ್ಧ್ಯಾರೋಹಾಯ ಉಕ್ತಮರ್ಥಂ ವಿಶದಯತಿ ॥ ನಾಹಮಿತಿ ॥ ಗೋಪಿಕಾಃ ಪ್ರತಿ ಶ್ರೀಕೃಷ್ಣವಚನಮೇತತ್ । ಹೇ ಸಖ್ಯಃ । ಅಹಂ ಯಥಾ ಮಾಽಭಜತಃ ಭಜತಶ್ಚ ತು ವಿಶೇಷಾಭ್ಯಾಂ ಸ್ವಪರತ್ವಾಭ್ಯಾಂ ನ ಭಜಾಮಿ ನ ಪಶ್ಯಾಮಿ । ತಥಾ ಮಾಂ ಭಜತೋಽಪಿ ಜಂತೂನ್ । ತು ಪರಾವರತ್ವಾಭ್ಯಾಂ ವಿಶೇಷಾಭ್ಯಾಂ । ನ ಭಜಾಮಿ । ತುರನೇಕಾರ್ಥಃ । ತರ್ಹಿ ಫಲೇ ವಿಶೇಷಃ ಕಥಮಿತಿ ಭಾವೇನ ಶಂಕಿತೇ ಕಿಂತ್ವಿತ್ಯುತ್ತರಮಾಹ ॥ ಅಮೀಷಾಮಿತಿ । ಭಜತಾಮನುವೃತ್ತಯೋ ಯಥಾ ಯಾದೃಶ್ಯಃ । ಫಲಸಂಪತ್ತಯೋಽಪಿ ತಥಾ ತಾದೃಶ್ಯ ಏವ । ಮತ್ತಃ ಮಮ ಸಕಾಶಾತ್ । ಸ್ಯುರಿತಿ । ಯಥಾತಥೇತ್ಯುಕ್ತಂ ಸಾದೃಶ್ಯಂ ಕೇನ ಧರ್ಮೇಣೇತ್ಯತ ಆಹ ॥ ಉಚ್ಚಾವಚಾ ಇತಿ ॥ ನೀಚೋಚ್ಚತ್ವಾಭ್ಯಾಂ ಧರ್ಮಾಭ್ಯಾಂ ಸಾದೃಶ್ಯಂ ಉಚ್ಚಾಭಿಃ ಸೇವಾಭಿರುಚ್ಚಾಃ ಫಲಸಂಪತ್ತಯಃ ನೀಚಾಭಿರ್ನೀಚಾ ಇತಿ । ತತ್ರ ದೃಷ್ಟಾಂತಃ ಅರ್ಥಿನಾಂ ಕಲ್ಪತರೋಃ ಸಕಾಶಾದುಚ್ಚಾವಚಾಃ ಫಲಸಂಪದ ಇವೇತಿ । ಅಭಿಪ್ರಾಯಃ ಪೂರ್ವವತ್ ॥**

❖❖❖

**ಶ್ರೀಕೃಷ್ಣನನ್ನು ಕಾಣದೆ ಶೋಕಿಸುತ್ತಿದ್ದ ಗೋಪಿಯರಿಗೆ ಅವನು ಹೇಳುತ್ತಾನೆ—'ಗೆಳತಿಯರೆ, ನಾನು ನನ್ನ ಸೇವೆ ಮಾಡುವವರಿಗೂ ಸುಖ ನೀಡದವನು ಕೃತಘ್ನ ಎಂದು ನಿಮಗೆ ಅನಿಸಿದರೆ ಅದು ತಪ್ಪು. ಒಮ್ಮೆ ಮಾತ್ರ ಸ್ವಲ್ಪ ಸೇವೆ ಮಾಡಿದ ಮಾತ್ರಕ್ಕೇ ನಾನು ಪೂರ್ತಿ ಪ್ರತಿಫಲಕೊಟ್ಟರೆ ಎಲ್ಲರೂ ನಿಮ್ಮಂತೇ ಅಹಂಕಾರಪಡುತ್ತಾರೆ. ಅದರಿಂದ ನಾನು ಅವರು ಯಾವರೀತಿ ಸೇವೆ ಮಾಡುತ್ತಾರೆ ಎನ್ನುವುದನ್ನು ಕಂಡು ಕಲ್ಪವೃಕ್ಷದಂತೆ ತಾರತಮ್ಯಾನುಸಾರವಾಗಿ ಭಜಕರಿಗೆ ಭಾಗ್ಯಸಂಪದವನ್ನು ನೀಡುತ್ತೇನೆ. ಭಜಕರಲ್ಲಿ ಮೇಲುಕೀಳೆಂಬ ಭಾವನೆ ನನಗಿರುವುದಿಲ್ಲ' ಎಂದು.**

ಸೇವೆಗೆ ತಕ್ಕ ಫಲವನ್ನು ನೀಡುವವನು ಹರಿ. ಸೇವಕರಲ್ಲಿ ಕೇವಲ ಅಸ್ವಾಭಾವಿಕವಾಗಿ ಕಂಡುಬರುವ ಕುಲ ರೂಪ ಸಂಪದಾದಿಗಳುಳ್ಳವರು ಇಲ್ಲದವರೆಂದು ಭೇದಭಾವವನ್ನು ಮಾಡುವವನಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

❖❖❖

## –೨೨೭–

## ಭಕ್ತಿ ಪರೀಕ್ಷೆಗಾಗಿಯೆ ಬಲಿಯ ರಾಜ್ಯಹರಣ ಮಾಡಿದ ವಾಮನ

**ತ್ವಯ್ಯೈವ ದತ್ತಂ ಪದಮೈಂದ್ರಮೂರ್ಜಿತಂ**
**ಹೃತಂ ತ್ವಯ್ಯೈವಾದ್ಯ ತದೇವ ಶೋಭನಂ ।**
**ಮನ್ಯೇ ಮಹಾನಸ್ಯ ಕೃತೋಽಪ್ಯನುಗ್ರಹೋ**
**ವಿಭ್ರಂಶಿತೋ ಯಚ್ಛ್ರಿಯ ಆತ್ಮಮೋಹನಾತ್ ॥**

(ಭಾ.೮.೨೧.೧೬)

ಅವಿಷವುತ್ವಾನುಸಂಧಾನವತ್ಕೃಪಾಲುತ್ವಾನುಸಂಧಾನಮಪಿ ಭಕ್ತಿವಿಶೇಷಸಾಧನಮಿತಿ ಶ್ರೀಹರೌ ತದಪ್ಯನುಸಂಧೇಯಂ ॥ **ಇಯಾನ್ವಿಶೇಷಃ—** ಹರಿರ್ಯತ್ಪ್ರಥಮತ ಏವ ದಯಾಲುತಾಂ ನ ಪ್ರದರ್ಶಯತಿ । ಕಿಂತು ಬಹುತರಂ ಪರೀಕ್ಷ್ಯ ತತ್ರ ಸ್ಥೈರ್ಯೇ ಸತೀತಿ । ಇದಂ ಚ ಬಲಿವಿಷಯೇ ದೃಷ್ಟಮಿತ್ಯನುಶಯೇನ ಪರೀಕ್ಷಾರ್ಥಂ ಭಗವತಾ ಬಲೌ ಹೃತರಾಜ್ಯೇ ಸತಿ ಪ್ರಹ್ಲಾದಃ ಅಭ್ಯುಪೇತ್ಯ ಗತರಾಜ್ಯಂ ಪಾಶಬದ್ಧಂ ಬಲಿಂ ದೃಷ್ಟ್ವಾ ಭಗವಂತಂ ಪ್ರತ್ಯುವಾಚ । ತದಾಹ ॥ **ತ್ವಯ್ಯೈವೇತಿ** ॥ ಊರ್ಜಿತಂ ಉತ್ಕೃಷ್ಟಂ ಐಂದ್ರಂ ಪದಂ । ತ್ವಯ್ಯೈವ ದತ್ತಂ ಪೂರ್ವಂ । ಇದಾನೀಂ ತ್ವಯ್ಯೈವ ಹೃತಂ । ತದಾನೀಂ ದಾನಮೇವ ಇದಾನೀಂ ಹರಣಮೇವ ಶೋಭನಮಹಂ ಮನ್ಯೇ । ತ್ವದಿಚ್ಛಯಾ ಯದ್ಭವತಿ ತದೇವ ಶೋಭನಮಿತಿ ಮಂತವ್ಯಂ ಭಾಗವತೈರಿತಿ ಭಾವಃ । ನ ಕೇವಲಂ ಸುಖಕರಂ ಕಿಂತು ಮಹಾನುಗ್ರಹಸಾಧನಂ ಚೇತಿ ಭಾವೇನಾಹ ॥ **ಮಹಾನಿತಿ** ॥ ಯದಾ ಶ್ರಿಯಃ ಸಂಪದಃ ಸಕಾಶಾತ್ ವಿಭ್ರಂಶಿತಃ ಚಾಲಿತಃ । ತದಾ ಆತ್ಮಮೋಹಾದೇವ ವಿಭ್ರಂಶಿತ ಇತಿ ಮನ್ಯೇ । ತಸ್ಯಾ ಏವ ತತ್ರ ಹೇತುತ್ವಾದಿತಿ ಭಾವಃ । ಯಸ್ಮಾದೇವಂ ತಸ್ಮಾದಸ್ಯ ಬಲೇರ್ವಿಷಯೇ । ಮಹಾನನುಗ್ರಹೋಽಪಿ ಕೃತ ಇತಿ ಚ ಮನ್ಯೇ ಇತಿ । **ಯಥಾಹುಃ—**

ಬ್ರಹ್ಮನ್ಯಮನುಗೃಹ್ಣಾಮಿ ತದ್ವಿತ್ತಂ ವಿಧುನೋಮ್ಯಹಂ ।
ಯನ್ಮದಃ ಪುರುಷಃ ಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ ॥

ಯದಾ ಕದಾಚಿಜ್ಜೀವಾತ್ಮಾ ಸಂಸರನ್ನಿಜಕರ್ಮಭಿಃ ।
ನಾನಾಯೋನಿಷ್ವನೀಶೋಽಯಂ ಪೌರುಷೀಂ ಗತಿಮಾವ್ರಜೇತ್ ॥

ಜನ್ಮಕರ್ಮವಯೋರೂಪ ವಿದ್ಯೈಶ್ವರ್ಯಧನಾದಿಭಿಃ ।
ಯದ್ಯಸ್ಯ ನ ಭವೇತ್ಸ್ತಂಭಸ್ತತ್ರಾಯಂ ಮದನುಗ್ರಹಃ ॥

**ಮಾನಸ್ತಂಭನಿಮಿತ್ತಾನಾಂ ಜನ್ಮಾದೀನಾಂ ಸಮಂತತಃ ।**
**ಸರ್ವಶ್ರೇಯಃಪ್ರತೀಪಾನಾಂ ಯೋ ನ ಮುಹ್ಯೇತ್ಸ ಮತ್ಪರ । ಇತಿ ॥**

❖❖❖

**ಬಲಿಯ ರಾಜ್ಯವನ್ನು ಕಸಿದು ಅವನಿಗೆ ಅನುಗ್ರಹ ಮಾಡಿರುವೆ ಎಂದು ಶ್ರೀವಾಮನನಿಗೆ ಪ್ರಹ್ಲಾದನು ಹೇಳುತ್ತಾನೆ—'ಬಲಿಗೆ ಹಿಂದೆ ಇಂದ್ರಪದವಿ ಯನ್ನು ನೀನೆ ಕೊಟ್ಟಿರುವೆ. ಈಗ ನೀನೆ ಅದನ್ನು ಕಿತ್ತುಕೊಂಡಿರುವೆ. ಪರೀಕ್ಷೆಗಾಗಿ ನೀನು ಕೊಟ್ಟಿದ್ದೂ ಸರಿ, ನೀನೆ ಕಿತ್ತುಕೊಂಡಿದ್ದೂ ಸರಿ. ನಿನ್ನಿಚ್ಛೆಗೆ ಯಾವುದು ಬರುವುದೋ ಅದೇ ಸರಿ. ಭಕ್ತರು ಹೀಗೆ ಚಿಂತಿಸಬೇಕು. ಈ ಚಿಂತನೆ ಸುಖಕರ ಮಾತ್ರವೇ ಅಲ್ಲ. ನಿನ್ನ ಅನುಗ್ರಹಕ್ಕೆ ಸಾಧನವೂ ಹೌದು. ಸಂಪತ್ತನ್ನು ಕಸಿಯು ವಾಗ ಜೊತೆಗೆ ಬಲಿಯ ಮದವನ್ನೂ ಕಸಿದಿರುವೆ. ಸಂಪತ್ತು ಗರ್ವಮೋಹಗಳಿಗೆ ಕಾರಣ. ಅದನ್ನು ಕಸಿದು ಬಲಿಗೆ ಮಹಾ ಅನುಗ್ರಹವನ್ನೇ ಮಾಡಿರುವೆ' ಎಂದು.**

ಹರಿಯು ಭಕ್ತರಲ್ಲಿ ಪಕ್ಷಪಾತ ಬುದ್ಧಿ ಇಲ್ಲದವನು ಮಾತ್ರವಲ್ಲ. ಮಹಾಕೃಪಾಳುವೂ ಆಗಿರುವನು. ಅವನು ಮೊದಲೇ ಕೃಪೆ ತೋರುವುದಿಲ್ಲ. ಲೋಕಕ್ಕೆ ತಿಳಿಯಲೆಂದು ಬಹಳ ಪರೀಕ್ಷೆ ಮಾಡುತ್ತಾನೆ. ಅನಂತರ ಭಕ್ತನ ಭಕ್ತಿ ಸ್ಥಿರವಾಗಿದೆ ಎಂದು ಕಂಡಮೇಲೆಯೆ ದಯೆದೋರುತ್ತಾನೆ. ಈ ವಿಷಯದಲ್ಲಿ ಬಲಿ ಉತ್ತಮ ನಿದರ್ಶನ. ಅವನ ಭಕ್ತಿಯನ್ನು ಪರೀಕ್ಷಿಸಲು ಹರಿ ಅವನ ರಾಜ್ಯವನ್ನು ಕಸಿದ. ಅವನನ್ನು ವರುಣಪಾಶದಿಂದ ಕಟ್ಟಿಸಿದ. ಕಾರಗೃಹದಲ್ಲಿಟ್ಟ. ಬೇರೆಯವರು ಇದೆಲ್ಲವನ್ನೂ ಅನ್ಯಾಯವೆಂದು ಪ್ರತಿಭಟಿಸುತ್ತಿದ್ದರು, ಬಲಿ ಹಾಗೆ ಮಾಡಲಿಲ್ಲ. ಭಕ್ತಿ ಅವನಲ್ಲಿ ದೃಢವಿತ್ತು. ಅದನ್ನು ನೋಡಿ ಶ್ರೀವಾಮನನು ಬ್ರಹ್ಮದೇವರಿಗೆ ಹೇಳುತ್ತಾನೆ, ತಾತನಾದ ಪ್ರಹ್ಲಾದನು ಹೇಳಿದ ಮಾತೂ ಇದುವೆ—

ಬ್ರಹ್ಮನ್ ಯಮನುಗೃಹ್ಣಾಮಿ ತದ್‌ವಿತ್ತಂ ವಿಧುನೋಮ್ಯಹಂ ।
ಯನ್ಮದಃ ಪುರುಷಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ
ಯದಾಕದಾಚಿಜ್ಜೀವಾತ್ಮಾ ಸಂಸರನ್ನಿಜಕರ್ಮಭಿಃ
ನಾನಾಯೋನಿಷ್ವನೀಶೋಽಯಂ ಪೌರುಷೀಂ ಗತಿಮಾವ್ರಜೇತ್
ಜನ್ಮಕರ್ಮವಯೋರೂಪ ವಿದ್ಯೈಶ್ವರ್ಯ ಧನಾದಿಭಿಃ

ಯದ್ಯಸ್ಯ ನ ಭವೇತ್ ಸ್ತಂಭಸ್ತತ್ರಾಯಂ ಮದನುಗ್ರಹಃ
ಮಾನಸ್ತಂಭನಿಮಿತ್ತಾನಾಂ ಜನ್ಮಾದೀನಾಂ ಸಮಂತತಃ
ಸರ್ವಶ್ರೇಯಃ ಪ್ರತೀಪಾನಾಂ ಹಂತ ಮುಹ್ಯೇನ್ನ ಮತ್ಪರಃ ॥

ಬ್ರಹ್ಮನೆ, ನಾನು ಯಾರನ್ನು ಅನುಗ್ರಹಿಸಲು ಸಂಕಲ್ಪಿಸುವೆನೋ ಮೊದಲಿಗೆ ಅವನ ಸಂಪತ್ತನ್ನು ಪರೀಕ್ಷೆಗಾಗಿ ಕಸಿದುಕೊಳ್ಳುತ್ತೇನೆ. ಏಕೆಂದರೆ ಸಂಪತ್ತಿನ ಮದದಿಂದ ಅವನು ಮೈಮರೆತು ಅಸುರಾವೇಶಕ್ಕೊಳಗಾಗಿ ಲೋಕವನ್ನೂ ನನ್ನನ್ನೂ ಅವಮಾನಿಸುತ್ತಾನೆ.

ಅಸ್ವತಂತ್ರನಾದ ಜೀವಾತ್ಮನು ಕರ್ಮಾನುಸಾರ ನಾನಾಯೋನಿಗಳಲ್ಲಿ ಸಂಚರಿಸುತ್ತ ಯಾವಾಗಲೋ ಒಮ್ಮೆ ಮಾನವನ ಜನ್ಮವನ್ನು ಹೊಂದುತ್ತಾನೆ.

ಈ ಮಾನವಜನ್ಮದಲ್ಲಿಯೂ ಜನ್ಮಕರ್ಮ ವಯಸು ರೂಪ ವಿದ್ಯೆ ಐಶ್ವರ್ಯ ಧನಸಂಪತ್ತು ಮುಂತಾದವುಗಳಿಂದ ಆತನಿಗೆ ಅಹಂಕಾರಬಾರದಿದ್ದರೆ ಭಕ್ತಿಬಂದರೆ ಮಾತ್ರ ನನ್ನ ಅನುಗ್ರಹವಾಗುವುದು.

ಎಲ್ಲಕಡೆ ಎಲ್ಲ ಶ್ರೇಯಸ್ಸುಗಳಿಗೆ ಅಡ್ಡಿಯಾಗುವವುಗಳು, ಅಭಿಮಾನ ಅಹಂಕಾರಗಳಿಗೆ ಕಾರಣವಾಗುವ ಈ ಜನ್ಮಕರ್ಮ ವಯಸ್ಸು ಮುಂತಾದುವು. ನನ್ನ ಭಕ್ತನು ಅವುಗಳಿಂದ ಮೋಹಕ್ಕೊಳಗಾಗಬಾರದು. (ಭಾ.೮.೨೧.೨೪-೨೭)

ಭಗವಂತನು ಭಕ್ತನಿಗೆ ಐಶ್ವರ್ಯವನ್ನು ಕೊಟ್ಟು ಕಸಿಯುವುದು ಅವನ ಭಕ್ತಿಯ ಸ್ಥಿರತೆಯನ್ನು ಪರೀಕ್ಷಿಸುವುದಕ್ಕಾಗಿ. ಪರೀಕ್ಷೆಯಿಂದ ಭಕ್ತಿ ಸ್ಥಿರತೆಯನ್ನು ಲೋಕಕ್ಕೆ ತೋರಿಸಿ ತಾನು ಅವನಮೇಲೆ ಮಹಾ ಅನುಗ್ರಹ ಮಾಡುತ್ತಾನೆ ಎಂದು ಭಗವಂತನೇ ಬ್ರಹ್ಮನಿಗೆ ಇಲ್ಲಿ ಹೇಳುತ್ತಿದ್ದಾನೆ.

❖❖❖

## –೨೨೮–

## ಕೊಟ್ಟೆನೆಂದು ಪರಿತಪಿಸದ ಬಲಿಗೆ ಇನ್ನಷ್ಟು ಕೊಟ್ಟ ವಾಮನ

**ಯತ್ಪಾದಯೋರವಶಧೀಃ ಸಲಿಲಂ ಪ್ರದಾಯ**
**ದೂರ್ವಾಂಕುರೈರಪಿ ವಿಧಾಯ ಸತೀಂ ಸಪರ್ಯಾಂ ।**

**ಅತ್ಯುತ್ತಮಾಂ ಗತಿಮಸೌ ಭಜತೇ ತ್ರಿಲೋಕೀಂ**
**ದತ್ವಾ ನ ವಿಕ್ಲವಮನಾಃ ಕಥಮಾರ್ತಿಮೃಚ್ಛೇತ್ ॥**

(ಭಾ.೮.೨೧.೨೩)

**ಏವಂ ಬಲಿಂ ಪಾಶಬದ್ಧಂ ದೃಷ್ಟ್ವಾ ಸಕರುಣೇನ ಪ್ರಹ್ಲಾದೇನ ಸ್ತುತೋ ಭಗವಾನಿತ್ಯುಕ್ತಂ । ಇದಾನೀಂ ತಾದೃಶೇನ ಬ್ರಹ್ಮಣಾ ಸ್ತೂಯತೇ ಇತಿ ಭಾವೇನಾಹ ॥ ಯತ್ಪಾದಯೋರಿತಿ ॥ ಲೋಕೇ ಜನಃ ಅನ್ಯಃ ಕಶ್ಚನ । ಯಸ್ಯ ತವ ಪಾದಯೋಃ ಅವಶಧೀರೇವ ನ ಬುದ್ಧಿಪೂರ್ವಕಂ । ಉದಕಮೇಕಮೇವ ಪ್ರದಾಯ । ತಥಾ ಪರಃ । ಕಶ್ಚನ । ದೂರ್ವಾಂಕುರೈರಪಿ । ಸತೀಂ ಸಪರ್ಯಾಂ ವಿಧಾಯಾಪಿ । ಉತ್ತಮಾಂ ಗತಿಂ । ಭಜತೇ ಪ್ರಾಪ್ನೋತಿ । ತಾದೃಶಾಯ ತುಭ್ಯಂ ಅಸೌ ಬಲಿಃ ತ್ರಿಲೋಕೀಮಪಿ । ಅವಿಕ್ಲವಮನಾ ಏವ । ದತ್ವಾ ಆರ್ತಿಂ ಪಾಶಬಂಧಾದಿನಾ ಅಪಮಾನರೂಪಾಂ । ಕಥಂ ಋಚ್ಛೇತ್ । ತದ್ಯೋಗ್ಯೋ ನ ಭವತಿ ಅತಸ್ತ್ವಯಾನುಗೃಹೀತವ್ಯ ಇತಿ । ಇಯಾಂಸ್ತು ವಿಶೇಷಃ— ಯತ್ಪ್ರಹ್ಲಾದೋ ಗೂಢಾಭಿಸಂಧಿರೇವ ಸ್ತುತವಾನ್ ಅಯಂ ತು ''ಕಥಮಾರ್ತಿಮೃಚ್ಛೇ''ದಿತಿ ಸ್ಪಷ್ಟಮೇವೋಕ್ತವಾನಿತಿ ॥**

❖❖❖

**ಬಲಿಯನ್ನು ಬಂಧಿಸಿ ಕಾರಾಗೃಹದಲ್ಲಿ ಹಾಕಿದ ವಾಮನನ ಮುಂದೆ ಬ್ರಹ್ಮದೇವರು ಹೇಳುತ್ತಾರೆ—**

**'ನಿನ್ನ ಪಾದವನ್ನು ನಿರ್ಮಲ ಬುದ್ಧಿಯಿಂದ ತೊಳೆದು ಗರಿಕೆ ಹುಲ್ಲಿನ ಚಿಗುರಿನಿಂದ ಪರವಶತೆಯಿಂದ ಪೂಜೆ ಮಾಡಿದರೂ ಭಕ್ತನು ಉತ್ತಮ ಗತಿಯನ್ನೇ ಹೊಂದುತ್ತಾನೆ. ಈ ಬಲಿಯಾದರೋ ಮೂಲೋಕವನ್ನೆ ಕೊಟ್ಟೂ ಕೂಡ ಅದಕ್ಕೆ ಪರಿತಪಿಸುತ್ತಿಲ್ಲ. ಅವನೇಕೆ ಯಾತನೆಯನ್ನು ಹೊಂದಬೇಕು?' ಎಂದು.**

ಪ್ರಹ್ಲಾದನು ನೇರವಾಗಿ ಹೇಳದಿದ್ದ ಮಾತನ್ನು ಬ್ರಹ್ಮದೇವರು ನೇರವಾಗಿ ಹೇಳಿದ್ದಾರೆ— ಬಲಿಯು ಕಷ್ಟಪಡುವುದು ಸರಿಯಲ್ಲ. ಅವನಲ್ಲಿ ಅನುಗ್ರಹ ಮಾಡು' ಎಂದು.

ಬ್ರಹ್ಮದೇವರು ಹೀಗೆ ಸ್ಪಷ್ಟ ಹೇಳಿದರೂ ಬಲಿಯು 'ಅನುಗ್ರಹ ಮಾಡೆ'ಂದು ವಾಮನನಲ್ಲಿ ಬೇಡುವುದಿಲ್ಲ. ವಾಮನನು ಸಂಪತ್ತನ್ನು ತನಗೆ

ಪರೀಕ್ಷೆಗಾಗಿ ಕೊಟ್ಟಿದ್ದೆಂದು ತಿಳಿಯದೆ, ತಾನೇ ಅದನ್ನು ಸಂಪಾದಿಸಿದೆನೆಂದು ಮದೋನ್ಮತ್ತನಾಗಿ 'ಲೋಕಂ ಮಾಂ ಚಾವಮನ್ಯತೇ' ಎಂದು ವಾಮನ ಹೇಳಿದಂತೆ, ವಿಷಯಭೋಗದಲ್ಲಿ ನಾನು ಅತ್ಯಾಸಕ್ತಿ ತೋರಿದ್ದೇನೆ. ಅದಕ್ಕೆ ಭಗವಂತ ಶಿಕ್ಷೆ ಕೊಟ್ಟಿದ್ದು ಸರಿಯೆ ಎಂದು ಭಕ್ತಿಯಿಂದ ತಲೆಬಾಗಿದ್ದಾನೆ ಬಲಿ. ಅದಕ್ಕೆ ಒಲಿದು ವಾಮನ ನಿನಗೆ ಸುತಲಲೋಕದಲ್ಲಿ ಲೋಕಾಧಿಪತ್ಯವನ್ನು ಇನ್ನೂ ಅಧಿಕವಾದ ಮೋಕ್ಷಸಂಪತ್ತನ್ನೂ ಕೊಡುವೆನೆಂದು ವರನೀಡಿ ಅದು ಸಾಲದೆಂದು ತಾನೇ ಗದಾಪಾಣಿಯಾಗಿ, ಬಲಿಯ ಮನೆಯನ್ನು ಮನವನ್ನೂ ಅಸುರರ ಧಾಳಿಯಿಂದ ರಕ್ಷಿಸಲು ಕಟಿಬದ್ಧನಾಗಿ ದ್ವಾರದಲ್ಲಿ ನಿಂತಿದ್ದಾನೆ. ಬಲಿಗೆ ಗೊತ್ತು, 'ವೈದ್ಯೋ ನಾರಾಯಣೋ ಹರಿಃ' ನಾರಾಯಣನೆ ಸಕಲರೋಗಗಳಿಗೆ ಚಿಕಿತ್ಸೆ ಮಾಡುವ ವೈದ್ಯ. ನನ್ನ ಮದಕ್ಕೆ ಕಾರಣವಾದ ಅಸುರಾವೇಶವೆಂಬ ರೋಗಕ್ಕೆ ಚಿಕಿತ್ಸೆಯಾಗಿ ವಾಮನನು ನನಗೆ ಈ ಎಲ್ಲ ಶಿಕ್ಷೆ ಮಾಡಿದ್ದಾನೆ ಮಾಡುತ್ತಿದ್ದಾನೆ ಎಂದು. ರೋಗವನ್ನು ಪರೀಕ್ಷಿಸುವುದಕ್ಕಾಗಿಯೆ ನನಗೆ ಐಶ್ವರ್ಯ ಕೊಟ್ಟು ತಾನೇ ಕಸಿದಿದ್ದಾನೆ ಎಂದು.

ಹಿಂದೆ ೮೩ನೇ ಶ್ಲೋಕದ ವಿವರಣೆಯಲ್ಲಿ ಇದರ ವಿವರ ಬಂದಿದೆ.

❖❖❖

–೨೨೯–

**ಕೊಡಲಿಲ್ಲ ತಾನೆಂದು ಪರಿತಪಿಸಿದವನಿಗೆ ಕೊಟ್ಟ ವಾಮನ**

**ಬಿಭೇಮಿ ನಾಹಂ ನಿರಯಾತ್ ಪದಚ್ಯುತೋ**
**ನ ಪಾಶಬಂಧಾತ್ ವ್ಯಸನಾದ್ದುರತ್ಯಯಾತ್ ।**
**ನ ಚಾರ್ಥ ಕೃಚ್ಛ್ರಾತ್ ಭವತೋ ವಿನಿಗ್ರಹಾತ್**
**ಅಸಾಧುವಾದಾದ್ ಭೃಶಮುದ್ವಿಜೇ ಯಥಾ ॥**

(ಭಾ.೮.೨೧.೩)

**ಏವಮನ್ಯೈರೇವ ತದಪಮಾನಮಸಹಮಾನೈಃ ಭಗವಾನ್ ತನ್ಮೋಚನಾಯ ಸ್ತುತಃ । ಸ ತು ನೈವ ತದರ್ಥಮೇವಂ ಸ್ತುತವಾನ್ । ನಾಪಿ ಮನಸಾಪಿ ಗ್ಲಾನಿಮವಾಪ್ತವಾನ್ ಅಹೋ ಭಾಗವತೀ ಪರೀಕ್ಷಾ ಅಹೋ ಭಾಗವತಾನಾಂ ದಾರ್ಢ್ಯಂ ಅಹೋ ಕೃಪಾಲುತಾ ಭಾಗವತೀ । ಪೂರ್ವತೋऽ-**

**ಪೃಥಿಕಮೈಶ್ವರ್ಯಂ ದತ್ತ್ವಾಪಿ ಅಸಮಾಹಿತಮನಾಃ ಯತ್ಸ್ವಾತ್ಮಾನಮೇವ ಗದಾಪಾಣಿಂ ದ್ವಾರಪತಯಾ ಕೃತವಾನಿತಿಭಾವೇನ ಬಲಿವಚನಮೇವ ದರ್ಶಯತಿ ॥ ಬಿಭೇಮೀತಿ ॥ ಪದಚ್ಯುತ ಇತ್ಯನೇನ ಪದಭ್ರಂಶಾದಪೀತಿ ಸೂಚಯತಿ । ತ್ವಯಾ ಕಾರಿತಾತ್ಪಾಶಬಂಧಾತ್ । ಅರ್ಥಕೃಚ್ಛ್ರಾತ್ ಅರ್ಥಃ ಕೋಶಃ ಗತ ಇತಿ ದುಃಖಾತ್ । ಕಿಂಬಹುನಾ ಭವತಃ ಸಕಾಶಾಜ್ಜಾತಾತ್ ಜನಿಷ್ಯಮಾಣಾಚ್ಚ ವಿನಿಗ್ರಹಾತ್ ನ ಬಿಭೇಮಿ ಮನೋಗ್ಲಾನಿಮಾನ್ ನ ಭವಾಮಿ । ತರ್ಹಿ ಕುತಸ್ತವ ಭಯಮಿತ್ಯತಃ ಅಭಿಪ್ರೇತಂ ದರ್ಶಯತಿ ॥ ಅಸಾಧುವಾದಾದಿತಿ ॥ ಅನೃತಭಾಷಣಾದೇವ ಅಹಂ ಯಥಾ ಉದ್ವಿಜೇ ನ ತಥಾ ಅನ್ಯಸ್ಮಾದಿತಿ । ತವ ಪದತ್ರಯಂ ದಾಸ್ಯೇ ಇತ್ಯುಕ್ತ್ವಾ ನ ದತ್ತವಾನಿತಿ । ಏತಸ್ಮಾದೇವ ಮಮ ಮನೋಗ್ಲಾನಿರಿತಿ ಭಾವಃ । ಯಥಾಹುಃ—**

**ಕ್ಷೀಣೋ ವಿಭ್ರಂಶಿತಃ ಸ್ಥಾನಾತ್ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ ।<br>ಜ್ಞಾತಿಭಿಶ್ಚ ಪರಿತ್ಯಕ್ತೋ ಯಾತನಾಮನುಯಾಪಿತಃ ॥**

**ಗುರುಣಾ ಭರ್ತ್ಸಿತಃ ಶಪ್ತೋ ಜಹೌ ಸತ್ಯಂ ನ ಸುವ್ರತಃ ।<br>ಛಲೈರುಕ್ತೋ ಮಯಾ ಧರ್ಮೋ ನಾಯಂ ತ್ಯಜತಿ ಸತ್ಯವಾಕ್ ॥**

**ಏಷ ಮೇ ಪ್ರಾಪಿತಃ ಸ್ಥಾನಂ ದುಷ್ಪ್ರಾಪಮಮರೈರಪಿ ।<br>ಸಾವರ್ಣೇರಂತರಸ್ಯಾಯಂ ಭವಿತೇಂದ್ರೋ ಮಹಾಯಶಾಃ ॥**

**ತಾವತ್ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಂ ।<br>ಇಂದ್ರಸೇನ ಮಹಾರಾಜ ಯಾಹಿ ಭೋ ಭದ್ರಮಸ್ತು ತೇ ॥**

**ಸುತಲಂ ಸ್ವರ್ಗಿಭಿಃ ಪ್ರಾರ್ಥ್ಯಂ ಜ್ಞಾತಿಭಿಃ ಪರಿವಾರಿತಃ ।<br>ನ ತ್ವಾಮಭಿಭವಿಷ್ಯಂತಿ ಲೋಕೇಶಾಃ ಕಿಮುತಾಪರೇ ॥**

**ತ್ವಚ್ಛಾಸನಾತಿಗಾಂದೈತ್ಯಾಂಶ್ಚಕ್ರಂ ಮೇ ಸೂದಯಿಷ್ಯತಿ ।<br>ರಕ್ಷಿಷ್ಯೇ ಸರ್ವತೋಽಹಂ ತ್ವಾಂ ಸಾನುಗಂ ಸಪರಿಚ್ಛದಂ ॥**

**ಸದಾ ಸನ್ನಿಹಿತಂ ವೀರ ತತ್ರ ಮಾಂ ದ್ರಕ್ಷ್ಯತೇ ಭವಾನ್ ।<br>ತತ್ರ ದಾನವದೈತ್ಯಾನಾಂ ಸಂಗಾತ್ತೇ ಭಾವ ಆಸುರಃ ।<br>ದೃಷ್ಟ್ವಾ ಮದನುಭಾವಂ ವೈ ಸದ್ಯಃಕುಂಠೋ ವಿನಂಕ್ಷ್ಯತಿ ॥**

❖❖❖

ಬಲಿಯು ವಾಮನನಲ್ಲಿ ನುಡಿಯುತ್ತಾನೆ—'ನಾನು, ನರಕಕ್ಕೆ ಹೆದರುವುದಿಲ್ಲ'.

'ಬಲಿಯೆ! ವಾಮನನಿಗೆ ಭೂಮಿಯನ್ನು ವಾಗ್ದಾನ ಮಾಡಬೇಡ. ಅವನು ಕೇಳಿದ ಮೂರು ಹೆಜ್ಜೆ ಭೂಮಿಯನ್ನು ನೀನು ಕೊಡಲು ಶಕ್ತನಾಗಲಾರೆ, ಕೊಡದಿದ್ದರೆ ನರಕಪ್ರಾಪ್ತಿಯಾಗುವುದು' ಎಂದು ಶುಕ್ರಾಚಾರ್ಯರು ಎಚ್ಚರಿಸಿದ್ದರು.

**'ಇಂದ್ರಪದವಿಯಿಂದ ನಾನು ಚ್ಯುತನಾದೆನೆಂದೂ ವ್ಯಸನಪಡುವುದಿಲ್ಲ. ನಿನ್ನಾಜ್ಞೆಯಂತೆ ಗರುಡನು ಕಟ್ಟುವ ವರುಣ ಪಾಶಕ್ಕೂ ಹೆದರುವುದಿಲ್ಲ. ಕಾರಾಗೃಹವಾಸರೂಪವಾದ ಕಷ್ಟದಿಂದ ಪಾರಾಗಲಾರೆನೆಂದೂ ಹೆದರುವುದಿಲ್ಲ. ಕೋಶ ನಷ್ಟವಾಯಿತೆಂದೂ ವ್ಯಸನಪಡುವುದಿಲ್ಲ. ನೀನು ನನಗೆ ಶಿಕ್ಷೆ ನೀಡುವೆ ಎಂದೂ ನಾನು ಹೆದರುವುದಿಲ್ಲ. ಮೂರುಹೆಜ್ಜೆ ಭೂಮಿ ಕೊಡುವೆನೆಂದು ಹೇಳಿ ನಾನು ಅದಕ್ಕೆ ತಪ್ಪಿದೆನೆಂದು ಲೋಕವು ನಿಂದಿಸುತ್ತದೆ. ಅದಕ್ಕೆ ನಾನು ಬಹಳ ಉದ್ವೇಗಗೊಳ್ಳುತ್ತಿದ್ದೇನೆ'.**

ಬಲಿಚಕ್ರವರ್ತಿಯ ನಿದರ್ಶನದಲ್ಲಿ ಪರೀಕ್ಷೆಮಾಡಿ ಯೋಗ್ಯಫಲವನ್ನೇ ನೀಡುವ ಭಗವಂತನ ಕೃಪಾಳುತ್ವದ ಅನುಸಂಧಾನ ಭಕ್ತನಿಗೆ ಎಷ್ಟು ಆವಶ್ಯಕವೆಂದು ಭಗವಂತನ ಮಾತಿನಿಂದಲೇ ತಿಳಿದು ಬರುವುದು. ಭಗವಂತನು ಹೇಳುತ್ತಾನೆ—

'ಕ್ಷಣದಲ್ಲಿ ಸ್ಥಾನಭ್ರಷ್ಟನಾಗಿದ್ದಾನೆ ಬಲಿ. ಮತ್ತು ಶತ್ರುಗಳಾದ ನನ್ನ ಅನುಚರರಿಂದ ಪರ್ವತ ಗುಹೆಯೊಂದರಲ್ಲಿ ಬದ್ಧನಾಗಿದ್ದಾನೆ. ಬಂಧುಗಳಾದ ಅಸುರರೂ ಅಲ್ಲಿ ಸಹಾಯಕ್ಕೆ ಬರುತ್ತಿಲ್ಲ. ತಾನು ಯಾತನೆಗೊಳಗಾಗಿದ್ದಾನೆ. ಗುರು ಶುಕ್ರಾಚಾರ್ಯರೂ ಬೈದರು ಶಪಿಸಿದರು. ಆದರೂ ಅಹಂಕಾರದಿಂದ ಕೊಟ್ಟ ಮಾತನ್ನು ನಡೆಸುವ ಛಲವನ್ನು ಬಿಡಲಿಲ್ಲ. ನಾನು ಅವನ ಪೂರ್ವಿಕರನ್ನು ಹೊಗಳಿ ಧರ್ಮವಿಷಯದಲ್ಲಿ ಕಪಟದ ಮಾತುಗಳನ್ನಾಡಿದೆನು. ಅದರಿಂದ ಇವನು ಧರ್ಮವನ್ನು ಬಿಡಲಿಲ್ಲ. ಸತ್ಯವನ್ನು ಬಿಡಲಿಲ್ಲ. ಇವನಿಗೆ ನಾನು ದೇವತೆಗಳಿಗೂ ಸಿಗದಂಥ ಸ್ಥಾನವನ್ನು ನೀಡುವೆನು. ಸಾವರ್ಣಿ ಮನ್ವಂತರದಲ್ಲಿ ಇಂದ್ರನಾಗಿ ನನ್ನ ಆಶ್ರಯದಲ್ಲಿ ಮಹಾಕೀರ್ತಿಶಾಲಿಯಾಗಿ ಮೆರೆಯುವನು. ಅಲ್ಲಿಯವರೆಗೆ ವಿಶ್ವಕರ್ಮ ನಿರ್ಮಿತವಾದ ಸುತಲದ ಅರಮನೆಯಲ್ಲಿರಲಿ, ಇಂದ್ರಸೇನ! ಬಲಿ, ಮಹಾರಾಜ! ನಿನಗೆ ಶುಭವಾಗಲಿ! ಸುರರಿಗೂ

ಬೇಕೆನಿಸಬಹುದಾದ ಸುತಲದಲ್ಲಿ ನೀನು ನಿನ್ನ ಬಂಧುಗಳೊಂದಿಗೆ ಸುಖವಾಗಿರು. ಹೋಗು. ಲೋಕೇಶರೂ ನಿನ್ನ ಮೇಲೆ ಆಕ್ರಮಣಕ್ಕೆ ಬರಲಾರರೆಂದಮೇಲೆ ಉಳಿದವರ ಲೆಕ್ಕವೇನು? ನಿನ್ನ ಶಾಸನವನ್ನು ಉಲ್ಲಂಘಿಸುವ ದೈತ್ಯರನ್ನು ನನ್ನ ಚಕ್ರವೇ ನಿನಗೆ ರಕ್ಷಕವಾಗಿದ್ದು ಸಂಹರಿಸುವುದು. ನಿನ್ನನ್ನೂ ನಿನ್ನ ಅನುಚರರನ್ನೂ ನಿನ್ನ ಸಮಗ್ರಸಂಪತ್ತನ್ನೂ ನಾನೇ ದ್ವಾರದಲ್ಲಿ ನಿಂತು ಸದಾ ಕಾಪಾಡುವೆನು. ನಿನ್ನ ಬಳಿ ಪ್ರತ್ಯಕ್ಷ ಸನ್ನಿಹಿತನಾಗಿರುವ ನನ್ನನ್ನು ನೀನು ಕಾಣುವೆ. ಆಗ ನಿನಗೆ ದುಷ್ಟ ದಾನವ ಸಂಗದಿಂದ ಬರುವ ಅಸುರಾವೇಶವು ತಕ್ಷಣವೆ ಹೊರಟು ಹೋಗುವುದು'—

'ಕ್ಷಣಾದ್ ವಿಭ್ರಂಶಿತಃ ಸ್ಥಾನಾತ್ ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ ।
ಜ್ಞಾತಿಭಿಶ್ಚ ಪರಿತ್ಯಕ್ತೋ ಯಾತನಾಮನುಯಾಪಿತಃ ।
ಗುರುಣಾ ಭರ್ತ್ಸಿತಃ ಶಪ್ತೋ ಜಹೌ ಸತ್ಯಂ ನ ಸುವ್ರತಃ ।
ಛಲೈರುಕ್ತೋ ಮಯಾ ಧರ್ಮೋ ನಾಯಂ ತ್ಯಜತಿ ಸತ್ಯವಾಕ್ ।
ಏಷ ಮೇ ಪ್ರಾಪಿತಃ ಸ್ಥಾನಂ ದುಷ್ಪ್ರಾಪಮಮರೈರಪಿ ।
ಸಾವರ್ಣೇರಂತರಸ್ಯಾಯಂ ಭವಿತೇಂದ್ರೋ ಮದಾಶ್ರಯಃ ।
ತಾವತ್ ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಂ ।
ಇಂದ್ರಸೇನ ಮಹಾರಾಜ ಯಾಹಿ ಭೋ ಭದ್ರಮಸ್ತು ತೇ ।
ಸುತಲಂ ಸ್ವರ್ಗಿಭಿಃ ಪ್ರಾರ್ಥ್ಯಂ ಜ್ಞಾತಿಭಿಃ ಪರಿವಾರಿತಃ ।
ನ ತ್ವಾಮಭಿಭವಿಷ್ಯಂತಿ ಲೋಕೇಶಾಃ ಕಿಮುತಾಪರೇ ।
ತ್ವಚ್ಛಾಸನಾತಿಗಾನ್ ದೈತ್ಯಾನ್ ಚಕ್ರಂ ಮೇ ಸೂದಯಿಷ್ಯತಿ ।
ರಕ್ಷಿಷ್ಯೇ ಸರ್ವತೋಽಹಂ ತ್ವಾಂ ಸಾನುಗಂ ಸಪರಿಚ್ಛದಂ ।
ಸದಾ ಸನ್ನಿಹಿತಂ ವೀರ ತತ್ರ ಮಾಂ ದ್ರಕ್ಷ್ಯಸೇ ಭವಾನ್ ।
ತತ್ರ ದಾನವದೈತ್ಯಾನಾಂ ಸಂಗಾತ್ತೇ ಭಾವ ಆಸುರಃ ।
ದೃಷ್ಟ್ವಾಮದನುಭಾವಂ ವೈ ಸದ್ಯಃ ಕುಂಠೋ ವಿನಂಕ್ಷ್ಯತಿ ॥

(ಭಾ.೮.೨೦.೨೯-೩೭)

❖❖❖

-೨೩೦-

## ರುಕ್ಮಿಣಿಯನ್ನೂ ಬಿಡದೆ ಪರೀಕ್ಷಿಸಿದ ಶ್ರೀಕೃಷ್ಣ

**ಭ್ರಾತುರ್ವಿರೂಪಕರಣಂ ಯುಧಿ ನಿರ್ಜಿತಸ್ಯ**
**ಪ್ರೋದ್ವಾಹಪರ್ವಣಿ ಚ ತದ್ವಧಮಕ್ಷ ಗೋಷ್ಠ್ಯಾಂ ।**
**ದುಃಖಂ ತದುತ್ಥಮಸಹೋಽಸ್ಮದಯೋಗಭೀತ್ಯಾ**
**ನೈವಾಬ್ರವೀಃ ಕಿಮಪಿ ತೇನ ವಯಂ ಜಿತಾಸ್ತೇ ॥** (ಭಾ.೧೦.೬೫.೬೦)

ಯದಾ ಖಲು ಭಗವತಾ ಭಗವತ್ಯಾ ಅಪಿ ಪರೀಕ್ಷಾಂ ಕೃತ್ವೈವ ಅತುಲಿತಃ ಅನುಗ್ರಹಃ ಕೃತಃ । ಕಾ ಕಥಾ ತದಾ ಭಾಗವತಾನಾಂ ಪರೀಕ್ಷಯೈವ ಅನುಗ್ರಹಃ ಕ್ರಿಯತ ಇತ್ಯಾಶಯೇನ ರುಕ್ಮಿಣೀಂ ಪ್ರತಿ ನಿಗದಿತಂ ಶ್ರೀಕೃಷ್ಣವಚನಂ ದರ್ಶಯತಿ ॥ **ಭ್ರಾತುರಿತಿ** ॥ ವಿರೂಪಕರಣಂ ವೈರೂಪ್ಯಕರಣಂ ಶ್ಮಶ್ರುಪ್ರಭೃತೀನಾಂ ವಪನೇನ । ಇದಮೇವಾನ್ಯಾಯ್ಯಂ । ಏತತ್ತು ಸ್ಖಲಿತಸ್ಯ ಕಶಯಾ ತಾಡನಮಿವ ಪರಮಾನ್ಯಾಯ್ಯಮಿತಿ ಭಾವೇನ ಭ್ರಾತರಂ ವಿಶೇಷಯಾಮಾಸ ॥ **ಯುಧಿ ನಿರ್ಜಿತಸ್ಯೇತಿ** । ನ ಕೇವಲಂ ಮಾನಹಾನಿಮೇವ ಕಿಂತು ಪ್ರಾಣಹಾನಿ ಮಪೀತ್ಯಾಹ ॥ **ತದ್ವಧಮಿತಿ** ॥ ತಸ್ಯ ಭ್ರಾತುಃ ವಧಂ ಚೇತ್ಯರ್ಥಃ । ಬಂಧೋರ್ವಧೋಽಪಿ ನ ನಿಂದಿತಃ ಕ್ಷತ್ರಿಯಾಣಾಂ ಮೃಧೇ । ಇದಂ ತು ನ ತಥೇತಿ ಅತಿನಿಂದಿತ ಏವ ತದ್ವಧ ಇತ್ಯಾಶಯೇನೋಕ್ತಂ **ಅಕ್ಷಗೋಷ್ಠ್ಯಾಮಿತಿ** ॥ ದ್ಯೂತಕ್ರೀಡಾಯಾಮಿತಿ । ಇದಂ ತು ನಿಂದಿತತಮಮಿತ್ಯಭಿಪ್ರೇತ್ಯೋಕ್ತಂ **ಪ್ರೋದ್ವಾಹಪರ್ವಣೀತಿ** ॥ ಅನಿರುದ್ಧವಿವಾಹ ಲಕ್ಷಣೋತ್ಸವಸಮಯೇ । ವಿರೂಪಕರಣಂ ವಧಂ ಚಾಸಹ ಇತ್ಯಸ್ಯ ಫಲಿತಾರ್ಥಮಾಹ ॥ **ತದುತ್ಥಮಿತಿ** ॥ ತಾಭ್ಯಾಂ ಭ್ರಾತುಃ ಕೃತಾಭ್ಯಾಂ ಉತ್ಥಂ ಉದ್ಭೂತಂ ಯದ್ದುಃಖಂ ತದಸಹ ಇತಿ । ಕಿಂನಿಮಿತ್ತಂ ಸಹನಮಿತಿ ತತ್ರಾಹ । **ಅಸ್ಮದಿತಿ** ॥ ಅಸ್ಮಾಕಂ ಅಯೋಗಃ ಮನೋವಿಕ್ಷೇಪಃ ಭವೇದಿತಿ ಭೀತ್ಯೈವ । ಕಿಂಬಹುನಾ ಕಥಿತೇನ । ಕಿಮಪಿ ಅಯುಕ್ತಮಿದಮಿತ್ಯೇವಂರೂಪಂ ವಾಚ್ಯಮಪಿ । ನೈವಾಬ್ರವೀರಿತಿ । ಅನ್ಯಾ ಸ್ತ್ರೀ ಚೇತ್ ಸ್ವಹೃದಯತಾಡನಾದಿಕಂ ಕಾಯಿಕಂ, ದುಷ್ಟಭಾಷಣಾದಿಕಂ ವಾಚನಿಕಂ ಚ ಅಸ್ಮದಯೋಗಹೇತುಂ ಕುರ್ಯಾದೇವ । ಯೇನ ತ್ವಮಸ್ಮಾಭಿರಪಕೃತಾಪಿ ಮನೋವಿಕ್ಲವಮಪ್ರಾಪ್ತಾ ತೇನ ವಯಂ । ತೇ ತ್ವಯಾ । ಜಿತಾಃ ತವ ಭಕ್ತಿದಾರ್ಢ್ಯಾನುಸಾರೇಣ ಅಸದೃಶಾನುಗ್ರಹಕರ್ತಾರೋ ಭವಾಮ ಇತಿ ॥

❖❖❖

**ಪ್ರಣಯ ಕಲಹ ಪ್ರಸಂಗದಲ್ಲಿ ಶ್ರೀಕೃಷ್ಣನು ರುಕ್ಮಿಣಿಗೆ ಹೇಳುತ್ತಾನೆ— 'ಯುದ್ಧದಲ್ಲಿ ಸೋತ ನಿನ್ನ ಸೋದರ ರುಕ್ಮಿಯನ್ನು ನಾವು ವಿರೂಪಗೊಳಿಸಿದೆವು. ಅನಿರುದ್ಧನ ವಿವಾಹೋತ್ಸವದಲ್ಲಿ ಜೂಜಿನ ಕೂಟದಲ್ಲಿ ಅಣ್ಣ ಬಲರಾಮ ನಿಮ್ಮಣ್ಣನನ್ನು ಕೊಂದುಬಿಟ್ಟ. ಈ ಎಲ್ಲ ದುಃಖವನ್ನು ನೀನು ಮೌನವಾಗಿ ನುಂಗಿಕೊಂಡೆ. ನನ್ನಿಂದ ವಿಯೋಗವಾದೀತೆಂಬ ಭಯದಿಂದ ಏನೂ ಆಡದೆ ಸುಮ್ಮನಿದ್ದೆ. ಅದಕ್ಕೆ ನಾನು ನಿನಗೆ ಸೋತೆ'**

—ಹೀಗೆ ಭಗವಂತ ಭಗವತಿಯನ್ನೂ ಕೂಡ ಪರೀಕ್ಷಿಸದೆ ಬಿಡಲಿಲ್ಲ. ಪರೀಕ್ಷಿಸಿಯೆ ಅವಳಲ್ಲಿ ಇತರರಲ್ಲಿ ಯಾರಲ್ಲಿಯೂ ಮಾಡಿರದಷ್ಟು ಪರಮಾನುಗ್ರಹವನ್ನು ಮಾಡಿದ್ದಾನೆ ಎಂದಮೇಲೆ ಇನ್ನು ಇತರ ಭಾಗವತರನ್ನು ಪರೀಕ್ಷಿಸಿಯೆ ಅನುಗ್ರಹಿಸುವನೆಂದು ಬೇರೆ ಹೇಳಬೇಕಾಗಿಲ್ಲ.

ರುಕ್ಮಿಣೀ ಹರಣಕಾಲದಲ್ಲಿ ವಿರೋಧ ಮಾಡಿದ ಅಣ್ಣ ರುಕ್ಮಿ ಯುದ್ಧದಲ್ಲಿ ಸೋತಾಗ ಅವನ ಮೀಸೆ ತಲೆಕೂದಲುಗಳನ್ನು ಬೋಳಿಸಿ ವಿರೂಪಗೊಳಿಸಿದ್ದಾನೆ ಕೃಷ್ಣ. ಯುದ್ಧದಲ್ಲಿ ಸೋತಿರುವವನನ್ನು ವಿರೂಪಗೊಳಿಸಿದ್ದು ಜಾರಿಬಿದ್ದವನನ್ನು ಚಾಟಿಯಿಂದ ಹೊಡೆದಂತೆ. ಹೀಗೆ ಮಾನಹಾನಿ ಮಾಡಿದ.

ಮುಂದೆ ಜೂಜಿನಲ್ಲಿ ಅಣ್ಣ ಬಲರಾಮ ರುಕ್ಮಿಯ ಪ್ರಾಣಹಾನಿಯನ್ನೂ ಮಾಡಿದ್ದಾನೆ. ಅದು ಯುದ್ಧದಲ್ಲಾದರೆ ಕ್ಷತ್ರಿಯರಿಗೆ ಬಂಧುವಧೆ ನಿಷಿದ್ಧವಲ್ಲವಾದ್ದರಿಂದ ಸಹ್ಯವಾಗುತ್ತಿತ್ತು. ಆದರೆ ಇದು ಜೂಜಿನ ಪ್ರಸಂಗದಲ್ಲಿ. ಅದರಲ್ಲಿಯೂ ಅನಿರುದ್ಧನ ವಿವಾಹ ಮಹೋತ್ಸವದಲ್ಲಿ ಇದು ಬಹಳ ಅನ್ಯಾಯ. ರುಕ್ಮಿಣಿ ಇದೆಲ್ಲವನ್ನು ಸಹಿಸಿಕೊಂಡಳು. ಸತಿಪತಿಗಳ ನಡುವೆ ವಿರಸವುಂಟಾದೀತೆಂದು ಭಯ, ದೇವಿಗೆ. 'ಅಸ್ಮದಯೋಗ ಭೀತ್ಯಾ!' ಇದು ದೇವಿಯ ಭಕ್ತಿ ದಾರ್ಢ್ಯವನ್ನು ತೋರಿಸುತ್ತದೆ.

ವಸ್ತುತಃ ಇದು ದೇವಿಯ ಪರೀಕ್ಷೆಯಲ್ಲ. ನರಲೋಕ ವಿಡಂಬನೆ ಅಯೋಗ್ಯ ಜನರನ್ನು ಮೋಹಗೊಳಿಸುವುದಕ್ಕಾಗಿ.

ಸ್ವರತೋ ರಮಯಾ ರೇಮೇ<br>
ನರಲೋಕಂ ವಿಡಂಬಯನ್ ( ಭಾ.೧೦.೬೫.೬೨)

❖❖❖

## –೨೩೧–

## ಪೂತನೆಯಾಗಿ ಬಂದ ಊರ್ವಶಿಗೂ ಸದ್ಗತಿ ನೀಡಿದ ಶ್ರೀಕೃಷ್ಣ

ಅಹೋ ಬಕೀಯಂ ಸ್ತನಕಾಲಕೂಟಂ
ಜಿಘಾಂಸಯಾಽಪಾಯಯದಪ್ಯಸಾಧ್ವೀ ।
ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ
ಕಂ ವಾ ದಯಾಲುಂ ಶರಣಂ ವ್ರಜೇಮ ॥

(ಭಾ.೩.೨.೨೩)

ಕಿಂ ವರ್ಣಯಾಮಃ ವಯಂ ಭಗವತಃ ದಯಾಲುತಾಯಾಃ ಕಾಷ್ಠಾಂ ಸೇವಾಕಾರಿಷು ಸಾಧುಷು । ಯತಃ ಅಹಿತಕಾರಿಣ್ಯಾಂ ಅಸಾಧ್ವ್ಯಾಮಪಿ ಪೂತನಿಕಾಯಾಂ । ಭಗವತ್ವದೀವ ನಿಮ್ನನಿಂದಿತಭೂಮಿಷು ಪ್ರವಾಹಮುವಾ- ಹೇತ್ಯಾಶಯೇನಾಹ । **ಅಹೋ ಬಕೀತಿ** । ಬಕೀ ಮಾಂಸಾದಿದುಷ್ಟಭಕ್ಷಣಶೀಲಾ । ಅತ ಏವಾಸಾಧ್ವೀ । ಇಯಂ ಪೂತನಾ । ಜಿಘಾಂಸಯಾ ಹಂತುಮಿಚ್ಛಯೈವ । ಸ್ತನಯೋಃ ಸಂಭೃತಂ ಕಾಲಕೂಟಂ ವಿಷಂ ಅಪಾಯಯತ್ ಪಾಯಯಾಮಾಸ । ತಥಾಪಿ ಧಾತ್ರ್ಯಾಃ ಪೋಷಣಾದಿಕರ್ತ್ರ್ಯಾಃ ಯಶೋದಾಯಾಃ । ಉಚಿತಾಂ ಗತಿಂ ಲೋಕಂ । ಲೇಭೇ ಪ್ರಾಪ । ತಸ್ಮಾತ್ಕಾರಣಾತ್ । ತತಃ ಸ್ವಾನಿಷ್ಟಕಾರಿಣ್ಯಾ- ಮಪೀಷ್ಟಕಾರಿಣಃ ಕೃಷ್ಣಾತ್ ಅನ್ಯಃ ಕೋ ವಾ ವಿದ್ಯತೇ ದಯಾಲುಃ । ತೇನ ತತಃ ಅಸ್ಮಾದನ್ಯಂ । ಕಂ ವಾ ದಯಾಲುಂ । ಶರಣಂ । ವಯಂ ವ್ರಜೇಮ ಗಚ್ಛಾಮ ಇತಿ । ಈದೃಶೋ ದಯಾಲುರ್ನಾಸ್ತ್ಯೇವೇತಿ ಭಾವಃ ॥

❖❖❖

ಉದ್ಧವನು ವಿದುರನಿಗೆ ಹೇಳುತ್ತಾನೆ—ಆಶ್ಚರ್ಯ! ನರಭಕ್ಷಕ ರಾಕ್ಷಸಿ ಯಾದ ತಾಟಕೆಯ ಆವೇಶದಿಂದ ಶಿಶುಹತ್ಯೆ ಮಾಡುತ್ತಿದ್ದ ಊರ್ವಶಿಯು ಶ್ರೀಕೃಷ್ಣನನ್ನು ಹತ್ಯೆಮಾಡಲೆಂದು ಸ್ತನಗಳಲ್ಲಿ ಕಾಲಕೂಟ ವಿಷವನ್ನು ಲೇಪಿಸಿ ಕೊಂಡು ಉಣಿಸಿದಳು. ಇಂಥ ಶಿಶುಘಾತಿನಿ ಊರ್ವಶಿಯೂ ತಾಯಿ ಯಶೋದೆಗೆ ಉಚಿತವಾದ ಪುಣ್ಯಲೋಕವನ್ನೇ ಹೊಂದಿದಳೆಂದಮೇಲೆ, ಶ್ರೀಕೃಷ್ಣನನ್ನು ಬಿಟ್ಟು ಬೇರೆ ಯಾವ ದಯಾಳುವನ್ನು ನಾವು ಶರಣು ಹೊಂದ ಬೇಕು? ಅನಿಷ್ಟ ಮಾಡಬಂದವಳಿಗೂ ಇಷ್ಟವನ್ನೇ ದಯಪಾಲಿಸಿದ್ದಾನೆ ಶ್ರೀಕೃಷ್ಣ!

❖❖❖

-೨೩೨-

**ಅಕ್ರೂರ ಕಂಡ ಭಕ್ತಪ್ರಿಯ ಶ್ರೀಕೃಷ್ಣ**

**ಕಃ ಪಂಡಿತಸ್ತ್ವದಪರಂ ಶರಣಂ ಸಮೀಯಾತ್**
**ಭಕ್ತಪ್ರಿಯಾದೃತಗಿರಃ ಸುಹೃದಃ ಕೃತಜ್ಞಾತ್ ।**
**ಸರ್ವಾನ್ ದದಾತಿ ಸುಹೃದೋ ಭಜತೋಽಪಿ ಕಾಮಾನ್**
**ಆತ್ಮಾನಮಪ್ಯುಪಚಯಾಪಚಯೌ ನ ಯಸ್ಯ ॥**

(ಭಾ.೧೦.೪೭.೨೭)

ತದೇವಂ ಪಿತೃತ್ವಾದೇರವಿಷಮತ್ವಾತ್ಕೃಪಾಲುತ್ವಾಚ್ಚ ಶ್ರೀಹರೌ ವಿಶೇಷತೋ ಭಕ್ತಿಃ ಕಾರ್ಯೇತ್ಯಾಶಯೇನ ತತ್ರಾದರಜನನಾಯ ಭಗವತಃ ಅನ್ಯತ್ರ ಭಕ್ತಿಂ ಕುರ್ವತೋ ಗಂಗಾವಾಲುಕೇ ಕೂಪಂ ಕುರ್ವತ ಇವ ಮೂರ್ಖತಾಂ ದರ್ಶಯತಿ ॥ **ಕಃ ಪಂಡಿತ ಇತಿ** ॥ ಯಃ ಭಜತಃ । ಸುಹೃದಃ ಪ್ರಿಯಸ್ಯ ಭಕ್ತಸ್ಯ । ಆತ್ಮಾನಮಪಿ ದದಾತಿ ಯದಾ । ತದಾ ಸರ್ವಾನ್ಕಾಮಾನ್ ದದಾತೀತಿ ಕಿಮು । ಏವಂ ಸರ್ವಾನ್ ಪ್ರತಿ ದಾನೇಽಪಿ ಉಪಚಯಾಪಚಯೌ ಯಸ್ಯ ನ ಸ್ತಃ । ತಸ್ಮಾತ್ತಾದೃಶಾತ್ । ತ್ವತ್ ತ್ವತ್ತಃ । ಅಪರಮನ್ಯಂ ಪುರುಷಂ । ಕಃ ಪಂಡಿತಃ ಬಂಧಮೋಕ್ಷವಿತ್ । ಶರಣಂ ಪ್ರಾಪ್ನುಯಾತ್ ಭಕ್ತಿಪೂರ್ವಕಂ ಭಜೇತ್ । ಭಜನೀಯೇ ಭವಂತಿ ಪುರುಷೇ ತ್ರಯೋ ಧರ್ಮಾ ಅಪೇಕ್ಷಿತಾಃ । ಪಿತೃತ್ವಾದಿಕಂ ಅವಿಷಮತ್ವಂ ಕೃಪಾಲುತ್ವಂ ಚೇತಿ । ತತ್ ತ್ರಯಮಪ್ಯಸ್ಮಿನ್ನೇವಾಸ್ತೀತ್ಯಾಹ ॥ **ಸುಹೃದ ಇತ್ಯಾದಿನಾ** ॥ ಸುಹೃದಃ ಕೃತಜ್ಞಾತ್ । ಭಕ್ತೋಚ್ಚರಿತಾಃ ಪ್ರಿಯಾಃ ಆದೃತಾಃ ಗಿರೋ ಯೇನ ತಸ್ಮಾದಿತಿ । ಸುಹೃತ್ತ್ವಂ ಪಿತೃತ್ವಾದೇರುಪಲಕ್ಷಣಮಿತಿ ಭಾವೇನ ಸುಹೃದ ಇತಿ । ಕೃತಸೇವಾನುಸಂಧಾನವಾನ್ಹಿ ಸೇವಾನುರೂಪ-ಫಲದಾತೃತಯಾ ಅವಿಷಮೋ ಭವೇದಿತಿ ಕೃತಜ್ಞಾದಿತಿ । ಕೃಪಾಲುತ್ವಂ ಚಾದರತಸ್ತದ್ವಾಕ್ಯಶ್ರವಣೇನ ಜ್ಞಾಯತ ಇತಿ ಆದೃತಗಿರಃ ಇತ್ಯುಕ್ತಂ ॥

❖❖❖

ಅಕ್ರೂರನು ಶ್ರೀಕೃಷ್ಣನಿಗೆ ಹೇಳುತ್ತಾನೆ—'ನೀನು ಸತ್ಯಸಂಕಲ್ಪ, ಭಕ್ತಪ್ರಿಯ, ಪ್ರಿಯಭಕ್ತರ ಮಾತಿನಲ್ಲಿ ನಿರ್ವ್ಯಾಜ ಆದರ ಪ್ರೀತಿ ಮಾಡುವವನು, ಕೃತಜ್ಞನು. ಪ್ರಿಯನಾದ ಭಕ್ತನಿಗೆ ತನ್ನನ್ನೇ ತಾನು ಕೊಡಬಲ್ಲ ಎಂದರೆ, ಅವನಿಗೆ ಸರ್ವಾಭೀಷ್ಟವನ್ನು ಕೊಡುವೆ ನೀನು ಎಂದು ಬೇರೇನು ಹೇಳಬೇಕು? ಹೀಗೆ

**ಎಲ್ಲರಿಗೂ ಎಲ್ಲವನ್ನು ಕೊಟ್ಟರೂ ನಿನಗೆ ವೃದ್ಧಿಹ್ರಾಸಗಳಿಲ್ಲ. ಆದರಿಂದ ನಿನ್ನನ್ನು ಬಿಟ್ಟು ಇನ್ನೊಬ್ಬ ದೇವತೆಯನ್ನು ಬಂಧಮೋಕ್ಷಗಳನ್ನರಿತ ಯಾವ ಬುದ್ಧಿವಂತನು ಶರಣುಹೊಂದಿ ಭಜಿಸುವನು?' ಎಂದು.**

ಶ್ರೀಹರಿ ಭಕ್ತನಿಗೆ 'ಸುಹೃತ್' ತಂದೆತಾಯಿ ಎಲ್ಲವೂ ಆಗಿದ್ದಾನೆ. ಕೃತಜ್ಞನಾದ್ದರಿಂದ ಭಕ್ತರಲ್ಲಿ ಅವನಿಗೆ ಪಕ್ಷಪಾತ ಬುದ್ಧಿಯೂ ಇರುವುದಿಲ್ಲ. 'ಆದೃತಗಿರ'ಭಕ್ತರ ಮಾತನ್ನಾಲಿಸುವವನಾದ್ದರಿಂದ ಭಕ್ತರ ವಿಷಯದಲ್ಲಿ ಪರಮ ದಯಾಳುವೂ ಆಗಿದ್ದಾನೆ. ಬಂಧಮೋಕ್ಷದಾಯಕನಾದ ಆತನನ್ನು ಬಿಟ್ಟು ಬೇರೆ ದೇವತೆಗಳನ್ನು ಭಜಿಸುವುದೆಂದರೆ ಗಂಗಾತೀರದಲ್ಲಿ ಬಾವಿ ತೋಡುವಂತೆ ಬರಿ ಅವಿವೇಕವೇ ಸರಿ.

ಒಬ್ಬ ದೇವನು ಭಜನೆಗೆ ಅರ್ಹನಾಗಬೇಕಾದರೆ ಅವನಲ್ಲಿ 'ತಂದೆತಾಯಿಗಳಂತಿರುವ', 'ಪಕ್ಷಪಾತವಿಲ್ಲದಿರುವ' ಮತ್ತು 'ದಯಾಳುವಾಗಿರುವ' ಮೂರು ಸ್ವಭಾವಗಳಿರಬೇಕು ತಾನೆ? ಶ್ರೀಹರಿ 'ಸುಹೃತ್' ಬಂಧು ಎಂದಮೇಲೆ ಅವನಲ್ಲಿ ತಂದೆತಾಯಿಗಳಂತೆ ಕಾಪಾಡುವ ಸ್ವಭಾವವಿದೆ ಎಂದಂತಾಯಿತು. ಕೃತಜ್ಞನಾಗಿದ್ದಾನೆ ಎಂದಮೇಲೆ, ಭಕ್ತನು ಮಾಡಿದ ಸೇವೆಯನ್ನು ನೆನೆಯುವವನು ಪಕ್ಷಪಾತಿಯಲ್ಲ ಎಂದಂತಾಯಿತು. ದಯಾಳುವಾಗಿದ್ದಾನೆ ಎಂಬುದು ಆದರದಿಂದ ಭಕ್ತರ ಮಾತನ್ನಾಲಿಸುವುದರಿಂದಲೇ ಸಿದ್ಧವಾಗುವುದು.

❖❖❖

—೨೩೩—

**ಹರಿಯೊಬ್ಬನನ್ನೇ ಭಜಿಸಬೇಕು**

**ಯತ್ ಸಾನುಬಂಧೇಽಸತಿ ದೇಹಗೇಹೇ**
**ಮಮಾಹಮಿತ್ಯೂಢ ದುರಾಗ್ರಹಾಣಾಂ ।**
**ಪುಂಸಾಂ ಸುದೂರಂ ವಸತೋಽಪಿ ಪುರ್ಯಾಂ**
**ಭಜೇಮ ತತ್ತೇ ಭಗವನ್ ಪದಾಬ್ಜಂ ॥**

(ಭಾ.೩.೬.೨೨)

**ನನೂಕ್ತೇ ಧರ್ಮತ್ರಯೇ ಅಂತಿಮದ್ವಯಂ ಸಮ್ಯಗನುಭವಾರೂಢಂ**

**ಜಾತಂ । ಪ್ರಥಮಂ ಪಿತೃತ್ವಾದಿಕಂ ತು ನ ಸಮ್ಯಗ್ಜ್ಞಾಯತೇ ಇತ್ಯತಸ್ತ-ದ್ವಿಶದೀಕರಿಷ್ಯನ್ ಅಧ್ಯಾತ್ಮಪ್ರವಣತಾ ಶ್ರೀಹರ್ಯನುಗ್ರಹವಿಶೇಷಮಂತರಾ ಸುದುರ್ಲಭೇತಿ ಭಾವೇನ ತಾಮಾದೌ ಸ್ತೌತಿ ।। ಯದಿತಿ ।। ಹೇ ಭಗವನ್ । ತೇ ತವ । ಪದಾಬ್ಜಂ ಭಜೇಮ । ಕಿಂ ತತ್ । ದೇಹೇನ ಸಹಿತೇ ಗೇಹೇ । ನ ಕೇವಲಂ ದೇಹೇನ । ಕಿಂತು ತದನುಬಂಧ್ಯೈಃ ಪುತ್ರದಾರಾದಿಭಿಶ್ಚ ಸಹಿತೇ ।ಅಸತಿ ಅಮಂಗಲೇ । ದೇಹೇ ಅಹಮಿತಿ । ಪುತ್ರಾದಿಸಹಿತೇ ಗೇಹೇ ಚ ಮಮೇತಿ । ನಿರೂಢಾಗ್ರಹಾಣಾಂ ಪುಂಸಾಂ । ಪುರ್ಯಾಂ ತಸ್ಯಾಮೇವ । ವಸತೋಽಪಿ ತೇ । ಯತ್ಪದಾಬ್ಜಂ ಸುದೂರಂ ದುರ್ಲಭಂ । ತದಿತಿ ।।**

❖❖❖

**ತತ್ವಾಭಿಮಾನಿ ದೇವತೆಗಳೆಲ್ಲರೂ ಹರಿಯನ್ನು ಭಜಿಸುವೆವೆನ್ನುತ್ತಾರೆ— ಪುತ್ರತ್ವಾದಿ ಸಂಬಂಧಯುಕ್ತವಾದ ಈ ದೇಹ ಮನೆ ಮುಂತಾದುವು ಅಮಂಗಳಕರ. ಅವುಗಳಲ್ಲಿ ನಾನು ನನ್ನದೆಂದು ದುರಭಿಮಾನ ಮನುಷ್ಯರಿಗೆ ಇರುತ್ತದೆ. ಹೊರತು ಅವುಗಳೊಳಗೇ ನಿಯಾಮಕನಾಗಿ ಇರುವ ಅಂತರ್ಯಾಮಿಯ ಮಂಗಳಕರವಾದ ಪಾದಕಮಲ ಅವರಿಗೆ ಬಲುದೂರ, ದುರ್ಲಭವೇ ಆಗಿರುತ್ತದೆ. ಅದನ್ನೇ ನಾವು ಭಜಿಸುವೆವು'.**

ಹರಿಯೇ ಸರ್ವಜೀವರ ಅಂತರ್ಯಾಮಿ ಎಂಬ ಅಧ್ಯಾತ್ಮತತ್ವಜ್ಞಾನ ಶ್ರದ್ಧೆಗಳು ಹರಿಯ ಅನುಗ್ರಹವಿಲ್ಲದೆ ಲಭಿಸಲಾರವು. ಅವು ಲಭಿಸಿದಾಗಲೆ ಹರಿಯೇ ಮುಖ್ಯವಾಗಿ ಆಧ್ಯಾತ್ಮಿಕವಾಗಿ ಭಕ್ತನಿಗೆ ತಾಯಿತಂದೆ ಬಂಧು ಬಳಗ ಎಂಬ ಪ್ರಜ್ಞೆ ಲಭಿಸುವುದು. ಅದು ಅನುಭವಾರೂಢವಾಗುವುದು. ಈ ಅಧ್ಯಾತ್ಮಪ್ರಜ್ಞೆಯೊಂದಿಗೆ, ಹರಿಯು ಭಕ್ತರಲ್ಲಿ ನಿಷ್ಪಕ್ಷಪಾತ ಬುದ್ಧಿಯಿಂದ ಅನುಗ್ರಹ ಮಾಡುವ ದಯಾಳುವಾಗಿರುವನೆಂಬ ಪ್ರಜ್ಞೆಯೂ ಇದ್ದರೆ, ಆಗ ಹರಿಭಜನೆ ಸಫಲವಾಗುವುದು. ಪಿತೃತ್ವಾದಿಗಳು, ನಿಷ್ಪಕ್ಷಪಾತ ಬುದ್ಧಿ ಮತ್ತು ಪರಮ ದಯಾಳುತ್ವ ಈ ಮೂರು ಗುಣಗಳು ಬೇರೆ ದೇವತೆಗಳಲ್ಲಿ ಇರುವುದಿಲ್ಲ. ಹರಿಯೊಬ್ಬನಲ್ಲಿಯೇ ಇರುವುವು. ಅವನನ್ನೇ ಭಜಿಸಬೇಕು.

❖❖❖

—೨೩೪—

**ಹರಿಯೇ ತಂದೆ ತಾಯಿ ಎಲ್ಲವೂ**

ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭು
ರ್ನಿರ್ಮಾಯ ಶೇತೇ ಯದಮೂಷು ಪೂರುಷಃ ।
ಭುಂಕ್ತೇ ಪುಮಾನ್ ಷೋಡಶ ಷೋಡಶಾತ್ಮಕಃ
ಸೋಽಲಂಕೃಷೀಷ್ಟ ಭಗವಾನ್ ವಚಾಂಸಿ ಮೇ ॥

(ಭಾ.೨.೪.೨೩)

ಪಿತೃತ್ವಮನುಭವಾರೂಢಂ ನ ಭವತೀತಿ ವದನ್ ಪ್ರಷ್ಟವ್ಯಃ ದೇವದತ್ತಸ್ಯ ಪಿತೃತ್ವಂ ಕಥಮಿತಿ । ಮಮ ದೇಹೋ ಹಿ ದೇವದತ್ತೇನ ಜಾತಃ । ಯಶ್ಚ ದೇಹಸ್ಯ ಕರ್ತಾ ಸ ಏವ ಪಿತೇತ್ಯುಚ್ಯತೇ । ದೇಹಜನನಂ ಚ ತತಃ ಅನುಭವಸಿದ್ಧಮಿತಿ ಪಿತೃತ್ವಂ ದೇವದತ್ತಸ್ಯಾನುಭವಾರೂಢಮಿತಿ ಚೇತ್ । ಏವಮೇವ ಭಗವತೋಽಪಿ ಪಿತೃತ್ವಂ ಅನುಭವಾರೂಢಂ ಕರ್ತವ್ಯಂ ಕೋವಿದೇನೇತ್ಯಾ-ಶಯೇನಾಹ ॥ **ಭೂತೈರಿತಿ** ॥ ಯೋ ವಿಭುಃ । ಮಹದ್ಭಿರ್ಭೂತೈಃ ಪೃಥಿವ್ಯಾದಿಭಿಃ ಇಮಾಃ ಪುರಃ ಶರೀರಾಣಿ । ನಿರ್ಮಾಯ ಅಮೂಷು ಪೂರ್ಷ್ವೇವ । ಶೇತೇ ಯಸ್ಮಾತ್ತಸ್ಮಾತ್ಪುರುಷ ಇತಿ ಗೀಯತೇ । ತತ್ರ ಚ ಷೋಡಶಾತ್ಮಕಃ ಶ್ರೋತ್ರಾದಿಪಂಚಕಂ ವಾಗಾದಿಪಂಚಕಂ ಮನಆದಿಪಂಚಕಂ ಬುದ್ಧಿಶ್ಚೇತಿ ಷೋಡಶಾಧಿಷ್ಠಾನೇಷು ಷೋಡಶರೂಪಃ ಭೂತ್ವಾ । ಷೋಡಶ ಗುಣಾನ್ ವಿಷಯಾನ್ । ಅನುಭವತಿ । ಯ ಈದೃಶಃ ಸ ಭಗವಾನ್ ಮೇ ವಚಾಂಸಿ । ಅಲಂಕೃಷೀಷ್ಟ ಅಲಂಕುರ್ಯಾತ್ । ಸ್ವಸ್ಯ ಸ್ವಭಕ್ತಾನಾಂ ಚ ಪ್ರೀತಿಜನಕಾನಿ ಕುರ್ಯಾದಿತಿ । ಸರ್ವಶರೀರಾಣಾಂ ಮುಖ್ಯತೋ ನಿರ್ಮಾತಾ ಭಗವಾನೇವೇತಿ ಸ ಏವ ಮುಖ್ಯಃ ಪಿತಾ ಅನ್ಯಸ್ತು ತತ್ರ ನಿಮಿತ್ತಮಾತ್ರಮಿತಿ ಸೋಽಪಿ ಕಥಂಚಿತ್ಪಿತೃಪದಾಭಿಧೇಯ ಇತಿ । ಅನೇನ ವಿಶ್ವಭಾವನೇತ್ಯುಕ್ತಂ ವಿವೃತಂ ಭವತಿ ॥

❖❖❖

ಶುಕಮುನಿ ಹೇಳುತ್ತಾರೆ—'ಶ್ರೀಹರಿಯು ಪೃಥಿವ್ಯಾದಿ ಪಂಚ ಮಹಾ ಭೂತಗಳಿಂದ ಈ ಪುರುಷಶರೀರಗಳನ್ನು ನಿರ್ಮಾಣ ಮಾಡಿ ಅವುಗಳೊಳಗೆ ನಿಯಾಮಕನಾಗಿ ಇರುವುದರಿಂದ 'ಪುರುಷ' ಎನಿಸುತ್ತಾನೆ. ಅಲ್ಲಿಯೇ ಪಂಚ ಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಪಂಚವಿಧ ಮನಸ್ಸು, ಸಾಕ್ಷೀಂದ್ರಿಯ

**ಎಂಬ ಈ ಹದಿನಾರು ಅಧಿಷ್ಠಾನಗಳಲ್ಲಿ, ಅಥವಾ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಪಂಚಭೂತ ಮನಸ್ಸು ಎಂಬ ಈ ಹದಿನಾರು ಅಧಿಷ್ಠಾನಗಳಲಿ ಹದಿನಾರು ರೂಪಗಳಿಂದ ನಿಯಾಮಕನಾಗಿ ಇದ್ದು, ಹದಿನಾರು ವಿಷಯಗಳನ್ನು, ಅಂದರೆ—ಶಬ್ದಸ್ಪರ್ಶರೂಪರಸಗಂಧಗಳೆಂದು ಜ್ಞಾನೇಂದ್ರಿಯ ವಿಷಯಗಳು, ವಚನ ಸ್ವೀಕರಣ ಗಮನ ವಿಸರ್ಜನ ರಮಣ ಎಂಬ ಕರ್ಮೇಂದ್ರಿಯಕಾರ್ಯಗಳು, ಸಂಕಲ್ಪವಿಕಲ್ಪ–ನಿಶ್ಚಯ–ನಾನು ನನ್ನದೆಂಬ ಅಭಿಮಾನ–ಸ್ಮರಣ–ಬಹುಸ್ಮರಣ–ಬುದ್ಧಿವಿವೇಕಗಳೆಂಬ ಪಂಚವಿಧ ಮನ ಮತ್ತು ಬುದ್ಧಿಗಳ ಕಾರ್ಯಗಳು ಈ ಹದಿನಾರು ವಿಷಯಗಳನ್ನು ಹರಿಗೆ ಅರ್ಪಿಸಿದಾಗ ಅವುಗಳನ್ನು ಸ್ವೀಕರಿಸಿ ಅನುಗ್ರಹಿಸುವನು. ಅಂಥ ಭಗವಂತನು ನನ್ನ ಈ ನುಡಿನಮನಗಳನ್ನು, ತಾನೇ ಉಪಮಾರೂಪಕಾದಿ ಅಲಂಕಾರಶಾಸ್ತ್ರೋಕ್ತ ಅಲಂಕಾರಗಳಿಂದ ಅಲಂಕರಿಸಿ, ತಾನೇ ಅವುಗಳನ್ನು ಆಲಿಸಿ ಅನುಗ್ರಹಿಸಲಿ'.**

ಭಕ್ತರಲ್ಲಿ ಹರಿಗೆ ನಿಷ್ಪಕ್ಷಪಾತ ಬುದ್ಧಿ, ಪರಮದಯಾಳುತ್ವಗಳಿವೆ ಎನ್ನುವುದರಲ್ಲಿ ಸಂಶಯವಿಲ್ಲ. ಅವನೇ ತಂದೆತಾಯಿ ಎಲ್ಲವೂ ಎನ್ನುವುದು ಮಾತ್ರ ಹೇಗೆ ಅದು ಸ್ಪಷ್ಟವಾಗಿಲ್ಲ ಎಂದರೆ ಶುಕಮುನಿ ಹೇಳುತ್ತಾರೆ— ಇಲ್ಲಿ ಷೋಡಶ ಕಲಾತ್ಮಕ ಸಾಧನ ಶರೀರ ನಿರ್ಮಾಣ ಮಾಡಿ ಭಕ್ತರಿಗೆ ನೀಡಿ ಆ ಶರೀರಗಳಿಂದ ಮೋಕ್ಷಸಾಧನೆ ಮಾಡಿಸುವುದರಿಂದ ಭಕ್ತರಿಗೆ ಹರಿಯೆ ಪಿತ. 'ಯೋ ನಃ ಪಿತಾ ಜನಿತಾ ಯೋ ವಿಧಾತಾ' ಎಂದು ಭಕ್ತನು ಹರಿಯನ್ನು ಮುಖ್ಯವಾಗಿ 'ತಂದೆ' 'ತನುಂ ದದಾತಿ' 'ತನ್-ದೆ' ತಂದೆ ಎಂದು ಉಪಾಸನೆ ಮಾಡಬೇಕು. ಲೌಕಿಕ ತಂದೆಯೂ ಏಕೆ ತಂದೆ? ದೇಹವನ್ನು ಹುಟ್ಟಿಸುವುದರಿಂದ ತಾನೆ? ಅದೇರೀತಿ ಹರಿಯು ದೇಹವನ್ನು ಹುಟ್ಟಿಸುವುದರಿಂದ ತಂದೆ ಏಕಲ್ಲ? ಮುಖ್ಯವಾಗಿ ಅವನೆ ದೇಹ ಹುಟ್ಟಿಸುತ್ತಾನೆ, ಲೌಕಿಕ ತಂದೆ ನಿಮಿತ್ತ ಮಾತ್ರ!

❖❖❖

—೨೩೫—

**ಹರಿಯೇ ಎಲ್ಲರಿಗೆ ಬಿಂಬ, ಪುರುಷನಾಮಕ**

**ಸೃಷ್ಟಂ ಸ್ವಶಕ್ತ್ಯೇದಮನು ಪ್ರವಿಶ್ಯ**
**ಚತುರ್ವಿಧಂ ಪುರಮಾತ್ಮಾಂಶಕೇನ ।**

**ಅಥೋ ವಿದುಸ್ತ್ವಾಂ ಪುರುಷಂ ಸಂತಮತ್ರ**
**ಭುಂಕ್ತೇ ಹೃಷೀಕೈರ್ಮಧು ಸಾರಘಂ ಯತಃ ॥** (ಭಾ.೪.೨೪.೬೫)

ನನು ಭಗವತೋಽಸ್ಮಿನ್ ಶರೀರೇ ಸ್ಥಿತಸ್ಯೇಂದ್ರಿಯಾಣ್ಯಧಿಷ್ಠಾಯ ಭೋಗಮಾರ್ಗಗಮನೇ ಸಮಭೂಮೇರಿವ ವಿಷಮಭೂಮೇರಪಿ ಪ್ರಾಪ್ತ್ಯಾ ಸ್ಖಲನಮಪಿ ಪ್ರಸಜ್ಯೇತೇತ್ಯತ ಆಹ ॥ **ಸೃಷ್ಟಮಿತಿ** ॥ ಜರಾಯುಜಾದಿಭೇದೇನ ಚತುರ್ವಿಧಂ । ಸ್ವಶಕ್ತ್ಯಾ । ಸೃಷ್ಟಂ ಇದಂ ಪುರಂ । ಆತ್ಮನೋಽಂಶಕೇನ ಸ್ವರೂಪಸಮೂಹೇನ । ಸ್ವಶಕ್ತ್ಯೈವ ಪ್ರವಿಶ್ಯ ಅತ್ರೈವ । ಸಂತಂ ವಸಂತಂ । ವಿದುಃ । ಅಥೋ ಅಸ್ಮಾದೇವ ಪ್ರವೃತ್ತಿನಿಮಿತ್ತಾತ್ । ತ್ವಾಂ ಪುರುಷಪದವಾಚ್ಯಂ ವಿದುಃ । ಅತ್ರ ಸ್ಥಿತ್ವಾ ಸ್ವಾಂಶಾಧಿಷ್ಠಿತೈಃ ಹೃಷೀಕೈಃ ಇಂದ್ರಿಯೈಃ । ಮಧು ಸುಖಮೇವ ಸ್ವಶಕ್ತ್ಯೈವ ಭುಂಕ್ತೇ ಅನುಭವತಿ । ತದಪಿ ನೇತರಭೋಗ- ಯೋಗ್ಯಮಿತ್ಯಾಹ ॥ **ಸಾರಘಮಿತಿ** ॥ ಸಾರಮಾತ್ರಂ । ಅತ್ಯುತ್ಕೃಷ್ಟಂ ನಿರತಿಶಯಮಿತಿ ಯಾವತ್ ॥ **ಇದಮುದಿತಂ ಭವತಿ**— ಯಸ್ತು ಕದರ್ಯಃ ದೈವಾದ್ಬಲಾದ್ವಾ ಅನ್ಯರಥೇ ಸ್ಥಾಪಿತಃ ಸ ಏವಾನ್ಯದೀಯೇನ ರಥೇನ ಸಾರಥಿನಾ ಅಶ್ವೈಶ್ಚ ತಥಾವಿಧೈ-ರ್ಮಾರ್ಗಂ ಗಚ್ಛನ್ ಸಮವಿಷಮಭೂಮಿಪ್ರಾಪ್ತಿವಶೇನ ಸುಖಮಿತರಂ ವಾ ಪರವಶ ಏವಾನುಭವತಿ । ಯಸ್ತು ಪುರುಷವ್ಯಾಘ್ರೋ ರಥಂ ಸ್ವಯಂ ನಿರ್ಮಾತುಂ ಶಕ್ತಃ ಪರೈರ್ವಾ ಕಾರಯಿತುಂ ಸಮರ್ಥಃ ಸ್ವಾಧೀನ ಸಾರಥ್ಯಾದಿಃ ಸ್ವಾಧೀನಮಾರ್ಗಃ ಸ ಕಥಂ ಪ್ರೇಕ್ಷಾವಾನ್ ಸಮಾಂ ಭೂಮಿಂ ಪರಿತ್ಯಜ್ಯ ವಿಷಮಾಂ ಗಚ್ಛೇತ್ । ಯೇನ ಸ್ಖಲನಂ ಸಂಭಾವ್ಯೇತಾಪಿ । ಗತೋಽಪಿ ಚ ತತ್ರ ನೈವ ಸ್ಖಲೇದಿತಿ ॥

❖❖❖

ಪ್ರಾಚೇತಸರಿಗೆ ರುದ್ರದೇವರ ಉಪದೇಶ, ರುದ್ರಗೀತೆ— 'ಸ್ವೇದಜ ಅಂಡಜ ಉದ್ಭಿಜ್ಜ ಜರಾಯುಜ' ಎಂದು ನಾಲ್ಕು ಬಗೆಯಾದ ಈ ಶರೀರವನ್ನು ಸ್ವಶಕ್ತಿಯಿಂದಲೇ ಹುಟ್ಟಿಸಿ, ಬಿಂಬರೂಪದಿಂದ ನಿಯಾಮಕನಾಗಿ ಅದರಲ್ಲಿ ಪ್ರವೇಶಿಸಿ, ನಿನ್ನ ಇಂದ್ರಿಯಗಳಿಂದ ವ್ಯಾಪ್ತವಾದ ಜೀವೇಂದ್ರಿಯಗಳಿಂದ ಸ್ವಶಕ್ತಿಯಿಂದಲೆ ಸುಖ ಮಾತ್ರವನ್ನೇ ಉಣ್ಣುವೆ. ಅದರಿಂದ ನಿನ್ನನ್ನು 'ಪುರುಷ'ನೆಂದು ಜ್ಞಾನಿಗಳು ತಿಳಿಯುತ್ತಾರೆ'.

ಒಬ್ಬ ದರಿದ್ರನು ದೈವಾತ್ ಅಥವಾ ಬಲಾತ್ಕಾರದಿಂದ ಇನ್ನೊಬ್ಬರ ವಾಹನದಲ್ಲಿ ಕುಳಿತು ಪ್ರಯಾಣ ಮಾಡಿದರೆ ಆ ರಥ ಕುದುರೆ ಸಾರಥಿಗಳು

ಯಾರೂ ತನ್ನ ವಶದಲ್ಲಿಲ್ಲದ್ದರಿಂದ ಸಮತಟ್ಟಾದ ಒಳ್ಳೆಯ ದಾರಿಯಲ್ಲಿ ಸುಖವನ್ನೂ ಕೆಟ್ಟದಾರಿಯಲ್ಲಿ ದುಃಖವನ್ನೂ ಅನುಭವಿಸುವುದು ಸಹಜ. ಆದರೆ ಒಬ್ಬ ಶ್ರೀಮಂತನಿಗೆ ಆ ರಥ ಕುದುರೆ ಸಾರಥಿ ಎಲ್ಲವೂ ಅಧೀನವಿರುವಾಗ ಮಾರ್ಗವೂ ತನಗೆ ಅನುಕೂಲವೆ ಇರುವಾಗ ಪ್ರಯಾಣ ಸುಖಕರವೆ ಆಗಿರುತ್ತದೆ. ಒಳ್ಳೆಯದಾರಿ ಇರುವಾಗ ಕೆಟ್ಟದಾರಿಯನ್ನೇಕೆ ಅವನು ಹಿಡಿಯುತ್ತಾನೆ, ಕೆಟ್ಟದಾರಿ ಹಿಡಿದರೂ ತಾನು ಹಳ್ಳದಲ್ಲಿ ಅವನು ಬೀಳಲಾರ. ಹಾಗೇ ದೇಹರಥದಲ್ಲಿ ಕುಳಿತು ವಿಷಯಸುಖಭೋಗದ ಮಾರ್ಗದಲ್ಲಿ ಸಂಚರಿಸುವಾಗ ದೇಹೇಂದ್ರಿಯಾದಿಗಳೂ ವಿಷಯಭೋಗಮಾರ್ಗವೂ ಸ್ವತಂತ್ರ ಸರ್ವಶಕ್ತನಾಗಿರುವ ಶ್ರೀಹರಿಗೆ ಅಧೀನವೇ ಇರುವುದರಿಂದ ಅವನು ಸುಖವನ್ನು ಮಾತ್ರ ಉಣಬಲ್ಲ. ದುಃಖವನ್ನು ಉಣ್ಣುವ ಪ್ರಸಂಗ ಅವನಿಗೆ ಬರುವುದಿಲ್ಲ. ಒಳ್ಳೆಯ ವಿಷಯಭೋಗಮಾರ್ಗದಲ್ಲಿಯೇ ಅವನು ಹೋಗುತ್ತಾನೆ. ಒಂದುವೇಳೆ ದುರ್ವಿಷಯ ಮಾರ್ಗದಲ್ಲಿ ಹೋದರೂ ದುಃಖದ ಹಳ್ಳದಲ್ಲಿ ಬೀಳುವುದಿಲ್ಲ.

ಇಲ್ಲಿ ಒಂದು ಪ್ರಶ್ನೆ ಬರಬಹುದು—'ಶರೀರವನ್ನು ನಿರ್ಮಿಸಿದ ಶ್ರೀಹರಿ ತಾನೇ ತನ್ನ ಸ್ವರೂಪಶರೀರದಿಂದಲೇ ಆ ಭೌತಿಕಶರೀರದಲ್ಲಿ ನಿಯಾಮಕನಾಗಿ ಕುಳಿತಿರುತ್ತಾನೆ. ಸ್ವರೂಪೇಂದ್ರಿಯಗಳಿಂದ ಜೀವೇಂದ್ರಿಯಗಳಲ್ಲಿ ಸ್ವರೂಪ ವಿಷಯಸಾರಗಳಿಂದ ಜೀವರ ವಿಷಯಗಳಲ್ಲಿ ನಿಂತು ತಾನೇ ತಾನಾಗಿ ಸುಖ ಉಣ್ಣುತ್ತಾನೆ, ಎಂದರೆ, ಇದು ತನ್ನ ಮನೆಯನ್ನವನ್ನು ಒಯ್ದು ಇನ್ನೊಬ್ಬರ ಮನೆಯಲ್ಲಿ ಉಣ್ಣುವ ಅಜ್ಞ ಬಾಲಕನ ಭೋಜನಕ್ರೀಡೆಯಾಗುವುದು!' ಎಂದು.

ಆದರೆ ಶ್ರೀಹರಿಗೆ ಈ ಭೋಜನದಿಂದಾಗಬೇಕಾಗಿರುವ ಪ್ರಯೋಜನವೇನಿಲ್ಲ. ಅದರಿಂದ ಇದು ಕ್ರೀಡೆಯೆ. ಸುಖೋದ್ರೇಕದಿಂದ ಹೀಗೆ ಕ್ರೀಡೆಯಾಡುತ್ತಾನೆ. ಪ್ರಯೋಜನದ ಉದ್ದೇಶದಿಂದಲ್ಲ. ಆದರೂ ಜೀವರಿಗೆ ಇದರಿಂದ ಊಟವಾಗುತ್ತದೆ, ಪರಮದಯಾಳುವಾದ ಶ್ರೀಹರಿಗೆ ಜೀವರ ಊಟವೂ ತನ್ನ ಊಟದಂತೇ ಇಷ್ಟವಾಗುತ್ತದೆ. ಇದು ಬ್ರಹ್ಮೋಪದೇಶ ಪ್ರಕರಣದಲ್ಲಿ ಸ್ಪಷ್ಟವಿದೆ. ಇದನ್ನು ಮುಂದಿನ ಶ್ಲೋಕದಲ್ಲಿ ಸೂತರು ಹೇಳುತ್ತಾರೆ—

❖❖❖

-೨೩೬-

**ತಾಯಿತಂದೆ ಗುರು ಎಲ್ಲವೂ ಆಗಿ**
**ಮೋಕ್ಷಸಾಧನೆ ಮಾಡಿಸುವವನು ಹರಿಯೆ**

ಸ ವಾ ಇದಂ ವಿಶ್ವಮಮೋಘಲೀಲಃ
ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್ ।
ಭೂತೇಷು ಚಾಂತರ್ಹಿತ ಆತ್ಮತಂತ್ರಃ
ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥

(ಭಾ.೧.೩.೩೬)

ನನು ಸ್ವಯಂ ಶರೀರಂ ನಿರ್ಮಾಯ ಸ್ವಶರೀರೇಣ ಜೀವಶರೀರಮಧಿಷ್ಠಾಯ ಸ್ವೀಯೈರಿಂದ್ರಿಯೈರ್ಜೀವೇಂದ್ರಿಯಾಣ್ಯಭಿವ್ಯಾಪ್ಯ ಸ್ವರೂಪೈರ್ವಿಷಯಸಾರೈರ್ವಿಷಯಾನಧಿಷ್ಠಾಯ ಭಗವತಾ ಕ್ರಿಯಮಾಣೋ ಭೋಗಃ ಸ್ವೀಯಮನ್ನಾದಿಕಂ ಗೃಹೀತ್ವಾ ಗತಾನಾಂ ಪರಗೃಹೇಷು ಭುಂಜತಾಂ ಬಾಲಕಾನಾಂ ಭೋಗ ಇವ ವಿಭಾತಿ । ಸತ್ಯಂ । ತಥಾಪಿ ಸ್ವಪ್ರಯೋಜನಾಭಾವೇನ ಸುಖೋದ್ರೇಕೇಣೈವ ಕ್ರಿಯಮಾಣತ್ವಸಾಮ್ಯಾತ್ ಪರಪ್ರಯೋಜನಮಪಿ ಸ್ವಪ್ರಯೋಜನಮಿವ ಮನ್ವಾನೇನ ಪರಮದಯಾಲುನಾ ಭಗವತಾ ಸೃಷ್ಟ್ಯಾದಯಃ ಕ್ರಿಯಂತೇ । ತಥಾ ಚೋಕ್ತಂ ಬ್ರಹ್ಮೋಪದೇಶಪ್ರಕರಣ ಇತ್ಯಭಿಪ್ರೇತ್ಯಾಹ ॥ **ಸ ವಾ ಇತಿ** ॥ ಸ ಭಗವಾನ್ ವಿಶ್ವಂ ಸಮಸ್ತಂ । ಇದಂ ಜಗತ್ । ಸೃಜತಿ । ಅವತಿ ರಕ್ಷತಿ । ಅತ್ತಿ ಸಂಹರತಿ । ಭೂತೇಷು ತನ್ನಿರ್ಮಿತೇಷು ಶರೀರೇಷು । ಅಂತರ್ಹಿತಃ ಅಂತಃ ಸನ್ । ಷಡ್ಗುಣೇಶಃ ಮನಃಶ್ರೋತ್ರಾದಿಷಡಿಂದ್ರಿಯಾಣಾಂ ಈಶಃ ಅಧಿಷ್ಠಾತಾ ಸನ್ । ಷಾಡ್ವರ್ಗಿಕಂ ಷಡ್ವರ್ಗಗತಂ । ಜಿಘ್ರತಿ ಅನುಭವತಿ । ತಥಾಪ್ಯಸ್ಮಿನ್ನಗತಿ । ನ ಸಜ್ಜತೇ ತತ್ಕೃತೇನ ಪುಣ್ಯಪಾಪಾದಿನಾ ಲಿಪ್ತೋ ನ ಭವತಿ । ತತ್ರ ಹೇತುಃ । **ಆತ್ಮತಂತ್ರ ಇತಿ** ॥ ಸ್ವತಂತ್ರ ಇತ್ಯರ್ಥಃ । ಏತತ್ಸರ್ವಂ ಪ್ರಮಾಣಸಿದ್ಧಮಿತಿ ವೈಶಬ್ದೇನಾಚಷ್ಟೇ ।ಪೂರ್ಣಸ್ಯ ಸೃಷ್ಟ್ಯಾದಿನಾ ಪ್ರಯೋಜನಾಭಾವೇನ ವ್ಯರ್ಥೇಯಂ ಸೃಷ್ಟ್ಯಾದಿರೂಪಾ ಲೀಲೇತ್ಯತೋ ನ ಹಿ ಭಾಗವತೀ ಲೀಲಾ ವ್ಯರ್ಥೇತಿ ಭಾವಯಿತುಮಪಿ ಯುಕ್ತಂ । ಸ್ವಪ್ರಯೋಜನಾಭಾವೇಽಪಿ ಭಕ್ತಮುಕ್ತಿರೂಪಪರಪ್ರಯೋಜನಸದ್ಭಾವೇನ ಸಾರ್ಥಕ್ಯೋಪಪತ್ತೇರಿತಿ ಭಾವೇನಾಹ । **ಅಮೋಘಲೀಲ ಇತಿ** ॥

**ಇದಮುದಿತಂ ಭವತಿ**— ಜೀವಾನಾಂ ಮುಕ್ತಯೇ ಖಲ್ವಿದಂ

ಸೃಷ್ಟ್ಯಾದಿಕಂ । ಯಥಾ ಯಥಾ ಕೃತೌ ಮುಕ್ತಿರ್ಭವೇತ್ತಥಾ ತಥಾ ಕ್ರಿಯತೇ ಭಗವತಾ । ತಥಾಹಿ । ಶರೀರಾಂತರಾಣಿ ಪರಿತ್ಯಜ್ಯ ಪುರುಷಶರೀರಾಣಿ ನಿರ್ಮಾಯ ತತ್ರ ಸ್ವಪೂಜಾಸಾಧನಾನೀಂದ್ರಿಯಾಣಿ ದತ್ವಾ ತಾದೃಶಾನಿ ದ್ರವ್ಯಾಣಿ ದಾಪಯಿತ್ವಾ ಸ್ವಯಂ ಸ್ವೇನ ಶರೀರೇಣ ಸ್ವೈರಿಂದ್ರಿಯೈಃ ಸ್ವರೂಪ ವಿಷಯಾನ್ ಸಂತತಮನುಭವನ್ ಸ್ಥಿತೋऽಪಿ ಸ್ವಶರೀರೇಣ ಪುರುಷಶರೀರಾಣಿ, ಇಂದ್ರಯೈರಿನ್ದ್ರಿಯಾಣಿ, ಸ್ವವಿಷಯೈ ವಿಷಯಾನಧಿಷ್ಠಾಯ, ಭೋಗ್ಯೈಃ ಸ್ವಾತ್ಮಾನಂ ಸ್ವಯಮೇವ ಪೂಜಯನ್, ರಾಜಾ ಪುರೋಹಿತಾಯ ಗೃಹಂ ನಿರ್ಮಾಯ ತತ್ರ ಸಕಲಪದಾರ್ಥಸಾರ್ಥಂ ಪರಿಪೂರ್ಯ ಲೀಲಯಾ ಕಾನಿಚಿದ್ದಿನಾನಿ ತತ್ರೈವ ಸ್ಥಿತ್ವಾ ಭೋಜನಾದಿ ಕುರ್ವನ್ ಪ್ರೀತಿವಶೇನ ಪುರೋಹಿತಮಿವ ಲೋಕೇಷು ವಿಖ್ಯಾತಕೀರ್ತಿಂ ಕೃತ್ವಾ ಪುರುಷಾಯ ಪುರುಷಾರ್ಥಾನ್ ಪ್ರಯಚ್ಛತೀತಿ । ತದನೇನ ಶರೀರೋತ್ಪಾದಕತ್ವ ರೂಪಂ ಪಿತೃತ್ವಂ, ಪ್ರಲಯೇ ಸ್ವೋದರಗತಸ್ಯ ವಿಶ್ವಸ್ಯ ಸೃಷ್ಟಿಕಾಲೇ ತಸ್ಮಾದ್ ಬಹಿರ್ನಿಃಸಾರಣಾದವ್ಯವಧಾನೇನೋತ್ಪಾದಕತ್ವರೂಪಮಾತೃತ್ವಂ, ತದಾ ತದಾ ಪ್ರಾಪ್ತಾಧ್ಯಾತ್ಮಿಕಾದ್ಯನಿಷ್ಟಪರಿಹಾರೇಣ ರಕ್ಷಕತಯಾऽನಿಮಿತ್ತಬಂಧುತ್ವ ರೂಪಂ ಸುಹೃತ್ತ್ವಂ, ಜ್ಞಾನಾದಿದಾತೃತಯಾ ಸದ್ಗುರುತ್ವಂ, ಮೋಚಕತಯಾ ಪರದೈವತ್ವಮಿತಿ ಪಿತೃತ್ವಾದಿಪಂಚಕಮನುಭವಾರೂಢಂ ಕೃತಮಿತಿ ಜ್ಞೇಯಂ ।

ಅನೇನೈವ ಚ ಶಿಷ್ಯಪ್ರತಿಭಾದ್ಯಲಭ್ಯವಿಶೇಷವಿಷಯಿಣ್ಯಾ ಅಷ್ಟಮ್ಯಾಃ ಶಂಕಾಯಾಃ ಪರಿಹಾರೋ ದ್ರಷ್ಟವ್ಯಃ । ತೇಷಾಂ ಗುರುಭಿರೇವ ಪ್ರತಿಪಾದಿತತ್ವಾ-ದಿತಿ । ತದನೇನ ಶಮಾತ್ಮವಿಮರ್ಶನಾಖ್ಯೌ ಭಾಗವತೌ ಧರ್ಮಾವುಕ್ತೌ ಭವತಃ । ಶಮೇನಾಭಯಂ ಲಬ್ಧಮಿತಿ ॥

❖❖❖

ಸೂತರು ಹೇಳುತ್ತಾರೆ—ಐಶ್ವರ್ಯಾದಿ ಷಡ್ಗುಣಪೂರ್ಣನಾಗಿದ್ದು ಸತ್ಯವಾದ ಲೀಲೆಗಳನ್ನೇ ನಡೆಸುವ ಭಗವಂತನು ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರ ಗಳನ್ನು ಮಾಡುತ್ತಿದ್ದರೂ ಫಲಾಸಕ್ತಿ ಹೊಂದುವುದಿಲ್ಲ. ಸ್ವತಂತ್ರನಾದ್ದರಿಂದ ಕರ್ಮಗಳಿಂದ ಲೇಪ ಹೊಂದುವುದಿಲ್ಲ. ಆದರಿಂದ ವೇದದಲ್ಲಿ ಅವನು ಅಕರ್ತನೆನಿಸಿದ್ದಾನೆ, ಹೊರತು ಕರ್ತೃತ್ವ ಅವನಲ್ಲಿ ಸ್ವಾಭಾವಿಕವಾಗಿಯೆ ಇದೆ. ಹಾಗೇ ಸ್ವತಂತ್ರವಾಗಿ ಎಲ್ಲರ ಹೃದಯಗಳಲ್ಲಿದ್ದು ಆರು ಇಂದ್ರಿಯ ವಿಷಯ ಗಳನ್ನು ಅನುಭವಿಸುತ್ತಾನೆ.

ಇದು ಅವನಿಗೆ ಕೇವಲ ಲೀಲೆ. ಜೀವನಂತೆ ಅಸ್ವತಂತ್ರನಾಗಿ ಅವನು ದುಃಖವನ್ನು ಉಣ್ಣುವುದಿಲ್ಲ. ಅದರಿಂದ ವೇದದಲ್ಲಿ ಅವನು ಅಭೋಕ್ತ ನೆನಿಸಿದ್ದಾನೆ. ಪೂರ್ಣಕಾಮನಾದ ತನಗೆ ಈ ಸೃಷ್ಟ್ಯಾದಿ ವ್ಯಾಪಾರದಿಂದ ಯಾವ ಪ್ರಯೋಜನವಿಲ್ಲದಿದ್ದರೂ ಜೀವರ ಮೋಕ್ಷಸಾಧನೆಯಾಗುತ್ತದೆ. ಶ್ರೀಹರಿಯ ಲೀಲೆ ಎಂದಿಗೂ ವ್ಯರ್ಥವಲ್ಲ. ಭಕ್ತೋದ್ಧಾರವೇ ಅದಕ್ಕೆ ಪ್ರಯೋಜನ.

ಶ್ರೀರಮಣನು ಸೃಷ್ಟ್ಯಾದಿಗಳನ್ನು ಮಾಡುವುದು ಜೀವರ ಮುಕ್ತಿಗಾಗಿ ಎಂದಮೇಲೆ ಅವುಗಳನ್ನು ಹೇಗೆ ಮಾಡಿದರೆ ಮುಕ್ತಿಯಾಗುವುದೋ ಹಾಗೇ ಮಾಡುವನೆನ್ನಬೇಕು. ಇತರ ಶರೀರಗಳು ಸಾಧನಯೋಗ್ಯವಲ್ಲವೆಂದು ಮಾನವ ಶರೀರವನ್ನು ನಿರ್ಮಿಸಿದ. ಅಲ್ಲಿ ಜೀವರಿಗೆ ತನ್ನ ಪೂಜೆಗೆ ಯೋಗ್ಯವಾದ ಜಲ ತುಲಸೀ ನೈವೇದ್ಯ ಪದಾರ್ಥಗಳನ್ನು ಒದಗಿಸಿ, ತಾನಾಗಿ ತನ್ನ ಸ್ವರೂಪ ಶರೀರೇಂದ್ರಿಯಗಳಿಂದ ಸ್ವರೂಪಭೂತವಿಷಯಗಳನ್ನು ಸದಾ ಅನುಭವಿಸುತ್ತಿರುವವನೇ ಆದರೂ ಲೀಲೆಗಾಗಿ ತನ್ನ ಶರೀರ ಇಂದ್ರಿಯಗಳಿಂದ ಜೀವಶರೀರೇಂದ್ರಿಯಗಳನ್ನೂ ಸ್ವರೂಪವಿಷಯಗಳಿಂದ ಬಾಹ್ಯವಿಷಯಗಳನ್ನೂ ವ್ಯಾಪಿಸಿದ್ದು ಆಯಾ ಬಾಹ್ಯಪೂಜೆಗಳಿಂದ ತನ್ನ ಪೂಜೆಯನ್ನು ಜೀವರಿಂದ ಮಾಡಿಸಿಕೊಳ್ಳುವನು.

ಇದು ಹೇಗಿದೆ ಎಂದರೆ, ರಾಜನು ಪುರೋಹಿತನಿಗಾಗಿ ಮನೆ ಕಟ್ಟಿಸಿ ಅದರಲ್ಲಿ ಎಲ್ಲ ಪದಾರ್ಥಗಳನ್ನು ತುಂಬಿಸಿ ಕೆಲಕಾಲ ತಾನೇ ಆ ಮನೆಯಲ್ಲಿದ್ದು ಭೋಜನಾದಿಗಳನ್ನು ಮಾಡಿ ಬಳಿಕ ಪ್ರೀತಿಯಿಂದ ಎಲ್ಲವನ್ನು ಪುರೋಹಿತನಿಗೆ ಬಿಟ್ಟುಕೊಟ್ಟು ಆದರಿಸುತ್ತಾನೆ. ಹಾಗೇ ಶ್ರೀರಮಣನು ಜೀವರಿಗೆ ಶರೀರದಲ್ಲಿ ತಾನೇ ಮೋಕ್ಷಸಾಧನೆ ಮಾಡಿ ಮಾಡಿಸುತ್ತ ಎಲ್ಲ ಪುರುಷಾರ್ಥಗಳನ್ನು ಕರುಣಿಸುತ್ತಾನೆ ಮುಕ್ತಿಯನ್ನು ನೀಡುತ್ತಾನೆ.

ಶ್ರೀಹರಿ ಶರೀರವನ್ನು ನಿರ್ಮಿಸಿಕೊಟ್ಟಿರುವುದದರಿಂದ ತಂದೆ ಎನಿಸುತ್ತಾನೆ. ಪ್ರಳಯಕಾಲದಲ್ಲಿ ತನ್ನುದರದೊಳಗಿದ್ದ ಜೀವರನ್ನು ಸೃಷ್ಟಿಕಾಲದಲ್ಲಿ ಹೊರಗೆ ಹಾಕುವುದರಿಂದ ತಾನೆ ಹಡೆದ ತಾಯಿಯೂ ಆಗುತ್ತಾನೆ. ಆಗಾಗ ಬರುವ ಆಧ್ಯಾತ್ಮಿಕಾದಿ ತಾಪಗಳನ್ನು ಕಳೆದು ರಕ್ಷಿಸುವುದರಿಂದ ಅನಿಮಿತ್ತ ಬಂಧು ಸುಹೃತ್ ಆಗುತ್ತಾನೆ. ಶಾಸ್ತ್ರದಿಂದ ಗುರುಗಳ ಮೂಲಕ ಜ್ಞಾನ ನೀಡುವ

ಗುರುವಾಗುತ್ತಾನೆ. ಮೋಕ್ಷನೀಡುವ ಪರದೈವನೂ ಆಗುತ್ತಾನೆ. ಹೀಗೆ ತಂದೆತಾಯಿ ಸುಹೃತ್ ಗುರು ದೈವವೆಲ್ಲವೂ ಹರಿ ತಾನೇ ಆಗುತ್ತಾನೆ.

ಇದರಿಂದ ಹಿಂದೆ ೨೧೨ನೇ ಶ್ಲೋಕದ ವಿವರಣೆಯಲ್ಲಿ ಹೇಳಿದಂತೆ ಸಾಧಕನು ಆತ್ಮವಿಮರ್ಶೆ ಮಾಡುತ್ತ ಅಧ್ಯಾತ್ಮ ವಿಷಯದಲ್ಲಿ ಅವನ ಮನಸ್ಸು ಶುದ್ಧವಾದಂತೆಲ್ಲ ಹೆಚ್ಚು ಹೆಚ್ಚು ಅಂಶಗಳನ್ನು ಪ್ರತಿಭೆಯಿಂದ ಊಹಿಸಿಕೊಂಡು, ಊಹಿಸಿ ತಿಳಿಯಲಶಕ್ಯವಾದ ವಿಶೇಷ ವಿಷಯದಲ್ಲಿ ಗುರೂಪದೇಶದಿಂದ ತಿಳಿದು, ಉಪಾಸನೆ ಮಾಡಬೇಕಾಗುತ್ತದೆ ಎಂದು ಹೇಳಿದ್ದಾಗಿದೆ.

ಇದೀಗ ಊಹಿಸಿ ತಿಳಿಯಲಾಗದ ಆ ವಿಶೇಷಗಳನ್ನು ಬಿಂಬೋಪಾಸಕ ಗುರುವಾದ ಭಾಗವತೋತ್ತಮನ ಉಪದೇಶದಿಂದ ಹೀಗೇ ಪಿತೃತ್ವಾದಿ ವಿಶೇಷರೂಪದಿಂದ ತಿಳಿಯಬೇಕೆಂದು ಇಲ್ಲಿ ಹೇಳುತ್ತಿದ್ದಾರೆ.

ಹೀಗೆ ಈ ಪ್ರಕರಣದಲ್ಲಿ ಶಮ ಮತ್ತು ಆತ್ಮವಿಮರ್ಶೆ ಎಂಬ ಭಾಗವತಧರ್ಮಗಳನ್ನಾಚರಿಸಬೇಕೆಂದೂ ಶಮದಿಂದ ೧೭೩ನೇ ಶ್ಲೋಕ ವಿವರಣೆಯಲ್ಲಿ ಹೇಳಿದಂತೆ 'ಅಭಯ' ಸಂಸಾರಕ್ಕೆ ಭಯಪಡದಿರುವುದು ಎಂಬ ಧರ್ಮದ ಅನುಷ್ಠಾನ ಮಾಡಬೇಕೆಂದೂ ಉಕ್ತವಾದಂತಾಯಿತು.

—ಈ ಆತ್ಮ ವಿಮರ್ಶೆಗಳಿಗೆ ಉತ್ತರ ಈ ೧೮, ೧೯ನೇ ಪ್ರಕರಣದಲ್ಲಿ ಕೆಲವು ಬಂದಿವೆ. ೧೨ನೇ ಪ್ರಶ್ನೆಗೆ ಸಮಾಧಾನವಾಗಿ ಭಾಗವತಧರ್ಮಾನುಷ್ಠಾನಕ್ಕಾಗಿ ಧರ್ಮೋಪದೇಶ ಮುಂದೆ ಬರುತ್ತದೆ.

❖❖❖

# ೨೦. ಧರ್ಮೋಪದೇಶ ಪ್ರಕರಣ

## ಪ್ರಕರಣ ಸಾರಾಂಶ

ಭಕ್ತಿಯೋಗಿಗಳು ಅಪರೋಕ್ಷಾನಂತರವೂ ಹರಿಕಥಾಮೃತಶ್ರವಣ ಮಾಡುತ್ತಾರೆ. ಅವರಿಗೆ ತತ್ಕಾಲದಲ್ಲಿಯೂ ಸ್ವರೂಪಾನಂದ ಬಹು ಪಾಲು ವ್ಯಕ್ತವಾಗುವುದರಿಂದ ಬೇರೆ ಮೋಕ್ಷ ಹೊಂದಲು ಅವರು ತವಕಿಸುವುದಿಲ್ಲ. ಈ ಕಥಾಶ್ರವಣದಿಂದ ಮುಂದೆ ಅವರಿಗೆ ಮೋಕ್ಷ ದಲ್ಲಿ ಆನಂದವೃದ್ಧಿಯೂ ಆಗುವುದು.

ಕಥಾಶ್ರವಣದಿಂದ ಪಾಪ ಪರಿಹಾರ, ಪುಣ್ಯವೃದ್ಧಿಗಳಾಗುವುದ ರಿಂದ ಅದು ಉತ್ತಮವಾದ ಭಾಗವತಧರ್ಮ.

'ಭಾಗವತಧರ್ಮ' ಎಂದರೆ ಭಗವಂತನು ಸುಜನರಿಗೆ ಮೋಕ್ಷಕ್ಕಾಗಿ ಹೇಳಿದ ಧರ್ಮ. ಇದು ಬಹಳಗೋಪ್ಯವಾಗಿದ್ದು ಕೇವಲ ಬ್ರಹ್ಮ ರುದ್ರಾದಿ ದೇವತೆಗಳೂ ನಾರದ ಸನಕಾದಿ ಮುನಿಗಳೂ ಇದನ್ನು ತಿಳಿದಿದ್ದಾರೆ.

ಈ ಧರ್ಮ ಮೂವತ್ತು ಬಗೆಯಾಗಿದೆ. ಭಾಗವತ ಸಪ್ತಮಸ್ಕಂಧ ದಲ್ಲಿ ನಾರದರು ಯುಧಿಷ್ಠಿರನಿಗೆ ಹೇಳುತ್ತಾರೆ.

ಯದ್ಯಪಿ ಯೋಗಶಾಸ್ತ್ರದಲ್ಲಿ ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ ಎಂದು ಐದು ಯಮಗಳನ್ನು ಹೇಳಿ ದ್ದಾರೆ ಮತ್ತು ತಪಸ್ಸು ಸಂತೋಷ ಆಸ್ತಿಕ್ಯ ದಾನ ಈಶ್ವರಪೂಜನ ವೇದಾಂತಶ್ರವಣ ಲಜ್ಜೆ ಮನನ ಜಪ ಹೋಮಗಳೆಂದು ಹತ್ತು ನಿಯಮಗಳನ್ನು ಹೇಳಿದ್ದಾರೆ. ಆದರೆ ಅವು ಅವರು ಹೇಳುವಂತೆ ಕೇವಲ ಅಷ್ಟಾಂಗ ಯೋಗಗಳಲ್ಲಿ ಸೇರಿದ್ದು ಯೋಗಾಭ್ಯಾಸೋಪ ಯುಕ್ತವಾಗಿದೆ. ಭಗವಂತನ ಅನುಗ್ರಹ ಸಂಪಾದನೆಯಿಂದ ಮಹಾಫಲ ಹೊಂದುವುದಕ್ಕೆ ಕಾರಣವಾಗುವುದಿಲ್ಲ. ಭಾಗವತವು ಹೇಳುವ ಎಲ್ಲ ಮೂವತ್ತು ಭಾಗವತಧರ್ಮಗಳೂ ಹರಿಪ್ರೀತಿಕರ ವಾಗಿದ್ದು ಮಹಾಫಲ ಸಾಧನವಾಗುತ್ತವೆ. ಮಹಾಫಲಸಾಧನ ವಾಗುವಂತೆ ಅವುಗಳ ಅನುಷ್ಠಾನ ಮಾಡಬೇಕು. ಮಾಡುವ

ಬಗೆಯನ್ನು ಗುರುಗಳಿಂದ ಕೇಳಿ ತಿಳಿಯಬೇಕು ಎನ್ನುತ್ತದೆ ಭಾಗವತ.

ಗುರುಗಳು ಹೇಳುತ್ತಾರೆ. 'ಈ ಎಲ್ಲ ಧರ್ಮಾನುಷ್ಠಾನವನ್ನೂ ಸ್ವತಂತ್ರಕರ್ತನಾದ ಹರಿಯೇ ನನ್ನಲ್ಲಿದ್ದು ತನ್ನ ಪೂಜಾರೂಪವಾಗಿ ಮಾಡಿ ನನ್ನಿಂದ ಮಾಡಿಸುತ್ತಾನೆ' ಎಂಬ ಅನುಸಂಧಾನಕ್ಕೆ ಒಲಿದು ಹರಿ ಅನುಗ್ರಹಿಸುತ್ತಾನೆ. ಅದಕ್ಕೆ ಕರ್ಮಫಲವಾಗಿ ಸ್ವರ್ಗಾದಿ ವಿಷಯಸುಖವನ್ನು ಅಪೇಕ್ಷಿಸದೆ ಕೇವಲ ಹರಿಪ್ರೀತಿಯಾಗಲೆಂದೇ ಕರ್ಮಮಾಡಿ ಅವನಿಗೇ ಅರ್ಪಿಸಬೇಕು.

ನಿಷ್ಕಾಮಕರ್ಮರೂಪವಾದ ಈ ಭಾಗವತಧರ್ಮಾನುಷ್ಠಾನವು ಬಲು ಸುಲಭ ಮತ್ತು ಲೋಪದೋಷಗಳಾದರೂ ಯಾವುದೇ ಅಪಾಯವಿರುವುದಿಲ್ಲ. ಈ ಮಾರ್ಗದಲ್ಲಿ ಕಣ್ಣುಮುಚ್ಚಿ ವೇಗವಾಗಿ ನಡೆದರೂ ಎಡವಲಾರ ಬೀಳಲಾರ. ಆ ಮೂವತ್ತು ಭಾಗವತ ಧರ್ಮಗಳು ಇವು—

(೧) ಸರ್ವತೋಮನಸೋಽಸಂಗ– ಮನಸು ವಿಷಯಾಸಕ್ತಿಯನ್ನು ಬಿಟ್ಟಿರಬೇಕು. ವಿಷಯಪದಾರ್ಥಗಳನ್ನೂ ಅವುಗಳ ಆಕರ್ಷಣೆ ಗೊಳಗಾಗುವ ಮನಸ್ಸನ್ನೂ 'ನೀನೇ ನಿಯಂತ್ರಿಸಬೇಕು. ಅವು ನಿನ್ನವೆ, ಹೊರತು ನನ್ನವಲ್ಲ' ಎಂದು ಹರಿಗೆ ಅರ್ಪಿಸಬೇಕು. ಇದೇ ವೈರಾಗ್ಯ. ಈ ವೈರಾಗ್ಯದಿಂದ, 'ಲೌಕಿಕ ತಂದೆತಾಯಿ ಬಂಧು ಬಳಗಗಳೆಲ್ಲಕ್ಕಿಂತ ಉತ್ತಮ ಬಂಧುವು ಹರಿಯೆ ಎಂದು ಅವನಲ್ಲಿ ಭಕ್ತಿಮಾಡಬೇಕು' ಎಂದು ಏಕಾದಶಸ್ಕಂಧದಲ್ಲಿದೆ. ಸಪ್ತಮಸ್ಕಂಧ ದಲ್ಲಿ ಹೇಳಿದ 'ಅಧ್ಯಾತ್ಮವಿಚಾರ ಆತ್ಮವಿಮರ್ಶೆ'ಗಳೆಂದರೆ ಇದುವೆ.

(೨) ಸಾಧುಸಂಗ– ಸಾಧುಗಳು ಹಿರಿಯರಾಗಿದ್ದರೆ ಅವರಲ್ಲಿ ಭಕ್ತಿ ಮಾಡಬೇಕು. ಸಮಾನಿಕರಾಗಿದ್ದರೆ ಮೈತ್ರಿಯಿಂದಿರಬೇಕು. ಕಿರಿಯರಾಗಿದ್ದರೆ ದಯೆ ವಾತ್ಸಲ್ಯಗಳಿಂದ ಕಾಣಬೇಕು.

(೩) ಶೌಚ– ಯೋಗಶಾಸ್ತ್ರಪ್ರಕಾರ ಮಣ್ಣುನೀರುಗಳಿಂದ ಶೌಚ ಮಾಡಿಕೊಳ್ಳುವುದು. ಇದು ಮಹಾಫಲದಾಯಕವಲ್ಲ. ಭಾಗವತ

ಹೇಳುವಂತೆ ಎಲ್ಲ ಕರ್ಮವನ್ನು ಫಲದಾಸೆ ಇಲ್ಲದೆ ಕರ್ತೃತ್ವಾಭಿ ಮಾನವನ್ನೂ ತೊರೆದು ಹರಿಪೂಜಾ ರೂಪವಾಗಿಯೇ ಮಾಡು ವುದು ಶೌಚ. ಅದರಿಂದ ಮಹಾಫಲ ಲಭ್ಯ.

(೪) ತಪಸ್ಸು– ಇದು ಮನೋನಿಗ್ರಹರೂಪವಾದುದು. ಮಹಾತ್ಮರ ನಿಂದೆ, ಆತ್ಮಪ್ರಶಂಸೆಗಳನ್ನು ಮಾಡದಂತೆ ಮನಸ್ಸನ್ನು ನಿಗ್ರಹಿಸಿ ಕೊಳ್ಳುವುದೇ ತಪಸ್ಸು. ಇದಕ್ಕೆ ಹರಿ ಒಲಿಯುತ್ತಾನೆ.

(೫) ತಿತಿಕ್ಷಾ– ದುಃಖ ಬಂದಾಗ ಉದ್ವೇಗಕ್ಕೊಳಗಾಗದಿರುವುದು.

(೬) ಮೌನ– ಏನೂ ನುಡಿಯದಿರುವುದು, ಹರಿಗುರುಗಳನ್ನು ಕೂಡ ಕೊಂಡಾಡದಿರುವುದು ಮೌನವಲ್ಲ. ಅದು ಧರ್ಮವಲ್ಲ. ಅಧರ್ಮವೆ ಆಗುತ್ತದೆ. ಮಾತು ಯಾವುದೂ ಲೌಕಿಕಕ್ಕೆ ಸಂಬಂಧಿ ಸದೆ ಪರಮಾತ್ಮನಿಗೇ ಸಂಬಂಧಿಸಿರುವುದು ಮೌನವ್ರತ. ಎಂದೂ ಹಾಳುಹರಟೆಗಳಲ್ಲಿ ಆಸಕ್ತಿ ಇರಬಾರದು.

(೭) ಸ್ವಾಧ್ಯಾಯ– ನುಡಿವ ಮಾತೆಲ್ಲವೂ ಹರಿನಾಮವೆಂದು ತಿಳಿದು ಎಲ್ಲ ಶಬ್ದಗಳಿಂದಲೂ ಎಲ್ಲೆಡೆ ಇರುವ ಪರಮಾತ್ಮನನ್ನೆ ನೆನೆಯಬೇಕು.

(೮) ಆರ್ಜವ– ಮನೋವಾಕ್ಕಾಯಗಳಲ್ಲಿ ಒಂದೇ ರೀತಿಯಿಂದ ಇದ್ದು ಹರಿಯ ಹರಿಭಕ್ತರ ಸೇವೆ ಮಾಡುವುದು, ಮೋಕ್ಷಯೋಗ್ಯ ಚೇತನರ ಸ್ವಭಾವಭೂತವಾದ ಲಕ್ಷಣ. ಹರಿಪ್ರೀತಿಕರ.

(೯) ಬ್ರಹ್ಮಚರ್ಯ– ಎಲ್ಲ ಶರೀರ–ಶರೀರವ್ಯಾಪಾರಗಳನ್ನೂ ಇಂದ್ರಿಯ–ಇಂದ್ರಿಯ ವ್ಯಾಪಾರಗಳನ್ನೂ ಭಗವತ್ ಪರವಾಗಿಸು ವುದು.

(೧೦) ಅಹಿಂಸಾ– ಕಾಮಕ್ಕೆ ವಶವಾಗದಂತೆ ಮನಸ್ಸನ್ನು ನಿಗ್ರಹಿಸಿಕೊಳ್ಳುವುದು ತಪಸ್ಸು. ಕ್ರೋಧಕ್ಕೆ ವಶವಾಗದಂತೆ ನೋಡಿ ಕೊಳ್ಳುವುದು ಅಹಿಂಸೆ.

(೧೧) ಸಮತ್ವ– ದುಃಖದಂತೆಯೇ ಈ ವಿಷಯಸುಖ. ಅವರಲ್ಲಿ ಏನೂ ಸುಖವಿಲ್ಲ, ಅದು ಇನ್ನು ಸಾಕು ಎಂದುಕೊಳ್ಳುವುದು

ಸಮತ್ವ. ಮತ್ತು ಸುಖದಂತೆಯೇ ದುಃಖವೂ ಕೂಡ. ಹರಿ ಕೊಟ್ಟಿದ್ದು ಬೇಡವೆನ್ನಬಾರದೆಂದು ನಮ್ರತೆಯಿಂದ ದುಃಖವನ್ನು ಸಹಿಸಿಕೊಳ್ಳುವುದು ಸಮತ್ವ.

(೧೨) ಆತ್ಮೇಶ್ವರಾನ್ವೀಕ್ಷೆ– ಎಲ್ಲ ವ್ಯಕ್ತಿಗಳಲ್ಲಿಯೂ ವಸ್ತು ಗಳಲ್ಲಿಯೂ ಹರಿಯ 'ಆತ್ಮ' ಎಂಬ ಅಂತರ್ಯಾಮಿ ರೂಪವೂ ಇದೆ, ಹೊರಗೆ 'ಈಶ್ವರ' ಎಂಬ ಬಾಹ್ಯರೂಪವೂ ಇದೆ. ಇದರ 'ಅನು ಈಕ್ಷಾ' ಮತ್ತೆ ಮತ್ತೆ ಅನುಸಂಧಾನ ಮಾಡುವುದು, ಪ್ರತಿಬಿಂಬಗಳ ತಾರತಮ್ಯಾನುಗುಣವಾಗಿ ಬಿಂಬನು ತಾರತಮ್ಯ ದಿಂದ ವ್ಯಕ್ತನಾಗುತ್ತಾನೆ ಎಂದು ತಿಳಿಯುವುದು ಆವಶ್ಯಕ.

(೧೩) ಕೈವಲ್ಯ– ನಾನು ಕರ್ತ, ಭೋಕ್ತ, ಸ್ವಾಮಿ ಎಂದು ಹರಿಯ ಕರ್ತೃತ್ವಾದಿಗಳನ್ನು ಜೀವನು ತನ್ನವೆಂದು ಅಭಿಮಾನ ಪಡುತ್ತಾನೆ. ಅದನ್ನು ಪರಿತ್ಯಾಗಮಾಡಿ 'ಕೇವಲ'ನೆನಿಸಬೇಕು. ಇದೇ ಕೈವಲ್ಯ. ಮನಸಿನ ನೆಮ್ಮದಿಗೂ ಹರಿಪ್ರೀತಿಗೂ ಕಾರಣ.

(೧೪) ಅನಿಕೇತನ– ಮನೆ ಮಠ ಮುಂತಾದ 'ನಿ-ಕೇತನ' ಅಂದರೆ ನಿಯತಸ್ಥಾನವನ್ನು ಬಿಟ್ಟು ತೀರ್ಥಯಾತ್ರೆಗೆ ಹೋಗಿ 'ತೀರ್ಥ' ರೆನಿಸುವ ಜ್ಞಾನಿಗಳನ್ನು ಅರಸುವುದು, ಅವರಿಂದ ಉಪದೇಶ ಪಡೆಯುವುದು 'ಅನಿಕೇತನ' ಮತ್ತು 'ಅ' ಎಂದರೆ ವಿಷ್ಣು. ಅವನೇ ನನಗೆ ಎಲ್ಲಿ ಹೋದರೂ 'ನಿಕೇತನ' ಆಶ್ರಯನಾಗಿರುತ್ತಾನೆ ಎಂದುಕೊಳ್ಳುವುದು. ಮತ್ತು ಗುಣತ್ರಯಾತ್ಮಕವಾದ ನನ್ನ ಮನೆಯಲ್ಲಿ ನಾನಿರುವಾಗಲೂ ನನಗೆ ಆ ಆಶ್ರಯದೊಳಗಿರುವ ಗುಣತ್ರಯರಹಿತನಾದ 'ಅ' ಹರಿಯೇ ನನಗೆ 'ನಿಕೇತನ' ಆಶ್ರಯನೆಂದುಕೊಳ್ಳುವುದು.

(೧೫) ವಿವಿಕ್ತ– 'ನಾನಿರುವ ಈ ಶರೀರ ನಾನೆ, ನನಗಿಂತ ಬೇರೆ ಯಲ್ಲ' ಎಂದು ಮೋಹವಿರುತ್ತದೆ. ಇದು ಮೂರ್ಖತನ. ಶರೀರವು ನಾನಲ್ಲ, ನನ್ನದಲ್ಲ, 'ವಿವಿಕ್ತ'ಬೇರೆ, ಅದು ಹರಿಯ ಮಂದಿರವೇ ಹೊರತು ನನ್ನ ಮನೆಯಲ್ಲ ಎಂದು ತಿಳಿಯುವುದು ವಿವಿಕ್ತ.

(೧೬) ಚೀರವಸನ– ಗೃಹಸ್ಥರು ಬೀದಿಯಲ್ಲಿ ಬಿಸಾಕಿದ ಹರಕುಬಟ್ಟೆಯನ್ನೇ ಗುರುವಿನ ಅಪ್ಪಣೆಪಡೆದು ಶಿಷ್ಯನು ಉಡಬೇಕು. ಅದರಿಂದ ಮಹಾಫಲವಿದೆ. ಅನ್ಯರು ನೀಡಿದ ಅನ್ನ ಉಣ್ಣುವಾಗಲೂ 'ಶ್ರೀಪಾದಾನಾಮನುಜ್ಞಾ' ಎಂದು ಕೇಳಿ, 'ಓಂ, ಹರಿಪ್ರಸಾದೋಽಸ್ತು' ಎಂದು ಅನುಜ್ಞೆ ಪಡೆದು ಉಣಬೇಕು. ಹಾಗೇ, ಈ ಶರೀರ ಜೀರ್ಣವಾಗುತ್ತಿದೆ ಎಂದು ಹೊಸ ಶರೀರಕ್ಕಾಗಿ ಬಂಧಕಕರ್ಮ ಮಾಡದಿರುವುದೂ 'ಚೀರವಸನ' ವ್ರತ.

(೧೭) ಸಂತೋಷ– ಅಸಂಚಯ ವಾರ್ತಾ ಶಾಲೀನ ಶಿಲೋಂಛ ಎಂದು ನಾಲ್ಕು ಬಗೆಯ ಜೀವಿಕೆಗಳಲ್ಲಿ ಹರೀಚ್ಛೆಯಿಂದ ತನ್ನ ಪಾಲಿಗೆ ಬಂದ ಯಾವುದಾದರೊಂದರಲ್ಲಿಯೇ ತೃಪ್ತಿಪಡುವುದು.

(೧೮) ವಿಷಯಭೋಗದಲ್ಲಿ ಪರರು ಲೌಕಿಕರೂ ಪ್ರವೃತ್ತಿಮಾಡದಂತೆ ತಡೆಯುವುದು 'ಪರಾರ್ಥೇಹೇಕ್ಷಾ' ಇದು ಸಾಧಕರಿಗೆ ವಿಹಿತ. ಸಿದ್ಧರಿಗೆ 'ಪರ' ಸರ್ವೋತ್ತಮ ಹರಿಧ್ಯಾನವೇ 'ಪರಾರ್ಥೇಹೇಕ್ಷಾ' ವಿಹಿತ.

(೧೯) ಸತ್ಯ– ಯಥಾರ್ಥವಾಗಿ ಪರಮಾತ್ಮನನ್ನೇ ತಿಳಿದು ಧ್ಯಾನಮಾಡುವುದು, ಅವನಿಗೇ ಸರ್ವಸಮರ್ಪಣ ಮಾಡುವುದು .

(೨೦) ಅಭಯ– ದಾನಗಳಲ್ಲೆಲ್ಲ ಶ್ರೇಷ್ಠವಾದ ದುಃಖಿಗಳಿಗೆ ಅಭಯ ದಾನವನ್ನು ಅನುಷ್ಠಾನ ಮಾಡಬೇಕು. ಇದಕ್ಕೆ ಇಂದ್ರಿಯ ನಿಗ್ರಹರೂಪ 'ದಮ' ಕಾರಣ.

(೨೧) ತಾನೂ ಸಂಸಾರ ದುಃಖಕ್ಕೆ ಭಯಪಡಬಾರದು. ಇದಕ್ಕೆ ಕಾರಣ ಭಗವನ್ನಿಷ್ಠಾ ರೂಪವಾದ 'ಶಮ'.

(೨೨) ಶ್ರವಣ– ಭಾಗವತಶಾಸ್ತ್ರ ಶ್ರವಣ.

(೨೩) ಕೀರ್ತನ– ಹರಿನಾಮಕೀರ್ತನ.

(೨೪) ಸ್ಮರಣ– ಹರಿಯ ಮತ್ತು ಹರಿಭಕ್ತರ ಸ್ಮರಣ ಧ್ಯಾನ.

(೨೫) ಸೇವಾ– ಹರಿಮಂದಿರಮಾರ್ಜನಾದಿ ಸೇವೆ.

ಭೇತವ್ಯಂ ಭವದ್ಭಿರತಃ ಸರ್ವಾತ್ಮನಾ ಪರೋಪಕಾರಃ ಕರ್ತವ್ಯ ಇತಿ ಭಾವೇನಾಹ । **ಮನೋವಾಕ್ಕಾಯದಂಡಂ ಚ ತಾದೃಶಸಾಧುದರ್ಶನೇನ ಶಿಕ್ಷೇದಿತಿ** (೧೮) । **ಯಥಾಹುಃ—**

''ಶ್ರೇಯಃ ಕುರ್ವಂತಿ ಭೂತಾನಾಂ ಸಾಧವೋ ದುಸ್ತ್ಯಜಾಸುಭಿಃ ।
ದಧ್ಯಙ್ಶಿಬಿಪ್ರಭೃತಯಃ ಕೋ ವಿಕಲ್ಪೋ ಧರಾದಿಷ್ವಿ'ತಿ (೮।೧೯।೭) (೧೮)॥

❖❖❖

**ಸತ್ಯಂ ಶಿಕ್ಷೇತ್** (೧೯) । ಸಮಾಧಾನಂ ತ್ರಿವಿಧಂ । ಯಥಾವಸ್ತುಜ್ಞಾನಂ, ಯಥಾವಸ್ತುಧ್ಯಾನಂ, ಯಥಾವಸ್ತುಸಮರ್ಪಣಂ, ಚೇತಿ । ತತ್ರಾದ್ಯಂ ಸರ್ವತ್ರಾತ್ಮೇಶ್ವರಾನ್ವೀಕ್ಷಾ ಇತ್ಯತ್ರೋದಿತಂ । ಇದಾನೀಂ ದ್ವಿತೀಯಮಾಹ ॥ **ಸತ್ಯಂ ಶಿಕ್ಷೇದಿತಿ** ॥ ನನು

''ಸತ್ಯಂ ಭೂತಹಿತಂ ಪ್ರೋಕ್ತಂ ನ ಯಥಾರ್ಥಾಭಿಭಾಷಣಮಿ''ತಿ

ಪ್ರಾಣಿಹಿತವಚನಸ್ಯೈವ ಸತ್ಯಪದಾರ್ಥತಯಾ ಪ್ರಸಿದ್ಧತ್ವಾತ್ ಕುತಃ ತತ್ಪರಿತ್ಯಜನಮಿತಿ ಚೇತ್ । ಅತ್ಯುತ್ತಮಾರ್ಥತ್ವಾಭಾವಾದಿತ್ಯಾವೇದಿತತ್ವಾತ್ । ಇದಂ ಚ ಮಹಾನಿಷ್ಟನಿವರ್ತಕತಯಾ ಮಹೇಷ್ಟಸಾಧಕತಯಾ ಚ ಅತ್ಯುತ್ತಮೋಽರ್ಥಃ । ತಥಾ ಚ ವಕ್ಷ್ಯತ ಇತಿ (೧೯) ॥

❖❖❖

**ಅಭಯಂ ಶಿಕ್ಷೇತ್** (೨೦) ನನು ನಿಯಮೇಷು ದಾನಂ ಅನ್ಯತ್ರ ಪರಿಗಣಿತಂ, ತತ್ಕುತೋ ನ ಸಂಗೃಹೀತಂ ಅತ್ರ ಯಮೇಷು ನಿಯಮೇಷು ವಾ । ದಾನಂ ನಾಮ ಅರ್ಥಿನಾಂ ಯದಿಷ್ಟಂ ಧನಂ ತಸ್ಯೈವ ತೇಭ್ಯಸ್ತ್ಯಾಗ ಏವ । ನ ತು ಗುಡಮರ್ಥಯತೇ ತಿಂತ್ರಿಣೀಫಲಮಿವ, ತೇಷಾಮಿಷ್ಟಮೇಕಂ ದೀಯಮಾನಂ ಚಾನ್ಯದಿತಿ । ತಥಾವಿಧಂ ಚ ದಾನಂ ಉತ್ತಮ ಏವಾರ್ಥಃ । ಪ್ರಾಣ್ಯುಪಕಾರಸ್ಯೈವ ಭಗವತ್ಪ್ರೀತಿದ್ವಾರಾ ಮಹಾಪುರುಷಾರ್ಥಸಾಧನತಯಾ ಅವಶ್ಯಂಭಾವಸ್ಯಾ-ನಂತರಮೇವ ಉಕ್ತತ್ವಾದಿತಿ ಚೇತ್ಸತ್ಯಂ । ಇಷ್ಟಧನದಾನಸ್ಯ ಮಹಾಪುರುಷಾರ್ಥ-ಹೇತುತಯಾ ಆವಶ್ಯಕತ್ವಮಿತಿ । ತಥಾಪಿ ನ ಪ್ರಕೃತೇ ಧನದಾನಂ ವಿವಕ್ಷಿತಂ । ಕಿಂತು ಅಭಯದಾನಮೇವೇತ್ಯಾಶಯೇನಾಹ । **ಅಭಯಂ ಶಿಕ್ಷೇದಿತಿ** ॥

ನನು ಅಭಯಂ ದಾನಪದೇನ ಕಥಂ ಲಭ್ಯತೇ । ಜೀವಾನಾಮ-ಭಯದಾನಮೇವ ಮುಖ್ಯಂ ದಾನಮಿತಿ । **ಯಥಾಹುಃ—**

''ಸರ್ವೇ ವೇದಾಶ್ಚ ಯಜ್ಞಾಶ್ಚ ತಪೋದಾನಾನಿ ಚಾನಘ ।
ಜೀವಾಭಯಪ್ರದಾನಸ್ಯ ನ ಕುರ್ವೀರನ್ ಕಲಾಮಪೀ'ತಿ

ಮುಖ್ಯಾಮುಖ್ಯಯೋಶ್ಚ ಮುಖ್ಯಸ್ಯೈವಾಸತಿ ಬಾಧಕೇ ಗ್ರಾಹ್ಯತ್ವಾದಿತಿ । ತದಿದಮಭಿಸಂಧಾಯಾಹುಃ ।। ದಂಡನ್ಯಾಸಃ ಪರಂ ದಾನಮಿತಿ (೧೧।೧೯।೩೮) ।। ಅನೇನ ಸನ್ನ್ಯಾಸಗ್ರಹಣಸಮಯೇ ಭೂತೇಭ್ಯೋಽಭಯದಾನಂ ಯೋಗಾನುಶಾಸನೇಷು ಪ್ರತಿಪಾದಿತಮಪ್ಯಸ್ತೀತಿ ಸೂಚಯತಿ ಇತಿ ।

ಇಷ್ಟಂ ಧನದಾನಂ ನ ಸಂಗೃಹೀತಮಿತಿ ಚೇತ್ತಸ್ಯ ಸಂತೋಷವಿಚಾರಾವಸರೇ ವಕ್ಷ್ಯಮಾಣತ್ವಾತ್ ।

ನನು ಇತ್ಥಮೇವಾಭಯಪದಂ ನಿಯಮೇಷ್ವಪಿ ಪಠ್ಯತೇ । ತತ್ಕಿಮರ್ಥಂ । ನ ಚೋಕ್ತಾರ್ಥಂ । ಪುನರುಕ್ತೇಃ । ನಾಪ್ಯನ್ಯಾರ್ಥಂ । ತಸ್ಯಾಭಾವಾತ್ । ಭಾವೇ ವಾ ಸರ್ವತೋ ಮನಸೋಽಸಂಗಮಿತ್ಯನೇನ ವೈರಾಗ್ಯಾತ್ಮವಿಮರ್ಶನಯೋರಿವ ಪ್ರಾಕ್ಪಠಿತೇನೈವ ಗ್ರಹಣಸಂಭವಾತ್ । ನ ಚ ಪೂರ್ವತ್ರ ಸೇವಾಪದಸ್ಯೇವ ಇಜ್ಯಾಪದಸ್ಯೇವ ಚ ದ್ವಿವಾರಂ ಪಠಿತಸ್ಯಾರ್ಥಾಂತರವಿವಕ್ಷಾ ಕಿಂ ನ ಸ್ಯಾದಿತಿ ಯುಕ್ತಂ । ವೈಷಮ್ಯಾತ್ । ನ ಹ್ಯತ್ರೇವ ತತ್ರ ನಿರ್ವಿಶೇಷಿತಂ ಪದಂ ದ್ವಿವಾರಂ ಪಠಿತಮಸ್ತಿ । ಕಿಂತು ಸಮದೃಕ್ಸೇವೇತಿ । ಅಸ್ಯ ವಿಷ್ಣೋಃ ಸೇವೇತಿ ಚ, ತಥಾ ವಿಷ್ಣೋರಿಜ್ಯೇತಿ ಚ, ವಿಶೇಷಿತಮೇವೇತಿ ತತ್ರ ಶಂಕಾಯಾ ಏವಾನುದಯಾತ್ । ಯದ್ಯಪಿ ಪುನರಿಜ್ಯೇತಿ ನ ವಿಶೇಷಿತಂ ತಥಾಪಿ ವಿಷ್ಣುದೃಷ್ಟಾಂತೇನ ಭಕ್ತಸೇವೇತಿವತ್ ಭಕ್ತಪೂಜೇತಿ ಅರ್ಥಾಂತರವಿವಕ್ಷಯಾ ಪ್ರಯೋಗ ಸಂಭವಾದಿತಿ । ತತೋ ದುರ್ಘಟಮಿದಮಿತಿ ಚೇನ್ನೈವಂ ।। ಅರ್ಥಾಂತರ ವಿವಕ್ಷಯೈವ ತತ್ಪ್ರಯೋಗಾತ್ । ನ ಚ ಪುನಃಪಾಠವೈಯರ್ಥ್ಯಂ । ವೈಷಮ್ಯಾತ್ । ತತ್ರ ಹಿ ಸರ್ವತೋ ಮನಸೋಽಸಂಗೇನ ತದ್ರೂಪೇಣ ವೈರಾಗ್ಯೇಣ ವಿನಾ ಆತ್ಮವಿಮರ್ಶಾಯೋಗೇನ ಕಾರಣಪದೇನೋಭಯಗ್ರಹಣಮಸಂಗಪದೋದಿತಯಮತ್ವಮುಭಯೋರಪ್ಯಸ್ತೀತಿ ಸೂಚನಾರ್ಥಂ । ನ ಚಾತ್ರ ದಾನಪದೋದಿತನಿಯಮತ್ವಮುಭಯೋರಸ್ತಿ । ಯೇನ ತತ್ಸೂಚನಾಯ ದಾನಪದೇನೋಭಯಗ್ರಹಣಂ ಯುಜ್ಯೇತ । ನ ಚೈವಮಸ್ತಿ । ಏಕಸ್ಯ ಯಮೇಷು ದ್ವಿತೀಯಸ್ಯ ಚ ನಿಯಮೇಷು ಪ್ರವೇಶಾತ್ । ಇಯಾಂಸ್ತು ವಿಶೇಷಃ । ಯತ್ಪ್ರಥಮಸ್ಯಾಭಯತ್ವೇನೈವ ನ ತು ದಾನಕರ್ಮತಯಾ ನಿವೇಶಃ । ದ್ವಿತೀಯಸ್ಯ ತು ದಾನಕರ್ಮತ್ವೇನೈವೇತಿ । ತತಃ ಯಮವಿಶೇಷತ್ವೇನ ವಾ ನಿಯಮವಿಶೇಷತ್ವೇನ ವಾ ದಾನಕರ್ಮತ್ವೇನೈವ ಏಕೇನ ಪದೇನ ಉಭಯೋರ್ಗ್ರಹಣಾ-

ಸಂಭವೇನ ಪೃಥಗೇವಾರ್ಥಾಂತರಂ ವಕ್ತವ್ಯಮಿತಿ ಪುನಃಪಾಠೋ ಯುಕ್ತ ಏವೇತಿ ॥ (೨೦)

❖❖❖

ನನ್ವೇಕಸ್ಯ ದಾನಕರ್ಮಭೂತಸ್ಯ ಅಭಯಸ್ಯ ಯೋಗಾನುಶಾಸನೋದಿತಾ ಭಯದಾನಸಮಾನ ಯೋಗಕ್ಷೇಮತಯಾನ್ಯತ್ರ ದಾನಪದೋದಿತನಿಯಮವಿಶೇಷ ತಯಾ ಚ ಅತ್ರ ಗ್ರಹಣಾವಶ್ಯಂಭಾವೇಽಪಿ ದ್ವಿತೀಯಸ್ಯಾನ್ಯತ್ರ ಯಮೇಷು ಅಪರಿಪಠಿತತಯಾ ಅತ್ರ ಯಮೇಷ್ವೇವ ಗ್ರಹಣೇ ಕಿಂ ನಿಮಿತ್ತಮಿತಿ ಚೇತ್ । ಮಾ ತ್ವರಿಷ್ಠಾಃ । ನನ್ವೇತದುಭಯಂ ಭಾಗವತಧರ್ಮೇಷು ಉಭಯತ್ರಾಪಿ ನ ದೃಶ್ಯತೇ ಅತೋಽತ್ರ ಪರಿಗಣನಂ ಉಭಯಸ್ಯಾಪಿ ವ್ಯರ್ಥಮೇವೇತ್ಯತ ಉಭಯಮಪಿ ತತ್ರ ಪರಿಗೃಹೀತಂ ಅತೋ ನೋಕ್ತದೋಷ ಇತ್ಯಾಶಯೇನಾಹ ॥ **ಶಮದಮಾವಪಿ ಶಿಕ್ಷೇದಿತಿ** (೨೧) ॥ ನನು ಕಥಂ ಶಮದಮಪದಾಭ್ಯಾಂ ಯಮನಿಯಮಾಂತರ್ಗತಯೋರುಭಯೋಃ (ಪರಿಗ್ರಹಃ) । ಶಾಂತಿಃ ಸಂಯಮಶ್ಚೇತಿ ಹಿ ಪದಾರ್ಥೌ । ತತ್ರ ಕಸ್ಯ ಶಾಂತಿಃ ಕಸ್ಯ ವಾ ಸಂಯಮ ಇತಿ ನ ಜ್ಞಾಯತೇ । ಇತ್ಯತೋ ಯಥಾವದ್ವ್ಯಾಚಷ್ಟೇ ।

**ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯಸಂಯಮ ಇತಿ**

(೧೧।೧೯।೩೭) ।

ತತ್ರ ಶಮಪದಾರ್ಥಕಥನಂ ನಿಷ್ಠೇತಿ ॥ ಯೋಗ್ಯತಯಾ ಮಯೀತಿ ಲಭ್ಯತೇ । ದಮಪದಾರ್ಥಃ ಸಂಯಮ ಇತಿ । ಬುದ್ಧೇರಿಂದ್ರಿಯೇತಿ ಚ ಪದಾಭ್ಯಾಂ ಕಸ್ಯೇತಿ ಶಂಕಾಯಾಃ ಪರಿಹಾರಃ ।

ನನು ಅಸ್ತ್ವೇವಂ ಶಮದಮಪದಾರ್ಥೌ ಅಭಯಪದಾಭ್ಯಾಮೇತೌ (ಕಥಂ) ಲಭ್ಯೇತೇ ಇತಿ ಚೇದುಚ್ಯತೇ । ನಾತ್ರ ಪದಾರ್ಥಕಥನೇನ ತದ್ವ್ಯಾಖ್ಯಾತಂ ಕಿನ್ನಾಮ ಅಭಯಪದಾಭ್ಯಾಂ ಸಾಮಾನ್ಯಾಭ್ಯಾಂ ಕಥಂ ವಿಶೇಷಾರ್ಥಾವಬೋಧ ಇತಿ ಗವೇಷಣಾಯಾಂ ಶಮದಮಾವಿತ್ಯುಕ್ತಂ । ತಾವಪಿ ತಾದೃಶಾವೇವ ಜಾತೌ । ಇಯಾಂಸ್ತು ವಿಶೇಷಃ । ಯತ್ಪೂರ್ವತ್ರ ತಾಭ್ಯಾಮುಭಾಭ್ಯಾಮಪಿ ಭಯಾಭಾವತ್ವೇನ ಏಕರೂಪೇಣೈವ ಉಭಯವ್ಯಕ್ತಿಬೋಧೋಽತ್ರ ತು ಶಾಂತಿತ್ವೇನ ಸಂಯಮತ್ವೇನ ಚ ಇತಿ ಪ್ರಕಾರದ್ವಯೇನ । ತತೋಽತ್ರ ವ್ಯಕ್ತಿದ್ವಯಂ ಪ್ರಕಾರದ್ವಯೇನ ತಾಭ್ಯಾಂ ಬೋಧ್ಯಮಿತ್ಯೇವ । ತತ್ರ ಸಂಬಂಧ್ಯಾಕಾಂಕ್ಷಾಯಾಂ ಸೋಽಪ್ಯುಭಯತ್ರ ವಿಶೇಷತೋ ನಿರೂಪಿತಃ । ಅನಯೋಸ್ತಾಭ್ಯಾಮಭೇದಸ್ತು ಸ್ಫು

ಟಮೇವ ಬಾಧಿತಃ । ನ ಹಿ ಭಗವನಿಷ್ಠಬುದ್ಧಿತ್ವಂ ವಾ ಸನ್ನಿಯಮಿತೇಂದ್ರಿ- ಯತ್ವಂ ವಾ ಅಭಯಂ ವಕ್ತೀತಿ ಪ್ರತೀಯತೇ। ತತೋಽಸತ್ಯಪ್ಯಭೇದೇ ವ್ಯಾಖ್ಯಾನಭಾವೋಽನುಪಪದ್ಯಮಾನಃ ಸ್ವೋಪಪಾದಕಂ ಕಿಮಪಿ ಗಮಯತ್ಯೇವ। ತಚ್ಚ ಕಾರ್ಯಕಾರಣಭಾವೋ ಗಮ್ಯಗಮಕಭಾವೋ ವಾ ಭವೇತ್। ತತ್ರಾಪಿ ನಿರ್ಧಾರಣಾಯಾಂ 'ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾದಿ'ತ್ಯಾದೌ ಅಜಿತೇಂದ್ರಿಯತ್ವಮುಪಲಕ್ಷ್ಯತೇ। ಉಪಸಂಹಾರೇ ಅಜಿತೇಂದ್ರಿಯಸ್ಯೇತ್ಯುಕ್ತೇಃ। ತತ್ರಾತ್ಮರತೇರಿತ್ಯುಕ್ತ್ಯಾ ಪ್ರಮಾದೋ ವ್ಯಾಖ್ಯಾತಃ। ತಥಾಚ ಗಾರ್ಹಸ್ಥ್ಯಸ್ಯ ಭಯಹೇತುತ್ವಾತ್ತನ್ನಿವೃತ್ತಯೇ ಪ್ರವ್ರಜನಮಿಚ್ಛತೇ ಪ್ರಿಯವ್ರತಾಯೇದಮುಚ್ಯತೇ। ನಾತ್ರ ಗೃಹಾಶ್ರಮೋ ಭಯಹೇತುಃ। ಯೇನ ಪ್ರವ್ರಜನೇನ ತದ್ವಿರೋಧಿನಾ ತನ್ನಿವೃತ್ತ್ಯಾ ತತ್ಕಾರ್ಯಂ ಭಯಮಪಿ ನಿವರ್ತೇತ। ಕಿಂ ತ್ವಜಿತೇಂದ್ರಿಯತ್ವಂ ಭಗವದ್ವಿಮುಖತ್ವಂ ಚೇತ್ಯುಭಯಮೇವ। ಅತಸ್ತನ್ನಿವರ್ತಕ ಮೇವ ಮೃಗ್ಯಂ। ತಚ್ಚ ಜಿತೇಂದ್ರಿಯತ್ವಂ ಭಗವನ್ನಿಷ್ಟಬುದ್ಧಿತ್ವಂ ಚೇತ್ಯುಭಯಮೇವ। ತಚ್ಚ ತದ್ವಿರೋಧೀತಿ ಕಾರಣನಿವೃತ್ತೌ ಕಾರ್ಯಸ್ಯಾಪಿ ನಿವೃತ್ತಿರಿತಿ ಕಿಂ ಪ್ರವ್ರಜನೇನೇತಿ ಏವಂ ವಿಮರ್ಶನೇ ಕೃತೇ ಭಗವನ್ನಿಷ್ಟ- ಬುದ್ಧಿತ್ವಜಿತೇಂದ್ರಿಯತ್ವಯೋರೇವ ಅಭಯಂ ಪ್ರತಿ ಹೇತುತೇತಿ ಗಮ್ಯತೇ। ತತ್ರಾಪಿ ವಿಚಾರೇಣ ತಚ್ಚಾಭಯಂ ದೇಯಮಾಸ್ಥೇಯಮಿತಿ ದ್ವಿವಿಧಮಪಿ ಪ್ರಾಗೇವಾವೇದಿತಂ। ತತ್ರ ದ್ವಿತೀಯಂ ಯಮಪರಿಗಣಿತಂ ಶಮಪ್ರಾಪ್ಯಂ। ಆದ್ಯಂ ದೇಯಂ ತು ದಮೇನೈವ ಇತ್ಯಪಿ ವಿಶೇಷೋಽವಗಮ್ಯತೇ। ತತ್ರಾಪಿ ವಿಚಾರಣಾಯಾಂ ಯತ್ರ ಸಂಸಾರಾದ್ಭಯಾಭಾವಃ ಸ್ವಾಭಾವಿಕಸ್ತತ್ರ ಶಮೋ ಯತ್ರಾಯಂ ತತ್ರ ಸ ಇತಿ। ಯಥಾ ಯಸ್ಮಾಲ್ಲೋಕಸ್ಯ ಭಯಂ ನಾಸ್ತಿ ಸ ಜಿತೇಂದ್ರಿಯಃ ಯಶ್ಚೇದೃಶಃ ತಸ್ಮಾದ್ಭಯಂ ಲೋಕಸ್ಯ ನಾಸ್ತ್ಯೇವೇತ್ಯವ್ಯಭಿ- ಚರಿತಾಭ್ಯಾಂ ಅನ್ವಯವ್ಯತಿ ರೇಕಾಭ್ಯಾಂ ಪರಸ್ಪರಂ ಗಮ್ಯಗಮಕಭಾವೋಽಪೀತಿ ॥

❖❖❖

**ಧರ್ಮಂ ತು ಸಾಕ್ಷಾದ್ ಭಗವತ್ ಪ್ರಣೀತಂ**
**ನ ವೈ ವಿದು ಋಷಯೋ ನಾಪಿ ದೇವಾಃ ।**
**ನ ಸಿದ್ಧಮುಖ್ಯಾ ಅಸುರಾ ಮನುಷ್ಯಾಃ**
**ಕುತೋ ನು ವಿದ್ಯಾಧರ ಚಾರಣಾದಯಃ ॥** (ಭಾ.೬.೩.೧೯)

ಅಜಾಮಿಳನನ್ನು ಒಯ್ಯಲು ಬಂದು ವಿಫಲರಾದ ದೂತರಿಗೆ ಯಮ ರಾಜನು ಹೇಳುತ್ತಾನೆ—

**ಅಜಾಮಿಳನನ್ನು ವಿಷ್ಣುದೂತರು ಏಕೆ ರಕ್ಷಿಸಿದರೆಂದರೆ ಅವನು ಪಾಪಿಯಲ್ಲ. ಪುಣ್ಯವಂತ. ಪುಣ್ಯ ಯಾವುದು ಪಾಪ ಯಾವುದೆಂದು ವ್ಯವಸ್ಥೆ ಮಾಡಿದವನು ಭಗವಂತನೆ. ಅದನ್ನು ಋಷಿಗಳು ದೇವತೆಗಳು ಸಿದ್ಧರು. ಅಸುರರು ತಿಳಿಯರು. ವಿದ್ಯಾಧರಚಾರಣರು ಮುಂತಾದವರೂ ಕೂಡ ಅರಿಯರೆಂದಮೇಲೆ ಮನುಷ್ಯರು ಎಂತು ಅರಿಯುವರು?**

(೧) ಭಗವಂತನಿಂದ ಕೇಳಿ ಕಲಿತು ಸನಕಾದಿಗಳು ಇತರರಿಗೆ ಧರ್ಮವನ್ನು ಉಪದೇಶಿಸಿದ್ದಾರೆ.

ಹೀಗೆ ಜ್ಞಾನಿಗಳು ತಮ್ಮ ಯೋಗ್ಯತಾನುಸಾರ ತಿಳಿದರು. ಅದರಿಂದ ಪೂರ್ಣವಾಗಿ ತಿಳಿದವರು ಯಾರೂ ಇಲ್ಲ. ಋಷಿಗಳು ದೇವತೆಗಳು ಮುಂತಾದವರು ಯಾರೂ ಪೂರ್ಣವಾಗಿ ತಿಳಿದಿಲ್ಲ. ಇನ್ನು ಮನುಷ್ಯರ ಬಗ್ಗೆ ಏನು ಹೇಳಬೇಕು?

ಭಗವಂತನು ಭವನಾಶಕ್ಕಾಗಿ ಹೇಳಿದ್ದು ಭಾಗವತಧರ್ಮ.

ಯೇ ವೈ ಭಗವತಾ ಪ್ರೋಕ್ತಾ ಉಪಾಯಾ ಹ್ಯಾತ್ಮಲಬ್ಧಯೇ ।
ಅಂಜಃ ಪುಂಸಾಮವಿದುಷಾಂ ವಿದ್ಧಿ ಭಾಗವತಾನ್ ಹಿ ತಾನ್ ॥
(ಭಾ.೧೧.೨.೩೪)

ಯೈಃ ಪ್ರಸನ್ನಃ ಪ್ರಪನ್ನಾಯ ದಾಸ್ಯತ್ಯಾತ್ಮಾನಮಪ್ಯಜಃ ॥ (೧೧.೨.೩೧)

**'ಅಜ್ಞಾನಿಗಳಿಗೆ ಜ್ಞಾನದ್ವಾರಾ ಚೆನ್ನಾಗಿ ಪರಮಾತ್ಮ ಪ್ರಾಪ್ತಿಯಾಗುವು ದಕ್ಕಾಗಿ ಭಗವಾನ್ ಋಷಭದೇವನು ಏನು ಸಾಧನಗಳನ್ನು ಉಪದೇಶಿಸಿರು ವನೋ ಅದನ್ನೇ ಭಾಗವತಧರ್ಮಗಳೆಂದು ತಿಳಿ' ಎಂದು ಕವಿಮಹಾಮುನಿಯು ವಿದೇಹರಾಜನಿಗೆ ಹೇಳಿದರು.**

'ಭಗವಂತನು ಭಾಗವತಧರ್ಮಗಳಿಗೆ ಓಲಿದನೆಂದರೆ ಶರಣಾದ ಭಕ್ತರಿಗೆ ತನ್ನನ್ನೇ ಕೊಡಬಲ್ಲ'–ಇಂಥ ಧರ್ಮಗಳನ್ನು ನಮಗೆ ಹೇಳಿರಿ ಎಂದು ವಿದೇಹರಾಜನು ಕವಿಮುನಿಯಲ್ಲಿ ಕೇಳಿಕೊಂಡಿದ್ದ.

ಇಂಥ ಭಾಗವತಧರ್ಮಗಳನ್ನೇ 'ನ ವೈ ವಿದುಃ' ಋಷಿಗಳು ದೇವತೆಗಳು ಮುಂತಾದವರು ಯಾರೂ ತಿಳಿಯರು, ಏಕೆಂದರೆ ಅವುಗಳನ್ನು ಉಪದೇಶಿಸುವ ಗುರು ದುರ್ಲಭ' ಎನ್ನುವುದು ಯಮದೇವರ ಅಭಿಪ್ರಾಯ.

'ಧರ್ಮಂ ತು ಸಾಕ್ಷಾತ್' ಎಂಬಲ್ಲಿ 'ತು' ಶಬ್ದದಿಂದ ಒಂದು ವಿಶೇಷವನ್ನು ಯಮದೇವರು ಹೇಳುತ್ತಿದ್ದಾರೆ. ಅದೇನೆಂದರೆ ಧರ್ಮೋಪದೇಶಕನು ದುರ್ಲಭನೇ ಆದರೂ ಇಲ್ಲವೆ ಇಲ್ಲ ಎನ್ನುವಂತಿಲ್ಲ. ಪರಂಪರೆಯಲ್ಲಿ ಯಥಾಯೋಗ್ಯವಾಗಿ ತಿಳಿದ ಭಾಗವತೋತ್ತಮ ಗುರುಗಳು ಇರುವರು. ಅವರ ಪರಂಪರೆಯಿಂದ ಸುಜನರು ಭಾಗವತ ಧರ್ಮವನ್ನು ತಿಳಿಯಲು ಶಕ್ಯವಿದೆ, ಭಯವಿಲ್ಲ ಎಂದು.

ಪರಂಪರೆಯಲ್ಲಿ ಬಂದ ಭಾಗವತೋತ್ತಮರು ಉದಾಹರಣೆಗೆ ಇವರು—

ಸ್ವಯಂಭೂರ್ನಾರದಃ ಶಂಭುಃ ಕುಮಾರಃ ಕಪಿಲೋ ಮನುಃ ।
ಪ್ರಹ್ಲಾದೋ ಜನಕೋ ಭೀಷ್ಮೋ ಬಲಿರ್ವೈಯಾಸಕಿರ್ವಯಂ ॥
(ಭಾ.೬.೩.೨೦)

ದ್ವಾದಶೈತೇ ವಿಜಾನೀಮೋ ಧರ್ಮಂ ಭಾಗವತಂ ಭಟಾಃ ।
ಗುಹ್ಯಂ ವಿಶುದ್ಧಂ ದುರ್ಬೋಧಂ ಯಂ ಜ್ಞಾತ್ವಾಮೃತಮಶ್ನುತೇ ॥
(ಭಾ.೬.೩.೨೧)

ಬ್ರಹ್ಮದೇವರು ನಾರದ, ಶಂಭು, ಸನತ್ಕುಮಾರ, ಕಪಿಲಮುನಿ ಸ್ವಾಯಂಭುವಮನು, ಪ್ರಹ್ಲಾದ, ಜನಕ, ಭೀಷ್ಮ ಬಲಿ ಶುಕ ಮತ್ತು ನಾನು ಯಮರಾಜ ಈ ಹನ್ನೆರಡು ಜನರು ಭಾಗವತ ಧರ್ಮವನ್ನು ಪೂರ್ಣ ಅಲ್ಲದಿದ್ದರೂ ಸರಿಯಾಗಿ ತಿಳಿದಿರುವೆವು'—ಎಂದು ಯಮದೇವರು ಹೇಳುತ್ತಾರೆ.

'ದೂತರೆ, ಈ ಭಾಗವತಧರ್ಮವು ಗೋಪ್ಯವಾಗಿದೆ, ಪವಿತ್ರವಾಗಿದೆ. ಅದನ್ನು ಅನುಷ್ಠಾನ ಮಾಡುವವನು ಮುಕ್ತನಾಗುತ್ತಾನೆ' ಎಂದೂ ಅವರು ಹೇಳುತ್ತಾರೆ.

**ಭಾಗವತ ಧರ್ಮಗಳು ಮೂವತ್ತು ಅಂದರೆ ಲಕ್ಷಣಗಳು ಮೂವತ್ತು**

'ಧರ್ಮಂ ತು ಸಾಕ್ಷಾತ್' ಎಂಬಲ್ಲಿ 'ತು' ಎಂದು ವಿಶೇಷ ಒಂದನ್ನು ಹೇಳುತ್ತಿದ್ದಾರೆ— 'ಭಗವಂತನು ಮೋಕ್ಷಸಾಧನವೆಂದು ಹೇಳಿದ 'ಭಾಗವತ ಧರ್ಮವು ಎಷ್ಟು ವಿಧ?' ಎಂದರೆ, 'ಮೂವತ್ತು ವಿಧ' ಎಂದು.

ಈ ಮೂವತ್ತು ವಿಧಗಳು ಪ್ರಮಾಣಸಿದ್ಧವಾಗಿವೆ ಎಂದು 'ವೈ'ಶಬ್ದದಿಂದ

ಹೇಳುತ್ತಾರೆ. ಸಪ್ತಮಸ್ಕಂಧದಲ್ಲಿ ನಾರದ ಯುಧಿಷ್ಠಿರ ಸಂವಾದದಲ್ಲಿ ಈ ವಿಷಯಗಳು ಸ್ಪಷ್ಟವಾಗಿ ಬಂದಿವೆ—(ಭಾ.೭.೧೨.೧೨)

'ಭಗವನ್ ಶ್ರೋತುಮಿಚ್ಛಾಮಿ ನೃಣಾಂ ಧರ್ಮಂ ಸನಾತನಂ ।
ವರ್ಣಾಶ್ರಮಾಚಾರಯುತಂ ಯತ್ಪುಮಾನ್ ವಿಂದತೇ ಪರಂ ।
ಭವಾನ್ ಪ್ರಜಾಪತೇಃ ಸಾಕ್ಷಾದಾತ್ಮಜಃ ಪರಮೇಷ್ಠಿನಃ ।
ಸುತಾನಾಂ ಸಮ್ಮತೋ ಬ್ರಹ್ಮಂಸ್ತಪೋ ಜ್ಞಾನ ಸಮಾಧಿಭಿಃ ।
ನಾರಾಯಣಪರಾ ವಿಪ್ರಾ ಧರ್ಮಗುಹ್ಯಂ ಯಥಾ ವಿದುಃ ।
ಕರುಣಾಃ ಸಾಧವಃ ಶಾಂತಾಸ್ತ್ವದ್ವಿಧಾ ನ ತಥಾ ಪರೇ ॥

ಯುಧಿಷ್ಠಿರನು ನುಡಿದ—'ಪೂಜ್ಯರೆ, ಜನರಿಗೆ ಪರಮಾತ್ಮ ಪ್ರಾಪ್ತಿ ಸಾಧನವು ವರ್ಣಾಶ್ರಮೋಚಿತ ಸ್ನಾನಾದಿ ಶೌಚಾಚಾರಯುಕ್ತವಾದ ಯಜ್ಞ ಅಧ್ಯಯನ ಮುಂತಾದ ಸನಾತನ ಧರ್ಮ. ಅದನ್ನು ತಮ್ಮಿಂದ ಕೇಳಲು ಬಯಸುತ್ತೇವೆ.

'ಮುನಿಯೆ, ತಾವು ಸಾಕ್ಷಾತ್ ಬ್ರಹ್ಮಪುತ್ರರು. ತಪಸ್ಸು ಜ್ಞಾನ ಧ್ಯಾನಗಳಿಂದಾಗಿ ಬ್ರಹ್ಮಪುತ್ರ ಸನಕಾದಿಗಳಿಗೂ ಪೂಜ್ಯರು.

'ನಾರಾಯಣಭಕ್ತರಾದ ವಿಪ್ರರು. ರಾಗದ್ವೇಷಗಳಿಲ್ಲದವರು ಧರ್ಮ ನಿಷ್ಠರು. ಕರುಣೆಯಿಂದ ಧರ್ಮೋಪದೇಶ ನೀಡುವವರು ನೀವು ಧರ್ಮ ರಹಸ್ಯವನ್ನು ತಿಳಿದಂತೆ ನಿಮ್ಮಂಥವರು ಇತರರು ತಿಳಿಯರು.

'ನತ್ವಾ ಭಗವತೇಽಜಾಯ ಲೋಕಾನಾಂ ಧರ್ಮಹೇತವೇ ।
ವಕ್ಷ್ಯೇ ಸನಾತನಂ ಧರ್ಮಂ ನಾರಾಯಣ ಮುಖಾಚ್ಛ್ರುತಂ ॥
ಯೋಽವತೀರ್ಯಾತ್ಮನೋಽಂಶೇನ ದಾಕ್ಷಾಯಣ್ಯಾಂ ತು ಧರ್ಮತಃ ।
ಲೋಕಾನಾಂ ಸ್ವಸ್ತಯೇಽಧ್ಯಾಸ್ತೇ ತಪೋ ಬದರಿಕಾಶ್ರಮೇ ।
ಧರ್ಮಮೂಲಂ ಹಿ ಭಗವಾನ್ ಸರ್ವವೇದಮಯೋ ಹರಿಃ ।
ಸ್ಮೃತಿಶ್ಚ ತದ್ವಿದಾಂ ರಾಜನ್ ಯೇನ ಚಾತ್ಮಾ ಪ್ರಸೀದತಿ ॥

ನಾರದರು ನುಡಿದರು—'ಲೋಕಗಳ ಧರ್ಮರಕ್ಷಕನಾದ ಪೂಜ್ಯ ನಾರಾಯಣ ಮುನಿಗೂ ತಂದೆಯಾದ ಬ್ರಹ್ಮದೇವನಿಗೂ ನಮಿಸಿ ನಾರಾಯಣ ಮುಖದಿಂದ ನಾನು ಕೇಳಿರುವ ಸನಾತನಧರ್ಮವನ್ನು ಹೇಳುವೆನು.

'ನಾರಾಯಣನು ತನ್ನ ಮೂಲರೂಪಿ ಪರಮಾತ್ಮನ ಅಂಶದಿಂದ ದಕ್ಷಕುಮಾರಿ ಮೂರ್ತಿದೇವಿಯಲ್ಲಿ ಯಮಧರ್ಮನಿಂದ ಅವತರಿಸಿ ಲೋಕ ಕ್ಷೇಮಕ್ಕಾಗಿ ಮುನಿಗಳಿಗೆ ತಪಸ್ಸಿನ ಶಿಕ್ಷಣ ನೀಡಲು ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದಾನೆ.

**ಭಾಗವತಧರ್ಮವಿಷಯದಲ್ಲಿ ಲಕ್ಷಣ ಮತ್ತು ಪ್ರಮಾಣಗಳು**

ಧರ್ಮದ ವಿಷಯದಲ್ಲಿ ಮೂಲ ಆಧಾರ ಪ್ರಮಾಣವೆಂದರೆ ಸರ್ವವೇದೋಪದೇಶಕನಾದ ಶ್ರೀಹರಿ. ಮತ್ತು ವೇದವನ್ನೂ ಹರಿಯನ್ನೂ ಬಲ್ಲ ಮುನಿಗಳ ಉಪದೇಶಗಳು ಧರ್ಮವನ್ನು ತಿಳಿಸಿಕೊಡುವ ಪ್ರಮಾಣಗಳು.

**ಯಾವುದರ ಅನುಷ್ಠಾನದಿಂದ ಪರಮಾತ್ಮ ಪ್ರೀತನಾಗುವನೊ ಪ್ರೀತನಾಗಿ ಮೋಕ್ಷವನ್ನು ಕೊಡುವನೋ ಅದು ಭಾಗವತಧರ್ಮ ಎಂದು ಧರ್ಮದಲಕ್ಷಣ.**

**ಸಪ್ತಮಸ್ಕಂಧದಲ್ಲಿ ನಾರದರಿಂದ ಮೂವತ್ತು ಭಾಗವತಧರ್ಮಗಳ ನಿರೂಪಣೆ**

'ಯಾವುದರ ಅನುಷ್ಠಾನದಿಂದ ಶ್ರೀಹರಿ ಪ್ರೀತನಾಗಿ ಪುರುಷಾರ್ಥವನ್ನು ನೀಡುವನೋ ಅದು ನೀನು ಕೇಳಿದ ಪರಮಗೋಪ್ಯವಾದ ಭಾಗವತ ಧರ್ಮವಾಗಿದೆ. ಶ್ರುತಿಸ್ಮೃತಿಗಳಿಂದ ಅದನ್ನು ತಿಳಿಯಬೇಕು. ಇನ್ನು ಧರ್ಮವಿಭಾಗವೂ ಹೀಗೆ' ಎಂದು ನಾರದರು ಹೇಳುತ್ತಾರೆ—

ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಜ್ಯಾ ಶಮೋ ದಮಃ ।
ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸ್ವಾಧ್ಯಾಯ ಆರ್ಜವಂ ।
ಸಂತೋಷಃ ಸಮದೃಕ್ಸೇವಾ ಗ್ರಾಮ್ಯೇಹೋಪರಮಃ ಶನ್ಯೈಃ ।
ನೃಣಾಂ ವಿಪರ್ಯಯೇಹೇಕ್ಷಾ ಮೌನಮಾತ್ಮವಿಮರ್ಶನಂ ।
ಅನ್ನಾದ್ಯಾದೇಃ ಸಂವಿಭಾಗೋ ಭೂತೇಭ್ಯಶ್ಚ ಯಥಾರ್ಹತಃ ।
ತೇಷ್ವಾತ್ಮ ದೇವತಾಬುದ್ಧಿಃ ಸುತರಾಂ ನೃಷು ಪಾಂಡವ ॥
ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂ ಗತೇಃ ।
ಸೇವೇಜ್ಯಾವನತಿಃ ಸಖ್ಯಂ ದಾಸ್ಯಮಾತ್ಮ ಸಮರ್ಪಣಂ ॥
ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ ।
ತ್ರಿಂಶಲ್ಲಕ್ಷಣ ಸಂಯುಕ್ತಃ ಸರ್ವಾತ್ಮಾ ಯೇನ ತುಷ್ಯತಿ ॥

**ಸತ್ಯ ದಯಾ ತಪಸ್ಸು ಶೌಚ ತಿತಿಕ್ಷಾ ಯಜ್ಞ ಶಮ ದಮ ಅಹಿಂಸಾ**

**ಬ್ರಹ್ಮಚರ್ಯ, ತ್ಯಾಗ ಸ್ವಾಧ್ಯಾಯ ಆರ್ಜವ ಸಂತೋಷ ಸಮದೃಕ್ಸೇವಾ, ಗ್ರಾಮ್ಯೇಹೋಪರಮ, ಇತರ ಮನುಷ್ಯರ ಸಾಧನ ವಿಪರ್ಯಯದ ಜ್ಞಾನ, ಮೌನ, ಆತ್ಮವಿಮರ್ಶನ, ಎಲ್ಲ ಪ್ರಾಣಿಗಳಿಗೆ ಅನ್ನ ನೀಡುವುದು, ಮನುಷ್ಯರಲ್ಲಿ ವಿಶೇಷವಾಗಿ ಶ್ರೀಶನ ಅನುಸಂಧಾನ, ಶ್ರವಣ, ಕೀರ್ತನ, ಸ್ಮರಣ, ಜ್ಞಾನಿಗಳ ಇಷ್ಟದಂತೆ ಸೇವೆಮಾಡುವುದು, ಇಜ್ಯಾ, ಅವನತಿ, ಸಖ್ಯ, ದಾಸ್ಯ, ಆತ್ಮಸಮಾರ್ಪಣ—ಹೀಗೆ ೩೦ ಧರ್ಮಗಳು ಮಾನವರಿಗೆ ಪರಮಧರ್ಮಗಳು ಇವುಗಳ ಅನುಷ್ಠಾನ ದಿಂದ ಸರ್ವಾಂತರ್ಯಾಮಿ ಸುಪ್ರೀತನಾಗುವನು' (ಭಾ.೭.೧೨,೮-೧೨)**

'ಇಜ್ಯಾ' ತತ್ರ ಮಖೋಽತ್ರಾರ್ಚನಮಿತಿ ವಿವೇಕಃ' ಎಂದು ಸತ್ಯಧರ್ಮರು ಹೇಳುವಂತೆ 'ಇಜ್ಯಾ' ಎಂದರೆ ಯಜ್ಞ–ಪೂಜೆ ಎರಡೂ ಸೇರಿ ಒಟ್ಟು ಮೂವತ್ತು ಧರ್ಮಗಳು ಈ 'ಯಜ್ಞಪೂಜೆ'ಗಳು ವಿಷ್ಣುಪೂಜೆ ಭಕ್ತಪೂಜೆ ಗಳೆಂದು ಅವಧೂತರು ಹೇಳುತ್ತಾರೆ.

ಇಲ್ಲಿ ಯುಧಿಷ್ಠಿರನು 'ವರ್ಣಾಶ್ರಮಾಚಾರಯುತಂ ನೃಣಾಂ ಧರ್ಮಂ ಶ್ರೋತುಮಿಚ್ಛಾಮಿ' ಎಂದು ಕೇಳಿಕೊಂಡಿದ್ದಕ್ಕೆ 'ಸರ್ವೇಷಾಂ ನೃಣಾಂ ಅಯಂ ಪರೋ ಧರ್ಮಃ' ಎಂದು ನಾರದರು ಉತ್ತರ ಹೇಳುತ್ತಾರೆ. 'ಯತ್ ಪುಮಾನ್ ವಿಂದತೇ ಪರಂ' ಎಂದು ಕೇಳಿದ್ದಕ್ಕೆ 'ಸರ್ವಾತ್ಮಾ ಯೇನ ತುಷ್ಯತಿ' ಎಂದು ಉತ್ತರ ನೀಡುತ್ತಾರೆ.

(೨) 'ನೃಣಾಂ ಅಯಂ ಪರೋ ಧರ್ಮಃ' ಎಂಬುದಕ್ಕೆ ಇನ್ನೊಂದು ಅಭಿಪ್ರಾಯವೂ ಇದೆ—'ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮಃ' ಎಂದು ಆದಿಯಲ್ಲಿ 'ಪರಮಧರ್ಮ'ವೇ ಮುಖ್ಯವಾಗಿ ಅನುಷ್ಠಾನಯೋಗ್ಯವೆಂದು ಹೇಳಿದ್ದರೂ ಇಲ್ಲಿ ಸಪ್ತಮಸ್ಕಂಧದಲ್ಲಿ ಮಾತ್ರ 'ನೃಣಾಂ ಧರ್ಮಂ ಸನಾತನಂ' ಎಂದು 'ಸನಾತನ ಭಾಗವತ ಧರ್ಮ'ದ ಬಗ್ಗೆ ವಿವರಣೆ ಬರುತ್ತದೆ, ಏಕೆ ಹೀಗೆ? ಎಂದರೆ, ಇಲ್ಲಿ ಹೇಳಿದ 'ಸನಾತನ ಭಾಗವತ ಧರ್ಮ'ವೇ ಆದಿಯಲ್ಲಿ ಹೇಳಿದ 'ಪರಮಧರ್ಮ' ಹೊರತು ಬೇರೆಯಲ್ಲ, ಅಂಥ ಪರಮಧರ್ಮ ಇನ್ನೊಂದಿಲ್ಲ ಎಂದು ನಾರದರು ಹೇಳುತ್ತಾರೆ.

(೩) ಭಾಗವತ ಧರ್ಮವೇ ಪರಮಧರ್ಮ ಎಂಬುದು ಮುಂದೆ

ಏಕಾದಶಸ್ಕಂಧದಲ್ಲಿ ಸ್ಪಷ್ಟವೆ ಇದೆ. ಅಲ್ಲಿ 'ಧರ್ಮಾನ್ ಭಾಗವತಾನ್ ಬ್ರೂತ' (ಭಾ.೧೧.೨.೩೧) ಎಂದು ವಿದೇಹರಾಜ ಕೇಳಿದ್ದಕ್ಕೆ 'ಜಾಯಂತೇಯ ಕವಿ ಮಹಾಮುನಿ 'ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್' ಎಂದು ವಿಸ್ತಾರವಾಗಿ ಧರ್ಮನಿರೂಪಣ ಮಾಡುತ್ತಾರೆ.

ಈ ವಿಸ್ತಾರವಾದ ಧರ್ಮಪ್ರತಿಪಾದನೆಯನ್ನೇ ಶ್ರೀವ್ಯಾಸರು ಸಮಾಧಿ ಭಾಷೆಯಿಂದ ಮಾಡಬೇಕೆಂದು ನಾರದರು ಪ್ರಥಮಸ್ಕಂಧದಲ್ಲಿ (ಭಾ.೧.೫.೧೩) ಕೇಳಿಕೊಳ್ಳುತ್ತಾರೆ.

ನಾರದರು ಕೇಳಿಕೊಂಡಂತೆ ಶ್ರೀವ್ಯಾಸರು ವಿಸ್ತಾರವಾಗಿ ಹೇಳಿದ ಧರ್ಮವೆ 'ಧರ್ಮಃ ಪ್ರೋಜ್ಝಿತಕೈತವಃ' ಎಂಬಲ್ಲಿ ಉಕ್ತವಾಗಿದೆ ಎನ್ನಬೇಕು. ಇಲ್ಲದಿದ್ದರೆ, ಬೇರೆಯೆ ಧರ್ಮವನ್ನು ವಿಸ್ತಾರವಾಗಿ ಹೇಳಿದರೆಂದಿಟ್ಟುಕೊಂಡರೆ, ಶ್ರೀವ್ಯಾಸರು 'ಗ್ರಂಥಪ್ರತಿಪಾದ್ಯವು ಪ್ರೋಜ್ಝಿತಕೈತವ ಪರಮಧರ್ಮ' ಎಂದು ತಾವೇ ಹೇಳಿದ್ದನ್ನು ಮರೆತುಬಿಟ್ಟರೆಂದಾದೀತು.

ಮತ್ತು 'ಪ್ರೋಜ್ಝಿತಕೈತವಃ' ಎಂದು ಹೇಳಿದ ಧರ್ಮವನ್ನೆ ಏಕಾದಶಸ್ಕಂಧದಲ್ಲಿ ವಿಸ್ತಾರವಾಗಿ ಹೇಳಿದ್ದರೆನ್ನುವುದೂ ಅಲ್ಲಿಯೇ ಬರುವ 'ಅಮಾಯಯಾನುವೃತ್ತ್ಯಾಚ ತುಷ್ಯೇದಾತ್ಮಾತ್ಮದೋ ಹರಿಃ' (ಭಾ.೧೧.೩.೨೩) ಎಂಬ ಮಾತಿನಿಂದ ಸ್ಪಷ್ಟವಾಗುವುದು. 'ಕೈತವ' 'ಮಾಯಾ' ಶಬ್ದಗಳು ಒಂದೇ ಅರ್ಥವನ್ನು ಕೊಡುವುವು.

ಹೀಗಲ್ಲದಿದ್ದರೆ, 'ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್' (ಭಾ.೧೧.೩.೨೩) ಎಂದು 'ಭಾಗವತಧರ್ಮ'ವನ್ನು ಹೇಳುವ ಸಂದರ್ಭದಲ್ಲಿ 'ಸರ್ವತೋ ಮನಸೋಽಸಂಗಂ' ಎಂದು ಮುಂತಾಗಿ ಭಾಗವತಧರ್ಮವನ್ನೇ ವಿಸ್ತಾರವಾಗಿ ಹೇಳಿದ್ದು ಉಚಿತವಾಗುವುದರಿಂದ ಇಲ್ಲಿ ಧರ್ಮಃ ಪ್ರೋಜ್ಝಿತಕೈತ್ರವೋಽತ್ರ ಪರಮಃ' ಎಂದು 'ಪರಮಧರ್ಮ'ವನ್ನು ಹೇಳಿದ್ದು ವ್ಯರ್ಥವಾಗುವುದು. ಭಾಗವತಧರ್ಮವನ್ನು ಹೇಳಿದ್ದರೇ ಸರಿಯಾಗುತ್ತಿತ್ತು. ಆದರಿಂದ 'ಪ್ರೋಜ್ಝಿತಕೈತವ ಪರಮಧರ್ಮ' ಬೇರೆಯಲ್ಲ 'ಭಾಗವತಧರ್ಮ' ಬೇರೆಯಲ್ಲವೆಂದೇ ತಿಳಿಯಬೇಕು.

**ಮುಮುಕ್ಷುಗಳಿಗೆ ಮೋಕ್ಷಸಾಧನವಾಗಿ ಮೋಕ್ಷಕ್ಕಾಗಿ ವಿಶೇಷವಾಗಿ ಭಗವಂತ ಹೇಳಿದ್ದೇ ಭಾಗವತಧರ್ಮ.**

**ಮೋಕ್ಷವು ಭಗವತ್‌ಪ್ರಾಪ್ತಿಯೆ. ಅದಕ್ಕೆ ಅವನು ಪ್ರಸನ್ನನಾಗಬೇಕಾದರೆ ಅವನು ಪ್ರಸನ್ನನಾಗುವಂತೆ, ಪರಮಧರ್ಮವನ್ನು ಕೈತವವಿಲ್ಲದೆ ಆಚರಿಸಬೇಕು.**

ಮನಸ್ಸಿನಲ್ಲಿ ಫಲದಾಸೆ ಇಟ್ಟುಕೊಂಡು 'ವಿಷ್ಣುಪ್ರೀತಿಗಾಗಿ ಕರ್ಮ ಮಾಡುವೆ'ನೆಂದರೆ ಅದು ಕೈತವ ವಂಚನೆ, 'ವಿಷ್ಣುಪ್ರೀತಿಗಾಗಿ ಬ್ರಾಹ್ಮಣಾರಾಧನೆ ಮಾಡುವೆನೆಂ'ದು ಸಂಕಲ್ಪಿಸಿ, ನೂರು ಬ್ರಾಹ್ಮಣಾರಾಧನೆ, ಸಾವಿರ ಅಬ್ರಾಹ್ಮಣಾರಾಧನೆಗಳನ್ನು ಮಾಡಿದಂತಾಗುತ್ತದೆ. ಹಾಗೆ ಮಾಡಬಾರದು.

ನೀಚ ಅಧಮ ಧರ್ಮವೆಂದರೆ ಪರಮ ಪುರುಷಾರ್ಥ ಮೋಕ್ಷಕ್ಕೆ ಪ್ರತಿಬಂಧಕವಾದುದು, ಕಾಮ್ಯಕರ್ಮ. ಪ್ರತಿಬಂಧಕವಾಗದುದು ನಿಷ್ಕಾಮ ಪರಮಧರ್ಮ. ನಿರ್ವಂಚನೆಯಿಂದ ಮೋಕ್ಷಾನುಕೂಲ ಧರ್ಮಾಚರಣೆ ಮಾಡಿದರೇ ಹರಿ ಸಂತುಷ್ಟನಾಗುತ್ತಾನೆ.

ಇದನ್ನೇ ಏಕಾದಶಸ್ಕಂಧದಲ್ಲಿ ಹೀಗೆ ಹೇಳಿದೆ—

**ಏಕಾದಶಸ್ಕಂಧದಲ್ಲಿ ಭಾಗವತ ಧರ್ಮ ಶಿಕ್ಷಣಗಳ ವಿವರಣೆ**

ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ ಗುರ್ವಾತ್ಮ ದೈವತಃ ।
ಅಮಾಯಯಾನುವೃತ್ತ್ಯಾ ಯೈಸ್ತುಷ್ಯೇದಾತ್ಮಾತ್ಮದೋ ಹರಿಃ ।
ಸರ್ವತೋ ಮನಸೋಽಸಂಗಂ ಆದೌ ಸಂಗಂ ಚ ಸಾಧುಷು ।
ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಂ ।
ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜನಂ ।
ಬ್ರಹ್ಮಚರ್ಯಮಹಿಂಸಾಂ ಚ ಸಮತ್ವಂ ದ್ವಂದ್ವ ಸಂಜ್ಞಯೋಃ ।
ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಮನಿಕೇತನಂ ।
ವಿವಿಕ್ತಂ ಚೀರವಸನಂ ಸಂತೋಷಂ ಯೇನಕೇನಚಿತ್ ।
ಶ್ರದ್ಧಾಂ ಭಾಗವತೇ ಶಾಸ್ತ್ರೇ ನಿಂದಾಮನ್ಯತ್ರ ಚಾಪಿಹಿ ।
ಮನೋವಾಕ್ಕಾಯ ದಂಡಂ ಚ ಸತ್ಯಂ ಶಮದಮಾವಪಿ ।
ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತ ಕರ್ಮಣಃ ।

ಜನ್ಮಕರ್ಮ ಗುಣಾನಾಂ ಚ ತದರ್ಥೇಽಖಿಲ ಚೇಷ್ಟಿತಂ ।
ಇಷ್ಟಂ ದತ್ತಂ ತಪೋ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಂ ।
ದಾರಾನ್ ಸುತಾನ್ ಗೃಹಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ ।
ಏವಂ ಕೃಷ್ಣಾತ್ಮನಾಥೇಷು ಮನುಷ್ಯೇಷು ಚ ಸೌಹೃದಂ ।
ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು ।
ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।
ಮಿಥೋರತಿರ್ಮಿಥಸ್ತುಷ್ಟಿ ರ್ನಿವೃತ್ತಿರ್ಮಿಥ ಆತ್ಮನಃ ।
ಸ್ಮರಂತಃ ಸ್ಮಾರಯಂತಶ್ಚ ಮಿಥೋಽಘೌಘಹರಂ ಹರಿಂ ।
ಭಕ್ತಾಃ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಂ ।
ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ ಭಕ್ತ್ಯಾ ತದುತ್ಥಯಾ ।
ನಾರಾಯಣಪರೋ ಮಾಯಾಮಂಜಸ್ತರತಿ ದುಸ್ತರಾಂ ॥
(ಭಾ.೧೧.೩.೨೪-೩೪)

ಪ್ರಬುದ್ಧ ಮುನಿಗಳು ವಿದೇಹರಾಜನಿಗೆ ಹೇಳುತ್ತಾರೆ—

'ಗುರುವಿನಲ್ಲಿ ತನ್ನ ಇಷ್ಟದೇವತೆಯಾದ ಪರಮಾತ್ಮನನ್ನು ಕಾಣುತ್ತ ಗುರುವಿಗೆ ನಿಷ್ಕಪಟ ಸೇವೆ ಮಾಡುತ್ತ ಅವನಿಂದ ಭಾಗವತಧರ್ಮಗಳನ್ನು ಕೇಳಿ ಕಲಿಯಬೇಕು. ಆ ಧರ್ಮಗಳಿಂದಲೇ ಭಕ್ತನಿಗೆ ತನ್ನನ್ನೆ ನೀಡುವ ಪರಮಾತ್ಮನು ಒಲಿಯುತ್ತಾನೆ.

'ವಿಷಯಗಳಲ್ಲಿ ಮನಸಿನ ಅಸಂಗ – ಸಾಧುಸಂಗ – ದಯೆ – ಮೈತ್ರಿ – ವಿನಯ – ಶೌಚ – ತಪಸ್ಸು – ತಿತಿಕ್ಷಾ – ಮೌನ – ಸ್ವಾಧ್ಯಾಯ – ಆರ್ಜವ – ಬ್ರಹ್ಮಚರ್ಯ – ಅಹಿಂಸಾ – ಸಮತ್ವ – ಸರ್ವತ್ರಸ್ವಾಮಿ ಚಿಂತನ – ಕೈವಲ್ಯ – ಅನಿಕೇತನ – ವಿವಿಕ್ತ – ಚೀರವಸನ – ಸಂತೋಷ – ಭಾಗವತಶಾಸ್ತ್ರಶ್ರದ್ಧಾ – ಅನ್ಯತ್ರ ನಿಂದಾ – ತ್ರಿಕರಣದಂಡ – ಸತ್ಯ – ಶಮ – ದಮ – ಅದ್ಭುತ ಕರ್ಮಗಳನ್ನೇ ಮಾಡುವ ಶ್ರೀಹರಿಯ ಅವತಾರಗಳ ಕರ್ಮಗುಣಗಳ ಬಗ್ಗೆ ಶ್ರವಣ–ಕೀರ್ತನ– ಧ್ಯಾನ– ತಾನು ಮಾಡುವ ಯಾಗ ದಾನ ತಪಸ್ಸು ಜಪ ಲೋಕಸೇವಾ ಕಾರ್ಯಗಳನ್ನು ಹೆಂಡತಿ ಮಕ್ಕಳು ಮನೆ ಪ್ರಾಣ ಇಂದ್ರಿಯ ಪ್ರಿಯವೆಲ್ಲವನ್ನು ಪರಮಾತ್ಮನಿಗೆ ಅರ್ಪಿಸುವುದು–ಈ ಭಾಗವತ ಧರ್ಮಗಳನ್ನೂ

ಮತ್ತು, ಶ್ರೀಕೃಷ್ಣ ಭಕ್ತರಲ್ಲಿ ಸ್ನೇಹ–ಸಾಧುಗಳ ಪರಿಚರ್ಯೆ–ಭಗವತ್‌ಕೀರ್ತಿಯ ಪ್ರಶಂಸನ–ಪರಸ್ಪರ ಹೇಳಿಕೇಳಿಯೇ ಆನಂದ ತೃಪ್ತಿ–ಇತರತ್ರ ಅನಾಸಕ್ತಿಪಡುವುದು. ಪಾಪಪರಿಹಾರಕವಾದ ಹರಿಚರಿತೆಯ ಸ್ಮರಣೆಯನ್ನು ತಾವು ತಂದುಕೊಂಡು ಇತರರಿಗೂ ತಂದುಕೊಡುವುದು—ಎಂಬ ಧರ್ಮ ಸಾಧನಗಳನ್ನೂ ಗುರುಗಳಿಂದ ಭಕ್ತಿಯಿಂದ ಕೇಳಿ, ಮೈರೋಮಾಂಚನಗೊಂಡು, ಗುರುಗಳ ಅನುಜ್ಞೆಯಿಂದ ಭಾಗವತ ಧರ್ಮಗಳನ್ನು ನಡೆಸಿ ಅದರಿಂದ ಹುಟ್ಟುವ ಭಕ್ತಿಯಿಂದ ನಾರಾಯಣ ಪರಾಯಣನಾಗುವ ಮಾನವನು ಬಂಧಕ ಮಾಯೆಯನ್ನು ದಾಟಿ ಮುಕ್ತನಾಗುವನು.

(೪) 'ಧರ್ಮಂ ತು ಸಾಕ್ಷಾದ್ ಭಗವತ್ ಪ್ರಣೀತಂ' ಎಂಬ ಶ್ಲೋಕದಲ್ಲಿ 'ತು' ಶಬ್ದದಿಂದ ವಿಶೇಷವನ್ನು ಹೇಳುತ್ತಾರೆ—

ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।<br>
ಧಾವನ್ನುನ್ಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥

(ಭಾ.೧೧.೨.೩೫)

ಕವಿಮಹಾಮುನಿ ವಿದೇಹರಾಜನಿಗೆ ಹೇಳುತ್ತಾರೆ—

'ಭಾಗವತಧರ್ಮಗಳನ್ನು ಅನುಷ್ಠಾನ ಮಾಡುವವನು ನಾಹಂ ಕರ್ತಾ ಹರಿಃಕರ್ತಾ ಸರ್ವಕರ್ಮವೂ ಹರಿ ತಾನೇ ಮಾಡುವ ತನ್ನ ಪೂಜೆ ಎನ್ನುತ್ತಾನೆ. ಎಂದೂ ಹರಿಯನ್ನು ಮರೆಯುವುದಿಲ್ಲ. ಮರೆತರೂ ಅಪರಾಧಿಯಾಗುವುದಿಲ್ಲ. ಸಮತಟ್ಟಾದ ಉಸುಕಿನ ಪ್ರದೇಶದಲ್ಲಿ ಓಡುವವನು ಕಣ್ಣು ತೆರೆದು ಓಡಿದರೂ ಕಣ್ಣು ಮುಚ್ಚಿ ಓಡಿದರೂ ಎಡವಲಾರ. ಬೀಳಲಾರ. ಅವನ ಧರ್ಮ ಅವನಿಗೆ ಮೋಕ್ಷಸಾಧನವಾಗಿಯೇ ತೀರುವುದು. ಆದು ಅತಿಗೋಪ್ಯ ಅಲ್ಪಪುಣ್ಯವಂತರಿಗೆ ಅಪ್ರಾಪ್ಯ!' ಎಂದು.

**(೫) ವೈರಾಗ್ಯಪೂರ್ವಕವಾದರೇ ಭಕ್ತಿ ಭಕ್ತಿ ಎನಿಸುತ್ತದೆ.**

'ಸರ್ವತೋ ಮನಸೋऽಸಂಗ ಮುಂತಾದ ಭಾಗವತಧರ್ಮಗಳನ್ನು ಹೇಳುತ್ತ ಮುಂದೆ (ಭಾ.೧೧.೩.೨೪) 'ಸರ್ವತೋ ಮನಸೋऽಸಂಗಂ' ಎಂದು ವೈರಾಗ್ಯವನ್ನು ಹೇಳುತ್ತಾರೆ.

ಏಕೆಂದರೆ ಅಲ್ಲಿ ಹೇಳುವ ಭಾಗವತಧರ್ಮಗಳಲ್ಲಿ ಭಕ್ತಿಯೂ ಸೇರಿದೆ. ಭಕ್ತಿಯನ್ನು ವೈರಾಗ್ಯ ಪೂರ್ವಕವಾಗಿಯೆ ಮಾಡುವ ಪ್ರಕಾರವನ್ನು ಅಲ್ಲಿ ಹೇಳುತ್ತಾರೆ.

ಅದಿಲ್ಲದಿದ್ದರೆ ಭಾಗವತಧರ್ಮಗಳನ್ನು ಭಕ್ತಿಗೋಸ್ಕರವೆ ಆಚರಿಸ ಬೇಕಾಗಿರುವುದರಿಂದ, ಭಕ್ತಿಯೇ ಕೆಟ್ಟಿತೆಂದರೆ ಎಲ್ಲ ಧರ್ಮವೂ ಕೆಡುತ್ತದೆ.

**'ಗಂಡುಮಕ್ಕಳಿಲ್ಲ, ಇದ್ದೊಬ್ಬ ಮಗಳೂ ಶೀಲಗೆಟ್ಟರೆ, ನನ್ನ ಸಂಸಾರವೇ ಹಾಳಾಯಿತು!'**

ಎನ್ನುವ ಗಾದೆಯಂತೇ ಇದು. ಏಕೆಂದರೆ ಎಲ್ಲ ಮನುಷ್ಯರಿಗೂ ತಮ್ಮಲ್ಲಿ ತನಗೆ ಪ್ರೀತಿ, ಎಂಬುದು ಅನುಭವಸಿದ್ಧ. ಅನ್ಯ ನಿಮಿತ್ತವಿಲ್ಲದೇ, ಸಹಜವಾಗಿಯೇ ತಮ್ಮಲ್ಲಿ ಪ್ರೀತಿ ಇರುವುದೂ ಅನುಭವಸಿದ್ಧವೆ. ಹರಿ ಗುರುಗಳಲ್ಲಿ ಉಂಟಾಗುವ ಇಂಥ ಪ್ರೀತಿಯನ್ನೇ ಭಕ್ತಿ ಎನ್ನುವರು. ಈ ಭಕ್ತಿಯು ವಿಷಯವೈರಾಗ್ಯವಿಲ್ಲದೆ ಹುಟ್ಟುವುದಿಲ್ಲ.

ವೈರಾಗ್ಯವೆಂದರೆ ಸರ್ವತೋ ಮನಸಃ ಅ–ಸಂಗ. ವಿಷಯಗಳಲ್ಲಿಯ ಸಂಗವನ್ನು ಬಿಡುವುದೇ ಆಗಿದೆ.

'ವೈರಾಗ್ಯವು ಬಲು ಸುಲಭ, ಮನೆ ಬಿಟ್ಟು ಕಾಡಿಗೆ ಹೋದರಾಯಿತು'

ಎನ್ನುವಂತಿಲ್ಲ. 'ಸಂಗ' ಬಿಡಬೇಕು. ಸಂಗವೆಂದರೆ ವಿಷಯ ಮತ್ತು ಇಂದ್ರಿಯ ಗಳಿಗೆ ಉಂಟಾಗುವ ಸಂಯೋಗವಲ್ಲ. ಮನಸಿನಲ್ಲಿ ಉಂಟಾಗುವ ವಿಷಯಾ ಸಕ್ತಿಯೇ ಸಂಗ. ಈ ಆಸಕ್ತಿಯನ್ನು ತೊರೆಯಬೇಕಾಗುತ್ತದೆ. ಇದನ್ನು ಮುಂದೆ (ಭಾ.೧೧.೧೯.೨೭) 'ಗುಣೇಷ್ವಸಂಗೋ ವೈರಾಗ್ಯಂ' ಎನ್ನುತ್ತಾರೆ. ಆದರೂ ವೈರಾಗ್ಯವಿಲ್ಲದೆ ಭಕ್ತಿ ಏಕೆ ಇಲ್ಲ? ಎಂದರೆ, ಹೇಯದಲ್ಲಿ ಆಸಕ್ತಿ ಇದ್ದರೆ ಉಪಾದೇಯದಲ್ಲಿ ಪ್ರೀತಿ ಉಂಟಾಗಲು ಶಕ್ಯವಿಲ್ಲ ತಾನೆ? ಇದನ್ನೇ ಸ್ಪಷ್ಟವಾಗಿ

'ಸರ್ವತೋ ಮನಸೋऽಸಂಗಂ'

'ಎಲ್ಲ ಧರ್ಮಗಳಿಗೂ ಮೂಲಭೂತವಾದ ಆವಶ್ಯಕವಾದ ಭಕ್ತಿ ಉಂಟಾಗ ಬೇಕಾದರೆ ಮೊದಲಿಗೆ ವಿಷಯಾಸಕ್ತಿಯನ್ನು ತೊರೆಯುವುದು ಅತ್ಯಂತ ಆವಶ್ಯಕ' ಎನ್ನುತ್ತಾರೆ.

ಯದ್ಯಪಿ ಭಕ್ತಿ ಹುಟ್ಟುವುದೆಂದಿಲ್ಲ, ಭಕ್ತಿದಾರ್ಢ್ಯ ಉಂಟಾಗುತ್ತದೆ. ಆದರೂ ನಾವು ಹೇಳುತ್ತಿರುವ ಭಕ್ತಿಯ ಉತ್ಪತ್ತಿಯು ಭಕ್ತಿದಾರ್ಢ್ಯವೇ ವಿವಕ್ಷಿತವಾಗಿದೆ. ಅದರಿಂದ ವಿರೋಧವಿಲ್ಲ.

**ಭಕ್ತಭಕ್ತಿ ರಹಿತ ವಿಷ್ಣುಭಕ್ತಿಯು ಭಕ್ತಿಫಲಸಾಧಕವಲ್ಲ**

ಆದರೂ ಈ ವಿಷ್ಣುಭಕ್ತಿ ಒಂದಿದ್ದರೆ ಸಾಕು, ಅದರಿಂದಾಗುವ ಹರಿಯ ಅನುಗ್ರಹದಿಂದ ಲಭ್ಯವಾಗದ್ದು ಏನೂ ಇಲ್ಲ. ಹೀಗಾಗಿ ಮುಂದಿನ ಭಾಗವತಧರ್ಮ ಗ್ರಂಥ ಏಕೆ ಬೇಕು? ಎಂದರೆ ಭಕ್ತಿಗೆ ಸಾಧನವನ್ನು ಹೇಳಲು ಮುಂದಿನ ಗ್ರಂಥವಿದೆ ಎನ್ನುತ್ತೇವೆ. ಹೀಗಿದ್ದರೂ 'ಸಂಗಂ ಚ ಸಾಧುಷು' ಎಂದು ಮುಂತಾಗಿ ಗ್ರಂಥವೇಕೆ? ಅದರಲ್ಲಿ ಭಕ್ತಿಗೆ ಸಾಧನವನ್ನು ಹೇಳುತ್ತಿಲ್ಲ. 'ಭಗವದ್ ಭಕ್ತರಲ್ಲಿ ಭಕ್ತಿ'ಯನ್ನು ಅಲ್ಲಿ ಹೇಳುತ್ತಾರೆ ತಾನೆ? ಭಗವದ್‌ಭಕ್ತಿಯಿಂದಲೇ ಎಲ್ಲವೂ ಸಿಗುವಾಗ ಭಗವದ್‌ಭಕ್ತರಲ್ಲಿ ಭಕ್ತಿ ಬೇರೆ ಏಕೆ ಬೇಕು? ಎಂದರೆ ಹರಿಭಕ್ತಿಯ ದೋಷಪರಿಹಾರಕ್ಕಾಗಿ ಬೇಕು ಎನ್ನುತ್ತೇವೆ. 'ತದ್‌ಭಕ್ತದ್ವೇಷ ಏವ ಚ' ಎಂದು ನವವಿಧ ದ್ವೇಷಗಳಲ್ಲಿ ಭಕ್ತದ್ವೇಷವೂ ಒಂದು ಭಕ್ತಿದೋಷ ಎನ್ನಲಾಗಿದೆ.

**ಭಕ್ತದ್ವೇಷವು ಹರಿಭಕ್ತಿಗೆ ದೋಷ**

ಭಕ್ತದ್ವೇಷವು ಭಕ್ತಿಗೆ ಹೇಗೆ ದೋಷ ಎಂದರೆ ಅದಿದ್ದರೆ ಭಗವದ್ ಭಕ್ತಿಯು ಮೋಕ್ಷದಾಯಕವಾಗದು. 'ಭಕ್ತಿಯಿಂದ ಅನುಗ್ರಹ, ಅನುಗ್ರಹದಿಂದ ಮೋಕ್ಷ ವಾಗುವಾಗ ಭಕ್ತಿ ಮೋಕ್ಷದಾಯಕವೇಕಾಗದಿದ್ದೀತು?' ಎಂದರೆ ಭಕ್ತಿ ಭಕ್ತದ್ವೇಷ ಸಹಿತವಾಗಿದ್ದರೆ ಅನುಪ್ರತಿಬಂಧಕ. ಅಂಥ ಭಕ್ತಿ ಮೋಕ್ಷದಾಯಕವಾದ ಅನುಗ್ರಹಕ್ಕೇ ಕಾರಣ ವಾಗದು. ಭಾಗವತಭಕ್ತಿ ಸಹಿತವಾದ ಭಗವದ್‌ಭಕ್ತಿಯೇ ಮೋಕ್ಷದಾಯಕವಾದ ಭಗವದ್‌ಅನುಗ್ರಹಕ್ಕೆ ಕಾರಣವಾಗುತ್ತದೆ ಎಂದು ತಿಳಿಸಲು 'ಸಂಗಂ ಚ ಸಾಧುಷು' ಎಂದು ಮುಂತಾಗಿ ಗ್ರಂಥ ಹೊರಟಿದೆ.

ಅಮಾತ್ಯನಲ್ಲಿ ಭಕ್ತಿಉಳ್ಳ ರಾಜಭಕ್ತನಿಗೇ ರಾಜನಿಂದ ವಿಶೇಷ ಅನುಗ್ರಹ ವಾಗುವಂತೆ ನೃಸಿಂಹಭಕ್ತರಾದ ನಾರದರಲ್ಲಿ ಭಕ್ತಿಮಾಡಿದ ಪ್ರಹ್ಲಾದನ ಮೇಲೇ ನೃಸಿಂಹನ ವಿಶೇಷಾನುಗ್ರಹ ಕಂಡಿದೆ. ಹಾಗೇ ಕೇವಲ ರಾಜನಲ್ಲಿ ಭಕ್ತಿ ಮಾಡಿದವನಿಗೆ ರಾಜನ ವಿಶೇಷಾನುಗ್ರಹವಿಲ್ಲ.

ಬ್ರಹ್ಮಾದಿಗಳ ಭಕ್ತರಾದ ಇಂದ್ರಾದಿದೇವತೆಗಳಲ್ಲಿ ಭಕ್ತಿಮಾಡದೆ ಕೇವಲ ಬ್ರಹ್ಮಾದಿಗಳಲ್ಲಿ ಭಕ್ತಿಮಾಡಿದ ಅಸುರರಿಗೆ ವಿಶೇಷ ಫಲ ಸಿಗಲಿಲ್ಲ. ನಿಜ, ಆದರೂ 'ಸಂಗಂ ಚ ಸಾಧುಷು' ಎಂದು ಭಕ್ತರಲ್ಲಿ ಭಕ್ತಿಯನ್ನು ಆವಶ್ಯಕವೆಂದು ಸಮರ್ಥಿಸಿದರೆ ಅಷ್ಟೇ ಸಾಕು ಭಕ್ತಭಕ್ತಿಯಲ್ಲಿಯೂ ತಾರತಮ್ಯವನ್ನು ಹೇಳುವ ಮುಂದಿನ ಗ್ರಂಥವೇಕೆ ಎಂಬ ಪ್ರಶ್ನೆ ಹಾಗೇ ಉಳಿಯುತ್ತದೆ. ಎಂದರೆ, ಈ ಪ್ರಶ್ನೆಗೂ ಇದೇ ಉತ್ತರ. 'ಭಕ್ತಭಕ್ತಿದೋಷ ಪರಿಹಾರ ವಿಧಾನವನ್ನು ಹೇಳಲೆಂದೇ ಮುಂದಿನ ಗ್ರಂಥವೂ ಹೊರಟಿದೆ' ಎಂದು.

ಅದು ಹೇಗೆಂದರೆ, ಮನೆಗೆ ಅತಿಥಿಯಾಗಿ ರಾಜನು ಬಂದರೆ ಯಜಮಾನನು ತನಗೆ ತನ್ನ ಮೇಲಿರುವುದಕ್ಕಿಂತ ಹೆಚ್ಚಿನ ಆದರವನ್ನು ರಾಜನಿಗೆ ನೀಡುತ್ತಾನೆ. ಅಮಾತ್ಯರು ಮುಂತಾದ ಅಧಿಕಾರಿಗಳು ಬಂದರೂ ತನಗಿಂತ ಹೆಚ್ಚಿನ, ಆದರೆ ರಾಜನಿಗಿಂತ ಕಡಿಮೆಯಾದ ಆದರ ತೋರುತ್ತಾನೆ, ಸಮಾನಿಕರು ಬಂದರೆ ಸಮಾನ ಆದರ, ಕಡಿಮೆಯವರು ಬಂದರೆ ಅಲ್ಪ ಆದರ, ಹೀಗೆ ತಾರತಮ್ಯಾನು ಗುಣವಾಗಿ, ಸರ್ವೋತ್ತಮನಾದ ಶ್ರೀಹರಿಯಲ್ಲಿಯೂ, ಹರಿಭಕ್ತರಾದ ಉತ್ತಮ ಮಧ್ಯಮ ಅಧಮ ಚೇತನರಲ್ಲಿಯೂ ಭಕ್ತ್ಯಾದರಗಳನ್ನು ಮಾಡಿದರೆ ಮಾತ್ರ ಹರಿಭಕ್ತಿಯು ನಿರ್ದುಷ್ಟವೆನಿಸುವುದು. ಇಲ್ಲದಿದ್ದರೆ ದೋಷಪೂರಿತವಾಗಿದ್ದು ಮೋಕ್ಷದಾಯಕವಾದ ಹರ್ಯನುಗ್ರಹವನ್ನು ತಂದುಕೊಡುವುದರಲ್ಲಿ ಅಸಮರ್ಥವಾಗುವುದು. ಅದರಿಂದ ಸ್ವೋತ್ತಮರಲ್ಲಿ ಭಕ್ತಿ, ಸಮಾನಿಕರಲ್ಲಿ ಮೈತ್ರಿ, ಕಡಿಮೆಯವರಲ್ಲಿ ದಯೆ ಇವುಗಳನ್ನು ಮುಂದಿನ ಈ ಗ್ರಂಥವು ಸ್ಪಷ್ಟಪಡಿಸುತ್ತಿದೆ—

ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಂ ।
(ಭಾ.೧೧.೩.೨೪)

ಅಮಾಯಾಯಾನುವೃತ್ತ್ಯಾ ಯೈಸ್ತುಷ್ಯೇದಾತ್ಮಾಽಽತ್ಮದೋ ಹರಿಃ ।
(ಭಾ.೧೧.೩.೨೩)

'ಅಮಾಯಕವಾದ ನಿಷ್ಕಪಟವಾದ ಸೇವೆಗೆ ಹರಿ ಒಲಿಯುತ್ತಾನೆ' ಎಂದು ಹೇಳಿದ 'ಅಮಾಯಕತ್ವ'ವೆಂದರೆ, ತಾರತಮ್ಯಾನುಗುಣವಾಗಿ ಭಕ್ತರಲ್ಲಿ ಭಕ್ತಿ

ಮಾಡುತ್ತಲೆ ಹರಿಯಲ್ಲಿ ಸರ್ವೋತ್ತಮ ಭಕ್ತಿಯನ್ನು ಮಾಡಬೇಕೆಂದು ವಿವಕ್ಷಿತ ವಾಗಿದೆ.

### ತಾರತಮ್ಯಾನುಗುಣವಾಗಿ ಭಕ್ತಭಕ್ತಿ ಬೇಕು

ತಾರತಮ್ಯನುಗುಣವಾಗಿ ಈ ಭಾಗವತಧರ್ಮಾನುಷ್ಠಾನ ಮಾಡಿದರೆ ಮಾತ್ರ ಅಮಾಯಕವಾದ ಭಕ್ತಭಕ್ತಿ ಉಂಟಾಗುತ್ತದೆ. ಅಮಾಯಕವಾದ ಭಕ್ತ–ಭಕ್ತಿಯಿಂದ ಮೋಕ್ಷದಾಯಕವಾದ ವಿಷ್ಣುಭಕ್ತಿ ಉಂಟಾಗುವುದರಿಂದ ಭಕ್ತಿ ಹುಟ್ಟಿದಾಗಲೇ ಭಾಗವತಧರ್ಮಾನುಷ್ಠಾನ ಸಾರ್ಥಕವಾಗುತ್ತದೆ. ಈಗ, 'ಮಗಳು ನೀತಿಗೆಟ್ಟರೆ ಸಂಸಾರ ಹಾಳಾಗುವಂತೆ ಭಕ್ತಿಯು ಸಮಾಯಕವಾದರೆ ಭಾಗವತಧರ್ಮ ಕುಲಗೆಟ್ಟು ಹೋಗುತ್ತದೆ' ಎನ್ನಲು ಅವಕಾಶವಿಲ್ಲ. ಭಕ್ತಿಯು ಅಮಾಯಕವಾಗಿದ್ದು ಭಾಗವತಧರ್ಮವನ್ನು ಸಾರ್ಥಕಗೊಳಿಸುತ್ತದೆ.

'ಅಮಾಯಕತ್ವ'ವು ವಿಷ್ಣುಭಕ್ತಿಯಲ್ಲಿ 'ತಾರತಮ್ಯಕ್ರಮೋಪೇತ ಭಕ್ತಭಕ್ತಿ ಸಹಿತತ್ವ' ರೂಪವಾದುದು. ಆದರಲ್ಲಿ ತಾರತಮ್ಯಕ್ರಮರೂಪ ವಿಶೇಷಣವಿಲ್ಲ ದಿದ್ದರೂ, ಭಕ್ತಭಕ್ತಿರೂಪ ವಿಶೇಷ್ಯವಿಲ್ಲದಿದ್ದರೂ, ವಿಶಿಷ್ಟವಾದ ಅಮಾಯಕತ್ವ ವಿಷ್ಣುಭಕ್ತಿಯಲ್ಲಿ ಇಲ್ಲವಾಗುವುದರಿಂದ, ಸಮಾಯತ್ವವೇ ವಿಷ್ಣುಭಕ್ತಿಯಲ್ಲಿ ಬಂದಂತಾಗುವುದ ರಿಂದ, ಮೋಕ್ಷದಾಯಕ ಅನುಗ್ರಹವು ವಿಷ್ಣುಭಕ್ತಿಯಿಂದ ಬರುವುದಿಲ್ಲ. ಅದರಿಂದ 'ಅಮಾಯಯೈವ ಅನುವೃತ್ಯಾ ಹರಿಃ ತುಷ್ಯೇತ್' ಎಂದು ಏವಕಾರ ಹಾಕಿ ಅರ್ಥೈಸಬೇಕು.

### ಹರಿಭಕ್ತಿಯುತವಾಗಿ ಭಕ್ತಭಕ್ತಿ ಇರಬೇಕು

ಈಗ ಪ್ರಶ್ನೆ ಬರುತ್ತದೆ—'ವಿಷ್ಣುಭಕ್ತಿಯಲ್ಲಿ ಅಮಾಯಕತ್ವರೂಪ ಇತಿಕರ್ತವ್ಯತಾ, ಇತ್ಥಂಭಾವ ಇಲ್ಲದೆ ಹೋದರೆ ಮೋಕ್ಷದಾಯಕವಾದ ಅನುಗ್ರಹ ಬಾರದಿರುವುದರಿಂದ ಮೋಕ್ಷಫಲ ಇಲ್ಲವಾಗುವುದೆಂದು, ಮೋಕ್ಷ ಫಲಕ್ಕಾಗಿ ವಿಷ್ಣುಭಕ್ತಿಯಲ್ಲಿ ಅಮಾಯಕತ್ವರೂಪ ಇತಿಕರ್ತವ್ಯತಾ ಬೇಕೆನ್ನುವು ದಾದರೆ, ಭಾಗವತಭಕ್ತಿಯಲ್ಲಿಯೂ ಒಂದು ಇತಿಕರ್ತವ್ಯತಾ ಇಲ್ಲದೆ ಹೋದರೆ ಮೋಕ್ಷಫಲವನ್ನು ಕೊಡಲಾರದು ಎಂದಾಗುವುದಿಲ್ಲವೆ?' ಎಂದು.

ಇದಕ್ಕೆ ಉತ್ತರ—ಭಗವದ್‌ಭಕ್ತಿಯಂತೆ ಭಾಗವತಭಕ್ತಿಗೂ ಅಮಾಯಕತ್ವ

ರೂಪ ವಿಶೇಷಣ ಬೇಕು. ಅದಕ್ಕೂ ಒಂದು ಇತಿಕರ್ತವ್ಯತಾ ಬೇಕು ಎಂದೇ ಹೇಳುತ್ತೇವೆ. ಆ ಇತಿಕರ್ತವ್ಯತಾ ಯಾವುದೆಂದರೆ ನಿರವಧಿಕ ಭಗವದ್ ಭಕ್ತಿಯುತತ್ವವೇ. ಇದು ತಾರತಮ್ಯಕ್ರಮೋಪೇತ ಭಾಗವತ ಭಕ್ತಿಯಲ್ಲಿ ಇತಿಕರ್ತವ್ಯತಾರೂಪ ವಿಶೇಷಣ. ಈಗ ನಿರವಧಿಕ ಭಗವದ್‌ಭಕ್ತಿ ಸಹಿತತ್ವ ಸಹಿತವಾದ ತಾರತಮ್ಯೋಪೇತ ಭಕ್ತಭಕ್ತಿ ಸಹಿತತ್ವವೆ ಅಮಾಯತ್ವ. ಇಲ್ಲಿ ವಿಶೇಷಣವಿಲ್ಲದಿದ್ದರೂ ವಿಶೇಷ್ಯವಿಲ್ಲದಿದ್ದರೂ ಅಮಾಯಕತ್ವವಿಲ್ಲವಾಗುವುದು. ಸಮಾಯತ್ವ ಬರುವುದು. ಆದರಿಂದ ಭಕ್ತಭಕ್ತಿಯು ವಿಷ್ಣುಭಕ್ತಿ ಪ್ರಸಾದ ದ್ವಾರಾ ಮೋಕ್ಷಜನಕವಾಗಬೇಕಾದರೆ ನಿರವಧಿಕವಿಷ್ಣುಭಕ್ತಿಸಹಿತವಾದ ಅಮಾಯಕವಾದ ಭಾಗವತ ಭಕ್ತಿಯಿಂದಲೇ ಭಾಗವತರನ್ನು ಭಜಿಸಬೇಕು.

(೬) ಹೀಗೆ ಮುಂದೆ ಹೇಳಲಿರುವ ಭಗವದ್‌ಭಕ್ತಿಯಲ್ಲಿಯೂ ಇಲ್ಲಿ ಹೇಳುತ್ತಿರುವ ಭಕ್ತಭಕ್ತಿಯಲ್ಲಿಯೂ ಇತ್ಥಂಭಾವಗಳನ್ನು ಹೇಳಿ, ಎರಡೂ ಭಕ್ತಿಗಳಿಗೆ ಜ್ಞಾಪಕವಾದ ಪೂಜಾದಿರೂಪ ಸೇವೆಯಲ್ಲಿಯೂ ಅಮಾಯತ್ವವೆಂಬ ಇತ್ಥಂಭಾವವನ್ನು ಇದೇ ಮಾತು ಹೇಳುವುದು— 'ಅನುವೃತ್ತ್ಯಾ ಚಾಮಾಯಯೈವ ಹರಿಃ ತುಷ್ಯೇತ್' ಎಂದು. 'ಅಮಾಯತ್ವ'ವು ಹಿಂದೆ ಹೇಳಿದ್ದೇ ಇಲ್ಲಿಯೂ ವಿವಕ್ಷಿತವಾಗಿದೆ.

(೭) 'ಆತ್ಮ–ಆತ್ಮೀಯ ಸಮಸ್ತ ವಸ್ತುಗಳಿಗಿಂತ ಅನೇಕಪಟ್ಟು ಅಧಿಕವಾದ ಆದರವೇ ಭಕ್ತಿ. ಆದರಲ್ಲಿ ಬರುವ ಎಲ್ಲ ದೋಷಗಳನ್ನೂ ಮೋಕ್ಷಫಲಾರ್ಥಿಯು ಪರಿಹರಿಸಿಕೊಳ್ಳಲೇಬೇಕು' ಎನ್ನುವುದನ್ನೂ 'ಅಮಾಯಯಾ' ಎಂಬ ಮಾತು ತಿಳಿಸುತ್ತದೆ.

ಮಾಯೆ ಎಂದರೆ ಇಲ್ಲಿ 'ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ' (ಭಾ.೧೧.೮.೭) ಎಂಬಂತೆ ಫಲಪ್ರತಿಬಂಧಕ ಶಕ್ತಿಉಳ್ಳ ದೋಷಗಳೆಂದರ್ಥ. ಆ ದೋಷ ಪರಿಹಾರ ಮಾಡಿಕೊಂಡರೇ ಭಕ್ತಿಗೆ ಹರಿ ಒಲಿಯುತ್ತಾನೆ. ಒಲಿದರೆ ಆತ್ಮಪ್ರದಾನ ಮಾಡುತ್ತಾನೆ. ಆದರಿಂದ ಮೋಕ್ಷಾರ್ಥಿಯು ದೋಷಪರಿಹಾರ ಮಾಡಿಕೊಳ್ಳ ಬೇಕೆಂದು 'ಅಮಾಯಯಾ' ಎಂದಿದ್ದಾರೆ.

**ಭಾಗವತಧರ್ಮದ ಶಿಕ್ಷಣ**

(೮) ಗುರುಗಳಲ್ಲಿ ಭಾಗವತಧರ್ಮಗಳನ್ನು ವ್ಯಕ್ತಿಶಃ ಕೇಳಿ ತಿಳಿಯಬೇಕು

ಎಂದರೆ ಹೇಗೆ ಎಂಬ ಪ್ರಶ್ನೆಗೆ ಸಮಾಧಾನ ಹೇಳುವುದಕ್ಕೆ ಮೊದಲು ಧರ್ಮದ ಸಾಮಾನ್ಯ ಲಕ್ಷಣವನ್ನು 'ಅಮಾಯಯಾ' ಎಂಬ ಮಾತಿನಿಂದಲೇ ಸೂಚಿಸುತ್ತಾರೆ—

'ಅಮಾಯಯೈವಾನುವೃತ್ತ್ಯಾ ತುಷ್ಯೇದಾತ್ಮಾತ್ಮದೋ ಹರಿಃ'

ಅಂದರೆ ಅಮಾಯಕ ಭಾಗವತ ಧರ್ಮಾನುಷ್ಠಾನರೂಪ ಸೇವೆಯಿಂದ 'ಅಂತಃಸ್ಥಿತ್ವಾ ಜ್ಞಾನದಾತ'ನಾಗಿ 'ಆತ್ಮ'ನೆನಿಸಿದ ಬಿಂಬರೂಪಿ ಹರಿ ಆತ್ಮಾನಮಪಿ ದದಾತಿ' ಮೋಕ್ಷ ನೀಡುತ್ತಾನೆ' ಅಂದರೆ 'ಮೋಕ್ಷಸಾಧನತ್ವವೇ ಭಾಗವತ ಧರ್ಮ ಸಾಮಾನ್ಯಲಕ್ಷಣ, ಮೋಕ್ಷಸಾಧನತ್ವವು ಸಾಕ್ಷಾತ್ತಲ್ಲ. ಜ್ಞಾನದ್ವಾರಾ' ಎಂದು ಸಾಂಗವಾಗಿ ಲಕ್ಷಣವನ್ನು ಹೇಳಿ ಅದಕ್ಕೆ ವಿಶೇಷ ಲಕ್ಷಣಗಳನ್ನೂ ಹೇಳಿ ಶೃಂಗಗ್ರಾಹಕವಾಗಿ ವ್ಯಕ್ತಿಶಃ ಪ್ರತ್ಯೇಕವಾಗಿಯೇ ಹೇಳುತ್ತ ಮೊದಲಿಗೆ 'ಸರ್ವತೋಮನಸೋಽಸಂಗ' ಎಂಬ ಒಂದು ಪ್ರಕಾರವನ್ನು ಹೇಳುತ್ತಾರೆ.

ಹೀಗೇ ಮುಂದೆಯೂ ಸಾಮಾನ್ಯ ಪ್ರಕಾರಲಕ್ಷಣಗಳನ್ನು ವಿಶೇಷ ವ್ಯಕ್ತಿಗಳಲ್ಲಿ ಎಲ್ಲ ಭಾಗವತಧರ್ಮಗಳಿಗೆ ತಿಳಿಯಬೇಕು.

❖❖❖

## ೧. 'ಸರ್ವತೋಮನಸೋಽಸಂಗ'ದ ಶಿಕ್ಷಣ

'ಸರ್ವತೋ ಮನಸೋಽಸಂಗಂ ಆದೌ ಶಿಕ್ಷೇತ್'

'ಸರ್ವತೋಮನಸೋಽಸಂಗ'ವೆಂದರೆ ಆತ್ಮವಿಮರ್ಶೆ, ಅಧ್ಯಾತ್ಮವಿಚಾರ ಎಂದರ್ಥ. ಬೇರೆ ವಿಷಯಗಳಲ್ಲಿ ಮನಸಿನ ಆಸಕ್ತಿಯನ್ನು ದೂರಮಾಡಿಕೊಂಡರೆ ಮಾತ್ರ ಅಧ್ಯಾತ್ಮವಿಚಾರ ಸಾಧ್ಯ ಎಂಬ ಕಾರಣಕ್ಕಾಗಿ 'ಸರ್ವತೋಽಮನಸೋಸಂಗ' 'ಎಲ್ಲ ವಿಷಯಗಳಲ್ಲಿ ಅನಾಸಕ್ತಿ' ಎಂದೇ ಅಧ್ಯಾತ್ಮವಿಚಾರವನ್ನು ಭಾಗವತಶಾಸ್ತ್ರ ಕರೆದಿದೆ.

ಅಧ್ಯಾತ್ಮ ವಿಚಾರದಲ್ಲಿ ಪ್ರವೃತ್ತಿಯೇ ಭಕ್ತಿಗೆ ಮುಖ್ಯಸಾಧನವೆಂದು ತಿಳಿದು ಮೊದಲು ಗುರುಗಳಿಂದ ಅದನ್ನು ಕಲಿಯಬೇಕು.

ಹರಿಸರ್ವೋತ್ತಮ ಎಂಬ ಜ್ಞಾನದಿಂದ ಅವನಲ್ಲಿ ಉಂಟಾಗುವ ಪ್ರೇಮವೇ ಭಕ್ತಿ. ಭಕ್ತಿಗಾಗಿಯೇ ಭಗವಂತನ ಈ ಮಹಿಮೆಯನ್ನು ಶಾಸ್ತ್ರವು

ವರ್ಣಿಸುತ್ತದೆ. 'ಭವಾಯ ನಸ್ತ್ವಂ ಭವ ವಿಶ್ವಭಾವನ'(ಭಾ.೧.೧೦.೪೪) ಎಂಬ ೨೨೨ನೇ ಶ್ಲೋಕದಲ್ಲಿ ಹೇಳಿದಂತೆ ಹರಿಯೇ ಸರ್ವೋತ್ತಮ, ಅವನೇ ಮುಖ್ಯವಾಗಿ ಎಲ್ಲರಿಗೂ ತಾಯಿ ತಂದೆ ಗುರು ಎಲ್ಲವೂ ಆಗಿದ್ದಾನೆ ಎಂದು ಭಗವಂತನ ಮಹಿಮೆಯನ್ನು ಹೇಳುತ್ತಲೇ ಅಧ್ಯಾತ್ಮಪ್ರಕರಣ ಪ್ರಾರಂಭವಾಗಿದೆ.

ಲೌಕಿಕ ತಂದೆ ತಾಯಿಗಳೆಲ್ಲರಿಗಿಂತ ಉತ್ತಮ ಸರ್ವೋತ್ತಮ ತಂದೆ ತಾಯಿ ಎಲ್ಲವೂ ಭಗವಂತನೆ ಎಂಬ ಅಧ್ಯಾತ್ಮವಿಚಾರರೂಪವಾದ ಜ್ಞಾನದಿಂದ ಅವನಲ್ಲಿ ಪ್ರೇಮ ಹೆಚ್ಚಾಗುತ್ತದೆ, ಇದೇ ಭಕ್ತಿ.

ಅದರಿಂದ 'ಸರ್ವತೋಽಸಂಗ'ವು ಅಧ್ಯಾತ್ಮವಿಚಾರವು ಭಕ್ತಿಗೆ ಮುಖ್ಯಸಾಧನ, ವೈರಾಗ್ಯ ಅನಂತರದ ಸಾಧನವೆಂದು ಅದನ್ನೂ 'ಶಿಕ್ಷೇತ್' ಗುರುಗಳಿಂದ ಕಲಿಯಬೇಕು.

ಹೀಗೆ ಭಕ್ತಿ ಸಾಧನವಾದ ಅಧ್ಯಾತ್ಮವಿಚಾರ ಮತ್ತು ವೈರಾಗ್ಯಗಳೆರಡನ್ನೂ ಹೇಳುವ ಉದ್ದೇಶವಿದ್ದುದರಿಂದ 'ವೈರಾಗ್ಯ'ವೆಂದೇ ಹೇಳದೆ 'ಸರ್ವತಃ ಮನಸಃ ಅಸಂಗ' ಎಂದು 'ಅಸಂಗ' ಶಬ್ದದಿಂದ ಎರಡನ್ನೂ ಹೇಳಿದ್ದಾರೆ.

'ಆತ್ಮವಿಮರ್ಶನಂ'(ಭಾ.೭.೧೨.೯) ಎಂದು ಸಪ್ತಮಸ್ಕಂಧದಲ್ಲಿ ಹೇಳಿದ್ದು ಕೂಡ ಹೀಗೇ ಅಧ್ಯಾತ್ಮವಿಚಾರ ವೈರಾಗ್ಯಗಳೆರಡನ್ನೂ ಕಲಿಯಬೇಕೆಂದು ಹೇಳುವ ಅಭಿಪ್ರಾಯದಿಂದ.

'ಅಸಂಗ' ಎಂದರೂ 'ಯಮ' ಎಂದರೂ ಒಂದೇ. ಮನೋನಿಗ್ರಹಕ್ಕೆ ಯಮನಿಯಮಗಳು ಬೇಕೆಂದು 'ದಾನಂ ಸ್ವಧರ್ಮೋ ನಿಯಮೋ ಯಮಶ್ಚ' (ಶ್ಲೋ.೧೪೩) ಎಂಬಲ್ಲಿ ಹೇಳಿದ್ದಾರೆ. ಹೀಗಾಗಿ ಅಧ್ಯಾತ್ಮವಿಚಾರ ವೈರಾಗ್ಯ ಗಳೆರಡೂ 'ಯಮ'ವೆ ಎಂದಂತಾಯಿತು.

❖❖❖

### ೨. ಸಾಧುಸಂಗದ ಶಿಕ್ಷಣ

ಮೋಕ್ಷಸಾಧನವೆಂದು ಉಕ್ತವಾದ ಭಾಗವತಧರ್ಮಾನುಷ್ಠಾನದಿಂದ ಲಭ್ಯ ವಾದ ಜ್ಞಾನ ಭಕ್ತಿ ವೈರಾಗ್ಯ ಆತ್ಮವಿಮರ್ಶನಾದಿ ರೂಪವಾದ ಸರ್ವಸಾಧನಗಳು ಹೇಗೆ ಕೈಗೂಡುವುವೆಂದರೆ ಅವೆಲ್ಲಕ್ಕೂ ಮುಖ್ಯ ಸಾಧನವು ಸಾಧುಸಂಗ—

'ಸಂಗಂ ಚ ಸಾಧುಷು ಶಿಕ್ಷೇತ್'(ಭಾ.೧೧.೩.೨೪)

'ಸಜ್ಜನರ ಒಡನಾಟ ಮಾಡುವುದನ್ನು ಕಲಿಯಬೇಕು' ಎಂದು.

ಇದು ಹಿಂದೆ ಮಹತ್ಸಮಾಗಮ ಪ್ರಕರಣ ೧೧ನೇ ಶ್ಲೋಕದಲ್ಲಿ

'ಮಹೀಯಸಾಂ ಪಾದರಜೋಭಿಷೇಕಂ ನ ವೃಣೀತ ಯಾವತ್'

'ಮಹಾತ್ಮರ ಪಾದರಜವನ್ನು ಶಿರದಲ್ಲಿ ಧರಿಸದ ತನಕ ಜ್ಞಾನ ಭಕ್ತ್ಯಾದಿ ಲಭ್ಯವಾಗಲಾರವು' ಎಂದು ಹೇಳಿದೆ.

'ಸಾಧುಸಂಗ' ಎಂಬಲ್ಲಿ 'ಸಂಗ' ಶಬ್ದದಿಂದ ಸಾಧುಗಳಲ್ಲಿ ಭಕ್ತಿಯೂ ಅವರ ಒಡನಾಟವೂ ಎರಡೂ ವಿವಕ್ಷಿತವಾಗಿದೆ. ಆದರಿಂದ 'ಸಂಗತಿ' ಒಡನಾಟ ಎಂಬ ಪದವನ್ನು ಬಿಟ್ಟು 'ಸಂಗ' ಎಂದಿದೆ.

'ದಯಾಂ ಮೈತ್ರೀಂ ಪ್ರಶ್ರಯಂ ಚ' ಎಂದು ಸಂಗದ ಪ್ರಭೇದಗಳನ್ನು ವಿಶೇಷವಾಗಿ ಇಲ್ಲಿಯೆ ಮುಂದೆ ಹೇಳುತ್ತಿರುವಾಗ ಮೊದಲಿಗೆ ಸಾಮಾನ್ಯವಾಗಿ 'ಸಂಗ' ಎಂದು ಇಲ್ಲಿ ಪ್ರತ್ಯೇಕ ಹೇಳಿದ್ದೇಕೆ ಎಂಬ ಪ್ರಶ್ನೆಗೂ ಈಗ ಅವಕಾಶವಿಲ್ಲ. ಏಕೆಂದರೆ ಸಂಗ ಶಬ್ದದಿಂದ ಸಜ್ಜನರ ಒಡನಾಟ, ಸಂಗತಿಯೂ ವಿವಕ್ಷಿತವಾಗಿದೆ. ಅದಕ್ಕಾಗಿ 'ಸಂಗ' ಶಬ್ದವನ್ನು ಬಳಸಿದ್ದಾರೆ.

ಹಾಗಾದರೆ 'ಸಂಗ' ಎಂದು ಸಾಮಾನ್ಯ ಶಬ್ದವೆ ಸಾಕು, ಮುಂದೆ ದಯಾ ಮೈತ್ರಿ ಪ್ರಶ್ರಯ ಎಂದು ಅದರ ಪ್ರಭೇದಗಳನ್ನೇಕೆ ಹೇಳಬೇಕು? ಎಂದರೆ, ಭಕ್ತರ ತಾರತಮ್ಯಾನುಸಾರಿಯಾದ ಭಕ್ತಭಕ್ತಿಯು ಭಗವದ್‌ಭಕ್ತಿಗೆ ಸಹಕಾರಿ ಎಂದು ಅವುಗಳ ಪ್ರಯೋಜನವನ್ನು ಹಿಂದೆ ಹೇಳಿದ್ದನ್ನೂ ಜ್ಞಾಪಿಸುವ ಉದ್ದೇಶವಿದೆ.

ಮತ್ತು ತೃತೀಯಸ್ಕಂಧದಲ್ಲಿ ಭಗವದನುಗ್ರಹವೆಂಬ ಬೇರೆ ಪ್ರಯೋಜನ ವನ್ನೂ ಹೇಳಿದ್ದಾರೆ—

ಮಹತಾಂ ಬಹುಮಾನೇನ ಹೀನಾನಾಮನುಕಂಪಯಾ
ಮೈತ್ರ್ಯಾಚೈವಾತ್ಮತುಲ್ಯೇಷು ಭಗವಾನ್ ಸಂಪ್ರಸೀದತಿ ॥

(ಭಾ.೩.೩೦.೧೭)

❖❖❖

## ೩. ಶೌಚದ ಶಿಕ್ಷಣ

'ಶೌಚಂ ಶಿಕ್ಷೇತ್'–ಶೌಚವನ್ನು ಗುರುಗಳಿಂದ ತಿಳಿದು ಅವರ ಅನುಜ್ಞೆಯಿಂದ ಅನುಷ್ಠಾನ ಮಾಡಬೇಕು. ಯದ್ಯಪಿ ಶೌಚವನ್ನು ಬೇರೆಕಡೆ ಯಮದಲ್ಲಿ ಸೇರಿಸಿದ್ದುಂಟು—

'ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಽಽರ್ಜವಂ ।
ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚೈತೇ ಯಮಾ ದಶ ॥'

'ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ದಯೆ ಆರ್ಜವ ಕ್ಷಮೆ ಧೃತಿ ಮಿತಾಹಾರ ಶೌಚ–ಎಂದು ಯಮಗಳು ಹತ್ತು' ಎಂದು ಯೋಗಯಾಜ್ಞವಲ್ಕ್ಯ ವಚನವಿದೆ. ಆದರೂ ಭಾಗವತದಲ್ಲಿ ನಿಯಮಗಳಲ್ಲಿ ಶೌಚವಿದೆ—

'ಶೌಚಂ ತಪಸ್ತುಷ್ಟಿಃ ಸ್ವಾಧ್ಯಾಯೋ ಹರಿಪೂಜನಂ ನಿಯಾಮಾಃ'

ಎಂದು ತಂತ್ರಸಾರವಿದೆ. ಮತ್ತು

ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽತಿಥ್ಯಂ ಮದರ್ಚನಂ ।
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯ ಸೇವನಂ ॥
(ಭಾ.೧೧.೧೯.೩೪)

'ಶೌಚ ಜಪ ತಪ ಹೋಮ ಧರ್ಮಶ್ರದ್ಧೆ ಅತಿಥಿಸತ್ಕಾರ ಹರಿಪೂಜೆ ತೀರ್ಥಯಾತ್ರೆ ಸಜ್ಜನ ಹಿತವನ್ನು ಬಯಸುವುದು ಸಿಕ್ಕಿದ್ದರಲ್ಲಿ ತೃಪ್ತಿಪಡುವುದು ಗುರುಸೇವೆ ವೇದಾಧ್ಯಯನ ಇವು ನಿಯಮಗಳು' ಎಂದು ಏಕಾದಶಸ್ಕಂಧ ವಚನವಿದೆ.

ನಿಯಮಗಳಲ್ಲಿ ಸೇರುವ ಭಾಗವತಧರ್ಮಗಳ ನಡುವೆ ಇಲ್ಲಿಯೂ 'ಶೌಚಂ ಶಿಕ್ಷೇತ್' ಎಂದು ಹೇಳಿದೆ.

ಆದರೂ ಬೇರೆ ಕಡೆ ಯಮಾಂತರ್ಗತವಾಗಿ ಉಕ್ತವಾದ ಶೌಚವನ್ನು ಇಲ್ಲಿ ನಿಯಮಾಂತರ್ಗತವಾಗಿ ಹೇಳಲು ಕಾರಣವಿದೆ—ವಿಶೇಷಫಲಕ್ಕಾಗಿ ನಿಯಮೇನ ಅನುಷ್ಠಾನ ವಿಹಿತವಾಗಿದೆ ಎಂದು. ಬೇರೆಕಡೆ ಯಮದಲ್ಲಿ ಸೇರಿದಂತೆ ಹೇಳಿದ 'ಶೌಚ'ವೆಂದರೆ ಮಣ್ಣು ನೀರುಗಳಿಂದ ಕಾಲುತೊಳೆದು ಕೊಳ್ಳುವುದು, ವಿಶೇಷ ಫಲಸಾಧಕವೇನಲ್ಲ. ಆದರಿಂದ ಇಂಥ ಶೌಚವನ್ನು, ಅಲ್ಲಿ

ಯಮದಲ್ಲಿ ಸೇರಿಸುವುದೂ ಯುಕ್ತವಲ್ಲ, ಇಲ್ಲಿ ನಿಯಮದಲ್ಲಿ ನಿವೇಶ ಮಾಡಿದರೂ ಪ್ರಯೋಜನವಿಲ್ಲ. ಹೀಗೆ ನಿಂದಿತವಾದ 'ಶೌಚ'ವನ್ನು ಎರಡೂ ಕಡೆ ನಿವೇಶ ಮಾಡಿದ್ದರಿಂದಲೇ 'ಶೌಚ' ಶಬ್ದಕ್ಕೇ ಬೇರೆ ವಿಶೇಷಾರ್ಥವಿದೆ. ಅನಿಂದಿತವಾದ ಉತ್ತಮ ಅರ್ಥವನ್ನೂ ಕೂಡ ಆ ಶಬ್ದ ಹೇಳುತ್ತದೆ. ವಿಶೇಷ ಫಲಕ್ಕಾಗಿ ಅದನ್ನು ನಿಯಮೇನ ಅನುಷ್ಠಾನ ಮಾಡುವುದೂ ಯುಕ್ತವಾಗುತ್ತದೆ' ಎನ್ನುವ ಅಭಿಪ್ರಾಯ ಕಾಣುತ್ತದೆ. ಅದಕ್ಕಾಗಿಯೇ ಇಲ್ಲಿ ಬೇರೆ ನಿಯಮಗಳಂತೆಯೇ ನಿಯಮೇನ ಅನುಷ್ಠಾನ ಮಾಡಬೇಕಾಗಿರುವ ಭಾಗವತಧರ್ಮಗಳಲ್ಲಿ ಶೌಚವನ್ನೂ ಸೇರಿಸಿದ್ದಾರೆ.

ಇದು ಯುಕ್ತವೆ. ಏಕೆಂದರೆ ಶೌಚವೆಂದರೆ ಶುಚಿಯಾಗಿರುವುದೆಂದರ್ಥ.

ಹೀಗಾಗಿ 'ಶೌಚ'ವೆಂದರೆ ಶುದ್ಧಿಯೆ. ಉತ್ತಮವಾದ ಶುದ್ಧಿ ಮನಃಶುದ್ಧಿ. ಕಾಮ್ಯವಿಷಯಾಸಕ್ತಿಯನ್ನು ತೊರೆಯುವುದರಿಂದ ಲಭಿಸುವಂಥದ್ದು. ಹೀಗಾಗಿ ಮನಃಶುದ್ಧಿಗೆ ಹೇತುವಾದ ನಿಷ್ಕಾಮತ್ವವೆ ಇಲ್ಲಿ ಶೌಚಶಬ್ದದ ಅರ್ಥ. ಏಕಾದಶಸ್ಕಂಧದಲ್ಲಿ .

'ಕರ್ಮಸ್ವಸಂಗಮಃ ಶೌಚಂ' (ಭಾ.೧೧.೧೯.೩೮)

'ಕರ್ಮಗಳಲ್ಲಿ ಫಲದ ಆಸೆ ಕರ್ತೃತ್ವಾಭಿಮಾನಗಳಿಲ್ಲದಿರುವುದೇ ಶೌಚ' ಎಂದು ಸ್ಪಷ್ಟವಾಗಿಯೇ ಉಕ್ತವಾಗಿದೆ. ಫಲಕಾಮನೆ ಇಲ್ಲದೆ ಮಾಡಿದ ಕರ್ಮವೇ ಅಬಂಧಕವಾಗುತ್ತದೆ. ಮೋಕ್ಷಸಾಧನವಾಗುತ್ತದೆ, ಎಂದು ಅಭಿಪ್ರಾಯ.

❖❖❖

## ೪. ತಪಸ್ಸಿನ ಶಿಕ್ಷಣ

'ತಪಃ ಶಿಕ್ಷೇತ್' ತಪಸ್ಸನ್ನು ಗುರುಗಳಿಂದ ತಿಳಿದು ಅವರನುಜ್ಞೆ ಪಡೆದು ಅನುಷ್ಠಾನ ಮಾಡಬೇಕು.

ಇಲ್ಲಿಯೂ ಸಮಸ್ಯೆ ಇದೆ—

'ಶೌಚಂ ಜಪಸ್ತಪೋ ಹೋಮಃ ಶ್ರದ್ಧಾऽತಿಥ್ಯಂ ಮದರ್ಚನಂ ।
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯ ಸೇವನಂ ॥'
(ಭಾ.೧೧.೧೯.೩೪)

ಎಂದು ಭಾಗವತ ನಿಯಮಗಳಲ್ಲಿ ತಪಸ್ಸನ್ನು ಹೇಳಿದೆ. ಯೋಗ ಯಾಜ್ಞವಲ್ಕ್ಯದಲ್ಲಿಯೂ

'ತಪಃ ಸಂತೋಷ ಮಾಸ್ತಿಕ್ಯಂ ದಾನಮೀಶ್ವರ ಪೂಜನಂ ।
ವೇದಾಂತ ಶ್ರವಣಂ ಚೈವ ಹ್ರೀರ್ಮತಿಶ್ಚ ಜಪೋ ಹುತಂ ।
ದಶೈತೇ ಮುನಿಭಿಃ ಪ್ರೋಕ್ತಾ ನಿಯಾಮಾಸ್ತತ್ವದರ್ಶಿಭಿಃ ॥

ಎಂದಿದೆ. ಎರಡೂ ಕಡೆ ತಪಸ್ಸನ್ನು ನಿಯಮದಲ್ಲಿ ಸೇರಿಸಿದ್ದಾರೆ.

ಎರಡೂ ಕಡೆ ನಿಯಮದಲ್ಲಿಯೇ ತಪಸ್ಸನ್ನೇಕೆ ಸೇರಿಸಿದ್ದಾರೆ? ಯಮದಲ್ಲಿಯೂ ಶೌಚದಂತೆ ತಪಸ್ಸನ್ನೂ ಏಕೆ ಸೇರಿಸಲಿಲ್ಲ? ಇದಕ್ಕೆ ಶೌಚದ ವಿಷಯದಲ್ಲಿ ಹೇಳಿದ ಸಮಾಧಾನವಿಟ್ಟುಕೊಳ್ಳಬೇಕು.

'ತಪಃ' ಶಬ್ದಕ್ಕೆ ಕಾಯಕ್ಲೇಶವೆಂಬ ಸಾಮಾನ್ಯ ಅರ್ಥವಿಟ್ಟುಕೊಳ್ಳುವುದಕ್ಕಿಂತ ಮನೋನಿಗ್ರಹರೂಪವಾದ ವಿಶೇಷ ಅರ್ಥವಿಟ್ಟುಕೊಳ್ಳುವುದೇ ಪ್ರಶಸ್ತ. ಆ ಅರ್ಥದಲ್ಲಿ 'ತಪಸ್ಸು' ಉತ್ತಮಫಲ ಸಾಧನವಾಗುತ್ತದೆ, ಅವಶ್ಯ ನಿಯಮೇನ ಅನುಷ್ಠಾನ ಮಾಡಬೇಕಾದ್ದೆಂದೆನಿಸುತ್ತದೆ. ಇದನ್ನು ಸೂಚಿಸಲೆಂದೇ ಎರಡೂಕಡೆ ನಿಯಮ ದಲ್ಲಿಯೇ ತಪಸ್ಸನ್ನು ಸೇರಿಸುತ್ತಾರೆ.

ಏಕಾದಶಸ್ಕಂಧದಲ್ಲಿ ಇದೇ ಅಭಿಪ್ರಾಯದಿಂದ

'ಕಾಮತ್ಯಾಗ'ಸ್ತಪಃ ಸ್ಮೃತಂ' (೧೧.೧೯.೩೭)

ನಿಷಿದ್ಧಕರ್ಮ ತ್ಯಾಗದಿಂದ ಮನೋನಿಗ್ರಹ ಮಾಡಿಕೊಳ್ಳುವುದೇ ತಪಸ್ಸು ಎಂದಿದೆ. ಹಿಂದೆ 'ಇತ್ಥಂ ಶರತ್ ಪ್ರಾವೃಷಿಕಾವೃತೂ' ಎಂಬ ೧೩೭ನೇ ಶ್ಲೋಕದ ವಿವರಣೆಯಲ್ಲಿ ಇದನ್ನು ಸ್ಪಷ್ಟಪಡಿಸಿದ್ದೇವೆ. ಮಹನ್ನಿಂದಾವರ್ಜನ ಆತ್ಮಪ್ರಶಂಸಾ ವರ್ಜನ ಎಂಬ ಈ ಎರಡು ಪ್ರಕರಣಗಳಲ್ಲಿಯೂ ತಪಸ್ಸೆಂಬ ಭಾಗವತಧರ್ಮ ಉಕ್ತವಾಗಿದೆ.

'ಮಹಾತ್ಮರ ನಿಂದೆ ಮಾಡುವುದು ಆತ್ಮಪ್ರಶಂಸೆ ಮಾಡಿಕೊಳ್ಳುವುದು ಎರಡೂ ಸಾಮಾನ್ಯವಾಗಿ ಎಲ್ಲೆಡೆ ಕಂಡುಬರುತ್ತದೆ. ಮನದಲ್ಲಿ ತಾನೆ ಮೇಲು ಇತರರು ಕೀಳೆಂದುಕೊಳ್ಳುವುದು ಸರ್ವಾನುಭವ ಸಿದ್ಧವಾಗಿದೆ. ಇದೇ ಆತ್ಮಪ್ರಶಂಸೆ–ಪರನಿಂದೆಗಳೆನಿಸುತ್ತದೆ. ಇದನ್ನು ವ್ಯಕ್ತಮಾಡುವುದರಿಂದ ಮಾತು

ಗಳೂ ಕೂಡ ಹಾಗೆ ಕರೆಸಿಕೊಳ್ಳುತ್ತವೆ. ನಿಷಿದ್ಧಕರ್ಮಗಳಾದ ಇವೆರಡನ್ನೂ ಮಾಡದಂತೆ ಮನಸ್ಸನ್ನು ನಿಗ್ರಹಿಸಿಕೊಳ್ಳಬೇಕು' ಇದು ಮಾನಸ ತಪಸ್ಸು ಎಂದು.

❖❖❖

## ೫. ತಿತಿಕ್ಷಾ ಶಿಕ್ಷಣ

'ತಿತಿಕ್ಷಾಂ ಶಿಕ್ಷೇತ್' ಸಹನೆ ತಿತಿಕ್ಷಾ ಎನಿಸುತ್ತದೆ.

'ತಿತಿಕ್ಷಾ ದುಃಖ ಸಂಮರ್ಷಃ' (ಭಾ.೧೧.೧೯.೩೬)

'ದುಃಖ ಸಹನೆಯೆ ತಿತಿಕ್ಷಾ' ಎಂದು ಏಕಾದಶಸ್ಕಂಧದಲ್ಲಿ ಹೇಳಿದೆ. ಯದ್ಯಪಿ ಇಲ್ಲಿ ದುಃಖವನ್ನೇ ಸಹಿಸಿಕೊಳ್ಳುವುದು ತಪಸ್ಸೆಂದು ವಿವಕ್ಷಿತವಲ್ಲ. ದುಃಖಬಂದಾಗ ಅದರಿಂದ ಉದ್ವೇಗಗೊಳ್ಳಬಾರದು. ದುಃಖೋದ್ವೇಗವನ್ನು ಸಹಿಸಿಕೊಳ್ಳಬೇಕು ಎಂದರ್ಥ ವಿವಕ್ಷಿತ. ಆದರೂ ದುಃಖವನ್ನೇ ಸಹಿಸಿಕೊಳ್ಳ ಬಲ್ಲವನಿಗೆ ದುಃಖಸಾಧನದಿಂದಾಗುವ ಉದ್ವೇಗದ ಸಹನೆ ಕಷ್ಟವೇನಲ್ಲ. ಸುಲಭವಾದೀತು. ಅದರಿಂದ 'ದುಃಖಸಂಮರ್ಷಃ' 'ದುಃಖಸಹನೆಯೇ ತಪಸ್ಸು' ಎನಿಸುತ್ತದೆ ಎಂದಿದ್ದಾರೆ. ಇದನ್ನು ಹಿಂದೆ ಇಂದ್ರಿಯಜಯ ಪ್ರಕರಣದಲ್ಲಿ 'ಯನ್ಮೈಥುನಾದಿ ಗೃಹಮೇಧಿ ಸುಖಂ' ಎಂಬ ೧೪೧ನೇ ಶ್ಲೋಕದ ವಿವರಣೆಯಲ್ಲಿ ಸ್ಪಷ್ಟಪಡಿಸಿದ್ದೇವೆ.

❖❖❖

## ೬. ಮೌನ ಶಿಕ್ಷಣ

'ಮೌನಂ ಶಿಕ್ಷೇತ್' ಮುಂದೆ 'ಜರಾಯುಜಂ ಸ್ವೇದಜಮಂಡಜೋದ್ಭವಂ' ಎಂಬ ೩೦೭ನೇ ಶ್ಲೋಕದ ವಿವರಣೆಯಲ್ಲಿ ಹೇಳುವಂತೆ 'ಮೌನ' ಎಂಬುದಕ್ಕೆ ವಿಶೇಷ ಅರ್ಥವಿದೆ. ಅದಕ್ಕೆ ಮಾತನಾಡದೇ ಇರುವುದೆಂದರ್ಥವಲ್ಲ.

ನಮ್ಮ ವ್ಯವಹಾರದಲ್ಲಿರುವ ಎಲ್ಲ ಶಬ್ದಗಳಿಗೂ ಭಗವಂತನೆ ಮುಖ್ಯ ಅರ್ಥ. ಬೇರೆ ಎಲ್ಲವೂ ಅಮುಖ್ಯ ಅರ್ಥವೇ. ಇದನ್ನು ತಿಳಿಯದೆ ಲೌಕಿಕರು ಬೇರೆ ಅರ್ಥದಲ್ಲಿಯೇ ಶಬ್ದಪ್ರಯೋಗ ಮಾಡುವುದರಿಂದ ಲೌಕಿಕರಿಗೆ ಬೇರೆ ಅರ್ಥದಲ್ಲಿಯೇ ಶಬ್ದವು ಪ್ರಸಿದ್ಧವಾಗುವುದರಿಂದ, ಲೌಕಿಕದ ದೃಷ್ಟಿಯಲ್ಲಿ ಬೇರೆ

ಅರ್ಥವು ಶಬ್ದಕ್ಕೆ ಮುಖ್ಯಾರ್ಥವೆನಿಸುತ್ತದೆ. ಅಮುಖ್ಯಾರ್ಥವೆನಿಸುವುದಿಲ್ಲ. ಗುರುಗಳಿಂದ ಇದನ್ನು ತಿಳಿದುಕೊಂಡು ಲೌಕಿಕ ಪದಾರ್ಥಗಳಲ್ಲಿ ಅಮುಖ್ಯ ವಾಗಿ, ಭಗವಂತನಲ್ಲಿ ಮಾತ್ರ ಮುಖ್ಯವಾಗಿ ಶಬ್ದಪ್ರಯೋಗ ಮಾಡಬೇಕು. 'ಲೌಕಿಕ ಪದಾರ್ಥದಲ್ಲಿ ಮುಖ್ಯವಾಗಿ ಶಬ್ದಪ್ರಯೋಗ ಮಾಡದಿರುವುದೇ' ಮೌನ ಎಂಬ ಭಾಗವತಧರ್ಮ.

ಶಬ್ದ ಪ್ರಯೋಗವನ್ನು ಸರ್ವಥಾ ಮಾಡದಿರುವ ಮೌನವು ಮೋಕ್ಷ ಸಾಧನ ಧರ್ಮವಾಗುವುದಿಲ್ಲ. ಅದು ಪರಮಪುರುಷಾರ್ಥಸಾಧಕವಾಗುವುದಿಲ್ಲ. ಭಗವಂತನ ಬಗ್ಗೆ ಸ್ತೋತ್ರರೂಪದಿಂದ ಶಬ್ದಪ್ರಯೋಗ ಮಾಡದಿದ್ದರೆ ಅದು ಅಪರಾಧವಾಗುತ್ತದೆ. ಮಹಾಪುರುಷಾರ್ಥ ಲಾಭವಿಲ್ಲದಂತಾಗುತ್ತದೆ.

ಹೀಗೆ 'ಮೌನ' ಶಬ್ದಕ್ಕೆ ವಿಶೇಷಾರ್ಥವಿರುವುದರಿಂದ ಅದನ್ನು ಬೇರೆ ಗ್ರಂಥಗಳಲ್ಲಿ ಯಮಗಳಲ್ಲಿ ಒಂದೆಂದು ಪರಿಗಣಿಸಲಿಲ್ಲ. ನಿಯಮದಲ್ಲಿಯೂ ಒಂದೆಂದು ಪರಿಗಣಿಸಲಿಲ್ಲ. ಭಾಗವತಧರ್ಮಗಳಲ್ಲಿ ಒಂದಾಗಿ ಸಪ್ತಮ ಏಕಾದಶಸ್ಕಂಧಗಳೆರಡರಲ್ಲಿಯೂ ಪರಿಗಣಿಸಿದ್ದಾರೆ.

❖❖❖

## ೭. ಸ್ವಾಧ್ಯಾಯ ಶಿಕ್ಷಣ

'ಸ್ವಾಧ್ಯಾಯಂ ಶಿಕ್ಷೇತ್' 'ಸ್ವಾಧ್ಯಾಯ' ಶಬ್ದಕ್ಕೂ ಇಲ್ಲಿ ವಿಶೇಷಾರ್ಥವಿದೆ.

ವೇದಾಂತ ಶ್ರವಣ ಎಂಬ ಹೆಸರಿನಿಂದ ಸಾಮಾನ್ಯಾರ್ಥದಲ್ಲಿಯೆ ಇದು ಬೇರೆಕಡೆ ಯೋಗಶಾಸ್ತ್ರದಲ್ಲಿ ನಿಯಮಗಳಲ್ಲಿ ಒಂದಾಗಿ ಪರಿಗಣಿತವಾಗಿದೆ ಹೊರತು ವಿಶೇಷಾರ್ಥದಲ್ಲಿ ಅಲ್ಲ. ವಿಶೇಷಾರ್ಥದಲ್ಲಿ ಸಪ್ತಮ ಏಕಾದಶಸ್ಕಂಧಗಳೆರಡರಲ್ಲಿಯೂ ಉಕ್ತವಾಗಿದೆ. ಎಲ್ಲ ಶಬ್ದಗಳೂ ಕೂಡ ಹರಿನಾಮಗಳೆಂದು ತಿಳಿಯುವುದು, ತಿಳಿದು ಆ ಶಬ್ದಗಳಿಂದ ಹರಿಯನ್ನು ಹೊಗಳುವುದು ಸ್ವಾಧ್ಯಾಯವೆಂಬ ಭಾಗವತ ಧರ್ಮವೆನಿಸುತ್ತದೆ. ಮುಂದೆ 'ಜರಾಯುಜಂ ಸ್ವೇದಜಮಂಡಜೋದ್ಭವಂ' ಎಂಬ ೩೦೭ನೇ ಶ್ಲೋಕದ ವಿವರಣೆಯಲ್ಲಿ ಇದಕ್ಕೆ ವಿವರಣೆ ಬರುತ್ತದೆ.

❖❖❖

## ೮. ಆರ್ಜವ ಶಿಕ್ಷಣ

'ಆರ್ಜವಂ ಶಿಕ್ಷೇತ್' ಆರ್ಜವವನ್ನು ಬೇರೆ ಕಡೆ ಯಮಗಳಲ್ಲಿ ಒಂದಾಗಿ ಪರಿಗಣಿಸಿದ್ದಾರೆ—

'ಅಹಿಂಸಾ ಸತ್ಯ ಮಸ್ತೇಯಂ ಬ್ರಹ್ಮಚರ್ಯಂ ದಯಾಽಽರ್ಜವಂ ।
ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚೈತೇ ಯಮಾ ದಶ ॥'

ಎಂದು ಯೋಗಯಾಜ್ಞವಲ್ಕ್ಯ ವಚನವಿದೆ. ಭಾಗವತದಲ್ಲಿ ಯಮ ನಿಯಮಗಳೆರಡರಲ್ಲಿಯೂ ಸೇರಿಸದೆ ಭಾಗವತಧರ್ಮಗಳಲ್ಲಿ ಸೇರಿಸಿ ಸಪ್ತಮ ಏಕಾದಶಸ್ಕಂಧಗಳೆರಡಲ್ಲಿಯೂ ಹೇಳಿದ್ದಾರೆ. ಏಕೆಂದರೆ ಆರ್ಜವವು ಸರ್ವ ಭಾಗವತ ಧರ್ಮಗಳಲ್ಲಿ ದೋಷರೂಪವಾದ ಕೈತವದ ನಿವರ್ತಕವಾಗಿದೆ. ಸರ್ವಭಾಗವತ ಧರ್ಮಗಳಿಗೆ ಉಪಕಾರಕವಾಗಿದೆ.

ಕಾಯ ವಾಕ್ ಮನಸ್ ರೂಪವಾದ ತ್ರಿಕರಣಗಳಲ್ಲಿ ಒಂದೇ ರೀತಿಯಾಗಿರುವುದೇ ಆರ್ಜವ. ಅದು ಅದಕ್ಕೆ ವಿರೋಧಿಯಾದ ಕಾಪಟ್ಯಕ್ಕೆ ನಿವರ್ತಕವೆನಿಸುವುದು ನ್ಯಾಯವೇ ಆಗಿದೆ. ಅದು ಹೀಗೆ ಸರ್ವಭಾಗವತ ಧರ್ಮೋಪಕಾರಕವಾಗಿ ಶ್ರೇಷ್ಠವಾಗುವುದರಿಂದ, ಪರಮಪುರುಷಾರ್ಥ ಪ್ರಾಪ್ತಿಗೆ ಕಾರಣವಾಗುವುದರಿಂದ ಯಮ ನಿಯಮಗಳೆರಡರಲ್ಲಿಯೂ ಸೇರಿಸಲಿಲ್ಲ.

ಈ ಆರ್ಜವಕ್ಕೆ ನಿಷ್ಕಾಮತ್ವರೂಪವಾದ ಶೌಚವೇ ಹೇತು ಎಂದೂ ತಿಳಿಯಬೇಕು. ಅದರಿಂದಲೇ ಶೌಚವೂ ಕೂಡ ಸರ್ವಧರ್ಮೋಪಕಾರಕ ವಾದ್ದರಿಂದ ಸರ್ವಧರ್ಮಗಳಲ್ಲಿ ಭಾಗವಾಗಿ ಸೇರಿಕೊಂಡಿರುತ್ತದೆ.

ಮತ್ತು ಬೇರೆಕಡೆ ಯಮಗಳಲ್ಲಿ ಸೇರಿರುವುದೆಂದು ಪರಿಗಣಿತವಾದರೂ ಇಲ್ಲಿ ಆರ್ಜವವು ಯಮ ನಿಯಮಗಳೆರಡರಲ್ಲಿ ಪರಿಗಣಿತವಾಗದೆಯೇ ಸಪ್ತಮ ಏಕಾದಶಸ್ಕಂಧಗಳೆರಡರಲ್ಲಿ ಸೇರಿದುದರಿಂದ ಈ ಒಂದು ವಿಶೇಷವು ಸೂಚಿತವಾಗುತ್ತದೆ—ಏನೆಂದರೆ, ಆರ್ಜವವು ಯಮ ನಿಯಮಗಳಲ್ಲಿ ಸೇರಿದೆ ಎಂಬ ಕಾರಣಕ್ಕೆ ಭಾಗವತ ಧರ್ಮಗಳಲ್ಲಿ ಪರಿಗಣಿತವಾದುದಲ್ಲ, ಮೋಕ್ಷ ಯೋಗ್ಯ ಚೇತನರ ಸ್ವಾಭಾವಿಕ ಲಕ್ಷಣವಾಗಿ ಶ್ರೇಷ್ಠವಾಗಿರುವ ದೈವೀ ಸಂಪತ್ತೆಂದು ಪರಿಗಣಿತವಾಗಿದೆ ಎಂಬ ಕಾರಣಕ್ಕಾಗಿ ಎಂದು ತಿಳಿಯಬೇಕು.

ಆದರಿಂದ ಆರ್ಜವವು ಅತ್ಯಾವಶ್ಯಕವಾದ ಭಾಗವತಧರ್ಮವಾಗಿದೆ ಎಂದೂ ತಿಳಿಯ ಬೇಕು. ಮುಂದೆ ೨೪೫, ೨೪೬ನೇ ಶ್ಲೋಕಗಳಲ್ಲಿ ಆರ್ಜವದ ಬಗ್ಗೆ ಹೆಚ್ಚಿನ ವಿವರಗಳನ್ನು ಕಾಣಬಹುದು.

❖❖❖

## ೯. ಬ್ರಹ್ಮಚರ್ಯ ಶಿಕ್ಷಣ

'ಬ್ರಹ್ಮಚರ್ಯಂ ಶಿಕ್ಷೇತ್' ಬ್ರಹ್ಮಚರ್ಯವೆಂಬ ಭಾಗವತಧರ್ಮವನ್ನು ತಿಳಿಯಬೇಕು.

ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ
ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ ॥

ಸ್ತ್ರೀಯ ಬಗ್ಗೆ ಯೋಚಿಸುವುದು, ಸ್ತ್ರೀ ಬಗ್ಗೆ ಮಾತಾಡುವುದು, ಸ್ತ್ರೀಯೊಡನೆ ಸರಸ, ಆಸೆಯ ನೋಟ, ಏಕಾಂತದಲ್ಲಿ ಮಾತು, ಸಂಗದ ಸಂಕಲ್ಪ, ಸಂಗ–ಇವು ಎಂಟು, ಸ್ಮರಣ ಕೀರ್ತನ ಕೇಲಿ ಪ್ರೇಕ್ಷಣ ಗುಹ್ಯಭಾಷಣ ಸಂಕಲ್ಪ ಅಧ್ಯವಸಾಯ ಕ್ರಿಯಾನಿರ್ವೃತ್ತಿ ಎಂಬ ಎಂಟು ಬಗೆಯ ಮೈಥುನ. ಇವನ್ನು ಎಲ್ಲವನ್ನೂ ಸರ್ವಥಾ ಪರಿತ್ಯಜಿಸುವುದು ಬ್ರಹ್ಮಚರ್ಯ.

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।
ಸರ್ವತ್ರ ಮೈಥುನತ್ಯಾಗಂ ಬ್ರಹ್ಮಚರ್ಯಂ ಪ್ರಚಕ್ಷತೇ ॥

ಗರುಡಪುರಾಣ (೨೩.೮.೬೬)

ಕಾಯ ವಾಕ್ ಮನಸುಗಳೆಂಬ ತ್ರಿಕರಣಗಳಲ್ಲಿ ಎಲ್ಲ ಅವಸ್ಥೆ ಎಲ್ಲಕಾಲ ಎಲ್ಲ ದೇಶಗಳಲ್ಲಿ ಮೈಥುನ ತ್ಯಾಗ ಮಾಡುವುದು ಬ್ರಹ್ಮಚರ್ಯವೆನಿಸುತ್ತದೆ. ಈ ಬ್ರಹ್ಮಚರ್ಯದಿಂದೇನು ಸಾಧನೆ ಮಾಡಲಾದೀತು? ಭಗವಂತನಲ್ಲಿ ಭಕ್ತಿಗೆ ಇದೇನೂ ಸಾಧಕವಲ್ಲ ತಾನೆ? ಭಕ್ತಿಸಾಧಕವಾದ ಧರ್ಮವನ್ನೇ ಭಾಗವತ ಧರ್ಮಗಳಲ್ಲಿ ಪರಿಗಣನೆ ಮಾಡಬೇಕು ತಾನೆ?

ಒಂದುವೇಳೆ ಈ ಬ್ರಹ್ಮಚರ್ಯದ ಸಮರ್ಪಣದಿಂದಲೇ ಭಗವಂತನಲ್ಲಿ ಶ್ರದ್ಧಾಭಕ್ತಿಗಳನ್ನು ಹೊಂದಲು ಯತ್ನಿಸಬೇಕೆಂದರೆ ಎಲ್ಲ ನಿವೃತ್ತಿಕರ್ಮಗಳಿಗೂ ಸಮರ್ಪಣದಿಂದ ಭಕ್ತಿಸಂಪಾದನೆಯೇ ಗುರಿ ಎಂದು ಹೇಳುತ್ತಿರುವ ನೀವು ಈಗ

ಬ್ರಹ್ಮಚರ್ಯ ಮಾತ್ರದ ವಿಷಯದಲ್ಲಿ ಹಾಗೆ ಹೇಳುವುದಕ್ಕೆ ಅರ್ಥವಿಲ್ಲ. ಅದರಿಂದ ಬ್ರಹ್ಮಚರ್ಯವನ್ನು ಭಾಗವತಧರ್ಮಗಳಲ್ಲಿ ಒಂದಾಗಿ ಪರಿಗಣಿಸುವುದು ಸರಿಯಲ್ಲ ಎಂಬ ಪ್ರಶ್ನೆ ಬರುತ್ತದೆ.

ಆದರೆ 'ಬ್ರಹ್ಮಚರ್ಯ' ಎಂಬ ಶಬ್ದಕ್ಕೇ ಬೇರೆಯೇ ಒಂದು ವಿಶೇಷಾರ್ಥ ವಿಟ್ಟುಕೊಂಡರೆ ಈ ಪ್ರಶ್ನೆಗೆ ಅವಕಾಶವಿರುವುದಿಲ್ಲ. 'ಎಲ್ಲ ಇಂದ್ರಿಯಗಳನ್ನೂ ಅವುಗಳ ಕಾರ್ಯಗಳನ್ನೂ ಶರೀರವನ್ನೂ ಶರೀರವ್ಯಾಪಾರಗಳನ್ನೂ ಬ್ರಹ್ಮ ವಿಷಯವಾಗಿ ಮಾಡಿ ಬ್ರಹ್ಮನಲ್ಲಿ ಅರ್ಪಿಸುವುದೇ' ಬ್ರಹ್ಮಚರ್ಯ. ಮುಂದೆ,

'ತತ್ವೇ ಮನೋ, ದರ್ಶನೇ ದೃಗಪಿ, ಸ್ತುತೌ ಚ
ವಾಕ್, ಕರ್ಮಣಿ ಹ್ಯಪಿ ಕರೌ, ಶ್ರವಣಂ ಕಥಾಯಾಂ'

'ಪರತತ್ವವಾದ ಪರಮಾತ್ಮನಲ್ಲಿ ಮನಸು, ಅವನ ದರ್ಶನದಲ್ಲಿ ಕಣ್ಣು, ಸ್ತೋತ್ರದಲ್ಲಿ ನಾಲಿಗೆ, ಪೂಜೆಯಲ್ಲಿ ಕೈ, ಸೇವೆಯಲ್ಲಿ ಮೈ, ಶ್ರವಣದಲ್ಲಿ ಕಿವಿ—ಹೀಗೆ ಷಡಂಗಗಳಿಂದ ಷಟ್‌ಸೇವೆ ಮಾಡದೆ ಭಕ್ತಿಸಂಪಾದನೆ ಸಾಧ್ಯವಿಲ್ಲ' ವೆಂದು ಪ್ರಹ್ಲಾದನು ನರಸಿಂಹನ ಮುಂದೆ ಹೇಳುತ್ತಾನೆ.

ಈ ಬ್ರಹ್ಮಚರ್ಯವು ಭಕ್ತಿಗೆ ಮುಖ್ಯ ಸಾಧನವಾಗಿದ್ದು 'ಷಡಂಗ ಸೇವಾ' ಎಂದು ಕರೆಸಿಕೊಳ್ಳುತ್ತದೆ. ಇದರ ವಿಷಯದಲ್ಲಿ ಹೆಚ್ಚಿನ ವಿವರಗಳು ಮುಂದೆ ೨೫೮ನೇ ಶ್ಲೋಕದಲ್ಲಿ ಬರುತ್ತದೆ.

❖❖❖

## ೧೦. ಅಹಿಂಸಾ ಶಿಕ್ಷಣ

'ಅಹಿಂಸಾಂ ಶಿಕ್ಷೇತ್' ಅಹಿಂಸೆ ಎಂಬ ಭಾಗವತ ಧರ್ಮವನ್ನು ಕಲಿಯಬೇಕು.

ಮುಮುಕ್ಷುಗಳಿಗೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಆರು ವೈರಿಗಳು. ಅವರಲ್ಲಿ ಕಾಮ ಕ್ರೋಧ ಲೋಭಗಳು ಮೂರು, ಆ ಮೂವರಲ್ಲಿಯೂ ಕಾಮ ಬಲು ದೊಡ್ಡ ವೈರಿ. ಕಾಮದ ಬಲದಿಂದ ಮಿಕ್ಕ ಎರಡು ಕ್ರೋಧ ಲೋಭಗಳು ಪ್ರವೃತ್ತಿ ಮಾಡುವುವು.

ಕಾಮನಿಗೆ ಇಂದ್ರಿಯಗಳು ಮನಸು ಬುದ್ಧಿಗಳೇ ಮನೆಗಳು. ಈ ಮನೆಗಳಲ್ಲಿದ್ದು ಇವನು ಮುಮುಕ್ಷು ಜೀವರನ್ನು ಪೀಡಿಸುತ್ತಾನೆ.(ಗೀ.೩-೪೦)

ಬಾಲಕನಂತೆ, ಇವನು ಬೇಡಿದ್ದನ್ನು ಇವನಿಗೆ ಕೊಟ್ಟರೆ ಸುಮ್ಮನಾಗುವುದಿಲ್ಲವೆ? ಎಂದರೆ ಇಲ್ಲ, ಕೊಟ್ಟಿದ್ದನ್ನು ಉಂಡು ಮತ್ತೆ ಮತ್ತೇ ಬೇಡುತ್ತಾನೆ ಎಂದೂ ಸುಮ್ಮನಾಗುವುದಿಲ್ಲ. ಇವನ ಅಪೇಕ್ಷೆಗಳನ್ನೆಲ್ಲ ಪೂರೈಸುವುದು ಆಯುಷ್ಯ ಪೂರ್ತಿ ಕೊಟ್ಟರೂ ಸಾಧ್ಯವಾಗುವುದಿಲ್ಲ.

ಜ್ಞಾನಶೂನ್ಯರಾದ ಮುಮುಕ್ಷುಗಳನ್ನು ಕಾಮನು ಹೀಗೆ ಪೀಡಿಸದೆ ಬಿಡುವುದಿಲ್ಲವಾದರೂ ಶಾಸ್ತ್ರಶ್ರವಣದಿಂದ ಜ್ಞಾನಸಂಪಾದಿಸಿದವರನ್ನು ಅವನು ಹೇಗೆ ಪೀಡಿಸಬಲ್ಲ? ಎಂದರೆ, ಕಾಮನೆಂಬ ಶತ್ರು ಇರುವಾಗ ಶಾಸ್ತ್ರಜ್ಞಾನವೇ ಹುಟ್ಟುವುದಿಲ್ಲ.

ಒಂದುವೇಳೆ ಜನ್ಮಾಂತರಾರ್ಜಿತ ಪುಣ್ಯವಶದಿಂದ ಶಾಸ್ತ್ರಜ್ಞಾನ ಬಂದರೂ ಕಾಮನು ಆ ಜ್ಞಾನವನ್ನೆ ಪ್ರತಿಬಂಧಿಸಿ ಅದು ಅಪರೋಕ್ಷವನ್ನುಂಟು ಮಾಡದಂತೆ ತಡೆಯುತ್ತಾನೆ. ವಿರೋಧಿಪ್ರಮಾಣಗಳು ಸಾವಿರ ಬಂದರೂ ವಿಚಲಿತ ವಾಗದಿದ್ದರೆ ಮಾತ್ರ ಶಾಸ್ತ್ರಜ್ಞಾನ ಪರಿಪೂರ್ಣವಾಗಿದೆ ಎನ್ನಬಹುದು. ಇಂಥ ಜ್ಞಾನಶಾಲಿಯೂ ಕೂಡ ಕಾಮನಿಗೆ ಸಿಕ್ಕು ನರಳುತ್ತಾನೆ! ಎಂದಮೇಲೆ ಇಂಥ ಶಾಸ್ತ್ರಜ್ಞಾನವಿಲ್ಲದ ಅಲ್ಪಜ್ಞಾನಿಗಳ ಮತ್ತು ಅಜ್ಞಾನಿಗಳ ಕಥೆ ಹೇಳಬೇಕಾದ್ದೇ ಇಲ್ಲ. ಅವರ ನರಳಾಟ ಅಧಿಕ.

## 'ಧೂಮೇನಾವ್ರಿಯತೇ ವಹ್ನಿಃ' ಎಂಬ ಗೀತಾಶ್ಲೋಕಾರ್ಥ

ಡಾಕು ಒಬ್ಬನು ವೇಷಾಂತರದಿಂದ ಒಬ್ಬ ಶ್ರೀಮಂತನ ಮನೆಗೆ ಬರುತ್ತಾನೆ. ಯಜಮಾನನೊಡನೆ ಸುಳ್ಳು ಸ್ನೇಹ ತೋರುತ್ತಾನೆ. ಅವನು ತನ್ನ ರಕ್ಷಕನಾದ ರಾಜನ ಬಳಿಗೆ ಹೋಗದಂತೆ, ದೂರದಲ್ಲಿರಿಸಿ 'ಹೋದರೆ ನೀನು ನಾಶವಾಗುವೆ' ಎಂದು ಹೆದರಿಸುತ್ತಾನೆ. ಅವನ ಮಿತ್ರನು ಕೂಡ ರಾಜನಿಗೆ ತಿಳಿಸಿ, ಆ ಮೂಲಕ ಆಪತ್ತನ್ನು ಪರಿಹರಿಸಬಹುದೆಂದುಕೊಂಡು ಅವನನ್ನೂ ಕಟ್ಟಿಹಾಕುತ್ತಾನೆ. ಶ್ರೀಮಂತನು, ತಾನೇ ಮಿತ್ರನ ಬಳಿಗೋ ರಾಜನ ಬಳಿಗೋ ಹೋಗಿ ತಿಳಿಸದಂತೆ ಅಥವಾ ತಾನೇ ಕೂಗಿ, 'ಕಾಪಾಡು' ಎಂದು ಕರೆಯದಂತೆ ಹೆಡಮುಡಿ ಬಿಗಿದು

ಕಟ್ಟಿಹಾಕುತ್ತಾನೆ. ಬಳಿಕ ತನ್ನ ಕಡೆಯವರನ್ನು ಕರೆಸಿ ಅವರ ಮೂಲಕ ಎಲ್ಲ ಸಂಪತ್ತನ್ನು ದೋಚುತ್ತಾನೆ. ಸರ್ವನಾಶ ಮಾಡುತ್ತಾನೆ.

ಇದೇರೀತಿ ಈ ಪಾಪಿಕಾಮ ಕಾಲನೇಮಿಯೂ ತಾನೊಬ್ಬನೇ ಆದರೂ ಬಿಡದೆ, ಮುಮುಕ್ಷು ಜೀವನನ್ನು ಹಿಡಿದು ಬಂಧಿಸಿಟ್ಟು ಅವನ ಹೃದಯ ಸದನದಲ್ಲಿ ವಾಸಮಾಡುತ್ತಾನೆ. ಆ ಜೀವನು, ತನ್ನನ್ನು ಕಾಪಾಡಲೆಂದೇ ದಯೆಯಿಂದ ಅವನಂತರ್ಯಾಮಿಯಾಗಿ ಕುಳಿತು ಸಾಂಸಾರಿಕ ಭಯವನ್ನು ಕಳೆಯುತ್ತಿರುವ ಸ್ವಪ್ರಕಾಶನಾದ ಭಗವಂತನನ್ನು ಕಾಣದಂತೆ ಮಾಡುತ್ತಾನೆ.

ದಟ್ಟವಾದ ಹೊಗೆ ಸ್ವಪ್ರಕಾಶವಾದ ಬೆಂಕಿಯನ್ನು ಆವರಿಸಿ, ಕಾಣದಂತೆ ಮಾಡುವುದು. ಅದೇ ರೀತಿ ಇದು.

ಕೊಳೆಯಿಂದ ಆವೃತವಾದ ಕನ್ನಡಿಯಂತೆ, ಕಾಮನಿಂದ ಆವೃತವಾದ ಜೀವನ ಅಂತಃಕರಣವು ಪ್ರತಿಬಿಂಬಜೀವನನ್ನೂ ಬಿಂಬನಾದ ಪರಮಾತ್ಮನನ್ನೂ ಸರಿಯಾಗಿ ತೋರಲಾರದು.

ಗರ್ಭಚೀಲವು ಗರ್ಭವನ್ನು ದೃಢವಾಗಿ ಬಂಧಿಸುವಂತೆಯೂ ಕಾಮನು ಜೀವನನ್ನು ದೃಢವಾಗಿ ಬಂಧಿಸುವುದರಿಂದ ಜೀವನು ಭಗವಂತನ ಸ್ವರೂಪವನ್ನು ತಿಳಿಯಲು ಸರ್ವಥಾ ಅಸಮರ್ಥನಾಗುವನು.

ಇದು ಗೀತೆಯಲ್ಲಿ ಉಕ್ತವಾಗಿದೆ—

ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದ ಮಾವೃತಂ ॥

(ಭ.ಗೀ.೩.೩೮)

ಹೀಗೆ ಕಾಮನು ವಿಷಯಾಶಾಪಾಶಗಳಿಂದ ಜೀವನನ್ನು ಹೆಡಮುಡಿ ಬಿಗಿದು ಕಟ್ಟಿಹಾಕುತ್ತಾನೆ. ಅವನ ಜ್ಞಾನಭಕ್ತ್ಯಾದಿ ಸಕಲ ಸಂಪತ್ತನ್ನು ಅಪಹರಿಸು ತ್ತಾನೆ.

ಇಲ್ಲಿ ವಿಶೇಷವೆಂದರೆ—ರೌಡಿಯು ರಾಜನಿಗೆ ವಿಶೇಷಕೃಪಾಪಾತ್ರನಾದ ಶ್ರೀಮಂತನನ್ನು ದೋಚುವಾಗ, ಪೂರ್ತಿದೋಚುವುದಿಲ್ಲ, ಮತ್ತು ರಾಜಭಯ ದಿಂದ ತಾನು ದೂರದಲ್ಲಿದ್ದೇ ತನ್ನ ಕಡೆಯವರಿಂದ ಆ ಕೆಲಸ ಮಾಡಿಸುತ್ತಾನೆ.

ಮತ್ತು ಶ್ರೀಮಂತನಾಗಲಿ ಅವನ ಬಂಧುಮಿತ್ರರಾಗಲಿ ರಾಜನಿಗೆ ಈ ಸಮಾಚಾರವನ್ನು ತಲುಪಿಸುವವರೆಗೆ ಮಾತ್ರ ಸ್ವಲ್ಪವೇ ಈ ಕೆಲಸ ಮಾಡಿಸುತ್ತಾನೆ. ಅಷ್ಟರಲ್ಲಿ ಇದು ರಾಜನಿಗೆ ತಿಳಿಯಿತೆಂದರೆ, 'ಇನ್ನು ನಾವೇ ಪೂರ್ತಿನಾಶ ವಾಗುವೆವೆಂ'ದು ಭಯದಿಂದ ಒಡನೆ ಪಲಾಯನ ಮಾಡುತ್ತಾನೆ.

ರಾಜನಿಗೆ ಯಾರಲ್ಲಿ ವಿಶೇಷ ಪ್ರೀತಿ ದಯೆ ಇಲ್ಲವೋ ಅವನ ಸಂಪತ್ತನ್ನು ಅಪಹರಿಸುವಾಗ ಕೂಡ ಡಾಕು ಪೂರ್ತಿ ಲೂಟಿ ಮಾಡುವುದಿಲ್ಲ. ರಾಜನಿಗೆ ಈ ಸಮಾಚಾರ ತಿಳಿದರೂ ಈತನಿಗೆ ಭಯವಿಲ್ಲ. ರಾಜ ತನ್ನನ್ನು ಕೊಲ್ಲುವುದಿಲ್ಲ. ಸ್ವಲ್ಪಕಾಲ ಬಂಧಿಸುತ್ತಾನಷ್ಟೆ. ಏಕೆಂದರೆ ಈತನ ಮೇಲೆ ರಾಜನಿಗೆ ಹೆಚ್ಚಿನ ಪ್ರೀತಿ ಏನಿಲ್ಲ! ಪ್ರೀತಿ ಇರುತ್ತಿದ್ದರೆ, ಮುಂದೆ ಹೀಗೆ ಕಳ್ಳತನವಾಗಬಾರದೆಂದು ರಾಜ ನನ್ನನ್ನು ಕೊಲ್ಲಿಸುತ್ತಿದ್ದ. ಹೀಗೆ ಆಲೋಚಿಸಿ ಡಾಕು ದೂರದಲ್ಲಿ ನಿಲ್ಲದೆ, ತಾನೇ ಬಂದು ಸಂಪತ್ತನ್ನು ದೋಚುತ್ತಾನೆ.

ರಾಜನಿಗೆ ಯಾರಲ್ಲಿ ಸರ್ವಥಾ ಪ್ರೀತಿ ಇಲ್ಲವೋ ಅವನು ರಾಜನಿಗೆ ಈ ಸಮಾಚಾರವನ್ನು ತಿಳಿಸುವುದಿಲ್ಲ. ಅವನ ಮಿತ್ರನೂ ತಿಳಿಸುವುದಿಲ್ಲ. ಡಾಕುವಿಗೆ ಏನೂ ಭಯವಿಲ್ಲ. ಅವನು ಆ ಶ್ರೀಮಂತನನ್ನು ಅವನ ಮಿತ್ರನನ್ನೂ ಕಟ್ಟಿಹಾಕಿ ಬಳಿಯಲ್ಲಿಯೇ ಸಂಗಡಿಗರೊಂದಿಗೆ ನಿಂತು ಅವರಿಂದ ಅವನ ಎಲ್ಲ ಸಂಪತ್ತನ್ನೂ ಎಲ್ಲ ರೀತಿಯಿಂದ ದೋಚುವನು.

ಕಾಮನೂ ಕೂಡ ಹೀಗೇ ಹರಿಗೆ ಪ್ರೀತಿಪಾತ್ರನಾದ ಉತ್ತಮಾಧಿಕಾರಿಯಾದ ಮುಮುಕ್ಷು ಜೀವನನ್ನು, ಬೆಂಕಿಯನ್ನು ಹೊಗೆಯಂತೆ, ದೂರದಿಂದಲೇ ಕಟ್ಟಿಹಾಕಿಸುತ್ತಾನೆ. ಅಂದರೆ ಜೀವನ ಬಾಹ್ಯ ಅಂತಃಕರಣವನ್ನು ಮಾತ್ರ ವಿಷಯಾಶಾಪಾಶಗಳಿಂದ ಕಟ್ಟಿಸುತ್ತಾನೆ, ಜೀವಸ್ವರೂಪವನ್ನು ಸ್ಪರ್ಶಿಸುವುದಿಲ್ಲ.

ಮಧ್ಯಮಾಧಿಕಾರಿ ಜೀವನನ್ನು, ಕನ್ನಡಿಯನ್ನು ಕೊಳೆಯಂತೆ ಆವರಿಸು ತ್ತಾನೆ. ಅಂದರೆ, ಈ ಜೀವನಿಗೆ ಆತನ ಸ್ವರೂಪವೂ ಕೂಡ ಸ್ವಲ್ಪ ಮಲಿನವೇ ಆಗುತ್ತದೆ ಎಂದರ್ಥ.

ಅಧಮಾಧಿಕಾರಿ ಅಯೋಗ್ಯ ಜೀವನಿಗೆ ಅವನ ಸ್ವರೂಪವನ್ನು, ಗರ್ಭವನ್ನು ಗರ್ಭಚೀಲದಂತೆ ದೃಢವಾಗಿ ಕಾಮನು ಆವರಿಸುತ್ತಾನೆ. ಅಂದರೆ, ಅವನ

ಸ್ವರೂಪಮಾತ್ರವಲ್ಲದೆ ಬಾಹ್ಯಅಂತಃಕರಣವೂ ಎರಡೂ ದುಷ್ಟಕಾಮಕ್ರೋಧಾದಿ ಕಲುಷಿತ ಸ್ವರೂಪವೇ ಇರುತ್ತದೆ ಎಂದರ್ಥ.

ಭಗವಂತನ ಪರಮ ಪ್ರೀತಿಪಾತ್ರನಾದ ಉತ್ತಮಾಧಿಕಾರಿ ಜೀವನನ್ನು ಕಾಮನು ಬೆಂಕಿಯನ್ನು ಹೊಗೆಯಂತೆ ದೂರದಿಂದ ಆವರಿಸುತ್ತಾನೆ. ಸ್ಪರ್ಶಿಸುವುದಿಲ್ಲ. ಅದರಿಂದ ಕಾಮಕ್ರೋಧಾದಿಗಳಿಗೆ ವಶನಾದಂತೆ ಲೋಕಕ್ಕೆ ಅವನು ಕಂಡುಬಂದರೂ ವಸ್ತುತಃ ವಶನಾಗಿರುವುದಿಲ್ಲ. ಇದು, ಬಿಂಬೋಪದೇಶಕ ಗುರುಪ್ರಾಪ್ತಿ ಪ್ರಕರಣದಲ್ಲಿ (ಶ್ಲೋ. ೨೧೬) ಸ್ಪಷ್ಟವಿದೆ—

'ನ ವೈ ಜನೋ ಜಾತು ಕಥಂಚನಾವ್ರಜೇತ್
ಮುಕುಂದ ಸೇವ್ಯನ್ಯವದಂಗ ಸಂಸೃತಿಂ'

'ಮುಕುಂದನ ಆರಾಧನೆ ಗೈವವನು ಎಂದೂ ಕೂಡ ಬೇರೆಯವರಂತೆ ಸಂಸಾರಬಂಧನದಲ್ಲಿ ಸಿಲುಕುವುದಿಲ್ಲ' ಎಂದು ನಾರದರು ಶ್ರೀವ್ಯಾಸರ ಮುಂದೆ ಹೇಳುತ್ತಾರೆ.

ಮಧ್ಯಮಾಧಿಕಾರಿ ಜೀವನನ್ನು, ಕನ್ನಡಿಯನ್ನು ಕೊಳೆಯಂತೆ ಕಾಮನು ಆವರಿಸುತ್ತಾನೆ. ಅದರಿಂದ ಅವನು ಸ್ವಲ್ಪವೆ, ಸ್ವಲ್ಪಕಾಲ ಮಾತ್ರ ಕಾಮಾದಿ ವಶನಾಗುತ್ತಾನೆ. ಬಳಿಕ ಕಾಮಾದಿಗಳಿಂದ ಅನಾವೃತನೇ ಆಗಿರುತ್ತಾನೆ. ಇದು ದೇಶಪ್ರಶಂಸಾಪ್ರಕರಣ(ಶ್ಲೋ.೧೯೨)ದಲ್ಲಿ ಸ್ಪಷ್ಟವಿದೆ—

'ಶಿಲೋಂಛವೃತ್ತ್ಯಾ ಪರಿತುಷ್ಟಚಿತ್ತೋ
ಧರ್ಮಂ ಮಹಾಂತಂ ವಿರಜಂ ಜುಷಾಣಃ ।
ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠನ್
ನಾತಿಪ್ರಸಕ್ತಂ ಸಮುಪೈತಿ ಮುಕ್ತಿಂ'

(ಭಾ.೧೧.೧೭.೪೩)

'ಶಿಲೋಂಛವೃತ್ತ್ಯಾದಿಗಳಲ್ಲಿದ್ದು ಸಿಕ್ಕಿದ್ದರಲ್ಲೇ ತೃಪ್ತಿಪಡುತ್ತ ನಿಷ್ಕಾಮ ಕರ್ಮಗಳಿಂದ ನನ್ನನ್ನು ಭಜಿಸಿ ವಿಷಯಗಳಲ್ಲಿ ಅತ್ಯಾಸಕ್ತಿ ತೋರದೆ ಇದ್ದರೆ ಗೃಹಸ್ಥಾಶ್ರಮದಲ್ಲಿಯೇ ಮೋಕ್ಷ ಸಾಧನೆ ಮಾಡಿಕೊಳ್ಳಬಹುದು' ಎಂದು ಶ್ರೀಕೃಷ್ಣನು ಉದ್ಧವನಿಗೆ ಹೇಳುತ್ತಾನೆ.

ಇಲ್ಲಿ 'ಸಮುಪೈತಿ ಮುಕ್ತಿಂ' ಎಂದು ಮುಕ್ತಿಯೋಗ್ಯತೆ ಉಕ್ತವಾಗುವುದರಿಂದ ಮಧ್ಯಮಾಧಿಕಾರಿಗಳಾದ ದೇವವ್ಯತಿರಿಕ್ತ ಜೀವರು ವಿವಕ್ಷಿತರಾಗಿದ್ದಾರೆ.

ಅಧಮಜೀವನನ್ನು ಕಾಮನು ಗರ್ಭವನ್ನು ಗರ್ಭಚೀಲದಂತೆ ದೃಢವಾಗಿ ಆವರಿಸುವನು. ಅದರಿಂದ ಅವನು ದೃಢವಾಗಿ ಕಾಮಾದಿ ವಶನಾಗಿದ್ದು ಪುರುಷಾರ್ಥಗಳಿಂದ ವಂಚಿತವಾಗಿ ಕಾಡುದಾರಿಯಲ್ಲಿ ಅಲೆಯುವ ವರ್ತಕನಂತೆ ಸಂಸಾರದಲ್ಲಿ ತಿರುಗುತ್ತಾನೆ. ಇದು ವೈರಾಗ್ಯ ಪ್ರಕರಣ (ಶ್ಲೋ.೬೩,೬೪,೬೫)ದಲ್ಲಿ ಸ್ಪಷ್ಟವಿದೆ—

'ಕಥಂ ಪ್ರಿಯಾಯಾ ಅನುಕಂಪಿತಾಯಾಃ...
ಕಥಂ ವಿರಜ್ಯೇತ ದುರಂತ ಮೋಹಃ ॥'

'ಇಂದ್ರಿಯಸುಖವನ್ನೇ ಪುರುಷಾರ್ಥವೆಂದು ಬಗೆದು ಕೊನೆಯಿಲ್ಲದ ವಿಷಯಮೋಹದ ಬಂಧನದಲ್ಲಿ ತನ್ನನ್ನು ತಾನೆ ಸಿಲುಕಿಸಿಕೊಂಡರೆ ವೈರಾಗ್ಯ ಹೇಗೆ ಬಂದೀತು?' ಎಂದು ಪ್ರಹ್ಲಾದನು ದೈತ್ಯ ಬಾಲಕರಿಗೆ ಉಪದೇಶಿಸುತ್ತಾನೆ.

ಇಲ್ಲಿ ಅಧಮ ಜೀವರೆಂದರೆ ಮುಕ್ತ್ಯಯೋಗ್ಯರಾದ ನಿತ್ಯಸಂಸಾರಿ ತಮೋಯೋಗ್ಯರೆಲ್ಲರೂ ವಿವಕ್ಷಿತರಾಗಿದ್ದಾರೆ.

ಹೀಗೆ ಜೀವರಿಗೆ ಅಪೇಕ್ಷಿತವಾದ ಎಲ್ಲ ಜ್ಞಾನಾದಿ ಪುರುಷಾರ್ಥ ಸಾಧನಗಳನ್ನು ಕೆಡಿಸುವುದರಿಂದ ಶತ್ರುಗಳಲ್ಲಿ ದೊಡ್ಡ ಶತ್ರು ಕಾಮನೆ. ಅವನಿಗೆ ಸ್ಥಾನವಾದ ಇಂದ್ರಿಯಾದಿಗಳಲ್ಲಿ ಮನಸ್ಸೆ ದೊಡ್ಡದು. ಪರಪುರುಷನಿಗೆ ಕುಲಟೆ ಆಶ್ರಯಳಾಗುವಂತೆ ಕಾಮನಿಗೆ ಮನಸು ಆಶ್ರಯವಾಗುತ್ತದೆ.

ಪರಪುರುಷನು ತನ್ನ ಮಿತ್ರರನ್ನೂ ಜೊತೆಗಿರಿಸಿಕೊಳ್ಳುವಂತೆ ಈ ಕಾಮನೂ ಕ್ರೋಧಾದಿಗಳನ್ನು ಮನಸಿನಲ್ಲಿ ಜೊತೆಗೇ ಇರಿಸಿಕೊಳ್ಳುತ್ತಾನೆ.

**ಈ ಕಾಮನನ್ನು ಅವಶ್ಯ ತ್ಯಾಗ ಮಾಡಬೇಕೆಂದು 'ತಪಃಶಿಕ್ಷೇತ್' ಎಂಬಲ್ಲಿ ಹೇಳಿ, ಇದೀಗ ಕಾಮನಾದ ಮೇಲೆ ಎರಡನೇ ಶತ್ರುವಾದ ಕ್ರೋಧವನ್ನು ತ್ಯಾಗ ಮಾಡಬೇಕೆಂದು 'ಅಹಿಂಸಾಂ ಶಿಕ್ಷೇತ್' ಎನ್ನುತ್ತಿದ್ದಾರೆ. 'ಶತ್ರುವಾದ ಕ್ರೋಧದ ತ್ಯಾಗವನ್ನೂ ಕಲಿಯಬೇಕು' ಎಂದು.**

ಕಾಮತ್ಯಾಗ ಮಾತ್ರವೇ ಅಲ್ಲ, ಕ್ರೋಧತ್ಯಾಗವೂ ತಪಸ್ಸೇ. ಕ್ರೋಧವೇ ಮುಖ್ಯವಾಗಿ ಹಿಂಸೆ. ಪರಪೀಡಾದಿಗಳು ಹೆಚ್ಚಾಗಿ ಕ್ರೋಧದ ಕಾರ್ಯ

ವಾಗಿರುತ್ತವೆ ಎಂದೇ ಅವುಗಳನ್ನು 'ಹಿಂಸೆ' ಎನ್ನುತ್ತೇವೆ. ಹೀಗಾಗಿ ಕ್ರೋಧ ತ್ಯಾಗವೆ ಅಹಿಂಸೆ. ಮುಂದೆ ಶ್ಲೋ.೨೫೪ರಿಂದ ಅಹಿಂಸಾಧರ್ಮದ ಬಗ್ಗೆ ಹೆಚ್ಚಿನ ವಿವರ ಬರುತ್ತದೆ.

❖❖❖

## ೧೧. ಸಮತ್ವ ಶಿಕ್ಷಣ

'ಸಮತ್ವಂ ಶಿಕ್ಷೇತ್'' 'ಸಮತ್ವ'ರೂಪಭಾಗವತಧರ್ಮವನ್ನು ಗುರುಗಳಿಂದ ಕೇಳಿ ತಿಳಿಯಬೇಕು.

ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।
ಮಿಥೋರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ ॥

'ಪಾವನನಾದ ಭಗವಂತನ ಕೀರ್ತಿಯ ಬಗ್ಗೆ ಭಕ್ತರು ಪರಸ್ಪರ ಹೇಳಿಕೊಳ್ಳುತ್ತ ಪರಸ್ಪರ ಒಡನಾಟದಲ್ಲಿ ಸುಖತೃಪ್ತಿ ಅನ್ಯತ್ರ ವಿರಕ್ತಿಗಳನ್ನು ಕಂಡುಕೊಳ್ಳುವುದು. ಇವನ್ನು ಭಕ್ತರು ಅಭ್ಯಾಸ ಮಾಡಬೇಕು' ಎಂದು ಪ್ರಬುದ್ಧಮುನಿಗಳ ಉಪದೇಶ (ಭಾ.೧೧.೩.೩೧). ಇಲ್ಲಿ ತುಷ್ಟಿ ತೃಪ್ತಿ ಉಕ್ತವಾಗಿದೆ.

ಬೇರೆ ಶಾಸ್ತ್ರಗಳಲ್ಲಿ ಯಮ ನಿಯಮಗಳೆರಡರಲ್ಲಿಯೂ ಹೇಳದಿದ್ದ ಈ ತುಷ್ಟಿಯನ್ನು ಇಲ್ಲಿ ಹೇಳಿದ್ದೇಕೆ ಎಂದರೆ

ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ ।
ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಽಭಯಂ ।
ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽಽತಿಥ್ಯಂ ಮದರ್ಚನಂ ।
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯಸೇವನಂ'

ಎಂದು (ಭಾ.೧೧.೧೯.೩೩,೩೪). ಯಮ ನಿಯಮಗಳನ್ನು ಹೇಳುವಾಗ ಉದಾಹರಣೆಗಾಗಿ ಉಪಲಕ್ಷಣವಾಗಿ ತುಷ್ಟಿಯನ್ನೂ ಗ್ರಹಣಮಾಡುವುದಕ್ಕಾಗಿ ಹೇಳಿದ್ದೇವೆ. ಅವಶ್ಯ ಗ್ರಾಹ್ಯವಾದುದನ್ನು ಹೇಳಬೇಕು ತಾನೆ?

ಮತ್ತು 'ತುಷ್ಟಿ' ಎಂದರೆ ಇಷ್ಟೇ ಸಾಕೆನ್ನುವ ಭಾವನೆ. ಭಕ್ತಿಸಾಧನೆಯಲ್ಲಿ ಪ್ರವೃತ್ತಿ ಮಾಡುವಾಗ ಈ ಭಾವನೆಯ ಉಪಯೋಗವೇನಿಲ್ಲ. ಬೇರೆಕಡೆ ಉಪಯೋಗವಿದೆ ಎನ್ನಬೇಕು. ಅದನ್ನು ಹಿಂದೆ ಹೇಳಿದ್ದೇವೆ—

'ಗ್ರಾಮ್ಯೇಹೋಪರಮಃ ಶನೈಃ' (ಭಾ.೭.೧೨.೯)

ವಿಷಯ ಸೇವನೆಯಲ್ಲಿ ಇಷ್ಟೇ ಸಾಕೆನ್ನುವ ಭಾವನೆ ಮೋಕ್ಷಸಾಧನೆಯಲ್ಲಿ ಬಹಳ ಉಪಯುಕ್ತವಾಗುತ್ತದೆ. ಇದನ್ನು ನಿಧಾನವಾಗಿ ಅಭ್ಯಾಸ ಮಾಡುವುದು ಒಳ್ಳೆಯದು.

ಬೇರೆಕಡೆ ಸಾಕೆನ್ನುವ ಭಾವನೆ, ಅಲಂಬುದ್ಧಿಯೇ ತುಷ್ಟಿ 'ಬೇರೆಕಡೆ' ಎಂದರೆ ಭಕ್ತಿಯಲ್ಲಿ ಅಲ್ಲ, ಹರೀಚ್ಛೆಯಿಂದ ಗ್ರಾಮ್ಯಸುಖಸೇವನೆಯಲ್ಲಿ, ತುಷ್ಟಿ ಪಡಬೇಕು. ಇದೇ ಸಮತ್ವ.

'ಸಮತ್ವಂ ದ್ವಂದ್ವಸಂಜ್ಞಯೋಃ' (ಭಾ.೧೧.೩.೨೫)

ದೈವೇಚ್ಛೆಯಿಂದ ಬರುವ ಸುಖದುಃಖ ದ್ವಂದ್ವಗಳಲ್ಲಿ ಹಿಗ್ಗದೆ ಕುಗ್ಗದೆ ಸಮವಾಗಿರುವುದನ್ನು ಗುರುಗಳಿಂದ ಕಲಿಯಬೇಕು ಎಂದು ಪ್ರಬುದ್ಧಮುನಿ ವಿದೇಹರಾಜನಿಗೆ ಉಪದೇಶಿಸುತ್ತಾರೆ.

ಇಲ್ಲಿ 'ದ್ವಂದ್ವ' ಎಂದರೆ ಮುಖ್ಯವಾಗಿ ಸುಖ–ದುಃಖವೆಂಬ ದ್ವಂದ್ವ ವಿವಕ್ಷಿತವಾಗಿದೆ. ಬೇರೆ ಲಾಭ–ಅಲಾಭ, ಜಯ–ಅಪಜಯ, ಶೀತ–ಉಷ್ಣ ಮುಂತಾದ ದ್ವಂದ್ವಗಳು ಈ ಸುಖ–ದುಃಖರೂಪ ದ್ವಂದ್ವಕ್ಕೆ ಕಾರಣವಾಗಿರುತ್ತವೆ. ಹೀಗಾಗಿ 'ಸಮತ್ವಂ ಸುಖ ದುಃಖಯೋಃ' ಎಂದು ಸ್ಪಷ್ಟ ನೇರವಾಗಿ ಹೇಳದೆ 'ದ್ವಂದ್ವ' ಶಬ್ದವನ್ನು ಹೇಳಿದ್ದು ಮತ್ತು ದ್ವಂದ್ವವನ್ನು 'ದ್ವಂದ್ವಯೋಃ' ಎನ್ನದೆ 'ದ್ವಂದ್ವ ಸಂಜ್ಞಯೋಃ' ಎಂದು ಹೇಳಿದ್ದು ಅರ್ಥಗರ್ಭಿತವಾಗಿದೆ. ಇದರಿಂದ 'ಗ್ರಾಮ್ಯೇಹೋಪರಮ' ಗ್ರಾಮ್ಯದಲ್ಲಿ ಆಸಕ್ತಿಯನ್ನು ಮಾಡದಿರುವುದು ಎಂಬಲ್ಲಿ 'ಗ್ರಾಮ್ಯ' ಎಂದರೆ ಸುಖದುಃಖ ದ್ವಂದ್ವವೆ. ಅದರಲ್ಲಿ ಆಸಕ್ತಿ ಮಾಡ ದಿರುವುದು 'ಇಷ್ಟು ಸಾಕೆನ್ನುವುದು, 'ನಿವೃತ್ತಿರ್ಮಿಥ ಆತ್ಮನಃ' ಎಂಬಲ್ಲಿ ಹೇಳಿದ 'ನಿವೃತ್ತಿ' ರೂಪವಾದ ಭಾಗವತಧರ್ಮ ವಾಗುವುದು ಎಂದು ಹೇಳಿದಂತಾಯಿತು.

ಆದರೆ ಈ ಭಾಗವತ ಧರ್ಮದ ಅನುಷ್ಠಾನ ಯಾರಿಗೂ ಶಕ್ಯವಲ್ಲ ಎನ್ನುವ ಸಮಸ್ಯೆ ಬರುತ್ತದೆ. ಏಕೆಂದರೆ ಸುಖವು ಸರ್ವಥಾ ಬೇಕೆಂದೆನಿಸುತ್ತದೆ. ಬೇಡವಾಗುವುದೇ ಇಲ್ಲ. ದುಃಖವು ಯಾರಿಗೂ ಬೇಡ. ಎರಡನ್ನೂ ಸಮವಾಗಿ ಕಾಣಬೇಕೆಂದರೆ ಅದು, ಸುಖವು ಬೇಡವಾದರೆ ಅಥವಾ ದುಃಖವೂ

ಬೇಕೆನಿಸಿದರೆ ಮಾತ್ರ ಸಾಧ್ಯ. ಎರಡು ಸಮಾನವೆಂದರೆ ಅದು ಯಾರಿಗೂ ಒಪ್ಪಿಗೆ ಯಾಗದು. ಹೀಗಾಗಿ ಸಮತ್ವವನ್ನು ಹೇಗೆ ತಿಳಿಯಬೇಕು? ಹೇಗೆ ಕಲಿಯಬೇಕು?

ಈ ಪ್ರಶ್ನೆಗೆ ಹೀಗೆ ಸಮಾಧಾನ—ದುಃಖದಂತೆ ಸುಖವೂ ಬೇಡ ಎಂದೇ ತಿಳಿಯುವ ಮೊದಲನೇಪಕ್ಷ ಸರಿ. ಮೋಕ್ಷಾರ್ಥಿಯು ಈ ಪಕ್ಷವನ್ನೆ ಹಿಡಿಯ ಬೇಕು. ದುಃಖವು ಹೇಗೆ ಬೇಡವಾಗುವುದೋ ಹಾಗೇ ಗ್ರಾಮ್ಯಸುಖ ಅಂದರೆ, ಗ್ರಾಮ ಎಂದರೆ ಸಮೂಹ, ವಿಷಯ ಪದಾರ್ಥಗಳ ಸಮೂಹ. ಅದರಿಂದ ಬರುವ ವೈಷಯಿಕ ಸುಖವೂ ಬೇಡ. ಬೇಡವಾಗಿಲ್ಲದಿದ್ದರೂ ಬೇಡವಾಗಬೇಕು. ಆಗ ಸುಖವು ದುಃಖಕ್ಕೆ ಸಮವಾಗುವುದು ತಾನೆ?

'ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ' 'ತಮಸ್ಸಿನ ದುಃಖವನ್ನು ಶ್ರವಣ ಮಾತ್ರ ಮಾಡಿದರೂ ದುಃಖದಿಂದ ಮೂರ್ಛೆ ಬರುವುದು' (ಬ್ರ.ಸೂ.೩.೧.೨೨) ಎಂದು ಬ್ರಹ್ಮಸೂತ್ರ ಹೇಳುವಂತೆ 'ದುಃಖಂ ಕಾಮ ಸುಖಾಪೇಕ್ಷಾ' (ಭಾ.೧೧.೧೯.೪೧) 'ವಿಷಯಾಸೆಯೇ ಮಹಾದುಃಖ' ಎಂದು ಭಾಗವತವೂ ಹೇಳುವುದರಿಂದ ವೈಷಯಿಕ ಸುಖದ ಇಚ್ಛೆ ಮಾಡಿದರೂ ದುಃಖವೇ ಆಗುವುದು. ವೈಷಯಿಕ ಸುಖವೆಲ್ಲವೂ ಹೇಯವೆಂಬ ಪರಿಜ್ಞಾನ ವಿದ್ದರೆ ಸಾಕೆ? ಎಂದರೆ ಇಲ್ಲ, ವೈಷಯಿಕ ಸುಖ ಬೇಕೆಂಬ ಇಚ್ಛೆಯೆ ಹುಟ್ಟದಿರ ಬೇಕು. ಆಗ ಕಾಮಸುಖ ಬೇಕೆನ್ನುವ ರಾಗವಿಲ್ಲದಿದ್ದರೆ ವೈರಾಗ್ಯ ಭಾಗ್ಯ ದೊರೆಯುವುದು.

'ಯಾವುದಾದರೊಂದು ವಿಷಯದಲ್ಲಿ ಗ್ರಾಮ್ಯ ಸುಖೇಚ್ಛೆ ಹೋಗಲಿ ಎಂದರೆ ಹೇಗಾದರೂ ಶಕ್ಯವಾದೀತು. ಗ್ರಾಮ್ಯಸುಖ ಯಾವುದೂ ಬೇಡವೆನ್ನಲು ಶಕ್ಯವಾಗುವುದೆ?' ಎಂದರೆ, ಅಭ್ಯಾಸ ಮಾಡಬೇಕು. ಅಭ್ಯಾಸದಿಂದ ಅಶಕ್ಯ ವಾದುದೇ ಇಲ್ಲ. ಮೊದಲು ಒಂದು ಸುಖವನ್ನು ಉದಾ. ನಾಲಿಗೆ ರುಚಿಯನ್ನು ಬಿಡಲು ಅಭ್ಯಾಸಮಾಡಿ ಅದನ್ನು ಬಿಡಬೇಕು. ಬಳಿಕ ಒಂದು ಸ್ಪರ್ಶಸುಖವನ್ನು ಉದಾ: ಗಂಧಲೇಪ ಸುಖವನ್ನು ಬಿಡುವ ಅಭ್ಯಾಸ ಮಾಡಬೇಕು. ಬಳಿಕ ಮತ್ತೊಂದು ಸುಖವನ್ನು, ಬೇರೊಂದು ಸುಖವನ್ನು ಎಂದು ಎಲ್ಲ ವಿಷಯ ಸುಖವನ್ನು ಒಂದೊಂದಾಗಿ ಹರಿಪ್ರೀತ್ಯರ್ಥವಾಗಿ ಬಿಡುವ ಸಂಕಲ್ಪ ಮಾಡಿ ನಿಧಾನವಾಗಿ ಅಭ್ಯಾಸದಿಂದ ಬಿಡುತ್ತ ಬಂದರೆ ಕೊನೆಯಲ್ಲಿ ವಿಷಯಸುಖ

ರಾಗವನ್ನೇ ತ್ಯಾಗ ಮಾಡಿ ವೈರಾಗ್ಯ ಪಡೆಯುವುದು ಶಕ್ಯವಾಗಿಯೇ ತೀರುವುದು. ಅದನ್ನೇ 'ಗ್ರಾಮ್ಯೇಹೋಪರಮಃ ಶನೈಃ' ವಿಷಯಸುಖರಾಗವನ್ನು ನಿಧಾನವಾಗಿ ಬಿಡಬೇಕು' ಎಂದು ಸಪ್ತಮಸ್ಕಂಧದಲ್ಲಿ (ಭಾ.೭.೧೨.೯) ಹೇಳಿದ್ದಾರೆ.

ಏಕಾದಶಸ್ಕಂಧದಲ್ಲಿಯೂ

'ಮದರ್ಥೇ ಚ ಪರಿತ್ಯಾಗೋ ಭೋಗಸ್ಯ ಚ ಸುಖಸ್ಯ ಚ ॥

(ಭಾ.೧೧.೧೯.೨೩)

'ನನ್ನ ಪ್ರೀತಿಯ ಸಲುವಾಗಿ ಎಲ್ಲ ಭೋಗಪದಾರ್ಥಗಳನ್ನೂ ಕಾಮಸುಖ ವನ್ನೂ ತ್ಯಜಿಸುವುದು ಭಕ್ತಿಗೆ ಕಾರಣ? ಎಂದು ಹೇಳಿದ್ದಾರೆ.

ಆದರೂ ಕಣ್ಣಿಗೆ ಕಾಣುವ ಐಹಿಕಸುಖವು ಅಲ್ಪವಾಗಿದ್ದು ಅಲ್ಪಕಾಲ ವಿರುತ್ತದೆ, ಅದರಲ್ಲಿ ಹೇಗಾದರೂ ರಾಗತ್ಯಾಗ ಶಕ್ಯವಾದೀತು. ಪರಲೋಕಸುಖ ಹಾಗಲ್ಲ. ಅದು ಮಹತ್ತಾಗಿರುತ್ತದೆ. ಬಹುಕಾಲವಿರುತ್ತದೆ. ಅದರಲ್ಲಿ ರಾಗತ್ಯಾಗ ಶಕ್ಯ ಹೇಗಾದೀತು? ಎಂದರೆ, ದೃಷ್ಟ ಸುಖದಂತೆ ಅದೃಷ್ಟಸುಖವೂ ಕರ್ಮಫಲ ವಾಗಿದ್ದು ವಿಷಯ ಜನ್ಯವೆಂದಮೇಲೆ ನಶ್ವರವೇ ಅಸಾರವೆ ಎಂಬ ಅನುಸಂಧಾನ ಶಕ್ಯವೆ ಇದೆ. ಏಕಾದಶಸ್ಕಂಧದಲ್ಲಿ ಹೇಳಿದ್ದಾನೆ ಶ್ರೀಕೃಷ್ಣ—

ಕರ್ಮಣಾಂ ಫಲರೂಪತ್ವಾತ್ ಆವಿರಿಂಚಾದಮಂಗಲಂ ।
ವಿಪಶ್ಚಿನ್ನಶ್ವರಂ ಪಶ್ಯೇತ್ ಅದೃಷ್ಟಮಪಿ ದೃಷ್ಟವತ್ ॥

(ಭಾ.೧೧.೧೯.೧೮)

'ಬ್ರಹ್ಮಲೋಕ ಪರ್ಯಂತ ಎಲ್ಲವೂ ಕರ್ಮಫಲರೂಪವಾದ್ದರಿಂದ ಸ್ವರ್ಗಾದಿ ಪಾರತ್ರಿಕ ಸುಖವೂ ಐಹಿಕ ಕೃಷ್ಯಾದಿಗಳಂತೆ ಅಮಂಗಳ. ಅಸಾರ, ನಶ್ವರವೆಂದು ಜ್ಞಾನಿಯು ತಿಳಿಯಬೇಕು' ಎಂದು.

ಇದನ್ನು 'ಗ್ರಾಮ್ಯೇಹೋಪರಮಃ ಶನೈಃ' ಎಂದು ಸಪ್ತಮಸ್ಕಂಧದಲ್ಲಿ ಹೇಳಿದ್ದಾರೆ.

ಅರಿಷಡ್ವರ್ಗದಲ್ಲಿ ಕಾಮ ಅಂದರೆ ಇಚ್ಛೆಯು ದೊಡ್ಡವರ ನಿಂದೆ ಮಾಡುವ ವಿಷಯದಲ್ಲಿ ಸರ್ವಥಾ ಪರಿತ್ಯಾಜ್ಯ. ಕ್ರೋಧವು ಕೂಡ ದೊಡ್ಡವರಲ್ಲಿ ಮಾಡಿದರೆ

ಅದು ಅವರ ವಧೆಗೆ ಸಮಾನ ಪಾಪಕರವಾಗುವುದರಿಂದ ಅದನ್ನು ಸರ್ವಥಾ ಬಿಡಬೇಕು. ಹಾಗೇ ಮೋಹ ಅಂದರೆ ತಪ್ಪುಗ್ರಹಿಕೆ ಕೂಡ ದ್ವಂದ್ವವಿಷಯದಲ್ಲಿದ್ದರೆ ಮುಕ್ತಿಗೆ ವಿರೋಧಿಯಾಗುವುದರಿಂದ ಬಿಟ್ಟುಬಿಡಬೇಕು. ಇದನ್ನು 'ಸಮತ್ವಂ ದ್ವಂದ್ವಸಂಜ್ಞಯೋಃ' ಎಂದು ಏಕಾದಶಸ್ಕಂಧದ ಪ್ರಬುದ್ಧ ಮುನಿವಚನವು ಹೇಳುತ್ತಿದೆ.

ಇದರ ಅಭಿಪ್ರಾಯವಿದು—ಸುಖದುಃಖ ಮಾನಾಪಮಾನ ಲಾಭಾಲಾಭ ಜಯಾಪಜಯ ಇತ್ಯಾದಿ ದ್ವಂದ್ವಗಳ ವಿಷಯದಲ್ಲಿ ಒಂದು ಮೋಹ, ತಪ್ಪುಗ್ರಹಿಕೆ ಎಲ್ಲರಿಗೂ ಇರುತ್ತದೆ. ಸುಖದುಃಖಗಳಾಗಲಿ ಮಾನ ಅಪಮಾನಗಳಾಗಲಿ ಲಾಭ ಅಲಾಭಗಳಾಗಲಿ ಜಯ ಪರಾಜಯಗಳಾಗಲಿ ಎಲ್ಲವೂ ಗುಣಕರ್ಮ ಕಾಲಾದಿ ವಶದಿಂದ ಅಂದರೆ ಗುಣಕರ್ಮ ಕಾಲಾದಿನಾಮಕನಾದ ಹರಿಯ ಇಚ್ಛೆಯಿಂದ ಬರುತ್ತವೆ. ಹರಿ ಕೊಟ್ಟಿದ್ದೆಂದು ಶಿರಸಾ ನಮಿಸಿ ಅವುಗಳನ್ನು ಭಕ್ತನು ಸ್ವೀಕರಿಸಲೇಬೇಕೆಂದು ದೊಡ್ಡವರ ಅಭಿಪ್ರಾಯವಿದೆ. ಅವುಗಳಲ್ಲಿ 'ಸುಖ ಮಾನ ಲಾಭ' ಮುಂತಾದುವನ್ನೇ ಸ್ವೀಕರಿಸಬೇಕು ಹೊರತು ದುಃಖ ಅಪಮಾನ ಅಲಾಭಾದಿಗಳನ್ನಲ್ಲ' ಎನ್ನುವುದು ಮಿಥ್ಯಾಜ್ಞಾನ. ಅದನ್ನೆ 'ಮೋಹ' ಎನ್ನುತ್ತಾರೆ. ಈ ಮೋಹವೂ ಕೂಡ ಕಾಮಕ್ರೋಧಾದಿಗಳಂತೆ ಜ್ಞಾನಭಕ್ತ್ಯಾದಿಗಳಿಗೆ ಪ್ರತಿಬಂಧಕವೆಂದು ಅವುಗಳನ್ನು ತ್ಯಜಿಸಲೇಬೇಕು.

ಸುಖಾದಿಗಳು ಹರೀಚ್ಛೆಯಿಂದ ಬಂದವು ಹೇಗೆ ಉಪಾದೇಯವೋ ಹಾಗೇ ದುಃಖಾದಿಗಳೂ ಹರೀಚ್ಛೆಯಿಂದ ಬರುವುದರಿಂದ ಉಪಾದೇಯವೇ ಆಗಿರುತ್ತವೆ. ಅದರಿಂದ ದುಃಖಾದಿಗಳೂ ಸುಖಾದಿಗಳಿಗೆ ಸಮಾನವೇ ಆಗಿವೆ. ಹೀಗೆ ದ್ವಂದ್ವಗಳಲ್ಲಿ ಸಾಮ್ಯವೆ ಇದೆ ಎಂಬುದು ಯಥಾರ್ಥಜ್ಞಾನವೇ ಆಗಿರುವುದರಿಂದ ಅದಕ್ಕೆ ವಿರುದ್ಧವಾದ ಮಿಥ್ಯಾಜ್ಞಾನರೂಪ ಮೋಹವನ್ನು ಬಿಡಲೇ ಬೇಕು.

ಷಷ್ಠಸ್ಕಂಧದಲ್ಲಿ ದೇವೇಂದ್ರನಿಗೆ ವೃತ್ರಾಸುರನ ವಚನ—

ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ ।
ಏವಂ ಭೂತಾನಿ ಮಘವನ್ ಈಶತಂತ್ರಾಣಿ ವಿದ್ಧಿ ಭೋಃ ।
ಪುರುಷಃ ಪ್ರಕೃತಿ ರ್ವ್ಯಕ್ತಂ ಆತ್ಮಭೂತೇಂದ್ರಿಯಾಶಯಾಃ ।

ಶಕ್ನುವಂತ್ಯಸ್ಯ ಸರ್ಗಾದೌ ನ ವಿನಾ ಯದನುಗ್ರಹಂ ।
ಅವಿದ್ವಾನೇವಮಾತ್ಮಾನಂ ಮನ್ಯತೇಽನೀಶಮೀಶ್ವರಂ ।
ಆಯುಃಶ್ರೀಃ ಕೀರ್ತಿರೈಶ್ವರ್ಯಂ ಆಶಿಷಃ ಪುರುಷಸ್ಯ ಯಾಃ ।
ಭವಂತ್ಯೇವ ಹಿ ತೇ ಕಾಲೇ ಯಥಾನಿಚ್ಛೋರ್ವಿಪರ್ಯಯಾಃ ।
ತಸ್ಮಾದಕೀರ್ತಿಯಶಸೋರ್ಜಯಾಪಜಯಯೋೀ ರಪಿ ।
ಸಮಃ ಸ್ಯಾತ್ ಸುಖದುಃಖಾಭ್ಯಾಂ ಮೃತ್ಯುಜೀವಿತಯೋಸ್ತಥಾ ।

(ಭಾ.೬.೧೨.೧೦-೧೪)

'ದೇವೇಂದ್ರ, ಹೆಣ್ಣಿನ ಮರದಬೊಂಬೆಯಂತೆ ಕೀಲು ಕುದುರೆಯಂತೆ ಎಲ್ಲರೂ ಭಗವಂತನಿಗೆ ಅಧೀನರೆಂದು ತಿಳಿ.

'ಲಕ್ಷ್ಮೀ ಬ್ರಹ್ಮ ಶೇಷ ವಾಯು ಭೂತಾಭಿಮಾನಿಗಳು ಇಂದ್ರಿಯಾಭಿಮಾನಿಗಳು, ನೀನು ಇಂದ್ರ ಇವರು ಯಾರೂ ಯಾರ ಅನುಗ್ರಹವಿಲ್ಲದೆ ಸೃಷ್ಟ್ಯಾದಿ ಕಾರ್ಯಗಳಲ್ಲಿ ಸಮರ್ಥರಾಗುವುದಿಲ್ಲವೋ, ಸರ್ವಾಂತರ್ಯಾಮಿಯಾದ ಆ ಭಗವಂತನನ್ನು ಒಬ್ಬ ಅಸಮರ್ಥನಾದ ಜೀವನೆಂದು ಅನ್ಯಥಾಜ್ಞಾನಿ ತಿಳಿಯುತ್ತಾನೆ.

'ಆಯುಷ್ಯ ಐಶ್ವರ್ಯ ಸಂಪತ್ತು ಕೀರ್ತಿ ಸುಖಗಳು ಬಯಸದಿದ್ದರೂ ಕಾಲಬಂದಾಗ ಬಂದೇ ಬರುವವು. ಬೇಡವೆಂದರೂ ಕಾಲಬಂದಾಗ ಮೃತ್ಯು ದಾರಿದ್ರ್ಯ ಮುಂತಾದವು ಹೇಗೆ ಬಂದೇ ತೀರುತ್ತವೋ ಹಾಗೆ.

'ಅದರಿಂದ ಕೀರ್ತಿ ಅಪಕೀರ್ತಿಗಳಲ್ಲಿ ಜಯ ಅಪಜಯಗಳಲ್ಲಿ ಅಳಿವು ಉಳಿವುಗಳಲ್ಲಿ ಸುಖ ದುಃಖಗಳಿಂದ ಹಿಗ್ಗದೆ ಕುಗ್ಗದೆ ಸಮಾನರಾಗಿರಬೇಕು' ಎಂದು.

❖❖❖

## ೧೨. ಸರ್ವತ್ರ ಆತ್ಮೇಶ್ವರಾನ್ವೀಕ್ಷಾ ಶಿಕ್ಷಣ

'ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಶಿಕ್ಷೇತ್' ಎಲ್ಲ ಜೀವಿಗಳಲ್ಲಿಯೂ ಪರಮಾತ್ಮ ಮತ್ತು ತತ್ವದೇವತೆಗಳಿರುವರೆಂದು ಅನುಸಂಧಾನವನ್ನು ಗುರುಗಳ ಮುಖದಿಂದ ತಿಳಿಯಬೇಕು.

'ಈಕ್ಷಣ' ಪರೋಕ್ಷಜ್ಞಾನ, ಅನುಸಂಧಾನ ಭಗವಂತನಲ್ಲಿ ಒಮ್ಮೆ ಮಾಡಿದರೆ ಸಾಲದು, 'ಅನ್ವೀಕ್ಷಾ' ಮತ್ತೆಮತ್ತೆ ಅನುಸಂಧಾನ ಮಾಡಬೇಕು.

ಒಂದೇರೂಪದಲ್ಲಿ ಮನವಿಟ್ಟಾಗ ಆಲಸ್ಯವಾದರೆ, ಇನ್ನೊಂದು ರೂಪ ದಲ್ಲಿಯೂ ಮನವಿಡಬೇಕು. ಹೀಗೆ ಮಾಡಿದಾಗಲೇ ಅಪರೋಕ್ಷ ಬೇಗನೆ ಉಂಟಾಗುವುದು.

ಮನಸಿನ 'ಸಮಾಧಾನ' ಅಂದರೆ ಅನುಸಂಧಾನ, ಮನವಿಡುವುದು ಮೂರು ಬಗೆ. ಯಥಾರ್ಥವಾಗಿ ಭಗವಂತನಿರುವನೆಂ'ದು ತಿಳಿಯುವು ದೊಂದು, ಹಾಗೆ ಧ್ಯಾನಿಸುವುದು ಎರಡನೆಯದು, ಹಾಗೇ ಸರ್ವಸಮರ್ಪಣವು ಮೂರನೆಯದು, ಇದನ್ನೇ 'ಸರ್ವತ್ರಾತ್ಮೇಶ್ವರಾನ್ವೀಕ್ಷಾ' ಎಂಬಲ್ಲಿ 'ಸರ್ವತ್ರ' ಎಲ್ಲ ಜೀವಿಗಳಲ್ಲಿ ಪರಮಾತ್ಮನ ಅನುಸಂಧಾನ ಬೇಕೆಂದಿದ್ದಾರೆ.

ಭಗವಂತನಿಗೆ ಎರಡು ರೂಪಗಳಿವೆ. ಒಂದು ಜೀವನಲ್ಲಿರುವ 'ಆತ್ಮ' ಎಂಬ ಬಿಂಬರೂಪ. ಇದನ್ನೆ ಪುರುಷ ಜೀವ ಪ್ರತ್ಯಕ್ ವಾಸುದೇವ ಹರಿ ಎಂಬ ಹೆಸರುಗಳಿಂದಲೂ ಕರೆಯುವರು.

ಶರೀರದ ಹೊರಗಿರುವ ಕಾಲ ಎಂಬ ರೂಪ ಎರಡನೆಯದು. ಇದನ್ನೆ ಈಶ್ವರ ಎಂದೂ ಕರೆಯುವರು.

ಹೀಗೆ ಒಳಗೆ ಹೊರಗೆ ಸರ್ವತ್ರ ಆತ್ಮ ಈಶ್ವರರ 'ಈಕ್ಷಾಂ ಅನುಈಕ್ಷಾಂ' ಪುನಃ ಪುನಃ ಈಕ್ಷಣರೂಪವಾದ ಅನುಸಂಧಾನವನ್ನು ಕಲಿಯಬೇಕು.

ಇಲ್ಲಿ ಪ್ರಶ್ನೆ—ಪುನಃಪುನಃ ಭಗವಂತನಲ್ಲಿ ಮನವನ್ನು ನಿಲ್ಲಿಸಬೇಕು ತಾನೆ? ಅಂದರೆ, ಒಂದು ರೂಪದಲ್ಲಿ ಮನವು ನಿಂತಿತೆಂದರೆ ಪುನಃಪುನಃ ಅದರಲ್ಲಿಯೆ ಮನವನ್ನಿಡಬಹುದು. ಅದರಲ್ಲಿ ನಿಲ್ಲದಿದ್ದರೆ ಬೇಕಾದ ಬೇರೆಬೇರೆ ರೂಪಗಳಲ್ಲಿ ಮನವಿಡಬೇಕಾಗುವುದು. ಆಗ ರೂಪಗಳು ಬೇರೆಬೇರೆಯಾದರೂ ಅವೆಲ್ಲವೂ ಒಬ್ಬನೆ ಭಗವಂತನಾದ್ದರಿಂದ ಒಬ್ಬನಲ್ಲೆ ಮನ ನಿಂತಂತಾಗುವುದರಿಂದ ಧ್ಯಾನಕ್ಕೆ ಅದು ಪ್ರತಿನಿಧಿಯಾಗುವುದು. ಹೀಗೆ ಬೇರೆಬೇರೆ ಅನೇಕ ರೂಪಗಳ ಅನುಸಂಧಾನ ಬೇಕಾಗಿರುವಾಗ 'ಎರಡು ರೂಪ'ಗಳೆಂದೇಕೆ ಹೇಳುತ್ತಿರುವಿರಿ? ಎಂದು.

ಇದಕ್ಕೆ ನಾವು ಹೇಳುವುದಿಷ್ಟು–ಬಿಂಬೋಪಾಸನೆಯ ರೀತಿ ಅರಿತಾಗ ಈ

ಸಮಸ್ಯೆ ಇಲ್ಲ. ವಿಶೇಷ ಜ್ಞಾನಿಗಳಿಗೆ ಒಂದೇ ಬಿಂಬರೂಪ ಅನೇಕವಾಗುವುದು. ಆದರೆ ಈಗ ಭಾಗವತಧರ್ಮಾನುಷ್ಠಾನ ಸಂದರ್ಭದಲ್ಲಿ ಆ ವಿಚಾರವೇಕೆ? ಎಂದು.

ಭಗವಂತನಲ್ಲಿ ರೂಪದಾರಿದ್ರ್ಯವಿಲ್ಲ. ಅವನ ಪ್ರತಿರೂಪದಲ್ಲಿ ರೂಪಾಂತರಗಳು ಎಣಿಸಲಾರದಷ್ಟಿವೆ. ನೆಲದಲ್ಲಿ ಧೂಳಿನಕಣಗಳನ್ನು ಎಣಿಸಬಲ್ಲ ಬ್ರಹ್ಮನಿಗೂ ದೇವತೆಗಳ ಆಯುಷ್ಯಪರ್ಯಂತ ಎಣಿಸಿದರೂ ಕೊನೆಗಾಣದಂತಿರುವ ಭಗವಂತನ ರೂಪಗಳೆಲ್ಲವೂ ಹೊಸಹೊಸದಾಗಿಯೇ ಕಾಣುವುವು. ಇನ್ನು ಇತರರ ಪಾಡೇನು'. ಸಪ್ತಮಸ್ಕಂಧದಲ್ಲಿ—

ತೇಷ್ವಾತ್ಮ ದೇವತಾಬುದ್ಧಿಃ ಸುತರಾಂ ನೃಷು ಪಾಂಡವ ॥ (೭.೧೨.೧೦)

'ಪಶು ಮುಂತಾದ ಎಲ್ಲ ಜೀವಿಗಳಲ್ಲಿ ಪರಮಾತ್ಮನೂ ತತ್ವದೇವತೆಗಳೂ ಇರುವರೆಂಬ ಅನುಸಂಧಾನ ಮಾಡಬೇಕು' ಎಂದು ಹೇಳಿ, ಪಶು ಮುಂತಾದ ಜೀವಿಗಳಲ್ಲಿಯೂ ಅನುಸಂಧಾನ ಬೇಕೆಂದಮೇಲೆ ಮನುಷ್ಯರಲ್ಲಿ ವಿಶೇಷವಾಗಿ ಅದು ಬೇಕೆಂದು ಬೇರೇನು ಹೇಳಬೇಕು? ಏಕೆಂದರೆ ಎಲ್ಲ ಕಡೆಯೂ ಭಗವಂತನ ಆವಿರ್ಭಾವ ಒಂದೇ ತೆರನಾಗಿಲ್ಲ, ರೂಪಗಳಲ್ಲಿ ಭೇದತಾರತಮ್ಯಗಳಿಲ್ಲದಿದ್ದರೂ ಅವುಗಳ ಆವಿರ್ಭಾವಗಳಲ್ಲಿ ತಾರತಮ್ಯವಿದ್ದೇ ಇದೆ. ಭಕ್ತನು ಅದನ್ನು ಯಥಾಯೋಗ್ಯವಾಗಿ ಅನುಸಂಧಾನ ಮಾಡಬೇಕು ಎಂಬ ಅಭಿಪ್ರಾಯದಿಂದ,

'ಯಥಾರ್ಹತಃ ತೇಷ್ವಾತ್ಮದೇವತಾಬುದ್ಧಿಃ
ಸುತರಾಂ ನೃಷು ಪಾಂಡವ'
ಎಂದು ನಾರದರು ಯುಧಿಷ್ಠಿರನಿಗೆ ಹೇಳುತ್ತಾರೆ.

❖❖❖

## ೧೩. ಕೈವಲ್ಯ ಶಿಕ್ಷಣ

'ಕೈವಲ್ಯಂ ಶಿಕ್ಷೇತ್' ಕೈವಲ್ಯವು ಹದಿಮೂರನೆ ಧರ್ಮಶಿಕ್ಷಣವಾಗಿದೆ.

ಕೈವಲ್ಯವೆಂದರೇನು? ಕೇವಲನಾಗಿ ಅಸಹಾಯಕನಾಗಿ ಏಕಾಕಿಯಾಗಿ ಇರುವುದೇ ಕೈವಲ್ಯ ಹೊರತು ಪ್ರಸಿದ್ಧವಾದ ಮೋಕ್ಷವಲ್ಲ. ಮೋಕ್ಷಸಾಧನಗಳನ್ನು ಹೇಳುವ ಸಂದರ್ಭದಲ್ಲಿ ಮೋಕ್ಷವನ್ನು ಮೋಕ್ಷಸಾಧನವೆಂದು ಹೇಳಲಾಗದು ತಾನೆ?

ಆದರೂ, ಏಕಾಕಿತನವನ್ನು ಕೈವಲ್ಯ ಎಂಬ ಹೆಸರಿನಿಂದ ಮೋಕ್ಷಸಾಧನವೆಂದು ಪರಿಗಣಿಸಲಾಗದು. ಮೋಕ್ಷಸಾಧನವಾಗಿ ಅನುಷ್ಠಾನ ಮಾಡಲು ಯೋಗ್ಯವಾದ ಅರ್ಥ ಇದಲ್ಲ. ನಿಜ. ಅದಕ್ಕೆ,

ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸಂತೋಷ ಆರ್ಜವಂ ॥

(ಭಾ.೭.೧೨.೮)

ಎಂಬಲ್ಲಿ 'ತ್ಯಾಗಃ' ಎಂಬುದು ಈ 'ಕೈವಲ್ಯ'ಕ್ಕೇ ವಿವರಣೆ ಎನ್ನೋಣ?

ಇದು ಸರಿಯಲ್ಲ. ತ್ಯಾಗವೆಂದರೆ ದಾನ ಮಾಡುವುದೇ ತಾನೆ? 'ತ್ಯಾಗ' 'ದಾತೃತ್ವ'ಗಳು ಬೇರೆಯಲ್ಲ. ಅದರಿಂದ ತ್ಯಾಗಶಬ್ದಕ್ಕೆ ಬೇರೆ ಅರ್ಥ ಮಾಡಬೇಕು. ಹಾಗಾದರೆ,

'ತ್ಯಾಗಃ ಸನ್ನ್ಯಾಸಃ ಉಚ್ಯತೇ' (ಭಾ.೧೧.೧೯.೩೮)

'ತ್ಯಾಗವೆಂದರೆ ಮುಖ್ಯವಾಗಿ ಸನ್ನ್ಯಾಸವೆ.'

ತ್ಯಾಗರೂಪವಾಗಿ ಉಕ್ತವಾದುದೆಲ್ಲವೂ ಸನ್ನ್ಯಾಸಕ್ಕೋಸ್ಕರವಾಗಿಯೆ ವಿಹಿತವಾಗಿದೆ. ಏಕೆಂದರೆ ಸನ್ನ್ಯಾಸವು ಕೂಡ ಬರಿಯ ಕರ್ಮಪರಿತ್ಯಾಗವಲ್ಲ. ಕರ್ಮತ್ಯಾಗವು ಜಡವಾದ ಕಲ್ಲುಮಣ್ಣುಗಳಲ್ಲಿಯೂ ಕಂಡುಬರುತ್ತದೆ. ಕರ್ಮವನ್ನು ಬಿಟ್ಟರೆ ಶಿಲಾಸದೃಶರಾಗಿ ಎಲ್ಲರೂ ಆದರಣೀಯರೆನ್ನಬೇಕಾದೀತು.

'ಆದರೆ ಸನ್ನ್ಯಾಸವೇ ತ್ಯಾಗಶಬ್ದಾರ್ಥವಾದರೆ ಬಹಳ ಗೊಂದಲ ಉಂಟಾಗುತ್ತದೆ. ಭಾಗವತಧರ್ಮದಲ್ಲಿ ಸನಕಾದಿ ಸನ್ನ್ಯಾಸಿಗಳಂತೆ ಜನಕಾದಿ ಗೃಹಸ್ಥರೂ ಇತರ ಬಹುಜನರೂ ಇರುತ್ತಾರೆ. ಕೈವಲ್ಯ, ತ್ಯಾಗ ಎಂದರೆ ಸನ್ನ್ಯಾಸವೆ ಎಂದರೆ ಮಿಕ್ಕ ಗೃಹಸ್ಥರಿಗೆ ಯಾರಿಗೂ ಈ ಧರ್ಮದಲ್ಲಿ ಪ್ರವೃತ್ತಿಯೇ ಇಲ್ಲವೆಂದಾದೀತು!

ಈ ಎಲ್ಲ ಸಮಸ್ಯೆಗಳಿಗೆ ಇದು ಪರಿಹಾರ—

ಅಹಿಂಸಾ ಸತ್ಯಮಸ್ತೇಯಂ ಅಸಂಗೋ ಹ್ರೀರಸಂಚಯಃ ।

(ಭಾ.೧೧.೧೯.೩೩)

ಎಂದು ಮುಂತಾಗಿ ಹನ್ನೆರಡು ಯಮಗಳಲ್ಲಿ ಪರಿಗೃಹೀತವಾದ 'ಅಸ್ತೇಯ'

ಇಲ್ಲಿ 'ಸನ್ಯಾಸ' ಶಬ್ದಾರ್ಥವೆಂದು ವಿವಕ್ಷಿತವಾಗಿದೆ. ಅಸ್ತೇಯ ರೂಪವಾದ ಸನ್ಯಾಸವನ್ನು ಯತಿಗಳಂತೆ ಗೃಹಸ್ಥರೂ ಅನುಷ್ಠಾನ ಮಾಡಬಲ್ಲರು.

ಯದ್ಯಪಿ ಈ ಅರ್ಥವೂ ಕೂಡ ಪೂರ್ತಿ ಸಮಂಜಸವಾಗುವುದಿಲ್ಲ—

'ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಃಸ್ಪೃಹಾ ।

ಅಸ್ತೇಯ ಮಿತಿ ತಚ್ಚೋಕ್ತಂ ।'

'ತ್ರಿಕರಣಗಳಿಂದಲೂ ಸರ್ವಥಾ ಪರದ್ರವ್ಯಾಪಹರಣ ಮಾಡದಿರುವುದು ಅಸ್ತೇಯವೆನಿಸುವುದು' ಎಂದಿರುವುದರಿಂದ, ಪರದ್ರವ್ಯಾಪಹಾರವನ್ನು ಮಹಾಪಾತಕಗಳಲ್ಲಿ ಪರಿಗಣಿಸಲಾಗಿದೆ ಎಂದಮೇಲೆ ಅದರ ಪರಿತ್ಯಾಗವು ಧರ್ಮವೆಂದು ಪ್ರಸಿದ್ಧವೆ ಇರುವುದರಿಂದ ಇಲ್ಲಿ ಅದನ್ನು ಹೇಳಬೇಕಾಗಿಲ್ಲ, ಅದಕ್ಕೆ ವಿಶೇಷಪ್ರಯೋಜನವೂ ಇಲ್ಲ.

ಆದರೂ 'ಅಸ್ತೇಯ' ಶಬ್ದಕ್ಕೆ ವಿಶೇಷಾರ್ಥವನ್ನು ವಿವಕ್ಷೆ ಮಾಡುತ್ತೇವೆ. ಅದು ಹೀಗೆ—

ಭಗವಂತನೇ ಜೀವಿಗಳಿಗೆ ದೇಹನಿರ್ಮಾಣಮಾಡಿ ಅದರೊಳಗಿದ್ದು ತಾನು ಸೃಜಿಸಿದ ಇಂದ್ರಿಯಗಳಿಂದಲೇ ವಿಷಯಭೋಗ ಮಾಡುತ್ತಾನೆ ಎಂದು ಅಧ್ಯಾತ್ಮಪ್ರಕರಣದಲ್ಲಿ 'ಸ ವಾ ಇದಂ ವಿಶ್ವಮಮೋಘ ಲೀಲಃ' ಎಂಬ ೨೩೬ನೇ ಶ್ಲೋಕದಲ್ಲಿ ಯುಕ್ತಿಯುಕ್ತವಾಗಿ ಪ್ರತಿಪಾದಿಸಿದ್ದೇವೆ. ಹೀಗಿದ್ದರೂ ಜೀವನು ಈ ದೇಹ ನನ್ನದೇ ಈ ಇಂದ್ರಿಯಗಳು ನನ್ನವೇ ಇವುಗಳಿಂದ ನಾನೇ ಯಾಗಾದಿ ಕರ್ಮ ಮಾಡಿ ಫಲವನ್ನು ಉಣ್ಣುತ್ತೇನೆ ಎಂದು ಮುಂತಾಗಿ ಭಾವಿಸುತ್ತಾನೆ. ಇದು ಸ್ತೇಯ ಕಳವು, ದುರ್ಭಾವನೆ, ಭಕ್ತನು ಇದನ್ನು ಬಿಡಬೇಕು. ಏಕೆಂದರೆ ಹೀಗೆ ಭಾವಿಸಿದರೆ ಭಗವಂತನ ಕರ್ತೃತ್ವ ಭೋಕ್ತೃತ್ವ ಶರೀರೇಂದ್ರಿಯ ಸ್ವಾಮಿತ್ವಗಳನ್ನು ಭಕ್ತನು ಕದ್ದಂತಾಗುವುದು. ಇದೇ ಮುಖ್ಯವಾಗಿ ಕಳ್ಳತನ, ಸ್ತೇಯ. ಅಮುಖ್ಯಕರ್ತನಾದ ಜೀವ ಮುಖ್ಯವಾದ ಭಗವಂತನ ಕರ್ತೃತ್ವಾದಿ ಗಳನ್ನು ಅಪಹರಿಸುವುದೇ ಮುಖ್ಯವಾಗಿ ಸ್ತೇಯವೆನಿಸುವುದು ತಾನೆ? ಇದನ್ನು ಭಕ್ತನು ಬಿಡಬೇಕು, ಬಿಡುವುದೇ ಮುಖ್ಯವಾಗಿ ಅಸ್ತೇಯ.

ಭಗವಂತನು ಅನಾದಿಯಿಂದಲೇ ಸರ್ವಕ್ರಿಯಾಕರ್ತ, ಸರ್ವಫಲಭೋಕ್ತ ಸರ್ವಶರೀರೇಂದ್ರಿಯಾದಿಗಳ ಸ್ವಾಮಿಯಾಗಿರುವನು. ಈ ಮಧ್ಯೇ ಜೀವನು

ತಾನೇ ಕರ್ತ ತಾನೇ ಭೋಕ್ತ ತಾನೇ ಸ್ವಾಮಿ ಎಂದು ತಿಳಿಯುತ್ತಾನೆ! ಇದಕ್ಕೆ ಏನು ಕಾರಣ?

ಯದ್ಯಪಿ, ಜೀವನಿಗೆ ಈ ದೇಹೇಂದ್ರಿಯಾದಿಗಳಲ್ಲಿ ಪ್ರವೇಶರೂಪವಾದ ಸಂಸಾರ ಅನಾದಿ ಎಂಬುದು ನಿರ್ವಿವಾದವೆ. ಅನಾದಿಯಿಂದಲೇ ಶ್ರೀಹರೀಚ್ಛೆ ಯಿಂದ ಜೀವನಿಗೆ ಶರೀರಪ್ರಾಪ್ತಿ ಇದೆ. ಶರೀರದಲ್ಲಿ ಪ್ರವೇಶವಿದೆ, ಅದರಲ್ಲಿ ತನ್ನದೆಂಬ ಅಭಿಮಾನವಿದೆ ಎಂದಮೇಲೆ ಇದರಲ್ಲಿ ಕಾರಣವೇನೆಂಬ ಪ್ರಶ್ನೆಗೇ ಅವಕಾಶವಿಲ್ಲ. ಆದರೂ ನಿಮಿತ್ತವೇನೆಂದು ಕೇಳಬಹುದು. ಸಂಸಾರ ಅನಾದಿ ಯಾದರೂ ನಿರ್ನಿಮಿತ್ತವಲ್ಲ ತಾನೆ? ನಿರ್ನಿಮಿತ್ತವಾಗಿ ಸಂಸಾರ ಜೀವನಿಗೆ ಇದೆ ಎಂದರೆ ಭಗವಂತನಿಗೆ ವೈಷಮ್ಯ ನೈರ್ಘೃಣ್ಯದೋಷ ಬಂದೀತು. ಅದರಿಂದ ಅನಾದಿ ನಿಮಿತ್ತವೇನೆಂದು ಪ್ರಶ್ನೆ ಮಾಡುತ್ತೇವೆ.

ಇದಕ್ಕೆ ಉತ್ತರ—ಜೀವನಿಗೆ ತಾನೇ ಕರ್ತನೆಂದು ಭೋಕ್ತನೆಂದು ಸ್ವಾಮಿಯೆಂದು ಮೂರು ಬಗೆಯ ಮಿಥ್ಯಾಜ್ಞಾನ ಅನಾದಿಯಿಂದಲೇ ಇದೆ. ಅದಕ್ಕೆ ನಿಮಿತ್ತವು ಕೂಡ, ಅನಾದಿಯಿಂದಲೇ ಜೀವಸ್ವರೂಪಕ್ಕೆ ಇರುವ ಭಗವಂತನ ಕರ್ತೃತ್ವಾದಿ ಮೂರು ಧರ್ಮಗಳ ಸನ್ನಿಧಾನ, ಸನ್ನಿಧಿಯಲ್ಲಿರುವ ಯಾವುದೇ ವಸ್ತುವಿನಲ್ಲಿಯೂ ಬಹುಕಾಲವಾದಂತೆ ನನ್ನದೆಂಬ ಅಭಿಮಾನ ಬರುವುದು ಲೋಕದಲ್ಲಿ ಕಂಡುಬರುತ್ತದೆ.

ಯತೋ ಯತೋ ನಿವರ್ತೇತ ವಿಮುಚ್ಯೇತ ತತಸ್ತತಃ ।
ಏಷ ಧರ್ಮೋ ನೃಣಾಂ ಕ್ಷೇಮಃ ಶೋಕಮೋಹ ಭಯಾಪಹಃ ॥

(ಭಾ.೧೧.೨೧.೧೮)

'ಯಾವುದೇ ವಸ್ತುವಿನ ಬಳಿ ಸದಾಕಾಲವಿದ್ದರೆ ಅದರಲ್ಲಿ ತನ್ನದೆಂಬ ಅಭಿಮಾನ ಬರುತ್ತದೆ. ಆ ವಸ್ತುವಿನಿಂದ ದೂರ ಸರಿದರೆ ಅದರಲ್ಲಿ ಅಭಿಮಾನ ದೂರವಾಗುವುದು. ಇದೇ ಮಾನವರಿಗೆ ಶೋಕ ಮೋಹ ಭಯಗಳನ್ನು ಕಳೆವ ಕ್ಷೇಮಕರವಾದ ಅಸ್ತೇಯವೆಂಬ ಧರ್ಮ' ಎಂದು ಏಕಾದಶಸ್ಕಂಧದಲ್ಲಿ ಭಗವಂತ ಹೇಳುತ್ತಾನೆ.

❖❖❖

## ೧೪. ಅನಿಕೇತನ ಶಿಕ್ಷಣ

'ಅನಿಕೇತನಂ ಶಿಕ್ಷೇತ್' ಅನಿಕೇತನವು ಭಾಗವತ ಧರ್ಮವಾಗಿದೆ. ಅದನ್ನು ಗುರುಮುಖದಿಂದ ತಿಳಿಯಬೇಕು.

ಅಸ್ತೇಯ ಮುಂತಾದ ಯಮವನ್ನು ಅನುಷ್ಠಾನ ಮಾಡುವವನು ಪತ್ನೀಪುತ್ರಾದಿಗಳನ್ನು ತ್ಯಜಿಸಿ ಸ್ವಯಂ ಏಕಾಕಿಯಾಗಿ ತೀರ್ಥಾಟನರೂಪ ನಿಯಮವನ್ನು ನಡೆಸಬೇಕೆಂದು ಯೋಗಶಾಸ್ತ್ರದಲ್ಲಿ ವಿಧಿಸುತ್ತಾರೆ. ಅದೇ ಅಭಿಪ್ರಾಯದಿಂದ ಭಾಗವತವೂ ಕೂಡ ತೀರ್ಥಾಟನವನ್ನು ನಿಯಮಗಳಲ್ಲಿ ಒಂದಾಗಿ ಪರಿಗಣಿಸಿದೆ.

'ನಿಕೇತನ' ಅಂದರೆ ನಿಯಮಿತವಾದ ಒಂದು ವಾಸಸ್ಥಾನ. ಅದನ್ನು ಬಿಟ್ಟು ದೂರ ಹೋಗುವುದೇ 'ಅನಿಕೇತನ' ಒಂದೇಕಡೆ ಇದ್ದರೆ ಮನೆ ಮಡದಿ ಮಕ್ಕಳ ಸಂಸಾರವೇ ಅವಶ್ಯಕವಾಗುವುದು. ಅವುಗಳಲ್ಲಿ ಅಭಿಮಾನ ಉಂಟಾಗುವುದು. ಅವುಗಳ ನಾಶ ವಿಯೋಗಾದಿಗಳಿಂದ ಮನೋವ್ಯಥೆ ಉಂಟಾಗುವುದು. ಅದರಿಂದ ಅವೆಲ್ಲವನ್ನು ಬಿಟ್ಟು ತೀರ್ಥಾಟನ ಮಾಡಬೇಕು.

ಯೋಗಶಾಸ್ತ್ರಗಳಲ್ಲಿ ತೀರ್ಥಾಟನ ಮಾಡಬೇಕೆಂದುದಕ್ಕೂ ಇದುವೇ ಮುಖ್ಯಾರ್ಥ. ಮನೆ ಮಡದಿ ಮುಂತಾದವುಗಳಲ್ಲಿ ಅಭಿಮಾನವನ್ನು ತೊರೆದು ತೀರ್ಥಾಟನ ಮಾಡುವುದೇ 'ಅನಿಕೇತನ' ಎಂಬ ಭಾಗವತ ಧರ್ಮದ ಅನುಷ್ಠಾನವಾಗಿದೆ ಎನ್ನುವ ಅಭಿಪ್ರಾಯದಿಂದ.

ಅದು ಹೇಗೆಂದರೆ 'ತೀರ್ಥ' ಎಂದರೆ ಪಾವನ. ಹೀಗಾಗಿ ತೀರ್ಥಶಬ್ದಕ್ಕೆ ಮುಖ್ಯ ಅರ್ಥಭೂತರು ಪಾವನರಾದ ಭಗವದ್‌ಭಕ್ತರು. ನದ್ಯಾದಿ ಜಲವೆಂಬ ಬೇರೆ ಅರ್ಥದಲ್ಲಿ ತೀರ್ಥಶಬ್ದವನ್ನು ಬಳಸುವುದು 'ನ ಹ್ಯಮ್ಮಯಾನಿ ತೀರ್ಥಾನಿ' ಎನ್ನುವ ತತ್ವವೇದಿಗಳಿಗೆ ರುಚಿಸಲಾರದು. ತೀರ್ಥರೆಂದು ಕರೆಸಿಕೊಳ್ಳುವ ಭಗವದ್‌ಭಕ್ತರ ಉಪದೇಶಾದಿ ಲಾಭಕ್ಕೋಸ್ಕರವಾಗಿ 'ಅಟನ' ಮಾಡುವುದು ಸಂಚರಿಸುವುದು ಮುಖ್ಯವಾಗಿ ತೀರ್ಥಾಟನ.

ಜಾಣರು ಈ ತೀರ್ಥಾಟನವನ್ನೇ ಮಾಡುವರು. ಅವರು ಮೂಢರಂತೆ ನೀರಲ್ಲಿ ಮುಳುಗು ಹಾಕುವ ಮಾತ್ರದಿಂದ ತೀರ್ಥಸೇವನೆ ಸಾಂಗವಾಯಿತೆಂದುಕೊಳ್ಳುವುದಿಲ್ಲ.

ಯತ್ತೀರ್ಥ ಬುದ್ಧಿಃ ಸಲಿಲೇ ನ ಕರ್ಹಿಚಿ-
ಜ್ಜನೇಷ್ವಭಿಜ್ಞೇಷು ಸ ಏವ ಗೋಖರಃ ॥

(ಭಾ.೧೦.೭೨.೧೩)

'ಯಾರಿಗೆ ನೀರಿನಲ್ಲಿಯೇ ತೀರ್ಥ ಎಂಬ ಭಾವನೆ ಹೊರತು ಜ್ಞಾನಿ ಜನರಲ್ಲಿ ಅಂಥ ಪೂಜ್ಯತಾಭಾವನೆ ಇಲ್ಲವೋ ಅವನು ಮನುಷ್ಯನಲ್ಲ, ಕತ್ತೆ ಗೊರವನ ಜಾತಿಗೆ ಸೇರುವವನು' ಎಂದು ಭಾಗವತವು ಹೇಳುತ್ತಿದೆ.

ಈ 'ತೀರ್ಥಾಟನ'ವೆ 'ಅನಿಕೇತನ' ಎಂಬ ಭಾಗವತಧರ್ಮ. ಏಕೆಂದರೆ 'ಅನಿಕೇತನ' ಎಂದರೆ ಮನೆ ಮಡದಿ ಮುಂತಾದ ನಿಯತ ಸ್ಥಾನವನ್ನು ಬಿಟ್ಟು ಜ್ಞಾನಿಗಳಿಂದ ಉಪದೇಶ ಪಡೆಯುವುದಕ್ಕಾಗಿ ಅವರನ್ನು ಹುಡುಕಿಕೊಂಡು ಹೋಗುವುದು.

ಈ ಧರ್ಮಾನುಷ್ಠಾನದಿಂದ ಲಭಿಸುವ ಜ್ಞಾನ ಎಂಥಹುದು ಎಂಬುದನ್ನು ಕೂಡ 'ಅ-ನಿಕೇತನ' ಎಂಬ ಶಬ್ದವೇ ತಿಳಿಸುವುದು. 'ಅ' ಎಂದರೆ ವಿಷ್ಣು. ಅವನೇ ನನಗೆ 'ನಿಕೇತನ' ಮನೆಯಂತೆ ಆಧಾರ. ಜಡವಾದ ಮನೆ ತಾನಾಗಿ ಆಶ್ರಯ ನೀಡಲಾರದು. ಅದಕ್ಕೆ ಆ ಶಕ್ತಿ ಇಲ್ಲ. ಆದರಿಂದ 'ಮನೆಯೇ ನಮಗೆ ಆಶ್ರಯ ನೀಡುತ್ತದೆ. ಆಧಾರವಾಗಿದೆ' ಎನ್ನುವುದು ಭ್ರಾಂತಿ. ಶ್ರೀಶನೇ ಸರ್ವಾಧಾರ ಎಂದು.

ಹೀಗೆ ತೀರ್ಥಾಟನದ ಉತ್ತಮ ಪ್ರಯೋಜನವನ್ನು ತಿಳಿಸುವ ಮೂಲಕ 'ಅನಿಕೇತನ' ಶಬ್ದವು ತೀರ್ಥಾಟನದಲ್ಲಿ ವಿಲಂಬ ಮಾಡದೆ ಬೇಗನೆ ಪ್ರವೃತ್ತಿ ಮಾಡಲು ಪ್ರೇರಿಸುತ್ತದೆ. ಆದರಿಂದ ತೀರ್ಥಾಟನವು ನಿಯಮ ಗಳಲ್ಲಿ ಒಂದಾಗಿ ಪರಿಗಣಿತವಾದುದು ನ್ಯಾಯವಾಗಿದೆ. 'ಅನಿಕೇತನ'ವನ್ನು ಕಲಿಯಬೇಕೆಂದು ಭಾಗವತ ಹೇಳುವುದೂ ಯುಕ್ತವಾಗುತ್ತದೆ.

'ಅನಿಕೇತನ' ಎಂದರೆ 'ಅ' ವಿಷ್ಣುರೂಪ ನಿಕೇತನವೆ ಮುಖ್ಯಾರ್ಥ ಎಂದಿಟ್ಟುಕೊಂಡಿದ್ದರಿಂದಲೇ ಭಾಗವತದಲ್ಲಿ ಬರುವ 'ಮನ್ನಿಕೇತಂ ತು ನಿರ್ಗುಣಂ' ಎನ್ನುವ ಮಾತಿಗೂ ಹೀಗೇ ಅರ್ಥವಿಟ್ಟುಕೊಳ್ಳಬೇಕು. ಆಗ ಆ ಮಾತು ಉತ್ತಮ ಅರ್ಥಗರ್ಭಿತವಾಗುವುದು.

ದೇವಾಲಯ 'ನಿರ್ಗುಣ' ಹೇಗೆ?

ವನಂ ತು ಸಾತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ ।
ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಂ ।

(ಭಾ.೧೧.೨೫.೨೫)

ವಾಸಕ್ಕೆ ತಪೋವನವು ಸಾತ್ವಿಕ. ಗ್ರಾಮ ರಾಜಸ. ಜೂಜಿನ ಅಡ್ಡೆ ತಾಮಸ. ದೇವಾಲಯ ನಿರ್ಗುಣ ಎಂದು ಶ್ರೀಕೃಷ್ಣನು ಉದ್ಧವನಿಗೆ ಉಪದೇಶಿಸುತ್ತಾನೆ.

ಕರ್ತೃಗಳು ಸಾತ್ವಿಕ ರಾಜಸ ತಾಮಸರೆಂದು ಮೂರು ಬಗೆ ಇರುವಂತೆ ವಾಸಸ್ಥಾನಗಳೂ ಹಾಗೇ ಮೂರುವಿಧ ಎಂದು ಎಲ್ಲ ಕಡೆ ಉಕ್ತವಾಗಿದೆ. ಆದರೆ ಇಲ್ಲಿ ಭಾಗವತ ನಿರ್ಗುಣವೆಂದು ನಾಲ್ಕನೆ ಬಗೆಯನ್ನು ಸೇರಿಸಿ ನಾಲ್ಕು ಬಗೆಗಳೆಂದು ಹೇಳುತ್ತಿದೆ. ಇದು ಹೇಗೆ ಎಂಬ ಪ್ರಶ್ನೆ ಬರುತ್ತದೆ. ಗುಣಕಾರ್ಯವೆನಿಸುವುದರಲ್ಲಿ ವನಾದಿಗಳಿಗಿಂತ ದೇವಾಲಯದಲ್ಲಿ ಏನೂ ವಿಶೇಷ ಕಾಣುವುದಿಲ್ಲ. ವನವು ಸತ್ವಗುಣ ಕಾರ್ಯವಾದರೆ ದೇವಾಲಯವೂ ಹಾಗೇ ಸತ್ವಗುಣಕಾರ್ಯವೇ ಆಗಿದೆ. ನಿರ್ಗುಣ ಹೇಗಾಗುವುದು? ಸತ್ವಗುಣ ಕಾರ್ಯವಾದಜ್ಞಾನಕ್ಕೆ ಸಾಧನವು ತಪೋವನ ಎಂದು ವಿಶೇಷಾರ್ಥ ಮಾಡುವುದಾದರೆ, ದೇವಾಲಯವೂ ಹಾಗೇ ಸತ್ವಗುಣಕಾರ್ಯ ಜ್ಞಾನಕ್ಕೆ ಸಾಧನವಾಗುವುದರಿಂದ, ವನವು ಸಾತ್ವಿಕವೆಂದರೆ ದೇವಾಲಯವೂ ಸಾತ್ವಿಕವೆ. ನಿರ್ಗುಣವಲ್ಲ. ಈ ಪ್ರಶ್ನೆಗೆ ಹೀಗೆ ಸಮಾಧಾನ—

'ಮನ್ನಿಕೇತಂ' ಎಂದರೆ 'ನನ್ನ ಆಶ್ರಯ' ಎಂದರ್ಥವಲ್ಲ, 'ನಾನೇ ಆಶ್ರಯ' 'ನಾನೆ ಸರ್ವರಿಗೆ ಆಶ್ರಯ' ಎಂದರ್ಥವಿಟ್ಟುಕೊಳ್ಳಬೇಕು. 'ಮನ್ನಿಕೇತಂ ತು ನಿರ್ಗುಣಂ' ಎಂದರೆ 'ಆಶ್ರಯ'ನಾದ ನಾನು, 'ಗುಣತ್ರಯ ರಹಿತ ಆಶ್ರಯನೇ' ಆಗಿದ್ದೇನೆ ಎನ್ನುತ್ತಿದ್ದಾನೆ ಶ್ರೀಕೃಷ್ಣ.

ವನಾದಿಗಳಿಗಿಂತ ದೇವಾಲಯದಲ್ಲಿ ಗುಣಕಾರ್ಯತ್ವ ವಿಷಯದಲ್ಲಿ ಏನೂ ವೈಲಕ್ಷಣ್ಯವಿಲ್ಲದಿರಬಹುದು, ಗುಣಕಾರ್ಯಜ್ಞಾನಸಾಧನತ್ವ ವಿಷಯದಲ್ಲಿಯೂ ವನಕ್ಕಿಂತ ದೇವಾಲಯದಲ್ಲಿ ವಿಶೇಷವಿಲ್ಲದಿರಬಹುದು. ಆದರೆ ನಿರ್ಗುಣತ್ವದಲ್ಲಿ ಬಹುವೈಲಕ್ಷಣ್ಯವೆ ಇದೆ.

'ಮನ್ನಿಕೇತಂ' ಶಬ್ದಕ್ಕೆ ಅತಿ ಉತ್ತಮವಾದ ಅರ್ಥವೇ ಈಗ ಲಭ್ಯವಾದಂತಾಯಿತು. 'ನಿರ್ಗುಣಂ' ಎಂಬ ಶಬ್ದವು ಹೇಳುವ ನಿರ್ಗುಣಮೋಕ್ಷ

ಸಾಧನತ್ವವೂ ಶ್ರೀಶನಲ್ಲಿಯೇ ಮುಖ್ಯವಾಗಿರುವುದರಿಂದ 'ನಿರ್ಗುಣಂ' ಶಬ್ದಕ್ಕೂ ಮುಖ್ಯಾರ್ಥ ಮಾಡಿದ್ದು ಅತ್ಯಂತ ಯೋಗ್ಯವೂ ಆಗುವುದು.

ಇಷ್ಟೇ ಅಲ್ಲ. ಇನ್ನೊಂದು ವಿಶೇಷವೂ ಇಲ್ಲಿ ಸೂಚಿತವಾಗುತ್ತದೆ.

ತಪೋವನ ದೇವಾಲಯ ತುಲಸೀತೋಟ ಮುಂತಾದವುಗಳಲ್ಲಿಯೂ ಕೂಡ ಒಳಗೆ ಭಗವದ್ರೂಪವಾದ ತಪೋವನಾದಿಗಳನ್ನೇ ಅನುಸಂಧಾನ ಮಾಡಿದಾಗ ಅವೆಲ್ಲವೂ ನಿರ್ಗುಣವೆ. ನಿರ್ಗುಣ ಮೋಕ್ಷಸಾಧನವೆ ಆಗುವುದು.

ಸಾತ್ವಿಕ ರಾಜಸ ತಾಮಸ ಎಂದು ಭೇದವು. ನಿರ್ಗುಣ ಭಗವದನು ಸಂಧಾನವಿಲ್ಲದ ಅವಸ್ಥೆಯಲ್ಲಿ ಮಾತ್ರ ಹೊರತು ಅನುಸಂಧಾನವಿದ್ದರೆ ಭೇದವಿಲ್ಲ.

ವನತ್ವಾದಿರೂಪದಿಂದಲೇ ವನಾದಿಗಳು ಸಾತ್ವಿಕಾದಿ ಭೇದಯುಕ್ತವಾಗು ತ್ತವೆ ಎನ್ನುವಂತಿಲ್ಲ. ಹಾಗೆ ಹೇಳುವ ಪಕ್ಷದಲ್ಲಿ ವನವು ನಿಯಮೇನ ಸಾತ್ವಿಕಜ್ಞಾನ ಸಾಧನವಾಗಬೇಕಾದೀತು. 'ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾತ್' 'ಕಾಡಿಗೆ ಹೋದರೂ ಅಲ್ಲಿ ತಾಮಸ ವಿಷಯಾಸಕ್ತಿ ಉಂಟಾಗಬಹುದು' ಎಂದು ಹೇಳುವುದು ಕೂಡಲಾರದು.

'ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ'

(ಭ.ಗೀ.೧೭.೮)

ರುಚಿಕರವಾದ, ಸ್ನಿಗ್ಧ, ಸ್ಥಿರ ಹೃದ್ಯವಾದ ಆಹಾರವು ಸಾತ್ವಿಕರಿಗೆ ಪ್ರಿಯ ಎಂದು ಹೇಳಿದರೂ ಆಹಾರವು ಕೇವಲ ರುಚಿಕರವಾದ ಮಾತ್ರಕ್ಕೇ ಸಾತ್ವಿಕವೆನಿಸ ಲಾರದು ತಾನೆ? ಹಾಗೇ ಹೇಳಿದರೆ ಎಲ್ಲ ಆಹಾರವೂ ಒಬ್ಬೊಬ್ಬರಿಗೆ ಒಂದೊಂದು ರುಚಿಕರವೇ ಆಗುವುದರಿಂದ ಬಹಳ ಗೊಂದಲವೇ ಉಂಟಾಗುವುದು. ಯಾವುದು ಸಾತ್ವಿಕ ಯಾವುದು ಸಾತ್ವಿಕವಲ್ಲ ಎಂದು ಹೇಳುವುದೇ ಅಶಕ್ಯ ವಾದೀತು

ಅದರಿಂದ 'ಸಾತ್ವಿಕ ಜ್ಞಾನಕ್ಕೆ ಸಾಧನವಾಗುವುದೇ ಸಾತ್ವಿಕ' ಎನ್ನುವುದೇ ಸರಿಯಾದ ವ್ಯವಸ್ಥೆ ಎಂದೊಪ್ಪಬೇಕು.

ಅದೇರೀತಿ ಯಾರಿಗೆ ಯಾವ ಸ್ಥಳವು ಸಾತ್ವಿಕ ಜ್ಞಾನ ಕಾರಣವಾಗುವುದೊ ಅವನಿಗೆ ಆ ಸ್ಥಳವು ಸಾತ್ವಿಕ ಸ್ಥಳ ಎಂದೂ ನಿಯಮವನ್ನು ಒಪ್ಪಬೇಕು. ವನ

ದೇವಾಲಯ ಎಂದು ಮುಂತಾಗಿ ಒಂದೊಂದು ಉದಾಹರಣೆಗನ್ನು ನೀಡುವುದು ಅವುಗಳು ಸಾತ್ವಿಕವೆಂದು ಜ್ಞಾಪಿಸುವುದಕ್ಕಷ್ಟೆ. ಪ್ರಾಯಃ ಸಾತ್ವಿಕವಾಗಿರುವುದರಿಂದ ಸಾತ್ವಿಕವೆಂದು ಆ ಉದಾಹರಣೆಗಳನ್ನು ತೆಗೆದುಕೊಳ್ಳಬಹುದೆಂದು ಅಭಿಪ್ರಾಯ.

ಆದರಿಂದ ವನಾದಿಗಳೂ ಕೂಡ ಸಾತ್ವಿಕಜ್ಞಾನ ಸಾಧನತ್ವಾದ್ಯವಸ್ಥೆಯಲ್ಲಿ ಸಾತ್ವಿಕಾದಿಗಳೆನಿಸುವುವು.

ಯಾರಿಗೆ ಎಲ್ಲಿ ವಾಸ ಮಾಡಿದಾಗ ಗುಣಕೃತ ಮನೋವಿಕಾರವಾಗುವುದಿಲ್ಲವೋ ಆ ಸ್ಥಳವು 'ನಿರ್ಗುಣ'.

ಇಂಥ ನಿರ್ಗುಣತ್ವವು ಮುಖ್ಯವಾಗಿ ವಿಷ್ಣುಲೋಕದಲ್ಲಿರುತ್ತದೆ. ಅನ್ಯತ್ರ ವನಾದಿಗಳಲ್ಲಿಯೂ ಬಹುಕಾಲ ನಿರ್ಗುಣಭಗವದ್ಧ್ಯಾನ ಮಾಡುತ್ತಿದ್ದರೆ ಗುಣಕಾರ್ಯಕರಣಶಕ್ತಿ ಉಳ್ಳದ್ದೇ ಆಗಿರುವ ವನಾದಿಗಳು ಕೂಡ ಗುಣಕಾರ್ಯ ಮನೋವಿಕಾರ ಉಂಟುಮಾಡದೆ ಇರಬಹುದು. ಆಗ ಗೌಣವಾಗಿ ಆ ವನಾದಿಗಳು ನಿರ್ಗುಣವೆನಿಸಬಹುದು.

ಹೀಗೆ ತನ್ನ ವಾಸಸ್ಥಳವನ್ನು ದೇವಾಲಯವಾಗಿ ನಿರ್ಗುಣವಾಗಿ ಮಾಡಿಕೊಳ್ಳುವಲ್ಲಿ ವಿಶೇಷ ಆಸ್ಥೆವಹಿಸಬೇಕು ಎಂದು 'ಮನ್ನಿಕೇತಂ ತು ನಿರ್ಗುಣಂ' ಎನ್ನುವ ವಚನವು ತಿಳಿಸುತ್ತಿದೆ.

ಈ ವಿಷಯದಲ್ಲಿ ಹೆಚ್ಚಿನದನ್ನು ಮುಂದೆ ಗುಣನಿವೃತ್ತಿ ಪ್ರಕರಣದಲ್ಲಿ ಹೇಳುವೆವು. 'ಅವಿದ್ಯಮಾನೋ ಹ್ಯವಭಾತಿ' (ಶ್ಲೋ ೩೫೦) ಎಂದು.

❖❖❖

## ೧೫. ವಿವಿಕ್ತ ಶಿಕ್ಷಣ

'ವಿವಿಕ್ತಂ ಶಿಕ್ಷೇತ್' ವಿವಿಕ್ತವೆನ್ನುವುದೂ ಭಾಗವತ ಧರ್ಮವಾಗಿದೆ. ಅದನ್ನು ಕಲಿಯಬೇಕು.

ಹಿಂದೆ ಕೈವಲ್ಯವೆಂಬ ಭಾಗವತಧರ್ಮ ಶಿಕ್ಷಣ ಸಂದರ್ಭದಲ್ಲಿ 'ಜೀವನು ತನ್ನಲ್ಲಿ ಕರ್ತೃತ್ವಭೋಕ್ತೃತ್ವ ದೇಹೇಂದ್ರಿಯಸ್ವಾಮಿತ್ವಗಳಿವೆ ಎನ್ನುವ ಭಾವನೆಯನ್ನು ಬಿಡಬೇಕು. ಅವುಗಳನ್ನು ಬಿಡುವುದೇ ಕೈವಲ್ಯ. ಅಂದರೆ ಶ್ರೀಶನ ಸ್ವತಂತ್ರ ಕರ್ತೃತ್ವ ಭೋಕ್ತೃತ್ವ ಶರೀರೇಂದ್ರಿಯ ಸ್ವಾಮಿತ್ವಗಳನ್ನು ಕದಿಯದಿರುವ

ಅಸ್ತೇಯವನ್ನು ಅಭ್ಯಾಸ ಮಾಡಬೇಕು. ಅದರಿಂದ ಬೇಗನೆ ಅಪರೋಕ್ಷಜ್ಞಾನ ಲಭಿಸುವುದು ಅದರಿಂದ ಎಲ್ಲ ಸಾಂಸಾರಿಕ ದುಃಖ ನಿವೃತ್ತಿರೂಪ ಮೋಕ್ಷವೂ ಲಭಿಸುವುದು ಎಂದು ಹೇಳಿದ್ದಾರೆ.

ಇದೀಗ ಅಸ್ತೇಯವು ಮೋಕ್ಷಕ್ಕೆ ಹೇಗೆ ಅಂತರಂಗ ಸಾಧನವೋ ಹಾಗೇ ವಿವಿಕ್ತವೂ ಕೂಡ ಎಂದು ಅಭಿಪ್ರಾಯದಿಂದ 'ವಿವಿಕ್ತ'ವನ್ನು ಕಲಿಯ ಬೇಕೆನ್ನುತ್ತಾರೆ.

ಇಲ್ಲಿ ಪ್ರಶ್ನೆ—ಈ 'ವಿವಿಕ್ತ' ಎಂದರೇನು? ವಿವೇಕವೆ? ಹಾಗಿದ್ದರೆ 'ವಿವೇಕ'ವೆಂದೇ ಹೇಳಬೇಕಿತ್ತು. ವಿವೇಕವೂ ಕೂಡ ಯಾವುದರ ವಿವೇಕವೆಂದು ವಿಷಯವನ್ನು ಹೇಳದಿದ್ದರೆ ತಿಳಿಯುವುದು ಶಕ್ಯವಿಲ್ಲ. 'ವಿವೇಕಕ್ಕೆ ಯೋಗ್ಯ ವಿಷಯವು ನಿತ್ಯ ಅನಿತ್ಯ ವಸ್ತುಗಳು. ಅದನ್ನು ಹೇಳಬೇಕಿಲ್ಲ' ಎಂದರೆ ಅದನ್ನು ಇಲ್ಲಿ ಹೇಳುವುದು ಸರಿಯಲ್ಲ. ಹಿಂದೆಯೇ 'ಸಮತ್ವಂ ಶಿಕ್ಷೇತ್' ಎಂಬಲ್ಲಿ ಹೇಳಿಯಾಗಿದೆ.

'ಜ್ಞಾನಸಾಧನಗಳಲ್ಲಿ ವಿವಿಕ್ತವು ಪರಿಗಣಿತವಾಗಿರುವುದರಿಂದ ವಿವಿಕ್ತದೇಶ ಸೇವಿತ್ವವೇ 'ವಿವಿಕ್ತ' ಶಬ್ದದಿಂದ ಇಲ್ಲಿ ಲಕ್ಷಿತವಾಗುತ್ತದೆ' ಎಂದರೆ, ಅದೂ ಸರಿಯಲ್ಲ. ವಿಶೇಷ ಅರ್ಥ ಸಿಕ್ಕಿದಂತಾಗುವುದಿಲ್ಲ.

ಈ ಪ್ರಶ್ನೆಗೆ ಸಮಾಧಾನವಾಗಿ ಹೇಳುತ್ತೇವೆ. ಅದಕ್ಕೆ ವಿಶೇಷವಾದ ಬೇರೇ ಒಂದು ಅರ್ಥವಿವಕ್ಷೆ ಮಾಡುತ್ತೇವೆ. 'ವಿವಿಕ್ತದೇಶ'ವೆಂದರೆ ವಸ್ತುತಃ ತನಗೆ ತನ್ನ ಆತ್ಮಕ್ಕಿಂತ ವಿವಿಕ್ತವಾದ 'ದೇಶ' ಅಂದರೆ ಶರೀರ. ಅಂಥ ದೇಶದಲ್ಲಿ ಶರೀರದಲ್ಲಿ ವಾಸಮಾಡುವುದೇ ವಿವಿಕ್ತದೇಶ ಸೇವಿತ್ವ.

'ಆತ್ಮಕ್ಕಿಂತ ಭಿನ್ನವಾದ ಶರೀರದಲ್ಲಿ ಇರುವುದೇ 'ವಿವಿಕ್ತ' ಎನ್ನುವುದಾದರೆ ಇದು ಎಲ್ಲ ಮನುಷ್ಯರಲ್ಲಿಯೂ ಮೊದಲೇ ಇದೆ. ಅದಕ್ಕೆ ಸಾಧನೆ ಮಾಡುವುದೇಕೆ?'ಎಂದರೆ, ಮನುಷ್ಯನು ತನಗಿಂತ ಭಿನ್ನವಾದ ಶರೀರದಲ್ಲಿಯೇ ವಾಸಮಾಡುತ್ತಿದ್ದರೂ ಅವನು ಹಾಗೆ ತಿಳಿಯುತ್ತಿಲ್ಲ. ನಾನು ಬೇರೆಯಲ್ಲ ನನ್ನ ಶರೀರ ಬೇರೆಯಲ್ಲ, ಒಂದೇ, ಎಂದು ತಿಳಿಯುತ್ತಾನೆ. ಮೂರ್ಖ, ಭ್ರಾಂತನು ಅವನು. 'ಸರಿ ಹಾಗಾದರೆ ಏನು ಮಾಡಬೇಕು?' ಎಂದರೆ, ಶರೀರವನ್ನು ನಾನೆಂದು ತಿಳಿದಿರುವ ಭ್ರಾಂತನು, ಆ ಭ್ರಾಂತಿಯನ್ನು ಬಿಡಬೇಕು. ಶರೀರ

ತನಗಿಂತ ಬೇರೆಯೆ ಅದು ನಾನಲ್ಲ ಎಂದು ಚೆನ್ನಾಗಿ ತಿಳಿಯಬೇಕು. ಇದೇ ವಿವಿಕ್ತ. ಈ ವಿವಿಕ್ತ ಉಳ್ಳ ಜ್ಞಾನಿಗೆ ಬೇಗನೆ ಅಪರೋಕ್ಷವಾಗುವುದು.

ಹೀಗೆ ತಿಳಿಯದವನು ಈ ಮನುಜ ಶರೀರದಲ್ಲಿ ಸಾಧನೆ ಮಾಡಿ ತಿಳಿಯದೆ ಹೋದರೆ, ದುರ್ಲಭವಾದ ಮನುಜ ಶರೀರವನ್ನು ಪಡೆದು ವ್ಯರ್ಥ ಮಾಡಿಕೊಂಡರೆ ಮೂರ್ಖನೆನಿಸುತ್ತಾನೆ. ಇಂಥ ಮೂರ್ಖನು ಜೊತೆಯಲ್ಲಿ ಇರುವುದಾದರೆ ದೇವಲೋಕವೂ ಸುಜನನಿಗೆ ಬೇಡವೆನಿಸುವುದು.

'ಏನೊ ಹೋಗಲಿ!' ಎಂದು ಹೇಳಿದ ಮಾತಿದು, ನಿಜವಾಗಿ ಹೇಳಬೇಕೆಂದರೆ ಅವನು ಮನುಜರ ಶರೀರದಲ್ಲಿದ್ದರೂ ಮನುಜನಲ್ಲ, ಪಶುವೆ. ಇದನ್ನು ಭಾಗವತ ಹೇಳಿದೆ—

ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ ಸ ಏವ ಗೋಖರಃ ।

(ಶ್ಲೋ.೨೨೧)

'ಮೂರ್ಖೋ ದೇಹಾದ್ಯಹಂ ಬುದ್ಧಿಃ'

ಮೂರ್ಖನೆಂದರೆ, ದೇಹಾದಿ ಎಲ್ಲವೂ ನಾನೇ ಎನ್ನುವವನು.

(ಭಾ.೧೧.೧೯.೪೨)

'ಗೃಹಂ ಶರೀರಂ ಮಾನುಷ್ಯಂ' ಮನೆ ಎಂದರೆ ಮನುಷ್ಯ ಶರೀರ.

(ಭಾ.೧೧.೧೯.೪೩)

ತದೇತದಧಿಗಚ್ಛಂತಿ ವಿಷ್ಣೋರ್ಯತ್‌ಪರಮಂ ಪದಂ ।
ಅಹಂ ಮಮೇತಿ ದೌರ್ಜನ್ಯಂ ನ ಯೇಷಾಂ ದೇಹಗೇಹಜಂ ॥

(ಭಾ.೧೨.೫.೩೩)

'ಶರೀರ ಮನೆ ಮುಂತಾದವುಗಳಲ್ಲಿ ನಾನು ನನ್ನವೆನ್ನುವ ದುರಭಿಮಾನ ಇಲ್ಲದವರೇ ವಿಷ್ಣುವಿನ ಸರ್ವೋತ್ತಮವಾದ ಸ್ವರೂಪವನ್ನು 'ತದೇತತ್' ಎನ್ನುವ ಕಾಠಕವಚನಾನುಸಾರ ತಿಳಿಯುತ್ತಾರೆ'.

ಕಾಠಕವಚನ ಪೂರ್ತಿ ಹೀಗಿದೆ—

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ ।
ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥

(ಭಾ.೨.೨.೧೪)

'ಶರೀರ ಮನೆ ಮುಂತಾದುವನ್ನು ನಾನು ನನ್ನವೆನ್ನದವರೇ ಪ್ರಾಪ್ಯತಮ ಪರಮಪದವಾದ ವಿಷ್ಣುಲೋಕವನ್ನು ಸೇರುವರು. ಏಕೆಂದರೆ ಭೂಮಿಯಲ್ಲಿ ಶರೀರತ್ಯಾಗ ಮಾಡಿ ಯಮಲೋಕಕ್ಕೆ ಬಂದಿದ್ದ ನಚಿಕೇತನಿಗೆ ಯಮದೇವರು ತಾನು ಅವನಿಗೆ ಉಪದೇಶಿಸಿದ ಪರಮಾತ್ಮಸ್ವರೂಪವನ್ನು ಈ ಮಂತ್ರದಲ್ಲಿ 'ವಿಷ್ಣುಸ್ವರೂಪ'ವೆಂದಿದ್ದಾರೆ—'ನಾನು ನಿನಗೆ ಉಪದೇಶಿಸಿದ ವಿಷ್ಣುಸ್ವರೂಪವು ಭಗವಂತನ ಪ್ರಸಾದದಿಂದಲೂ ಅದು 'ಹೀಗೇ ಇಂಥದೇ' ಎಂದು ಸಮಗ್ರವಾಗಿ ತಿಳಿಸಲು ಅಸಾಧ್ಯವಾದುದು, ಮತ್ತು ಶ್ರೇಷ್ಠಸುಖರೂಪವಾದುದು, ಎಂದು ಜ್ಞಾನಿಗಳು ತಿಳಿಯುತ್ತಾರೆ' ಎಂದು. 'ಕಿಮು ಭಾತಿ?' ತಿಳಿಯಬಹುದೆ? ಎಂದು ಕೇಳಿದರೆ, 'ನ ಭಾತಿ' ತಿಳಿಯಲಾಗದು ಎಂದು ಉತ್ತರ.

❖❖❖

## ೧೬. ಚೀರವಸನ ಶಿಕ್ಷಣ

ಇಷ್ಟರವರೆಗೆ ಹೇಳಿದ ಸಾಧನಸಂಪತ್ತುಳ್ಳ ಭಗವದ್ಭಕ್ತನಿಗೆ ಸಿಗುವ ಫಲ 'ಹರಿದ ಬಟ್ಟೆ' ಸಾಕೆನ್ನುವ ಪ್ರಜ್ಞೆ ಅಂದರೆ, 'ಚೀರವಸನಂ ಶಿಕ್ಷೇತ್' ಚೀರವಸನ ವೆಂಬ ಭಾಗವತ ಧರ್ಮವನ್ನು ಗುರುಗಳಿಂದ ಕಲಿಯಬೇಕು ಎನ್ನುತ್ತಾರೆ.

ಏನು ಈ 'ಚೀರವಸನ' 'ಹರಿದ ಬಟ್ಟೆ' ಎಂದರೆ? ಗೃಹಸ್ಥರು ಬಹುಕಾಲ ಉಟ್ಟು ಬೀದಿಯಲ್ಲಿ ಬಿಸಾಕಿದ ಹರಕುಬಟ್ಟೆ ತಾನೆ? 'ಚೀರಾಣಿ ಕಿಂ ಪಥಿ ನ ಸಂತಿ?' (ಭಾ.೨.೨.೫) ಶುಕಮುನಿ ಮುಮುಕ್ಷುವಿಗೆ ಹೇಳುತ್ತಾರೆ— ಬಟ್ಟೆಯೂ ಬೇಡವೆನ್ನುವಷ್ಟು ವೈರಾಗ್ಯ ನಿನಗೆ ಬಂದಿರದಿದ್ದರೂ ಚಿಂತೆಯಿಲ್ಲ, ಬೀದಿಯಲ್ಲಿ ಎಸೆದಿರುವ ಹರಕು ಬಟ್ಟೆಗಳಿಲ್ಲವೆ? ಅದನ್ನೇ ಉಟ್ಟು ತೃಪ್ತಿಪಡು, ಒಳ್ಳೆಯ ಬಟ್ಟೆಯನ್ನು ಬಯಸಿ ಶ್ರೀಮಂತರನ್ನು ಓಲೈಸಬೇಡ' ಎಂದು.

ಆದರೆ ಹರಕುಬಟ್ಟೆಯನ್ನು ಬೀದಿಯಿಂದ ಎತ್ತಿಕೊಳ್ಳಲು ಗುರುವಿನ ಶಿಕ್ಷಣ ಬೇಕೆ? ಅನುಮತಿಬೇಕೆ? ಉಪದೇಶಬೇಕೆ? 'ಚೀರವಸನಂ ಶಿಕ್ಷೇತ್' ಹರಕುಬಟ್ಟೆ ಉಡಲು ಗುರುವಿನಿಂದ ಕಲಿಯಬೇಕೆನ್ನುವುದು ಹೇಗೆ ಎನ್ನುವ ಪ್ರಶ್ನೆ ಬರುತ್ತದೆ. ಅದಕ್ಕೆ ಕೇಳುತ್ತೇವೆ, ಪರಗೃಹದಲ್ಲಿ ಊಟಕ್ಕೆ ಕುಳಿತ ಶಿಷ್ಯನಿಗೆ ಗುರುವಿನಾಜ್ಞೆ ಏಕೆ?

ಭೋಜನಕ್ರಿಯೆಗೆ ಗುರುವಿನಾಜ್ಞೆಬೇಕಿಲ್ಲ, ನಿಜ. ಆದರೂ ಆಜ್ಞೆಯನ್ನು ಕೇಳುತ್ತೇವೆ. ಒಬ್ಬ ಗುರುವನ್ನು ಬಿಟ್ಟು ಅವನಿಗೆ ಸಮಾನನಾದ ಮತ್ತೊಬ್ಬ

ಗುರುವಿನ ಬಳಿ ಇರಬೇಕಾದರೂ ಮೊದಲಿನ ಗುರುವಿನಾಜ್ಞೆಬೇಕೆಂದು ಎಲ್ಲರೂ ಒಪ್ಪುತ್ತಾರೆ. ಹಾಗೇ ಭೋಜನದಂಥ ಬೇರೆ ಕೆಲಸಗಳಲ್ಲಿಯೂ ಗುರುವಿನಾಜ್ಞೆ ಪಡೆಯುವುದರಿಂದ ಅವರ ವಿಶೇಷ ಅನುಗ್ರಹ ಲಾಭವಾಗುತ್ತದೆ ಎನ್ನುವುದಾದರೆ ಹರಕುಬಟ್ಟೆ ಉಡುವುದಕ್ಕೂ ಅದೇ ಕಾರಣಕ್ಕೆ ಗುರುವಿನಿಂದ ಅನುಜ್ಞೆ ಪಡೆಯುವುದು ಯುಕ್ತವಾಗುತ್ತದೆ.

ಜ್ಞಾನಕಾರ್ಯದ ಪ್ರಾರಂಭದಲ್ಲಿ ಗುರುಸ್ಮರಣೆ ಉಚಿತ. ಗುರ್ವನುಜ್ಞೆ ಆವಶ್ಯಕ. ಭೋಜನ ಕ್ರಿಯೆಯಲ್ಲಿ ಗುರುವಿನ ಅನುಜ್ಞೆಯಿಂದ ಏನೂ ಉಪಯೋಗವಿಲ್ಲ. ಆದರೂ ಅನುಜ್ಞೆ ಪಡೆಯುವುದರಿಂದ ಆ ಕ್ರಿಯೆಗೇ ಮಹಾಫಲವಿದೆ. ಅಂದರೆ, ಆ ಕ್ರಿಯೆಯಿಂದ ಮಹಾಫಲ ಪಡೆಯುವುದರಲ್ಲಿ ಗುರ್ವನುಜ್ಞೆಯ ಉಪಯೋಗ ವಿದೆ. ಅದರಿಂದಲೇ ಶಿಷ್ಯರು 'ಅನುಜ್ಞಾ' ಎಂದು ಪ್ರಾರ್ಥಿಸಿದಾಗ ಗುರುಗಳು 'ಓಂ ಹರಿಪ್ರಸಾದೋऽಸ್ತು' ಎಂದು ಹರಸುತ್ತಾರೆ. ಭೋಜನಕಾಲದಲ್ಲಿ ಮೊದಲಿಗೆ ಪೂರ್ತಿ ಗುರುಪರಂಪರಾ ಸ್ಮರಣೆ ಮಾಡುವುದೂ ಹೀಗೆ ಅರ್ಥ ಪೂರ್ಣವೇ ಆಗಿದೆ.

ಚೀರವಸನ ಉಡುವುದರಿಂದ ಮಹಾಫಲವಿದೆಯೆ? ಎಂದರೆ, ಹೌದು. ಭೋಜನದಲ್ಲಿ ಅದು ಶ್ರೀಹರಿಪ್ರಸಾದಕ್ಕೆ ಕಾರಣವೆಂಬ ಅನುಸಂಧಾನವಿದ್ದಾಗ ಗುರುಗಳ ಅನುಜ್ಞೆಯಿಂದ ಭೋಜನಜನ್ಯವಾಗಿ ದೊರಕುವ ಆ ಮಹಾಫಲವು ಮಾತಿನಲ್ಲಿ ಹೇಳಲಾಗದಷ್ಟಿರುತ್ತದೆ ಎನ್ನುವಂತೇ, ಚೀರವಸನಕ್ಕೆ ಗುರ್ವನುಜ್ಞೆಯಿಂದ ದೊರಕುವ ಫಲವೂ ಅನಂತವೆಂದೇ ತಿಳಿಯಬೇಕು.

ಶ್ರೀನಿವಾಸಕಲ್ಯಾಣದಲ್ಲಿ 'ಭೋಜನಂ ಕುರು ಗೋವಿಂದ' ಎಂದು ಶುಕನಿಂದ ಅಂದರೆ ಶುಕಾಂತರ್ಗತವಾದ ತನ್ನ ರೂಪದಿಂದ ಭೋಜನಕ್ಕೆ ಅನುಮತಿ ಪಡೆದು ಶ್ರೀನಿವಾಸ ಭೋಜನ ಮಾಡಿದ್ದರಿಂದ ಅದು ಸಮಸ್ತ ಮುನಿಜನರ ತೃಪ್ತಿಗೆ ಮಹಾಫಲಕ್ಕೆ ಕಾರಣವಾಯಿತು. ಆದ್ದರಿಂದ ಭೋಜನಕ್ಕೆ ಗುರ್ವನುಜ್ಞೆ ಪಡೆದರೆ ಅನಂತಫಲ ಎನ್ನೋಣ. ಹರಕುಬಟ್ಟೆ ಧರಿಸಲು ಗುರ್ವನುಜ್ಞೆ ಪಡೆದರೆ ಅನಂತಫಲ ಎನ್ನುವುದು ಹೇಗೆ? ಅದಕ್ಕೂ ಏನಾದರೂ ದೃಷ್ಟಾಂತವಿದೆಯೆ? ಎಂದರೆ ದ್ರೌಪದಿಯು 'ಹಾ ಕೃಷ್ಣ ದ್ವಾರಕಾವಾಸಿನ್' ಎಂದು ಕರೆದು, ಹೊಸಹೊಸ ಸೀರೆಗೆ ಅನುಜ್ಞೆಪಡೆದಿದ್ದರಿಂದ ಸೀರೆ ಅಕ್ಷಯವಾದುದು ಕಂಡಿದೆ.

ವಾದ ಇನ್ನು ಸಾಕು, ಚೀರವಸನವೆಂಬ ಭಾಗವತದ ಧರ್ಮದ ನಿಜವಾದ ಅರ್ಥವೇನು ಹೇಳಿರಿ ಎಂದರೆ, ಹೇಳುವೆವು. ಕೇಳಿರಿ ಅಜ್ಞ ಸಂಸಾರಿಯು ನಿಯಮೇನ ಹರಕುಬಟ್ಟೆಯನ್ನು ಬಿಟ್ಟು ಹೊಸಬಟ್ಟೆ ಉಡುತ್ತಾನೆ. ಜೀರ್ಣಶರೀರವನ್ನು ಬಿಟ್ಟು ಹೊಸಶರೀರವನ್ನು ಹೊಂದಲು ಬಯಸುತ್ತಾನೆ. ಅದಕ್ಕೆ ಕಾರಣವಾಗುವ ಬಂಧಕ ಕರ್ಮ ಮಾಡುತ್ತಾನೆ. ಭಕ್ತನು ಹಾಗೆ ಮಾಡುವುದಿಲ್ಲ.

❖❖❖

## ಈ ಎಲ್ಲ ಹದಿನಾರು ಧರ್ಮಶಿಕ್ಷಣಗಳ ಸಂಕ್ಷೇಪ

(೧) ಭಕ್ತನು ವಿಷಯಾಸಕ್ತಿಯನ್ನು ಬಿಟ್ಟು ನಿಷ್ಕಾಮವಾಗಿ ಭಗವಂತನಲ್ಲಿ ಭಕ್ತಿ ಮಾಡುವ ವೇದಾರ್ಥ– ಅಧ್ಯಾತ್ಮವಿಚಾರರೂಪ **'ಸರ್ವತೋ ಮನಸೋಽಸಂಗ** ಧರ್ಮವನ್ನಾಚರಿಸುವನು.

(೨) ಹರಿಭಕ್ತರಲ್ಲಿಯೂ ತಾರತಮ್ಯಾನುಗುಣವಾಗಿ ಭಕ್ತಿ ಮಾಡುವ **'ಸಾಧುಸಂಗ'** ಧರ್ಮವಾಚರಿಸುವನು.

(೩) ದುಷ್ಟ ಕಾಮನಾತ್ಯಾಗವೆಂಬ **'ಶೌಚ'** ಧರ್ಮವಾಚರಿಸುವನು.

(೪) ಮಹನ್ನಿಂದಾ ಆತ್ಮಪ್ರಶಂಸಾರೂಪ ಪಾಪ ಮಾಡದಿರುವ **'ತಪಸ್ಸು'** ಎಂಬ ಧರ್ಮವನ್ನಾಚರಿಸುವನು.

(೫) ಆಯಾ ಕಾಲದಲ್ಲಿ ಬರಬಹುದಾದ ಕಾಮಾದಿ ಉಪದ್ರವವನ್ನು ಹತ್ತಿಕ್ಕುವ **ತಿತಿಕ್ಷಾ** ಧರ್ಮವನ್ನಾಚರಿಸುವನು.

(೬) ಎಲ್ಲ ಶಬ್ದಗಳು ಹರಿನಾಮಗಳೆಂದು ತಿಳಿದು ಅವನ್ನು ಅನ್ಯತ್ರ ಪ್ರಯೋಗಿಸದಿರುವ **'ಮೌನ'** ಧರ್ಮವನ್ನಾಚರಿಸುವನು.

(೭) ಎಲ್ಲ ಶಬ್ದಗಳನ್ನು ಪರಮಾತ್ಮನ ವಿಷಯದಲ್ಲಿಯೇ ಪ್ರಯೋಗಿಸುವ **'ಸ್ವಾಧ್ಯಾಯ'** ಧರ್ಮವನ್ನಾಚರಿಸುವನು.

(೮) ತ್ರಿಕರಣಗಳಲ್ಲಿ ಏಕಪ್ರಕಾರ ನಿಷ್ಕಾಮಭಕ್ತಿಯಿಂದ ನಡೆದುಕೊಳ್ಳುವ **'ಆರ್ಜವ'** ಧರ್ಮವನ್ನಾಚರಿಸುವನು.

(೯) ಶರೀರ ಇಂದ್ರಿಯ ವ್ಯಾಪಾರಗಳನ್ನೆಲ್ಲ ಶ್ರೀಶನ ಕುರಿತಾಗಿಯೇ ನಡೆಸುವ **ಬ್ರಹ್ಮಚರ್ಯ**ವನ್ನಾಚರಿಸುವನು.

(೧೦) ಕ್ರೋಧವನ್ನು ಬಿಡುವ '**ಅಹಿಂಸಾ**' ಧರ್ಮವನ್ನಾಚರಿಸುವನು.

(೧೧) ದುಃಖದಂತೆಯೇ ಐಹಿಕ ಪಾರಲೌಕಿಕ ವಿಷಯಸುಖವನ್ನೂ ಹೇಯವೆಂದು ತಿಳಿದು, ಹರೀಚ್ಛೆಯಿಂದ ಬಂದ ದುಃಖವನ್ನೂ ಸುಖದಂತೆಯೇ ಸ್ವೀಕರಿಸಿ, ನಿರ್ವಿಕಾರನಾಗುವ '**ಸಮತ್ವ**'ವೆಂಬ ಧರ್ಮವನ್ನಾಚರಿಸುವನು.

(೧೨) ಬಿಂಬನಾಗಿ ತನ್ನೊಳಗಿದ್ದು ತನ್ನ ಆದಾನಾದಿ ಸಕಲವ್ಯಾಪಾರ ಮಾಡುತ್ತ ಜ್ಞಾನ ನೀಡುತ್ತ ಪುರುಷನಾಮಕನಾಗಿಯೂ, ಹೊರಗಿದ್ದು ಆ ಜ್ಞಾನಕರ್ಮಗಳೆರಡಕ್ಕೂ ಫಲನೀಡಿ ಕಾಪಾಡುವ ಕಾಲನಾಮಕನಾಗಿಯೂ ಎರಡು ರೂಪಗಳಿಂದ ಹರಿ ಇರುವನೆಂದು ಸದಾ ಭಾವಿಸುತ್ತ ಸದಾ ಒಂದೇ ಬಗೆಯ ಧ್ಯಾನದಲ್ಲಿ ಆಲಸ್ಯ ಬೇಸರ ಉಂಟಾದರೆ ಬೇರೆಬೇರೆ ಎಲ್ಲ ಜೀವಿಗಳಲ್ಲಿಯೂ ಹೊಸಹೊಸದಾಗಿ ಈ ಎರಡು ರೂಪಗಳನ್ನು ಸದಾ ಚಿಂತಿಸುವ '**ಸರ್ವತ್ರಾತ್ಮೇಶ್ವರಾನ್ವೀಕ್ಷಾ**' ಧರ್ಮವಾಚರಿಸುವನು.

(೧೩) ತನ್ನ ಕರ್ತೃತ್ವ ಭೋಕ್ತೃತ್ವ ಶರೀರೇಂದ್ರಿಯಸ್ವಾಮಿತ್ವಗಳು ಮುಖ್ಯವಾಗಿ ಹರಿಯವೇ ಎಂದು ಹರಿಗೇ ಅರ್ಪಿಸುವ '**ಕೈವಲ್ಯ**' ಧರ್ಮವನ್ನಾಚರಿಸುವನು.

(೧೪) ಮಲಗಿದಾಗ ಕೂತಾಗ ನಡೆವಾಗ ಎಲ್ಲ ವೇಳೆಗಳಲ್ಲಿಯೂ ಶ್ರೀಶನೇ ತನಗೆ ಆಶ್ರಯನೆಂದು ಚಿಂತಿಸುವ '**ಅನಿಕೇತನ**' ಧರ್ಮವನ್ನಾಚರಿಸುವನು.

(೧೫) ಶರೀರ ಮನೆ ಮುಂತಾದವು ನಾನಲ್ಲ, ನನ್ನವಲ್ಲ, ಪ್ರಾರಬ್ಧಕರ್ಮವಶದಿಂದ ಹರ್ಯನುಗ್ರಹದಿಂದ ನನಗೆ ಬಂದಿವೆ ಎಂದು ಭಾವಿಸುವ '**ವಿವಿಕ್ತ**' ಧರ್ಮವನ್ನು ಆಚರಿಸುವನು.

(೧೬) ಈ ಎಲ್ಲ ಹಿಂದೆ ಹೇಳಿದ ಧರ್ಮಾಚರಣೆಗಳನ್ನು ಪ್ರಾರಬ್ಧದಿಂದ ಶರೀರವಿರುವಷ್ಟುಕಾಲ ಮಾಡುವನು. ಮುಂದೆ ಬೇರೆ ಶರೀರವನ್ನು ಹೊಂದಲು ಬಯಸದೆ, ಅದು ಬಾರದಂತೆ ಅದಕ್ಕೆ ಕಾರಣವಾಗಬಲ್ಲ ಬಂಧಕಕರ್ಮಗಳನ್ನು ಸರ್ವಥಾ ಮಾಡದಿರುವ '**ಚೀರವಸನ**' ಧರ್ಮಾಚರಣವನ್ನೇ ಮಾಡುವನು.

❖❖❖

## ೧೭. ಸಂತೋಷ ಶಿಕ್ಷಣ

'ಸಂತೋಷಂ ಶಿಕ್ಷೇತ್' ಸಂತೋಷವೆಂಬ ಧರ್ಮವನ್ನೂ ಅವನು ಗುರುಗಳಿಂದ ಕಲಿಯಬೇಕು.

ಸಂತೋಷವೆಂದರೆ ಅಸಂಚಯ. ವಾರ್ತಾ ಅಸಂಚಯ ಶಾಲೀನ ಶಿಲೋಂಛ ಎಂದು ನಾಲ್ಕು ಬಗೆಯ ಜೀವನೋಪಾಯವನ್ನು ವಿಪ್ರರಿಗೆ ಶಾಸ್ತ್ರವು ವಿಧಿಸಿದೆ. ಇವುಗಳಲ್ಲಿ ಅಸಂಚಯವನ್ನು ಮಾತ್ರ ಯಮಗಳಲ್ಲಿ ಪರಿಗಣಿಸಿರುವರು. ಮಿಕ್ಕ ಮೂರನ್ನು ಬಿಡಬೇಕೆಂದರೆ ಇದನ್ನೂ ಬಿಡಬೇಕಾದೀತು. ವಿಧಿ ವಿಹಿತವಾದ ನಾಲ್ಕರಲ್ಲಿ ಒಂದಕ್ಕೆ ಪಕ್ಷಪಾತ ಮಾಡಲಾಗದು ತಾನೆ? ನಾಲ್ಕನ್ನೂ ಸ್ವೀಕರಿಸ ಬೇಕೆಂದರೆ ಸಂತೋಷ ಶಬ್ದದಿಂದ ಅಸಂಚಯವನ್ನು ಮಾತ್ರ ಗ್ರಹಿಸುವುದು ಸರಿಯಲ್ಲ. ಹೀಗೆ ಪ್ರಶ್ನೆ ಬಂದರೆ 'ಸಂತೋಷಂ ಶಿಕ್ಷೇತ್' ಎನ್ನುವುದರ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾರೆ—

ವಾರ್ತಾ, ಅಸಂಚಯ ಮುಂತಾದ ನಾಲ್ಕು ಜೀವನವೃತ್ತಿಗಳೂ ಗ್ರಾಹ್ಯವೆ. ಅಸಂಚಯವನ್ನೇ ಸಂತೋಷವೆಂದು ಯಮಗಳಲ್ಲಿ ಹೇಳಿದ್ದು ಉದಾಹರಣೆ ಯಾಗಿ. ಉಪಲಕ್ಷಣವಾಗಿ ಮೂರನ್ನು ಕೂಡ ಇಟ್ಟುಕೊಳ್ಳಬೇಕು. ಹೊರತು ಅಸಂಚಯವನ್ನೆ ಸಂತೋಷವೆಂದು ಕರೆದು ಅದನ್ನು ಮಾತ್ರ ಸ್ವೀಕರಿಸ ಬೇಕೆನ್ನುವುದು ಹಠವೇನಲ್ಲ. ನಮಗೆ ಅಂಥ ಹಠವೇನೂ ಇಲ್ಲ. ಜೀವನಕ್ಕೆ ಅಪಾಯ ಬಂದೊದಗಿದಾಗ ಉಪಾಸನೆಗೆ ಅಡ್ಡಿ ಬಾರದಂತೆ ಉಪಾಸನೆ ಕೆಡದಂತೆ ಯಾವುದಾದರೂ ಒಂದು ಜೀವಿಕೆಯನ್ನು ಅನುಸರಿಸಬೇಕೆನ್ನುವುದು ನಮ್ಮ ಅಭಿಪ್ರಾಯ.

'ಸಂತೋಷಂ ಶಿಕ್ಷೇತ್' ಎಂಬ ಮಾತಿನಿಂದ ಇಷ್ಟು ಅಭಿಪ್ರಾಯ ಹೇಗೆ ತಿಳಿಯುತ್ತದೆ? ಎಂದರೆ, 'ಯೇನ ಕೇನಚಿತ್' ಎಂದು ಶಬ್ದ ಸೇರಿಸಬೇಕು. 'ಸಂತೋಷಂ ಯೇನ ಕೇನಚಿತ್' (ಭಾ.೧೧.೩.೨೬) ಎಂದೇ ಭಾಗವತ ಹೇಳಿದೆ. ಯಾವುದೇ ಜೀವಿಕೆಯಾಗಲಿ ದೈವಾತ್ ದೊರಕಿದ್ದಾಗಲಿ ಅದರಿಂದ ಸಂತುಷ್ಟನಾಗಿರಬೇಕು ಎಂದರ್ಥ. ನಾಲ್ಕು ಜೀವಿಕೆಗಳನ್ನು ಹೇಳುವಾಗ ನಮಗೆ ಇದೇ ಅನುಸರಣೀಯ ಎಂಬ ಅಭಿಪ್ರಾಯವಿಲ್ಲ. ಶ್ರೀಶೇಚ್ಛೆಯಿಂದ ತನ್ನ ಪಾಲಿಗೆ ಬಂದ ಯಾವುದೇ ಜೀವಿಕೆಯಲ್ಲಿ ತೃಪ್ತಿಪಟ್ಟರೇನೇ ಉಪಾಸನೆಗೆ ವಿಘ್ನ

ಬರುವುದಿಲ್ಲ. ಹೆಚ್ಚಿನ ವಿವರಗಳನ್ನು ಹಿಂದೆ ಹೇಳಿರುವೆವು. ಮುಂದೆಯೂ ಹೇಳುವೆವು.

'ಸಂತೋಷಂ ಯೇನಕೇನಚಿತ್' ಎಂದು ಏಕಾದಶಸ್ಕಂಧದಲ್ಲಿ ಹೇಳಿದ್ದರಿಂದ, ಹಿಂದೆ ಸಪ್ತಮದಲ್ಲಿ 'ಸಂತೋಷಃ ಸಮದೃಕ್‌ಸೇವಾ' ಎಂದು ಹೇಳಿದ್ದನ್ನು ವಿವರಿಸಿದಂತಾಯಿತು.

❖❖❖

## ೧೮. ಪರಾರ್ಥೇಹಾ ಶಿಕ್ಷಣ

ಶ್ರೀಕೃಷ್ಣನು ಉದ್ಧವನಿಗೆ ಯಮ ನಿಯಮಗಳ ಬಗ್ಗೆ ವಿವರಣೆ ನೀಡುತ್ತ

ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯ ಸೇವನಂ ॥

(ಭಾ.೧೧.೧೯.೩೪)

ಎಂಬಲ್ಲಿ 'ಪರಾರ್ಥೇಹಾ' 'ಪರದ್ರವ್ಯದಲ್ಲಿ ಆಸೆ ಮಾಡುವುದು' ಎಂಬ ಭಾಗವತಧರ್ಮವನ್ನು ನಿಯಮಗಳಲ್ಲಿ ಒಂದಾಗಿ ಹೇಳಿದ್ದಾನೆ, ಅದರಿಂದ 'ಪರಾರ್ಥೇಹಾ ಶಿಕ್ಷಣೀಯಾ' 'ಪರಾರ್ಥೇಹಾ' ಎಂಬುದೂ ಭಾಗವತಧರ್ಮವಾಗಿದೆ. ಅದನ್ನೂ ಕಲಿಯಬೇಕು ಎಂದರೆ, ಇಲ್ಲಿ ಪ್ರಶ್ನೆ ಬರುತ್ತದೆ—

'ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಸ್ಪೃಹಾ ।
ಅಸ್ತೇಯ ಮಿತಿ ಸಂಪ್ರೋಕ್ತಂ'

ಎಂದು ಯೋಗಶಾಸ್ತ್ರವು ಹೇಳಿದೆ, 'ಅ-ಸ್ತೇಯ' ಎಂದರೆ ತ್ರಿಕರಣದಿಂದಲೂ ಪರದ್ರವ್ಯದಲ್ಲಿ ಆಸೆ ಮಾಡದಿರುವುದೆಂದರ್ಥವಾಗುವುದು'. ಅದರಿಂದ ಇದು ಪರಸ್ಪರ ವಿರುದ್ಧವಾಗುವುದು. ಒಂದುವೇಳೆ ಅಸ್ತೇಯ ಶಬ್ದಕ್ಕೆ ಯೋಗಶಾಸ್ತ್ರ ಹೇಳಿದ ಈ ಅರ್ಥವನ್ನು ಬಿಟ್ಟು ಬೇರೆಯೇ ಅರ್ಥಹೇಳಿ ವಿರೋಧ ಪರಿಹಾರ ಮಾಡಿದರೂ 'ಪರದ್ರವ್ಯದಲ್ಲಿ ಆಸೆ ಮಾಡಬಾರದು. ನಿಸ್ಪೃಹನಾಗಬೇಕು' ಎನ್ನುವುದನ್ನು ನಾವು ಒಪ್ಪಲೇಬೇಕು. ಪರದ್ರವ್ಯದಲ್ಲಿ ಆಸೆ ಮಾಡುವುದು ಪಾಪಕರವೆಂದು ಪರಿಗಣಿತವಾಗಿರುವುದರಿಂದ ಅದನ್ನು ಬಿಡಲೇಬೇಕು. ಅಂದಮೇಲೆ 'ಪರಾರ್ಥೇಹಾ' ಪರದ್ರವ್ಯದಲ್ಲಿ ಆಸೆ ಮಾಡುವುದನ್ನು ಕಲಿಯಬೇಕೆನ್ನುವುದು ಯುಕ್ತವಲ್ಲ.

ಆದರಿಂದ 'ಪರಾರ್ಥೇಹಾ' ಶಬ್ದಕ್ಕೆ 'ಪರದ್ರವ್ಯದಲ್ಲಿ ಆಸೆ' ಎಂದರ್ಥವಲ್ಲ. 'ಪರ' ಎಂದರೆ ಮೋಕ್ಷಸಾಧನ ಸಾಮಗ್ರಿಗಿಂತ ಅನ್ಯವಾದ ಅದಕ್ಕೆ ವಿರೋಧಿಯಾದ 'ಅರ್ಥ', ವಿಷಯ ಸುಖಸಾಧನ ಸಾಮಗ್ರಿ. ಅದರಲ್ಲಿ 'ಈಹಾ' ಲೌಕಿಕರಿಗೆ ಇರುವ ಇಚ್ಛೆ. ಅದರ 'ಈಕ್ಷೆ', ಈಕ್ಷಣ ಎಂದರ್ಥ ಎಂಬ ಅಭಿಪ್ರಾಯದಿಂದ, ನಾರದರು ಯುಧಿಷ್ಠಿರನಿಗೆ ಉಪದೇಶಿಸುತ್ತ,

ನೃಣಾಂ ವಿಪರ್ಯಯೇಹೇಕ್ಷಾ ॥

(ಭಾ.೭.೧೨.೯)

ಎಂದು 'ಪರಾರ್ಥೇಹಾ' ಶಬ್ದಕ್ಕೆ ಅರ್ಥವಿವರಣೆ ನೀಡುತ್ತಾರೆ.

ಇಲ್ಲಿ ಪ್ರಶ್ನೆ ಬರುತ್ತದೆ—ಯೋಗಶಾಸ್ತ್ರವು ಹೇಳುವಂತೆ ಅಸ್ತೇಯವನ್ನು, 'ಪರದ್ರವ್ಯದಲ್ಲಿ ನಿಸ್ಪೃಹತೆ'ಯನ್ನು ಎಲ್ಲರೂ ಒಪ್ಪಲೇಬೇಕು. 'ಪರಾರ್ಥೇಹಾ' ಎಂದರೆ ಪರದ್ರವ್ಯದಾಸೆ ಎಂದು ಅರ್ಥ ಇಟ್ಟುಕೊಂಡರೆ ಅದು ಈ ಅಸ್ತೇಯಕ್ಕೆ ವಿರುದ್ಧವಾಗುವುದು. ಅದಕ್ಕೆ ಬೇರೇ ಅರ್ಥ ಮಾಡುತ್ತೇವೆ, ಮೋಕ್ಷಸಾಧನೆಗಿಂತ ಅನ್ಯವಾದ ಅದಕ್ಕೆ ವಿರುದ್ಧವಾದ ವಿಷಯಿಸುಖ ಸಾಧನದಲ್ಲಿ ಲೌಕಿಕರು ಮಾಡುವ ' ಈಹಾ' ಪ್ರವೃತ್ತಿಯನ್ನು 'ಈಕ್ಷಾ' ಈಕ್ಷಣ ಮಾಡಬೇಕು ಎಂದು. ಈ ಅರ್ಥ ಮಾಡಿದಾಗ ವಿರೋಧವಿಲ್ಲ.

ಆದರೆ, ಲೌಕಿಕರು ಪರಾರ್ಥದಲ್ಲಿ ವಿಷಯಸುಖಸಾಧನೆಯಲ್ಲಿ ಪ್ರವೃತ್ತಿ ಮಾಡುವುದನ್ನು ನಾವೇಕೆ 'ಈಕ್ಷಣ' ಮಾಡಬೇಕು, ನೋಡಬೇಕು? ಅವರ ಪ್ರವೃತ್ತಿಯನ್ನು ನೋಡುವುದರಿಂದ ನಮಗೆ ಏನು ಪ್ರಯೋಜನ? ನಾವು ಸ್ವತಃ ಮೋಕ್ಷಸಾಧನಕ್ಕೆ ಅನ್ಯವಾದ ವಿರೋಧಿಯಾದ ಸಾಧನಗಳ ಇಚ್ಛೆ ಪ್ರವೃತ್ತಿಗಳನ್ನು ಬಿಟ್ಟು ಮೋಕ್ಷಸಾಧನ ಶ್ರವಣಾದಿಗಳಲ್ಲಿ ಇಚ್ಛೆಪ್ರವೃತ್ತಿಗಳನ್ನು ಮಾಡಿದ ರಾಯಿತು'.

ನಿಜ, ಆದರೆ ಲೌಕಿಕರು ವಿಷಯಸುಖಸಾಧನೆಯಲ್ಲಿ ಇಚ್ಛೆ ಮಾಡುವು ದನ್ನು ಅವರ ಮಾತು ವ್ಯವಹಾರಾದಿಗಳಿಂದ ತಿಳಿದು, ಪ್ರವೃತ್ತಿ ಮಾಡದಂತೆ ತಡೆಯುವುದು. ಅಥವಾ ಅವರು ಪ್ರವೃತ್ತಿಯನ್ನೆ ಮಾಡುತ್ತಿದ್ದರೆ ಅದನ್ನು ಕಂಡು 'ಅದು ಬೇಡ'ವೆಂದು ನಾನಾ ಉಪಾಯಗಳಿಂದ ಒಪ್ಪಿಸುವುದು ಭಾಗವತರಿಗೆ ಕರ್ತವ್ಯವೇ ಆಗಿದೆ. ಆದರಿಂದ ಹರಿಪ್ರೀತಿರೂಪ ಸ್ವಪ್ರಯೋಜನ ಸಿದ್ಧಿಯಾಗು

ವುದು. ಸ್ವಯಂ ತಾನು ಮಾತ್ರ ಮೋಕ್ಷಸಾಧನ ಅನುಷ್ಠಾನ ಮಾಡುವುದಕ್ಕಿಂತಲೂ, ಲೌಕಿಕರಿಂದಲೂ ಅದನ್ನು ಮಾಡಿಸುವುದರಿಂದ ಹೆಚ್ಚಿನ ಹರಿಪ್ರೀತಿ ಎಂಬ ಮಹಾಪ್ರಯೋಜನ ಉಂಟಾಗುವುದು.

'ಪರಾರ್ಥೇಹಾ' ಎಂಬುದಕ್ಕೆ 'ಪರದ್ರವ್ಯಗಳಲ್ಲಿ ಆಸೆ' ಎಂಬರ್ಥ ಸರಿಯಲ್ಲ' ಎನ್ನುವ ವಾದವನ್ನು ಏನೋ ಒಂದು ರೀತಿಯಾಗಿ ಒಪ್ಪಿಕೊಂಡು ಇಷ್ಟರವರೆಗೆ ಬೇರೆ ಅರ್ಥ ಹೇಳಿದ್ದಾಯಿತು. ವಸ್ತುತಃ 'ಪರದ್ರವ್ಯಗಳಲ್ಲಿ ಆಸೆ' ಎಂಬರ್ಥವಿಟ್ಟುಕೊಂಡರೂ ಕೂಡ ತಪ್ಪಾಗುವುದಿಲ್ಲ.

ಇಲ್ಲಿ ಪ್ರಶ್ನೆ ಬರುತ್ತದೆ— ಶ್ರೀಕೃಷ್ಣನು ಉದ್ಧವನಿಗೆ 'ದೃಢವಾದ ವೈರಾಗ್ಯ ಬಂದರೆ ಸನ್ನ್ಯಾಸವನ್ನು ಸ್ವೀಕರಿಸಿ ತ್ರಿದಂಡಿಯಾಗಿ ಯೋಗಾಭ್ಯಾಸ ಮಾಡಬೇಕು' ಎಂದು ಹೇಳಿ, ತ್ರಿದಂಡಿಯಾಗುವುದು ಹೇಗೆ ಎಂದರೆ ಬಿದಿರಿನ ಮೂರುಕೋಲು ಹಿಡಿದ ಮಾತ್ರಕ್ಕೆ ತ್ರಿದಂಡಿ ಸನ್ನ್ಯಾಸಿಯಾಗುವುದಿಲ್ಲ, ಮೌನದಿಂದ ವಾಗಿಂದ್ರಿಯಕ್ಕೆ ದಂಡನೆ, ಆಸೆ ಬಿಡುವುದರಿಂದ ಮನಸಿಗೆ ದಂಡನೆ, ಪ್ರಾಣಾಯಾಮದಿಂದ ದೇಹಕ್ಕೆ ದಂಡನೆ ಹೀಗೆ ಪ್ರಮಾಣೋಕ್ತವಾದ ಮುಖ್ಯವಾದ ಮೂರು 'ದಂಡ' ಗ್ರಹಣ ಮಾಡಬೇಕು. ಬಿದಿರಿನ ಕೋಲುಗಳು ಅಮುಖ್ಯದಂಡಗಳು. ಅದನ್ನು ಹಿಡಿದ ಮಾತ್ರಕ್ಕೆ ಮುಖ್ಯವಾದ ತ್ರಿದಂಡಿತ್ವ ಉಂಟಾಗದು, ಯತಿಯು ಮುಖ್ಯವಾಗಿ ಯತಿಯೆನಿಸಲಾರ'.

ಮೌನಾನೀಹಾನಿಲಾಯಾಮದಂಡೋ ವಾಗ್ದೇಹಚೇತಸಾಂ ।
ನ ಹ್ಯೇತೇ ಯಸ್ಯ ಸಂತ್ಯಂಗ ವೇಣುಭಿರ್ನ ಭವೇದ್ಯತಿಃ ॥

(ಭಾ.೧೧.೧೯.೧೭)

'ಉದ್ಧವ! ಮೌನದಿಂದ ವಾಗಿಂದ್ರಿಯದಂಡನೆ, ಪರದ್ರವ್ಯದಾಸೆ ಬಿಡುವುದರಿಂದ ಮನಸಿಗೆ ದಂಡನೆ ಮತ್ತು ಪ್ರಾಣಾಯಾಮದಿಂದ ಶರೀರಕ್ಕೆ ದಂಡನೆ– ಈ ಮೂರು ದಂಡಗಳಿಲ್ಲದವನು ಬಿದಿರಿನ ಮೂರು ದಂಡಗಳನ್ನು ಹಿಡಿದ ಮಾತ್ರದಿಂದ ಯತಿಯೆನಿಸುವುದಿಲ್ಲ' ಎನ್ನುತ್ತಾನೆ.

ಇದರಿಂದ, ಸರ್ವತ್ರ ಆಸೆ ಬಿಡಬೇಕು. ಇಲ್ಲದಿದ್ದರೆ ಮನೋದಂಡನೆ ಇಲ್ಲವಾಗುವುದರಿಂದ ಹೆಸರಿಗೆ ಮಾತ್ರ ಯತಿಯೆನಿಸುತ್ತಾನೆ. ಹೀಗಿರುವಾಗ,

'ಪರದ್ರವ್ಯದಲ್ಲಿ ಆಸೆ ಮಾಡುವುದೇ ಪರಾರ್ಥೇಹಾ ಎಂದೊಪ್ಪಿದರೂ ವಿರೋಧವಿಲ್ಲ' ಎಂದರೆ ಹೇಗೆ ಕೂಡುತ್ತದೆ?

ಈ ಪ್ರಶ್ನೆ ಸರಿ. ಆದರೂ ಪರದ್ರವ್ಯದಲ್ಲಿ ಪರರಿಗಾಗಿಯೇ ಆಸೆಪಡುವುದು ದೋಷವಲ್ಲ. ತನಗಾಗಿ ಆಸೆಪಟ್ಟರೆ ಮಾತ್ರ ದೋಷವಾಗುತ್ತದೆ. ಹೀಗಾಗಿ ಆಸೆ ಮಾಡಬಾರದೆನ್ನುವುದು 'ತನಗಾಗಿ ಆಸೆ ಮಾಡಬಾರದೆ'ನ್ನುವ ಅಭಿಪ್ರಾಯ ದಿಂದ.

ಆಸೆಯನ್ನೇ ಮಾಡಬಾರದೆಂದರೆ ಅದರಿಂದ ತನ್ನ ಪ್ರಯೋಜನಕ್ಕೇ ತಾನು ಎರವಾಗುತ್ತಾನೆ. ಏಕೆಂದರೆ, ಯಾವ ಆಸೆಯನ್ನೂ ಯಾರಿಗಾಗಿಯೂ ಮಾಡಲೇಬಾರದೆಂದರೆ ತನ್ನ ಮೋಕ್ಷರೂಪ ಪ್ರಯೋಜನವನ್ನು ತನಗಾಗಿ ಆಶಿಸುವುದೂ ತಪ್ಪಾದೀತು ಮತ್ತು ಆಸೆ ಬಿಡುವುದರಿಂದಲೇ ಮನೋದಂಡನೆ ಮಾಡಿಕೊಳ್ಳಬೇಕೆಂದು ಕುಲಧರ್ಮವೇನ್ನಿಲ್ಲ. ಪರರಿಗೋಸ್ಕರ ಪರೋಪಕಾರ ಕ್ಕಾಗಿ ಪರದ್ರವ್ಯಗಳಲ್ಲಿ ಆಸೆ ಪಟ್ಟರೂ ಸ್ವಾರ್ಥಪರವಾದ ಮನಸ್ಸನ್ನು ನಿಗ್ರಹಿಸಿ ದಂತಾಗುವುದರಿಂದ ಅದು ಮನೋದಂಡನೆ ಎನಿಸುತ್ತದೆ. ಮಹಾಪುರುಷಾರ್ಥ ವಾಗಿರುವ ಭಗವತ್ ಪ್ರೀತಿರೂಪ ಪ್ರಯೋಜನ ಲಾಭವೂ ಅದರಿಂದಾಗುತ್ತದೆ.

ಮನೋದಂಡನೆ ಮಾಡಿಕೊಳ್ಳುವುದೂ ಒಂದು ಚಟವೇನಲ್ಲ. ಒಳ್ಳೆಯ ಒಂದು ಪ್ರಯೋಜನದ ಉದ್ದೇಶದಿಂದ ತಾನೆ ಮನೋದಂಡನೆ ಮಾಡಿಕೊಳ್ಳು ತ್ತೇವೆ? ಆ ಪ್ರಯೋಜನವು ಆಸೆಪಡುವುದರಿಂದಲೇ ಆಗುವುದಾದರೆ ಆಸೆಯನ್ನೇಕೆ ಬಿಡಬೇಕು?

ಈ ದೃಷ್ಟಿಯಿಂದ ಆಲೋಚಿಸಿದರೆ ಮೌನದಿಂದ ವಾಗಿಂದ್ರಿಯದಂಡನೆ ಮಾಡಿಕೊಳ್ಳುವುದೂ ಆವಶ್ಯಕವಲ್ಲ. ಪೂರ್ತಿ ಮಾತನ್ನೇ ಬಿಡುವುದರಿಂದ ಹರಿಗುರುಗಳ ಸ್ತುತಿ ಇಲ್ಲದಂತಾಗುವುದು. ಅವರ ಪ್ರೀತಿರೂಪ ಮಹಾ ಪ್ರಯೋಜನವಿಲ್ಲವಾಗುವುದು, ಮತ್ತು ಸ್ತುತಿಯ ರೂಪವಾದ ಮಾತಿನಿಂದಲೇ ಮಹಾಪ್ರಯೋಜನ ಸಿಗುವಾಗ ಕಷ್ಟದಿಂದ ಮಾತನ್ನು ಬಿಟ್ಟು ಮೌನಿಯಾಗುವ ಆವಶ್ಯಕತೆಯೂ ಇಲ್ಲ.

ಇದೇರೀತಿ, ಪ್ರಾಣಾಯಾಮದಿಂದ ದೇಹದಂಡನೆ ಮಾಡಬೇಕೆನ್ನುವುದೂ ಅಯುಕ್ತವಾಗುತ್ತದೆ. ಕಷ್ಟದಿಂದ ಪ್ರಾಣಾಯಾಮ ಮಾಡದೆಯೇ ಆನಂದದಿಂದ

ಆರಾಮವಾಗಿ ಹರಿಲೀಲಾಕಥಾಶ್ರವಣ ಮಾಡಿಯೇ ಮಹಾಪುರುಷಾರ್ಥವಾದ ಮೋಕ್ಷರೂಪ ಪ್ರಯೋಜನವನ್ನು ಭಕ್ತಿಯೋಗಿಗಳು ಸಂಪಾದಿಸುತ್ತಾರೆ. ಪ್ರಾಣಾಯಾಮಾದಿರೂಪವಾದ ಕಷ್ಟಕರವಾದ ಹಠಯೋಗಾನುಷ್ಠಾನವು ಆವಶ್ಯಕವಲ್ಲ ಎಂದು ಹೀದೆ ಹೇಳಿದ್ದೇವೆ.

'ಮನೋ ವಾಕ್ ಕಾಯರೂಪ ತ್ರಿಕರಣ ದಂಡನೆ ಇಲ್ಲದೆಯೇ ಮಹಾಪುರುಷಾರ್ಥವು ಲಭ್ಯವಾಗುತ್ತಿದ್ದರೂ ಅದು ಇಲ್ಲದಿದ್ದರೆ, ಯತಿಯಲ್ಲಿ ಮುಖ್ಯವಾದ ತ್ರಿದಂಡಿತ್ವವಿಲ್ಲವಾದೀತು' ಎಂದರೆ ಅದು ಇಲ್ಲದೇ ಹೋಗಲಿ! ಇದ್ದೇನು ಪ್ರಯೋಜನ? ಹೋತನ ಕತ್ತಿನಲ್ಲಿ ನೇತಾಡುವ ಮೊಲೆಯಂತೆ ಅದು ನಿಷ್ಪ್ರಯೋಜನ. ಎಂದು ಉತ್ತರ ಹೇಳಲು ಬರುತ್ತದೆ. ಆದರೂ ತ್ರಿಡಂಡಿತ್ವವು ಯತಿಗೆ ಬೇಕೆಂದು ಏನೋ ಒಂದು ರೀತಿಯಾಗಿ ಒಪ್ಪಿಕೊಂಡು, 'ತ್ರಿದಂಡಿತ್ವ ವೆಂದರೆ, ಮನೋವಾಕ್ಕಾಯ ದಂಡನೆಯಿಂದ ಅದು ಸಾಧ್ಯ' ಎನ್ನುತ್ತಾರೆ ಪ್ರಬುದ್ಧಮುನಿಗಳು— 'ಮನೋವಾಕ್ಕಾಯದಂಡಂ ಚ' (ಭಾ.೧೧.೩.೨೭) ಎಂದು.

ಇದರ ಅಭಿಪ್ರಾಯ ಹೀಗೆ—

ಭಾಗವತಧರ್ಮದ ಉಪಾಸನೆ ಮಾಡುವವರು ಸಿದ್ಧರು ಸಾಧಕರೆಂದು ಎರಡು ಬಗೆ. ಸಿದ್ಧರು ಮುಖ್ಯವಾಗಿ ಹರಿಧ್ಯಾನಾದಿ ನಿರತರಾಗಿರುತ್ತಾರೆ. ಸಾಧಕರು ಮುಖ್ಯವಾಗಿ ಜೀವಿಗಳಿಗೆ ಉಪಕಾರ ಮಾಡುವಲ್ಲಿ ನಿರತರು. ತಾವು ಸ್ವಯೋಗ್ಯಕರ್ಮ ಮಾಡುತ್ತ, ಪರರು ವಿಪರೀತಕರ್ಮ ಮಾಡುವುದನ್ನು ತಡೆದು ಅವರಿಂದಲೂ ಯೋಗ್ಯಕರ್ಮ ಮಾಡಿಸುವರು. ಇದು ದೊಡ್ಡ ಉಪಕಾರ.

ಮನಸು ಸ್ವಾಭಾವಿಕವಾಗಿ ಸ್ವಾರ್ಥಪರವಾಗಿದ್ದು ಪರೋಪಕಾರಕ್ಕೆಂದು ಪ್ರವೃತ್ತವಾಗುವುದಿಲ್ಲ. ಇದು ಎಲ್ಲರ ಅನುಭವ. ಅಂತಹ ಮನಸ್ಸನ್ನು ದಂಡಿಸಬೇಕು. ವಾಗಿಂದ್ರಿಯವೂ ಕೂಡ ಒಳ್ಳೆಯ ಮಾತನಾಡಿ ಪರರಿಗೆ ಉಪಕಾರ ಮಾಡಲು ಹೊರಡುವುದಿಲ್ಲ. ದೇಹವೂ ಕೂಡ ಪರೋಪಕಾರಕ್ಕೆ ಒಂದು ಹೆಜ್ಜೆ ಇಡಲೂ ಬಯಸುವುದಿಲ್ಲ. ಈ ಮೂರನ್ನೂ ಪರೋಪಕಾರಕ್ಕಾಗಿ ಪಳಗಿಸುವುದೇ ಮನೋವಾಕ್ಕಾಯದಂಡನೆ. ಇದೆ ಮುಖ್ಯ ತ್ರಿದಂಡಿತ್ವ. ಮುಮುಕ್ಷುವಿಗೆ ಇದರಿಂದಲೇ ಮುಖ್ಯ ಯತಿತ್ವ ಲಭಿಸುವುದು.

ಇನ್ನೊಂದು ಬಗೆಯ ಪರಾರ್ಥೇಹಾ ಇದೆ. ಶ್ರೀಕೃಷ್ಣನು ಉದ್ಧವನಿಗೆ ನಿಯಮಗಳನ್ನು ಹೇಳುವಾಗ 'ತೀರ್ಥಾಟನಂ ಪರಾರ್ಥೇಹಾ' (ಭಾ.೧೧.೧೯.೩೪) ಎಂದು ಹೇಳಿ, 'ಕಾಮತ್ಯಾಗಸ್ತಪಃ ಸ್ಮೃತಂ' (೧೧.೧೯.೩೭) ಕಾಮನೆಗಳ ತ್ಯಾಗವೇ ತಪಸ್ಸು ಎಂದೂ ಹೇಳಿದ್ದಾನೆ. ಇಲ್ಲಿ ಎಲ್ಲ ಕಾಮನೆಗಳನ್ನು ಬಿಡಬೇಕೆಂದರೆ ಬಹಳ ಸಮಸ್ಯೆಗಳು ಬರುತ್ತವೆ. ಮೋಕ್ಷದ ಕಾಮನೆಯನ್ನು ಹೇಗೆ ಬಿಡಲಾದೀತು? ಮೋಕ್ಷದ ಕಾಮನೆಯನ್ನೂ ಬಿಟ್ಟವನಿಗೆ ಅದರ ಸಾಧನೆಗಳಲ್ಲಿ ಕಾಮನೆ ಹೇಗೆ ಹುಟ್ಟೀತು? ಮೋಕ್ಷಸಾಧನೆ, ಆವಶ್ಯಕವೆಂದು ಅದರಲ್ಲಿ ಪ್ರವೃತ್ತಿ ಹೇಗೆ ಉಂಟಾದೀತು? ಅದರಿಂದ ತ್ಯಾಜ್ಯವೆಂದು ಹೇಳಿದ್ದು ಮೋಕ್ಷಕಾಮನೆಯನ್ನಲ್ಲ. ಮೋಕ್ಷಸಾಧನ ಕಾಮನೆಯನ್ನೂ ಅಲ್ಲ. 'ಪರೇಷು ಅರ್ಥೇಷು ಈಹಾ' ಬೇರೆಯಾದ ವಿಷಯಸುಖ ತತ್ಸಾಧನರೂಪವಾದ ಅರ್ಥಗಳಲ್ಲಿ, 'ಈಹಾ' ಕಾಮನೆ ಮಾತ್ರವೇ ತ್ಯಾಜ್ಯ. ಮೋಕ್ಷತತ್ಸಾಧನರೂಪ ಅರ್ಥಗಳಲ್ಲಿ ಕಾಮನೆ ತ್ಯಾಜ್ಯವಲ್ಲ.

'ಮೋಕ್ಷಸಾಧನ ಯಾವುದು?' ಎಂದರೆ ಹಿಂದೆ ಹೇಳಿದಂತೆ ಸಿದ್ಧರಿಗೆ ಪರಮಾತ್ಮ ಧ್ಯಾನವೆ. ಸಾಧಕರಿಗೆ ಪರೋಪಕಾರದಲ್ಲಿ ಪ್ರವೃತ್ತಿ.

ಏಕೆಂದರೆ ಸಿದ್ಧರ ವಿಷಯದಲ್ಲಿ 'ಪರಾರ್ಥೇಹಾ' ಎಂದರೆ ಹರಿಧ್ಯಾನವೆ. ಯದ್ಯಪಿ ಧ್ಯಾನಯೋಗ್ಯರು ಬೇರೆಯವರೂ ಇದ್ದಾರೆ. ಆದರೂ ಪ್ರಕೃತ ಮೋಕ್ಷ ಸಾಧನವಾದ ಧ್ಯಾನಕ್ಕೆ ಯೋಗ್ಯನು ಶ್ರೀಹರಿಯೆ.

ಧ್ಯಾನಯೋಗ್ಯರು ಉತ್ತಮ ಮಧ್ಯಮ ಅಧಮರೆಂದು ಮೂರು ಬಗೆ. ಉತ್ತಮನು ಮೋಕ್ಷದಾಯಕನು ಶ್ರೀಹರಿಯೆ. ಉಳಿದವರಿಗೆ ಅದರಲ್ಲಿ ಸ್ವಾತಂತ್ರ್ಯವಿಲ್ಲ.

ಹೀಗಾಗಿ 'ಪರ' ಉತ್ತಮವಾದ 'ಅರ್ಥ' ಧ್ಯೇಯವಸ್ತುವಾದ ಶ್ರೀಹರಿಯ 'ಈಹಾ' ಧ್ಯಾನಾದಿಗಳನ್ನೇ ಸಿದ್ಧರು ಮಾಡುತ್ತಾರೆ. ಧ್ಯಾನವೆಂದರೆ ಮಾನಸವಾಸನಾನಿರ್ಮಿತವಾದ ಪ್ರತೀಕವನ್ನು ಮನಸಿನಿಂದ ಅವಲೋಕಿಸುತ್ತ ಆ ಪ್ರತೀಕದಲ್ಲಿ ಹರಿಯನ್ನು ಸ್ಮರಿಸುವುದು.

ಸ್ವಪ್ನದಲ್ಲಿ ಆನೆ ಕುದುರೆ ಮುಂತಾದುವು ಮಾನಸ ಸಂಸ್ಕಾರದಿಂದ ನಿರ್ಮಿತವಾಗಿರುತ್ತವೆ. ಅದಕ್ಕೆ ಹರೀಚ್ಛೆಯೇ ನಿಮಿತ್ತವಾಗಿದೆ. ಧ್ಯಾನದಲ್ಲಿ

ಹರೀಚ್ಛಾಧೀನವಾಗಿ ಮನುಷ್ಯನ ಇಚ್ಛೆಯು ಕೂಡ ಧ್ಯೇಯವಸ್ತು ಪ್ರತೀಕದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಸ್ವಪ್ನ ಧ್ಯಾನ ಗಳೆರಡರಲ್ಲಿಯೂ ಅವಲೋಕಿಸುವುದು ವಾಸನಾಮಯ ವಸ್ತುವನ್ನೇ.

ಸಾಧಕರ ವಿಷಯದಲ್ಲಿ ಪರಾರ್ಥೇಹಾ ಎಂದರೆ ಪರೋಪಕಾರದಲ್ಲಿ ಪ್ರವೃತ್ತಿಯು ತ್ಯಾಜ್ಯವಲ್ಲ. ಪರೋಪಕಾರವೆಂದರೆ ಪರರಿಗೆ ಅನಿಷ್ಟವಾಗದಂತೆ ಇಷ್ಟವಾಗುವಂತೆ ಮಾಡುವುದು. ಮತ್ತು ಪರರಿಗೆ ಅನಿಷ್ಟ ಬಂದೊದಗದಂತೆಯೂ ಮಾಡುವುದನ್ನೇ 'ನೃಣಾಂ ವಿಪರ್ಯಯೇಹೇಕ್ಷಾ' (ಭಾ.೭.೧೨.೯) ಎಂದು ಭಾಗವತ ಹೇಳಿದೆ. ಮೋಕ್ಷವಿರೋಧಿ ಪ್ರವೃತ್ತಿಯೆ ಪರಮ ಅನಿಷ್ಟಕರ. ಅದನ್ನು ತಡೆಯುವುದು ಮಹಾ ಅನಿಷ್ಟ ಪರಿಹಾರ. ಇದು ಭಾಗವತಧರ್ಮ. 'ಪರಾರ್ಥೇಹಾ' ಎಂದರೆ ಮನೋವಾಕ್‌ಕಾಯದಂಡ.

ಇಲ್ಲಿ 'ಅಜ್ಞರಾದ ಮಾನವರು ಮೋಕ್ಷವಿರೋಧಿ ಪ್ರವೃತ್ತಿ ಮಾಡದಂತೆ ನೋಡಿಕೊಳ್ಳಬೇಕು' ಎಂದು ಹೇಳದೆ, ಮೋಕ್ಷವಿರೋಧಿ ಪ್ರವೃತ್ತಿ ಕಾಮನೆಯನ್ನು ನೋಡಿ ತಡೆಯಬೇಕು' ಎಂದು ಹೇಳಿದ್ದೇಕೆ ಎಂದರೆ, ಅಜ್ಞರಲ್ಲಿ ಕಾಮನೆಯನ್ನು ನೋಡಿದೊಡನೆ ತಡೆಯಲು ಯತ್ನಿಸಬೇಕು. ಮೋಕ್ಷವಿರೋಧಿ ವಿಷಯದಲ್ಲಿ ಕಾಮನೆ ಬಂದಿತೆಂದರೆ ಪ್ರವೃತ್ತಿ ಉಂಟಾಗುವುದು ನಿಶ್ಚಿತ. ಮೋಕ್ಷವಿಷಯದಲ್ಲಿ ಕಾಮನೆ ಬಂದಮಾತ್ರಕ್ಕೆ ಪ್ರವೃತ್ತಿ ಉಂಟಾಗುವುದಿಲ್ಲ. ಕಾಮನೆಯ ಸ್ವಭಾವವಿದು. ಅದರಿಂದ ಮೋಕ್ಷವಿರೋಧಿ ಕಾಮನೆಯಿಂದ ಪ್ರವೃತ್ತಿಯಾಗುವ ವರೆಗೆ ಕಾಯುವುದು ಬೇಡ ಎಂದು. ಮುಕ್ತಿಸಾಧನ ವಿಷಯದಲ್ಲಿ ಕಾಮನೆ ಬಂದರೂ ಪ್ರವೃತ್ತಿಯಾಗೇ ತೀರುವ ನಿಯಮವಿಲ್ಲ. ಇಂದ್ರಿಯ ಜಯಪ್ರಕರಣದಲ್ಲಿ 'ನೈತನ್ಮನಸ್ತವ ಕಥಾಸು ವಿಕುಂಠನಾಥ' ಎಂಬ ೧೪೨ನೇ ಶ್ಲೋಕದಲ್ಲಿ ಪ್ರಹ್ಲಾದನು ನರಸಿಂಹನಲ್ಲಿ ಕಾಮನೆಯ ಈ ಸ್ವಭಾವವನ್ನು ಹೇಳಿಕೊಳ್ಳುತ್ತಾನೆ.

ಪರರ ಅನಿಷ್ಟಪ್ರಾಪ್ತಿಯನ್ನು ನೋಡಿದರೂ ಮಧ್ಯಮ ಮುಮುಕ್ಷುಗಳಿಗೆ ಆದರ ಪರಿಹಾರದಲ್ಲಿ ನಿಯಮೇನ ಪ್ರವೃತ್ತಿ ಇರುವುದಿಲ್ಲ. ಉತ್ತಮರಿಗೆ ಹಾಗಲ್ಲ. ಪರರಿಗೆ ಅವರ ಪ್ರವೃತ್ತಿಯಿಂದ ಅನಿಷ್ಟವಾಗುತ್ತದೆ ಎಂದು ತಿಳಿದೊಡನೆ ಉತ್ತಮರು ಧಾವಿಸುತ್ತಾರೆ. ಇದು ಉತ್ತಮರ ಸ್ವಭಾವ. ಎಷ್ಟು

ದಯಾಳುಗಳು ಇವರು! ಪರರಿಗೆ ಒಳ್ಳೆಯದಾದರೆ ಅದನ್ನು ತಮಗೇ ಆದಂತೆ ತಿಳಿಯುತ್ತಾರೆ! ಪರರಿಗೆ ಉಪಕಾರ ಮಾಡುವ ಸಲುವಾಗಿ ಅವರ ಅನಿಷ್ಟಪರಿಹಾರದ ಸಲುವಾಗಿ ಅವರು ತಮ್ಮ ಮನೋ ವಾಕ್ ದೇಹಗಳನ್ನು ಮೂರನ್ನೂ ದಂಡಿಸಿಕೊಳ್ಳುತ್ತಾರೆ ಏಕೆ? ಮೂರರಲ್ಲಿ ಒಂದಾದ ಮನಸಿನಲ್ಲಿ ಇವರಿಗೆ ಒಳ್ಳೆಯದಾಗಲೆಂದು ಹರಸಿದರೇ ಸಾಕು. ಎಲ್ಲ ಅನಿಷ್ಟ ಪರಿಹಾರವಾಗಿ ಎಲ್ಲ ಪುರುಷಾರ್ಥಗಳೂ ಅವರಿಗೆ ಲಭ್ಯವಾಗುವುವು. ಆದರೂ ದಯೆಯಿಂದ ಮನೋವಾಕ್ಕಾಯವೆಂಬ ಮೂರೂ ಕರಣಗಳನ್ನು ಪರರ ಹಿತಸಾಧನೆಗೆ ತೊಡಗಿಸುತ್ತಾರೆ!

ಮಹಾತ್ಮರ ಈ ಸ್ವಭಾವವನ್ನು ವೃಕ್ಷ ದೃಷ್ಟಾಂತದಿಂದ ತಿಳಿಯಬಹುದೆಂದು ಶ್ರೀಕೃಷ್ಣನು ಬಲರಾಮನಿಗೆ ಹೇಳುತ್ತಾನೆ—

ಪತ್ರಪುಷ್ಪ ಫಲಚ್ಛಾಯಾ ಮೂಲವಲ್ಕಲದಾರುಭಿಃ ।
ಗಂಧನಿರ್ಯಾಸ ಭಸ್ಮಾಸ್ಥಿ ತೋಕ್ಮೈಃ ಕಾಮಾನ್‌ವಿತನ್ವತೇ ॥

(ಭಾ.೧೦.೨೦.೩೫)

'ಎಲೆ ಹೂ ಹಣ್ಣು ನೆರಳು ಬೇರು ತೊಗಟೆ ಕಟ್ಟಿಗೆ ವಾಸನೆ ಅಂಟುಬೂದಿ ತಿರುಳು ಮೊಳಕೆ ಎಂದು ಎಲ್ಲವುಗಳಿಂದಲೂ ಮರಗಳು ಜನರಿಗೆ ಉಪಕಾರವನ್ನೇ ಮಾಡುತ್ತವೆ'

ಮರಗಳು ಹೀಗೆ ದೇಹದಂಡನೆ ಮಾಡಿಕೊಂಡು ಪರರಿಗೆ ಇಷ್ಟಪ್ರಾಪ್ತಿ ಅನಿಷ್ಟಪರಿಹಾರವೆಂದು ಎರಡೂ ಬಗೆಯ ಉಪಕಾರ ಮಾಡುತ್ತವೆ. ಆದರೂ ಅವುಗಳಂತೆ ಮಾಡಲು ನಮಗೆ ಸಾಧ್ಯವಾಗುವುದಿಲ್ಲ.

ಅವುಗಳಿಗೆ ತಾವಾಗಿ ಏನನ್ನೂ ಕೊಡುವ ತೆಗೆದುಕೊಳ್ಳುವ ಶಕ್ತಿ ಇಲ್ಲ. ಜನರು ಪೀಡಿಸಿ ಎಲ್ಲವನ್ನೂ ತೆಗೆದುಕೊಳ್ಳುತ್ತಾರೆ. ಅವುಗಳು ಬುದ್ಧಿಪೂರ್ವಕ ಕೊಡುವುದಿಲ್ಲ. ನಾವು ಬುದ್ಧಿಪೂರ್ವಕವಾಗಿ ಎಲ್ಲವನ್ನೂ ಪರರಿಗೆ ಹೇಗೆ ಕೊಡಲಾದೀತು? ಎಂದರೆ, ಮರಗಳು ಪತ್ರಪುಷ್ಪಾದಿ ಸರ್ವಾಂಗಗಳಿಂದ ಪರೋಪಕಾರ ಮಾಡುವಂತೆ ಸ್ವತಃ ಕೊಡುವ ತೆಗೆದುಕೊಳ್ಳುವಶಕ್ತಿ ಇದ್ದು ಬುದ್ಧಿಪೂರ್ವಕವಾಗಿಯೇ ಪರೋಪಕಾರ ಮಾಡುವ ಮಹಾತ್ಮರೂ ಇಲ್ಲದಿಲ್ಲ. ಅದರಿಂದ ನಮಗಿದು ಸಾಧ್ಯವೆ? ಎಂದು ಭಯಪಡಬೇಕಾಗಿಲ್ಲ.

ಶ್ರೇಯಃ ಕುರ್ವಂತಿ ಭೂತಾನಾಂ ಸಾಧವೋ ದುಸ್ತ್ಯಜಾಸುಭಿಃ ।
ದಧ್ಯಙ್‌ಶಿಬಿಪ್ರಭೃತಯಃ ಕೋ ವಿಕಲ್ಪೋ ಧರಾದಿಷು ॥

(ಭಾ.೮.೧೯.೭)

'ಇತರರಿಗೆ ಬಿಟ್ಟು ಕೊಡಲಾಗದ ಪ್ರಾಣಗಳನ್ನಾದರೂ ಕೊಟ್ಟು ಸಜ್ಜನರು ಜನರಿಗೆ ಉಪಕಾರ ಮಾಡುವುದುಂಟು. ಉದಾಹರಣೆಗೆ, ದಧೀಚಿಮುನಿ ಶಿಬಿರಾಜ ಮುಂತಾದವರು. ಇನ್ನು ಭೂದಾನ ಮುಂತಾದ ವಿಷಯದಲ್ಲಿ ವಿಚಾರಿಸತಕ್ಕದ್ದು ಏನು?' ಎಂದು ಬಲಿಚಕ್ರವರ್ತಿ ವಾಮನನಿಗೆ ಹೇಳುತ್ತಾನೆ. ಆದರಿಂದ ಪರೋಪಕಾರಕ್ಕಾಗಿ ತ್ರಿಕರಣಗಳನ್ನು ದಂಡಿಸಲು ಭಯಪಡ ಬೇಕಾಗಿಲ್ಲ. ಮಹಾತ್ಮರ ದೃಷ್ಟಾಂತಗಳಿಂದ ಇದನ್ನು ತಿಳಿದು ಮನೋವಾಕ್ಕಾಯ ದಂಡವೆಂಬ ಭಾಗವತಧರ್ಮವನ್ನಾಚರಿಸಲು ಕಲಿಯಬೇಕು.

❖❖❖

## ೧೯. ಸತ್ಯದ ಶಿಕ್ಷಣ

'ಸತ್ಯಂ ಶಿಕ್ಷೇತ್' ಸತ್ಯವೆಂಬ ಭಾಗವತಧರ್ಮವನ್ನು ಗುರುಗಳಿಂದ ತಿಳಿಯ ಬೇಕು.

ಎಲ್ಲ ಜೀವಿಗಳಲ್ಲಿಯೂ ಅವರವರ ಕರ್ಮಗಳನ್ನು ಸ್ವತಂತ್ರವಾಗಿ ಮಾಡುತ್ತ ಒಳಗೆ 'ಆತ್ಮ' ಎಂಬ ಬಿಂಬರೂಪವೂ ಹೊರಗೆ ಫಲ ನೀಡುತ್ತ 'ಕಾಲ' ಎಂಬ 'ಈಶ್ವರ' ರೂಪವೂ ಇದೆ.

ಇದನ್ನು ಯಥಾರ್ಥವಾಗಿ ತಿಳಿಯುವುದು 'ಸರ್ವತ್ರಾತ್ಮೇಶ್ವರಾನ್ವೀಕ್ಷಾ' ಎಂಬ ಭಾಗವತಧರ್ಮ.

ಇದನ್ನೇ ಯಥಾರ್ಥವಾಗಿ ಧ್ಯಾನ ಮಾಡುವುದು 'ಸತ್ಯ' ಎಂಬ ಈ ಭಾಗವತಧರ್ಮ.

ಇದಕ್ಕೇ ಯಥಾ ವಸ್ತು ಸರ್ವಸಮರ್ಪಣವು ದಾಸ್ಯರೂಪವಾದ ಬಿಂಬೋಪಾಸನವೆಂಬ ಭಾಗವತಧರ್ಮವೆಂದು ಮುಂದೆ ಹೇಳುತ್ತಾರೆ.

ಹೀಗೆ ಮೂರು ಬಗೆಯಾದ 'ಸಮಾಧಾನ'ಗಳಲ್ಲಿ ಅಂದರೆ ಅನುಸಂಧಾನ

ಗಳಲ್ಲಿ ಎರಡನೆಯ ಯಥಾರ್ಥಧ್ಯಾನರೂಪವಾದ ಭಾಗವತಧರ್ಮವನ್ನು 'ಸತ್ಯಂ ಶಿಕ್ಷೇತ್' ಎಂದು ವಿಧಾನ ಮಾಡುತ್ತಾರೆ. ಇಲ್ಲಿ ಪ್ರಶ್ನೆ—

'ಸತ್ಯಂ ಭೂತಹಿತಂ ಪ್ರೋಕ್ತಂ ನ ಯಥಾರ್ಥಾಭಿಭಾಷಣಂ'

'ಸತ್ಯವೆಂದರೆ ಹಿತ ನುಡಿಯುವುದೇ ಹೊರತು ನಿಜ ನುಡಿಯುವುದಲ್ಲ'

ಎನ್ನುವುದು ಪ್ರಸಿದ್ಧ. ಅದನ್ನೇಕೆ ಬಿಡಬೇಕು? ಎಂದರೆ 'ಉತ್ತಮ ಅರ್ಥ'ವಾಗುವುದಿಲ್ಲವೆಂದು ಅದನ್ನು ಬಿಡುತ್ತೇವೆ, ಎಂದು ಹಿಂದೆ ಹೇಳಿದ್ದೇವೆ. ಮಣ್ಣುನೀರುಗಳಿಂದ ಕಾಲು ತೊಳೆದುಕೊಳ್ಳುವುದು ಶೌಚವೆ. ಆದರೂ ಅದು ಉತ್ತಮ ಅರ್ಥವಲ್ಲ. ವಿಶೇಷಫಲದಾಯಕವಾದ ಅರ್ಥವಲ್ಲವೆಂದು ಬಿಟ್ಟು 'ಮನಃಶುದ್ಧಿ' ಅಂದರೆ ವಿಷಯಾಸಕ್ತಿಯನ್ನು ತೊರೆಯುವುದೆಂದು ಅರ್ಥ ಮಾಡಿದ್ದೇವೆ, ಹಾಗೇ ಇದು. ಸತ್ಯವೆಂದರೆ ಯಥಾರ್ಥವಾಗಿ ಪರಮಾತ್ಮನನ್ನು ತಿಳಿಯುವುದು, ಧ್ಯಾನಮಾಡುವುದು, ಅವನಿಗೆ ಸರ್ವಸಮರ್ಪಣ ಮಾಡುವುದೆಂದು ಉತ್ತಮ ಅರ್ಥವನ್ನೇ ಸ್ವೀಕರಿಸಿದ್ದೇವೆ. ಅದು ಮಹಾ ಅನಿಷ್ಟ ನಿವರ್ತಕವೂ ಮಹಾ ಇಷ್ಟಸಾಧಕವೂ ಆಗಿರುವುದರಿಂದ ಉತ್ತಮ ಅರ್ಥ ವಾಗಿದೆ. ಮುಂದೆ 'ಅಭಯಂ ಶಿಕ್ಷೇತ್' ಎಂಬಲ್ಲಿಯೂ ಇದನ್ನು ಸ್ಪಷ್ಟಪಡಿಸು ತ್ತೇವೆ.

❖❖❖

## ೨೦. ಅಭಯ ಶಿಕ್ಷಣ

'ಅಭಯಂ ಶಿಕ್ಷೇತ್' 'ಅಭಯ'ವೆಂಬುದು ಭಾಗವತಧರ್ಮ. ಅದನ್ನು ಕಲಿಯಬೇಕು.

ಇಲ್ಲಿ ಪ್ರಶ್ನೆ—ನಿಯಮಗಳಲ್ಲಿ ದಾನವನ್ನು ಯೋಗಯಾಜ್ಞವಲ್ಕ್ಯಾದಿ ಗಳಲ್ಲಿ ಪರಿಗಣಿಸಿದ್ದಾರೆ. ಇಲ್ಲಿ ಭಾಗವತದಲ್ಲಿ ಅದನ್ನು ನಿತ್ಯಾನುಷ್ಠೇಯವಾದ ಯಮದಲ್ಲಿಯೂ ಸೇರಿಸಿಲ್ಲ. ನಿತ್ಯಾನುಷ್ಠೇಯವಲ್ಲದ ನಿಯಮದಲ್ಲಿಯೂ ಸೇರಿಸಿಲ್ಲ, ಏನು ಕಾರಣ? ಅದು ಉತ್ತಮ ವಿಶೇಷ ಫಲದಾಯಕವಲ್ಲ, ಕೇವಲ ಸ್ವರ್ಗಾದಿ ವಿಷಯಸುಖಫಲದಾಯಕವಾದ್ದರಿಂದ ಭಾಗವತಧರ್ಮಗಳಲ್ಲಿ ಅದನ್ನು ಸೇರಿಸುವುದು ಬೇಡವೆಂದೆ? ಹಾಗೆ ಹೇಳುವಂತಿಲ್ಲ. ಏಕೆಂದರೆ 'ದಾನ'

ಎಂದರೆ ಬೇಡಿದವರಿಗೆ ಇಷ್ಟವಾದುದನ್ನು ಕೊಡುವುದು ತಾನೆ? ಬೆಲ್ಲವನ್ನು ಬೇಡಿಬಂದವನಿಗೆ ಹುಣಿಸೆಹಣ್ಣು ಕೊಟ್ಟಂತೆ ಬೇಡುವುದೊಂದು, ಕೊಡುವುದು ಮಗದೊಂದೆಂದಾಗಬಾರದು ತಾನೆ? ಆದರಿಂದ ಇಷ್ಟವಾದುದನ್ನೆ ಕೊಡುವುದು ದಾನ. ಇದು ಪ್ರಾಣ್ಯುಪಕಾರ ರೂಪವಾಗಿದ್ದು ಭಗವತ್ ಪ್ರೀತಿ ಸಂಪಾದಕ ವಾಗಿದೆ. ಮಹಾಪುರುಷಾರ್ಥ ಸಾಧಕವೇ ಆಗಿದೆ. ಇದನ್ನು ಬಿಟ್ಟುಬಿಡಲು ಕಾರಣವಿಲ್ಲ.

ಈ ಪ್ರಶ್ನೆಗೆ ಉತ್ತರ ಭಾಗವತದ 'ಅಭಯಂ ಶಿಕ್ಷೇತ್'

ಎಂಬ ಮಾತಿನಲ್ಲಿದೆ. 'ದಾನ'ವು ಅಭಯವೇ ಆಗಿರುವುದರಿಂದ ಅಭಯ ವನ್ನು ಕಲಿಯಬೇಕೆಂದು ದಾನವನ್ನು ಭಾಗವತವು ಹೇಳುತ್ತಿದೆ. ದಾನವೆಂದರೆ ಅಭಯ ಹೇಗಾಗುತ್ತದೆ? ಎಂದರೆ, ಭೀತರಿಗೆ ಅಭಯ ದಾನ ಮಾಡುವುದೇ ಇಲ್ಲಿ 'ಅಭಯ'. ಹೀಗಾಗಿ ದಾನವೆಂದರೆ ಅಭಯದಾನ ಎನ್ನಬಹುದು. ಅದೇ ಮುಖ್ಯ ದಾನ.

'ಸರ್ವೇ ವೇದಾಶ್ಚ ಯಜ್ಞಾಶ್ಚ ತಪೋ ದಾನಾನಿ ಚಾನಘ ।
ಜೀವಾಭಯಪ್ರದಾನಸ್ಯ ನ ಕುರ್ವೀರನ್ ಕಲಾಮಪಿ ।'

(ಭಾ.೩.೭.೪೧)

'ಅಜ್ಞಾನಿಗಳು ಮಾಡುವ ವೇದಾಧ್ಯಯನ ಯಜ್ಞ ತಪಸ್ಸು ದಾನಗಳು ಯಾವುವೂ ಜೀವರಿಗೆ ಸಂಸಾರಭಯ ಕಳೆವ ತತ್ವಜ್ಞಾನೋಪದೇಶದ ಹದಿನಾರನೆ ಒಂದಂಶ ಫಲವನ್ನೂ ಉಂಟುಮಾಡಲಾರವು' ಎಂದು ಭಾಗವತ ಹೇಳುತ್ತಿದೆ. ವಿದುರನಿಗೆ ಮೈತ್ರೇಯಮುನಿ ತತ್ವೋಪದೇಶ ಮಾಡಲು ಬಲು ಸಂತೋಷ ದಿಂದ ಒಪ್ಪಿ ಹೇಳಿದ ಮಾತು ಇದು.

ಮುಖ್ಯ ಅಮುಖ್ಯಗಳಲ್ಲಿ ಮುಖ್ಯವನ್ನೇ ಬಾಧಕವಿಲ್ಲದಿದ್ದಾಗ ಸ್ವೀಕರಿಸ ಬೇಕು ತಾನೆ? ಇದನ್ನು ಮನಸಿನಲ್ಲಿಟ್ಟುಕೊಂಡೇ 'ದಂಡನ್ಯಾಸಃ ಪರಂ ದಾನಂ' (ಭಾ.೧೧.೧೯.೩೭) 'ಶಾರೀರಿಕವಾಗಿ ದಂಡನೆ ಮಾಡದೆ ಅಭಯ ನೀಡುವುದೇ ಶ್ರೇಷ್ಠದಾನ' ಎಂದು ಶ್ರೀಕೃಷ್ಣ ಉದ್ಧವನಿಗೆ ಹೇಳುತ್ತಾನೆ. ಇಲ್ಲಿ 'ಅಭಯದಾನ' ವೆನ್ನದೆ 'ದಂಡನ್ಯಾಸ'ವೆಂದು ಹೇಳುವುದರ ಮೂಲಕ ಸನ್ನ್ಯಾಸಗ್ರಹಣ

ಕಾಲದಲ್ಲಿ ಜೀವಿಗಳಿಗೆ ಅಭಯದಾನ ಮಾಡಬೇಕೆಂದು ಯೋಗಶಾಸ್ತ್ರಗಳಲ್ಲಿ ವಿಹಿತವಾಗಿದೆ ಎಂದು ಸೂಚನೆ ಮಾಡಿದಂತಾಯಿತು.

ಆದರೂ ಇಷ್ಟಧನದಾನ ರೂಪವಾದ ದಾನವನ್ನು ಭಾಗವತದಲ್ಲಿ ಏಕೆ ಪರಿಗಣಿಸಿಲ್ಲ ಎಂದರೆ 'ಯೇನಕೇನಾಪಿ ಸಂತೋಷಃ' ಎನ್ನುವುದರ ಬಗ್ಗೆ ಮುಂದೆ 'ಸ ಚಿಂತಯನ್ ದ್ವ್ಯಕ್ಷರಂ' ಎಂಬ ೨೭೩ನೇ ಶ್ಲೋಕ ವಿವರಣೆಯಲ್ಲಿ ಹೇಳುತ್ತೇವೆ, ಯೋಗಿಗಳಿಗೆ ತಪಸ್ಸೇ ಧನ. ಬೇರೆ ಧನ ಇಷ್ಟವಲ್ಲ.

ಇನ್ನೊಂದು ಪ್ರಶ್ನೆ—

ಅಹಿಂಸಾ ಸತ್ಯಮಸ್ತೇಯಂ ಅಸಂಗೋ ಹ್ರೀರಸಂಚಯಃ ।
ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಽಭಯಂ
ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽಽತಿಥ್ಯಂ ಮದರ್ಚನಂ
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯ ಸೇವನಂ ॥
ಏತೇ ಯಮಾಃ ಸನಿಯಮಾಃ ಉಭಯೋ ರ್ದ್ವಾದಶ ಸ್ಮೃತಾಃ ।
ಪುಂಸಾಮುಪಾಸಿತಾಸ್ತಾತ ಯಥಾಕಾಮಂ ದುಹಂತಿ ಹಿ ॥

(ಭಾ.೧೧.೧೯.೩೩,೩೪,೩೫)

'ಅಹಿಂಸೆ, ಸತ್ಯ ಅಸ್ತೇಯ ಅಸಂಗ ಶಾಸ್ತ್ರವಿರುದ್ಧಾಚರಣೆಯಲ್ಲಿ ಲಜ್ಜೆ ನಿಷಿದ್ಧದ್ರವ್ಯ ಸಂಗ್ರಹಿಸದಿರುವುದು, ವೇದಶಾಸ್ತ್ರದಲ್ಲಿ ಶ್ರದ್ಧೆ, ಬ್ರಹ್ಮಚರ್ಯ, ಮೌನ, ವ್ರತಾಚರಣದಲ್ಲಿ ಸ್ಥಿರತೆ, ಕ್ಷಮೆ, ಅಭಯ—ಇವು ಹನ್ನೆರಡು ಯಮಗಳು.

'ಶೌಚ ಜಪ ತಪ ಹೋಮ ಶ್ರದ್ಧೆ ಅತಿಥಿ ಸತ್ಕಾರ ಹರಿಪೂಜೆ ತೀರ್ಥಯಾತ್ರೆ ಪರೋಪಕಾರ ಸಿಕ್ಕಿದ್ದರಲ್ಲಿ ತೃಪ್ತಿ ಗುರುಸೇವೆ—ಇವು ಹನ್ನೆರಡು ನಿಯಮಗಳು.

'ಉದ್ಧವ, ಈ ಹನ್ನೆರಡು ಬಗೆಯಾಗಿರುವ ಯಮ ನಿಯಮಗಳನ್ನು ಅನುಷ್ಠಾನ ಮಾಡಿದರೆ ಅವು ಬಯಸಿದ ಫಲವನ್ನು ನೀಡುವವು.'

ಇಲ್ಲಿ ಅಹಿಂಸಾದಿ ಯಮಗಳು ಹನ್ನೆರಡು ಪೂರ್ವಶ್ಲೋಕದಲ್ಲಿ ಸಿಗುತ್ತವೆ. ಶೌಚಾದಿ ನಿಯಮಗಳು ಉತ್ತರಶ್ಲೋಕದಲ್ಲಿ ಹನ್ನೊಂದೇ ಸಿಗುತ್ತವೆ. ಅದಕ್ಕೆ ಶ್ರೀನಿವಾಸತೀರ್ಥರ ಟಿಪ್ಪಣಿ ಪ್ರಕಾರ 'ಅಭಯಂ' ಎಂಬ ಶಬ್ದವನ್ನು ಪೂರ್ವದ

ಅಂತ್ಯವೆಂದೂ ಉತ್ತರದ ಆದಿ ಎಂದೂ ಪೂರ್ವೋತ್ತರ ಎರಡೂ ಶ್ಲೋಕಗಳಲ್ಲಿಟ್ಟು ಕೊಂಡು ಎರಡೂ ಹನ್ನೆರಡು ಹನ್ನೆರಡಾಗುವಂತೆ ಅನ್ವಯಿಸಬೇಕು. ಹೀಗಾಗಿ ಅಭಯವು ಯಮವೂ ಹೌದು, ನಿಯಮವೂ ಹೌದು ಎಂದಂತಾಯಿತು.

ಇಲ್ಲಿ ಪ್ರಶ್ನೆ, 'ಅಭಯ' ಪದವನ್ನು ನಿಯಮಗಳ ಸಾಲಿನಲ್ಲಿಯೂ ಇಟ್ಟು ಪಠಿಸುವುದೇಕೆ? ಅದಕ್ಕೆ ಏನರ್ಥ? ಅಭಯದಾನವೆಂದೇ ಅರ್ಥವೆಂದರೆ ಪುನರುಕ್ತಿಯಾಗುವುದು. 'ಬೇರೆ ಅರ್ಥವಿದೆ' ಎಂದೂ ಹೇಳಲಾಗದು. ಏಕೆಂದರೆ ಬೇರೆ ಅರ್ಥವಿಲ್ಲ. ಒಂದುವೇಳೆ ಬೇರೆ ಅರ್ಥ ಇದ್ದರೂ 'ಸರ್ವತೋ ಮನಸೋಽಸಂಗಂ' ಎಂಬಲ್ಲಿ ವೈರಾಗ್ಯ ಆತ್ಮವಿಮರ್ಶೆಗಳೆಂದು ಎರಡು ಬೇರೆ ಬೇರೆ ಅರ್ಥಗಳನ್ನು ಒಂದು ಬಾರಿ ಪಠಿಸಿದ ಶಬ್ದದಿಂದಲೇ ಗ್ರಹಣ ಮಾಡುವುದು ಕಂಡಿದೆ, ಹಾಗೇ ಇಲ್ಲಿಯೂ ಏಕೆ ಮಾಡಬಾರದು? ಯದ್ಯಪಿ

'ತಿತಿಕ್ಷೇಜ್ಯಾಶಮೋದಮಃ' (೭.೧೨.೮) ಎಂಬಲ್ಲಿ 'ಇಜ್ಯಾ'ಪದವಿದೆ. ಸಂತೋಷಃ ಸಮದೃಕ್ಸೇವಾ'(೭.೧೨.೯) ಎಂಬಲ್ಲಿ 'ಸೇವಾ'ಶಬ್ದವಿದೆ—

ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂ ಗತೇಃ ।
ಸೇವೇಜ್ಯಾಽವನತಿಃ ಸಖ್ಯಂ ದಾಸ್ಯಮಾತ್ಮ ಸಮರ್ಪಣಂ ॥
(ಭಾ.೭.೧೨.೧೩)

ಇಲ್ಲಿ 'ಸೇವಾ' 'ಇಜ್ಯಾ' ಪದಗಳು ಎರಡೂ ಎರಡನೆ ಬಾರೀ ಬಂದಿವೆ. ಸೇವಾ ಇಜ್ಯಾ ಪದಗಳನ್ನು ಬೇರೆಬೇರೆ ಅರ್ಥವಿಟ್ಟುಕೊಂಡು ಎರಡುಬಾರಿ ಹೇಳಿದ್ದಿದೆ. ಆದರೂ ಅಲ್ಲಿ 'ಸಮದೃಕ್ಸೇವಾ' ಎಂದೂ, ಇಲ್ಲಿ 'ಅಸ್ಯ' ವಿಷ್ಣುವಿನ ಸೇವೆ ಇಜ್ಯಾಗಳೆಂದೂ ಬೇರೆಬೇರೆ ವಿಶೇಷಣಗಳನ್ನು ಕೊಡುವ ಅಭಿಪ್ರಾಯವಿರುವುದರಿಂದ ಎರಡು ಬಾರಿ ಹೇಳುವುದು ಯುಕ್ತವಾಗುವುದು. ಅಲ್ಲಿ 'ಇಜ್ಯಾ' ಎಂದರೆ ಭಕ್ತರಪೂಜೆ. ಇಲ್ಲಿ ಇಜ್ಯಾ ಎಂದರೆ, ಭಗವಂತನ ಪೂಜೆ. ಪುನರುಕ್ತಿ ಇಲ್ಲ. ಅಲ್ಲಿ 'ಸಮದೃಕ್' ಭಕ್ತಸೇವಾ, ಇಲ್ಲಿ ವಿಷ್ಣುಸೇವಾ ಎಂದು ಪುನರುಕ್ತಿ ಇಲ್ಲ. 'ಅಭಯ' ಎಂಬಲ್ಲಿ ಹಾಗೆ ಬೇರೆಬೇರೆ ವಿಶೇಷಣ ಕೊಡುವ ಅಭಿಪ್ರಾಯವಿಲ್ಲ. ವಿಶೇಷಣವೇನೂ ಕೊಡದೇ 'ಅಭಯದಾನ' 'ಭಯಾಭಾವ' ಗಳೆಂದು ಬೇರೆ ಬೇರೆ ಅರ್ಥ ಹೇಳುತ್ತಿದ್ದಾರೆ. 'ಸೇವೇಜ್ಯಾ' ಎಂಬಲ್ಲಿ ಸೇವಾಶಬ್ದಕ್ಕೆ 'ಅಸ್ಯ' ವಿಷ್ಣುವಿನ ಸೇವೆ ಎಂದು ವಿಶೇಷಣಾನ್ವಯವಿರುವಂತೆ ಆ

ದೃಷ್ಟಾಂತದಿಂದಲೇ ಇಜ್ಯಾ ಶಬ್ದಕ್ಕೆ 'ವಿಷ್ಣುವಿನ ಇಜ್ಯಾ' ಎಂದು ವಿಶೇಷಣದ ಅನ್ವಯ ಲಭ್ಯವಿದೆ. ವಿಷ್ಣುಪೂಜೆ ಭಕ್ತಪೂಜೆ ಎಂದು ಬೇರೆಬೇರೆ ಅರ್ಥಗಳೂ ಲಭ್ಯವಿದೆ. 'ಅಭಯ' ಪದಕ್ಕೆ ಅಂಥ ವಿಶೇಷಣಗಳಾಗಲಿ ಬೇರೆ ಅರ್ಥಗಳಾಗಲಿ ಸಿಗುವುದಿಲ್ಲ. ಏಕೆ ವ್ಯರ್ಥವಾಗಿ ಎರಡು ಬಾರಿ ಹೇಳಬೇಕು?

ಈ ಪ್ರಶ್ನೆಗೆ ಉತ್ತರ ಹೀಗೆ ಹೇಳುತ್ತೇವೆ—ಬೇರೆಬೇರೆ ಅರ್ಥಗಳನ್ನಿಟ್ಟು ಕೊಂಡೇ ಎರಡುಬಾರಿ ಅಭಯಪದವನ್ನು ಹೇಳಿದ್ದಾರೆ.

'ಸರ್ವತೋ ಮನಸೋಽಸಂಗಂ' ಎಂಬಂತೆ ಒಂದೇ ಬಾರಿ ಹೇಳಿದರೂ ಸಾಕಾಗುತ್ತಿತ್ತು ಎನ್ನಲಾಗದು. ಅಲ್ಲಿ ವೈರಾಗ್ಯ ಮತ್ತು ಆತ್ಮವಿಮರ್ಶಗಳೆಂಬ ಎರಡು ಬೇರೆಬೇರೆ ಅರ್ಥಗಳು ಪರಸ್ಪರ ಕಾರ್ಯಕಾರಣಗಳಾಗಿವೆ. ವೈರಾಗ್ಯ ವಿಲ್ಲದೆ ಆತ್ಮವಿಮರ್ಶೆ ಉಂಟಾಗಲಾರದು. ಆದರಿಂದ 'ಅಸಂಗ' ಎಂಬ ಒಂದೇ ಪದದಿಂದ ಕಾರಣವಾದ ವೈರಾಗ್ಯವನ್ನೂ ಕಾರ್ಯವಾದ ಆತ್ಮವಿಮರ್ಶೆಯನ್ನೂ ಹೇಳಲು ಬರುವುದರಿಂದ ಒಂದೇಬಾರಿ ಅಸಂಗಶಬ್ದ ಉಕ್ತವಾಗಿದೆ. 'ಅಸಂಗ' ಶಬ್ದೋಕ್ತವಾದ ಯಮತ್ವವು ವೈರಾಗ್ಯ ಮತ್ತು ಆತ್ಮ ವಿಮರ್ಶೆಗಳೆರಡರಲ್ಲಿಯೂ ಇರುತ್ತದೆ ಎಂದು ತಿಳಿಸುವುದಕ್ಕಾಗಿ 'ಅಸಂಗ' ಎಂದು ಒಂದೇ ಬಾರಿ ಹೇಳಿದ್ದಾರೆ.

ಆದರೆ ಒಂದೇ 'ದಾನ' ಪದದಿಂದ ಅಭಯದಾನವನ್ನೂ ಭಯಾಭಾವ ವನ್ನೂ ಹೇಳಲಾಗುವುದಿಲ್ಲ. ನಿಯಮದಲ್ಲಿ ಅಭಯದಾನವೂ ಯಮದಲ್ಲಿ ಭಯಾಭಾವವೂ ಸೇರುವುದರಿಂದ ಮೊದಲಿಗೆ ಯಮಗಳಲ್ಲಿ ಭಯಾಭಾವ ರೂಪದಿಂದಲೂ ಎರಡನೆಯದಾಗಿ ನಿಯಮಗಳಲ್ಲಿ ಅಭಯದಾನ ರೂಪ ದಿಂದಲೂ ಅಭಯವು ಸೇರಿಸಲ್ಪಟ್ಟಿದೆ. ಒಂದೇ ಪದದಿಂದ ಯಮನಿಯಮ ಗಳಲ್ಲಿ ಅಭಯವನ್ನು ಹೇಳಲಾಗದಿರುವುದರಿಂದ ಎರಡು ಬಾರಿ ಹೇಳ ಬೇಕಾಯಿತು.

❖❖❖

## ೨೧. ಶಮ–ದಮ ಧರ್ಮಗಳ ಶಿಕ್ಷಣ

'ಶಮದಮಾವಪಿ ಶಿಕ್ಷೇತ್' ಶಮದಮಗಳೆಂಬ ಭಾಗವತಧರ್ಮಗಳನ್ನೂ ಕಲಿಯಬೇಕು.

'ಅಭಯ ದಾನ ಮಾಡಬೇಕೆಂ'ದರೂ 'ದಾನಕ್ರಿಯೆಗೆ ಅಭಯವು ಕರ್ಮವಾಗಬೇಕೆಂ'ದರೂ ಒಂದೇ. ಈ ಅಭಯದಾನವು ಯೋಗಶಾಸ್ತ್ರದಲ್ಲಿ 'ದಾನ' ಎನಿಸಿರುವ ನಿಯಮಗಳಲ್ಲಿ ಒಂದಾಗಿರುವುದರಿಂದ ಭಾಗವತದಲ್ಲಿ ಅದನ್ನು ನಿಯಮಗಳಲ್ಲಿ ಸೇರಿಸಿದ್ದು ಸರಿಯೆ. ಆದರೆ 'ದಾನಕ್ರಿಯೆಗೆ ಕರ್ಮ ವಾಗಿರುವ ಅಭಯ'ವು ಯೋಗಶಾಸ್ತ್ರದಲ್ಲಿ ಯಮಗಳಲ್ಲಿ ಸೇರಿಲ್ಲ. ಭಾಗವತ ದಲ್ಲಿ ಅದನ್ನು ಯಮಗಳಲ್ಲಿಯೇ ಸೇರಿಸಲು ಏನುಕಾರಣ? ಈ 'ಯಮ- ನಿಯಮ' ರೂಪವಾದ ಎರಡು ಅಭಯಗಳನ್ನೂ ಭಾಗವತದಲ್ಲಿ ಭಾಗವತ ಧರ್ಮಗಳಲ್ಲಿ ಸೇರಿಸಿಲ್ಲ, ಏಕೆ? ಎಂಬ ಪ್ರಶ್ನೆ ಬಂದರೆ ಹೀಗೆ ಸಮಾಧಾನ—

ಶಮದಮ ಎಂಬ ಪದಗಳಿಂದ ಎರಡು ಅಭಯಗಳನ್ನು ಭಾಗವತ ಧರ್ಮ ಗಳಲ್ಲಿ ಸೇರಿಸಿರುವುದರಿಂದ ಯಮನಿಯಮಗಳಲ್ಲಿಯೂ ಅವು ಸೇರುತ್ತವೆ.

'ಶಮ' 'ದಮ' ಪದಗಳಿಂದ ಯಮನಿಯಮಾಂತರ್ಗತವಾದ ಎರಡು ಅಭಯಗಳು ಹೇಗೆ ಪ್ರತಿಪಾದಿತವಾಗುತ್ತವೆ? ಎಂದು ಪ್ರಶ್ನೆ ಬಂದರೆ ಮೊದಲಿಗೆ 'ಶಮ' 'ದಮ' ಪದಗಳ ಅರ್ಥವನ್ನು ತಿಳಿಯಬೇಕು.

ಶಮ ಎಂದರೆ ಶಾಂತಿ, ದಮ ಎಂದರೆ ಸಂಯಮ. ಯಾವುದರ ಶಾಂತಿ, ಯಾವುದರ ಸಂಯಮ? ಎಂದರೆ ಭಾಗವತ ಹೇಳುತ್ತದೆ—

ಶಮೋ ಮನ್ನಿಷ್ಠತಾ ಬುದ್ಧೇ ರ್ದಮ ಇಂದ್ರಿಯಸಂಯಮಃ ॥

(ಭಾ.೧೧.೧೯.೩೬)

'ಶಮ' ಎಂದರೆ ಬುದ್ಧಿಯು ಹರಿಯಲ್ಲಿ ನೆಲೆ ನಿಲ್ಲುವುದು. 'ದಮ' ಎಂದರೆ ಇಂದ್ರಿಯಗಳ ಸಂಯಮ, ಹತೋಟಿಯಲ್ಲಿಟ್ಟುಕೊಳ್ಳುವುದು ಎಂದರ್ಥ. 'ಅಭಯ' ಎಂಬ ಎರಡು ಪದಗಳಿಂದ ಈ ಶಮ ದಮಗಳು ಹೇಗೆ ಲಭಿಸುತ್ತವೆ? ಎಂದರೆ ಅವು ನೇರವಾಗಿ ಪದಗಳಿಂದ ತಿಳಿದುಬರುವುದಿಲ್ಲ. 'ಅಭಯ' 'ಅಭಯ' ಎಂಬ ಎರಡು ಸಾಮಾನ್ಯಪದಗಳಿಂದ 'ಶಮ' 'ದಮ' ಎಂದು, ಶಾಂತಿ ಸಂಯಮ ಎಂದು ಹೇಗೆ ಅರ್ಥ ಹೊರಡುತ್ತದೆ?

'ಮನ್ನಿಷ್ಠತಾ ಬುದ್ಧೇಃ' ಎಂಬುದರಿಂದ, 'ಯಾವ ಶಮ? ಬುದ್ಧಿಯು ಹರಿಯಲ್ಲಿ ಹೋಗಿ ನಿಲ್ಲುವುದೆಂಬ ಶಮ. 'ದಮ ಇಂದ್ರಿಯ ಸಂಯಮಃ' ಎಂಬುದರಿಂದ ಯಾವ ದಮ? ಇಂದ್ರಿಯಗಳ ಸಂಯಮ ಎಂದು ವ್ಯಾಖ್ಯಾನ

ದಿಂದ ವಿಶೇಷಾರ್ಥ ತಿಳಿದುಬರುತ್ತದೆ. ಆದರೂ ಭಗವನ್ನಿಷ್ಠಬುದ್ಧಿಯು ಅಭಯ, ಸಂಯಮಿತ ಇಂದ್ರಿಯವೂ ಅಭಯದಾನ' ಎಂದು ತಿಳಿಯ ಲಾಗದು. ಎರಡೂ ಒಂದಲ್ಲ ತಾನೆ? ಅದಕ್ಕೆ

'ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾತ್' (ಭಾ.೫.೧.೧೭)

ಎಂಬ ೭೭ನೇ ಭಾಗವತ ಶ್ಲೋಕವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು.

ಇದು ಬ್ರಹ್ಮದೇವರು ಪ್ರಿಯವ್ರತ ರಾಜನಿಗೆ ಹೇಳುವ ಮಾತು—

'ಜಿತೇಂದ್ರಿಯಸ್ಯಾತ್ಮರತೇಃ' 'ಇಂದ್ರಿಯಸಂಯಮ' ರೂಪವಾದ ದಮ ಮತ್ತು 'ಆತ್ಮರತಿ' ಅಂದರೆ ಭಗವನ್ನಿಷ್ಠೆ ಎಂಬ ಶಮ ಇವೆರಡು ಉಳ್ಳವನಿಗೆ ಭಯವೆಲ್ಲಿ? ಇಂದ್ರಿಯಸಂಯಮವಿಲ್ಲದ, ಭಗವನ್ನಿಷ್ಠೆಯೂ ಇಲ್ಲದ ಪ್ರಮತ್ತನಿಗೇ ಭಯ' ಎನ್ನುತ್ತಾರೆ, ಬ್ರಹ್ಮದೇವರು. ಭಗವನ್ನಿಷ್ಠ ಬುದ್ಧಿರೂಪವಾದ ಶಮ ಮತ್ತು ಇಂದ್ರಿಯ ಸಂಯಮರೂಪ ದಮಗಳಿದ್ದರೇ ಭಯನಿವೃತ್ತಿ! ಶಮವಿಲ್ಲದಿದ್ದರೆ ಸಂಸಾರಭಯವಿದ್ದೇ ಇರುತ್ತದೆ. ದಮವಿಲ್ಲದಿದ್ದರೆ, ತನ್ನ ಇಂದ್ರಿಯಗಳ ಮೇಲೆ ತನಗೆ ಸಂಯಮವಿಲ್ಲದಿದ್ದರೆ ಅನ್ಯರ ಮೇಲೆ ಹರಿಹಾಯುತ್ತಾನೆ ಮಾನವ, ಅನ್ಯರಿಗೆ ಆತನೇ ಭಯಪಡುತ್ತಾನೆ. ಹೊರತು ಅನ್ಯರಿಗೆ ಅಭಯದಾನ ಮಾಡಲಾರ. ಶಮಾಭಾವ ದಮಾಭಾವಗಳೇ ಎರಡು ಬಗೆಯ ಭಯಗಳಿಗೆ ಕಾರಣ. ಕಾರಣನಿವೃತ್ತಿಯಾದರೆ ಕಾರ್ಯ ನಿವೃತ್ತಿಯಾಗುವುದು ಸಹಜ. ಅದರಿಂದ ಶಮ ದಮಗಳು ಅಭಯಕ್ಕೆ ಕಾರಣ. ಅಂದರೆ ತನಗೂ ಭಯವಿಲ್ಲ. ಅನ್ಯರಿಗೂ ಅಭಯ ದಾನ ಮಾಡುತ್ತಾನೆ.

ಮತ್ತು ಸಂಸಾರಭಯಾಭಾವ ಇರುವಲ್ಲಿ ಶಮವಿರುತ್ತದೆ. ಶಮವಿರುವಲ್ಲಿ ಸಂಸಾರಭಯಾಭಾವ ಇರುತ್ತದೆ. ಯಾರಿಂದ ಲೋಕಕ್ಕೆ ಭಯವಾಗದೋ ಅವನು ಜಿತೇಂದ್ರಿಯನೆ. ಯಾರು ಜಿತೇಂದ್ರಿಯನೋ ಅವನಿಂದ ಲೋಕಕ್ಕೆ ಭಯವಿಲ್ಲ ಎಂದು ನಿಯಮವಿರುವುದರಿಂದ ಅಭಯ–ಅಭಯದಾನಗಳಿಗೂ ಶಮ–ದಮಗಳಿಗೂ ಪರಸ್ಪರವಾಗಿ ಕಾರ್ಯಕಾರಣಭಾವ ಮಾತ್ರವಲ್ಲದೆ ಹೇತು -ಹೇತುಮದ್‌ಭಾವವೂ ಇರುತ್ತದೆ. ಅದರಿಂದ ಅಭಯ–ಅಭಯದಾನಗಳನ್ನು ಶಮ–ದಮಗಳೆಂದು ಪರಿಗಣಿಸುವುದು ಉಚಿತವಾಗುತ್ತದೆ.

❖❖❖

## ಭಾಗವತಧರ್ಮದ ನಾಲ್ಕು ಲಕ್ಷಣಗಳು

### –೨೪೦–

### ಭಾಗವತಧರ್ಮದ ಮೊದಲಿನ ಲಕ್ಷಣ

**ಜಿತಮಜಿತ ತದಾ ಭವತಾ**
**ಯದಾऽऽಹ ಭಾಗವತಧರ್ಮಮನವದ್ಯಂ ।**
**ನಿಷ್ಕಿಂಚನಾ ಯೇ ಮುನಯ**
**ಆತ್ಮಾರಾಮಾ ಯಮುಪಾಸತೇऽಪವರ್ಗಾಯ ॥**

(ಭಾ.೬.೧೬.೪೦)

ನನು ಭವತು ನಾರದಪ್ರಾರ್ಥನಯಾ ಭಾಗವತಧರ್ಮಾಣಾಮೇವ ಪ್ರಸ್ತಾವಃ। ಭವತು ಚ ಭಾಗವತವಿಷಯತಯಾ ಭಗವತಾ ಪ್ರದರ್ಶಿತತಾ। ಭವತು ವಾ ಭಾಗವತೇ ವಿಸ್ತೃತ್ಯ ಪ್ರತಿಪಾದ್ಯತಾಪಿ। ತಥಾಪಿ ಭಾರತಾದಾವಿವ ಧರ್ಮಾಂತರಪ್ರತಿಪಾದನಂ ವಿಹಾಯ ಅತ್ರ ಭಾಗವತಧರ್ಮಾಣಾಮೇವ ವಿಶಿಷ್ಯ ಪ್ರತಿಪಾದನಂ ಕಿಂನಿಮಿತ್ತಮಿತಿ ಚೇತ್। ಮೋಕ್ತಂ ವಿಸ್ಮಾರ್ಷೀಃ। ಉಕ್ತಮೇವೈತತ್। ಯತ್ಸರ್ವಂ ಕೃತ್ವಾಪಿ ಅಲಂಬುದ್ಧಿಮನಾಸಾದಯತಾ ಭಗವತೈತತ್ಕೃತಂ। ಏತೇನ ತು ಭಗವತ್ಪ್ರೀತಿರಧಿಕಾ ಭವತಿ। ತತಶ್ಚ ಭವತಿ ಭವಿನಾಂ ಭವಾಪವರ್ಗ ಇತ್ಯವತಾರಪ್ರಯೋಜನಸಿದ್ಧ್ಯಾ ಭವತ್ಯೇವ ಮನಸ್ತುಷ್ಟಿರಿತ್ಯಾಶಯೇನೋಕ್ತಂ ಬುದ್ಧಾವಾರೋಹಾಯ ವಿಶದಯನ್ನಾಹ॥ **ಜಿತಮಿತಿ॥** ಹೇ ಅಜಿತ। ಭವಾನ್। ಯದಾ। ಅನವದ್ಯಂ। ಭಾಗವತಂ ಧರ್ಮಂ। ಭವಿನಾಂ ಭವಾಪವರ್ಗಾಯ ಆಹ।ತದೈವ ಭವತಾ।ಜಿತಂ ಜಯಃ ಪ್ರಾಪ್ತಃ। ಅವತಾರಪ್ರಯೋಜನಸ್ಯ ಸಿದ್ಧೇರಿತಿ ಭಾವಃ। ಕಿಂ ತದವತಾರಪ್ರಯೋಜನಂ ಕಥಂ ಚ ಭಾಗವತಧರ್ಮಕಥನಮಾತ್ರೇಣ ಸಿದ್ಧಮಿತ್ಯತ ಆಹ। **ನಿಷ್ಕಿಂಚನಾ ಇತಿ।** ಯೇಷಾಂ ಕಿಂಚಿದಪ್ಯಪೇಕ್ಷಣೀಯಂ ಪ್ರಾಕೃತಂ ವಸ್ತು ನಾಸ್ತಿ ತೇ ನಿಷ್ಕಿಂಚನಾಃ ತ ಏವಾತ್ಮಾರಾಮಾಃ ಭಗವನ್ನಿಷ್ಠಾಃ ಭವಂತಿ। ಯೇ ಆತ್ಮಾರಾಮಾಃ ತ ಏವ ಮುನಯಃ ಯಥಾಶಕ್ತಿ ವೇದ್ಯಸ್ಯ ವೇತ್ತಾರೋ ಭವಂತಿ। ಯೇ ಮುನಯಃ ತ ಏವ ಭಾಗವತಂ ಧರ್ಮಂ ಉಪಾಸತೇ ತಮಿತಿ। ಇದಮುದಿತಂ **ಭವತಿ—** ಸಾಕ್ಷಾದ್ಭಗವಾನ್ನಾರಾಯಣಃ ಭವಿನಾಂ ಭವಾಪವರ್ಗಾಯ ದಿವಿಭವಭಾವಿತಃ ವ್ಯಾಸಃ ಬಭೂವೇತಿ ಹಿ ಘಂಟಾಘೋಷಃ। ಸ ಚ ಯದಾ ಅತುಲಃ ಭಿಷಗಿವ ಔಷಧಂ ಅತುಲಂ

**ಭಾಗವತಂ ಧರ್ಮಮಾಹ। ಯದಾ ಚ ರೋಗೀ ಔಷಧಮಿವ ಭವೀ ತಂ ಭಾಗವತಂ ಧರ್ಮಂ ಉಪಾಸ್ತೇ ಕಿಂ ತದಾ ಅವಶಿಷ್ಟಂ ರೋಗನಿವೃತ್ತಾವಿವ ಭವನಿವೃತ್ತೌ॥ ದ್ವಯಮೇವ ಹ್ಯಪೇಕ್ಷಿತಂ ರೋಗನಿವೃತ್ತಾವಿವ। ಯದ್ರೋಗನಿದಾನವಿಚ್ಛಿರೋಮಣಿನಾ ಔಷಧಕಥನಂ ತದೇಕಂ। ಯಚ್ಚ ರೋಗಿಣೋ ಆದರೇಣ ಭಕ್ತ್ಯಾ ತತ್ಸೇವನಂ ತದ್ದ್ವಿತೀಯಮಿತಿ। ಭವನಿವೃತ್ತಾವಪಿ ಸರ್ವಜ್ಞಶಿರೋಮಣಿನಾ ತದುಪಾಯಭಾಗವತಧರ್ಮಕಥನಂ। ಭಾಗವತೈರ್ಭವಿಭಿಃ ಭಕ್ತ್ಯಾ ತತ್ಸೇವನಂ ಚೇತಿ। ತದುಭಯಂ ಚ ಸಿದ್ಧಮಿತಿ॥**

❖❖❖

**ಚಿತ್ರಕೇತು ರಾಜ ಹೇಳುತ್ತಾನೆ—ಹೇ ಅಜಿತ, ನೀನು ಯಾವಾಗ ನಿರ್ಮಲವಾದ ಭಾಗವತಧರ್ಮವನ್ನು ಸಂಸಾರಿಗಳ ಮೋಕ್ಷಕ್ಕಾಗಿ ಹೇಳಿದೆಯೋ ಆಗಲೆ ನೀನು ಗೆದ್ದೆ. ಅಂದರೆ, ನಿನ್ನ ಅವತಾರ ಕಾರ್ಯ ನೀನು ಪೂರ್ತಿ ಮಾಡಿಕೊಂಡೆ. ಏಕೆಂದರೆ ವಿಷಯಾಸಕ್ತಿ ರಹಿತರಾದ ಭಗವನ್ನಿಷ್ಠಾವಂತರಾದ ಮುನಿಗಳು ಮೋಕ್ಷಕ್ಕಾಗಿ ಆ ಭಾಗವತಧರ್ಮವನ್ನೆ ನಡೆಸುತ್ತಾರೆ.**

ಶ್ರೀವ್ಯಾಸರು ಭಾರತಾದಿಗಳಲ್ಲಿ ಭಾಗವತಧರ್ಮಗಳನ್ನು ಹೇಳಿದರೂ ಜೊತೆಗೆ ದರ್ಶನಭಾಷೆಯಿಂದ ಅನ್ಯಧರ್ಮವನ್ನೂ ಹೇಳಿದ್ದರಿಂದ ಸುಜನರು ಭಾಷಾತ್ರಯ ಜ್ಞಾನವಿಲ್ಲದೆ ಗೊಂದಲಕ್ಕೊಳಗಾದರು. ಶ್ರೀವ್ಯಾಸರಿಗೆ ತಮ್ಮ ಅವತಾರಕಾರ್ಯಪೂರ್ತಿಯಾಗಿ ಸಿದ್ಧಿಸಲಿಲ್ಲವೆಂದು ಅತೃಪ್ತಿಯಿಂದ ನಾರದರ ಪ್ರಾರ್ಥನೆಯಂತೆ ಸಮಾಧಿಭಾಷೆಯಿಂದಲೇ ಎಲ್ಲ ಭಾಗವತಧರ್ಮಗಳನ್ನು ಭಾಗವತದಲ್ಲಿ ಪ್ರತಿಪಾದಿಸಿದರು. ಹೀಗಾಗಿ ಸಂಸಾರಿಗಳ ಸಂಸಾರ ಮೋಕ್ಷಸಾಧನೆ ಭಾಗವತ ರಚನೆಯಿಂದಲೇ ಸುಲಭವಾಯಿತು ಎಂಬುದನ್ನು ಈ ಶ್ಲೋಕವು ವಿಶದವಾಗಿ ತಿಳಿಸುತ್ತಿದೆ. ಇದರಿಂದ ಇಷ್ಟನ್ನು ಹೇಳಿದಂತಾಯಿತು—

ಸಂಸಾರಿ ಜೀವರಿಗೆ ಮೋಕ್ಷ ಸಂಪಾದಿಸಿಕೊಡುವ ಜ್ಞಾನಕಾರ್ಯಕ್ಕೆ ದೇವತೆಗಳಿಂದ ಪ್ರಾರ್ಥಿತನಾದ ಶ್ರೀಹರಿ ಶ್ರೀವ್ಯಾಸರಾಗಿ ಅವತರಿಸಿದನೆಂಬುದು ಪ್ರಸಿದ್ಧವೆ ಇದೆ. ಆದ್ದರಿಂದ ಉತ್ತಮ ವೈದ್ಯನು ಕೊಡುವ ಉತ್ತಮ ಔಷಧದಂತೆ ಭವರೋಗ ವೈದ್ಯನಾದ ಹರಿಯು ಗ್ರಂಥದಲ್ಲಿ ಹೇಳುವ ಭಾಗವತಧರ್ಮವು ಭವರೋಗಕ್ಕೆ ರಾಮಬಾಣವಾಗಿದೆ. ಅದನ್ನು ಸೇವಿಸಿದರೆ ಸಂಸಾರರೋಗ ನಿವೃತ್ತಿ ಹೊಂದುವುದರಲ್ಲಿ ಸಂಶಯವೇ ಇಲ್ಲ. ರೋಗನಿವೃತ್ತಿಗೆ ಎರಡು ಬೇಕು. ಒಂದು

ರೋಗ ನಿದಾನವನ್ನು ಬಲ್ಲ ವೈದ್ಯನು ಔಷಧ ಹೇಳಬೇಕು. ರೋಗಿ ಭಕ್ತ್ಯಾದರಗಳಿಂದ ಅದನ್ನು ಸೇವಿಸಬೇಕು. ಭವರೋಗ ನಿವೃತ್ತಿಯಲ್ಲಿ ಎರಡೂ ಇವೆ. **ಭವರೋಗನಾಶಕ್ಕೆ ಉತ್ತಮ ಔಷಧವಾಗಿರುವ ಭಾಗವತಧರ್ಮವನ್ನು ಭಗವಂತನೆ ಹೇಳಿದ್ದಾನೆ. ಇದೇ ಭಾಗವತ ಧರ್ಮದ ಪ್ರಧಾನಲಕ್ಷಣ. ಮತ್ತು ಭಾಗವತರು ಈ ಧರ್ಮವನ್ನು ಭಕ್ತಿಯಿಂದ ಸೇವಿಸುತ್ತಿದ್ದಾರೆ ಎಂದು.**

❖❖❖

**–೨೪೧–**

**ಭಾಗವತಧರ್ಮದ ಎರಡನೆ ಲಕ್ಷಣ**

**ವಿಷಮಮತಿರ್ನಯತ್ರ ನೃಣಾಂ**
**ತ್ವಮಹಮಿತಿ ಮಮ ತವೇತಿ ಚ ಯೋಽನ್ಯತ್ರ ।**
**ವಿಷಮಧಿಯಾ ರಚಿತಃ ಸ**
**ಹ್ಯವಿಶುದ್ಧಃ ಕ್ಷಯಿಷ್ಣುರಧರ್ಮಬಹುಲಃ ॥**

(ಭಾ.೬.೧೬.೪೧)

ಕೋಽಯಂ ಭಾಗವತೋ ಧರ್ಮಃ ಯದನುಷ್ಠಾನಂ ಅಪವರ್ಗಾಯ ಭವೇದಿತ್ಯತಸ್ತಲ್ಲಕ್ಷಣಮಾಹ ॥ ವಿಷಮೇತಿ ॥ ಯತ್ರ ಯಸ್ಮಿನ್ ಧರ್ಮೇ। ಅಹಮೇವ ಕರ್ತೇತಿ। ತಥೇದಂ ಸಾಧನಂ ಫಲಂ ವಾ ಮಮೈವೇತಿ ಚ। ಇತ್ಯೇವಂ ದ್ವಿವಿಧಾ ವಿಷಮಾ ಮತಿಃ ಅಭಿಮಾನಃ। ನೃಣಾಮನುಷ್ಠಾತೃಣಾಂ। ನ ಭವತಿ ಕಾರಣತಯಾ। ಸ ಏವ ಭಾಗವತೋ ಧರ್ಮ ಇತಿ। ಅನೇನ ಕರ್ತೃತ್ವಾದ್ಯಭಿಮಾನತ್ಯಾಗಪೂರ್ವಕಮನುಷ್ಠೀಯಮಾನೋ ಭಾಗವತೋ ಧರ್ಮ ಇತಿ ಲಕ್ಷಣಮುಕ್ತಂ ಭವತಿ। ಅತ ಏವಾಕ್ಷಯಫಲಃ ಪಾಪಾಜನಕಶ್ಚ ಭವತಿ। ಅಸ್ಯ ಅತಿವ್ಯಾಪ್ತಿಂ ಪರಿಹರತಿ ॥ ಯ ಇತಿ ॥ ಅನ್ಯತ್ರ ಅನ್ಯೋ ಯೋ ಧರ್ಮಃ। ಸ ವಿಷಮಧಿಯಾ ಅಹಂಮಮೇತ್ಯಭಿಮಾನೇನ ರಚಿತಃ। ಅತ ಏವ ಸಕೇಶ್ಯಾ ಅನುಷ್ಠಿತಜಪಾದಿಕಮಿವ ಅಶುದ್ಧಃ। ತತ ಏವ ಚ ಕ್ಷಯಿಷ್ಣುಫಲಕಃ। ಅಧರ್ಮಬಹುಲಃ ಬಹುಪಾಪಸಾಧನಂ ಚೇತಿ। ಏತದುಭಯಂ ಪ್ರಮಾಣಪ್ರಮಿತಮಿತಿ ಹಿಶಬ್ದೇನ ಸೂಚಯತೀತಿ ॥

❖❖❖

**ಚಿತ್ರಕೇತುರಾಜ ಗೈದ ಸಂಕರ್ಷಣ ಸ್ತೋತ್ರ—ಮೋಕ್ಷಸಾಧನವಾಗಬಲ್ಲ**

ಭಾಗವತಧರ್ಮ ಯಾವುದು? ಅದರ ಲಕ್ಷಣವೇನು ಎಂದರೆ ಯಾವ ಧರ್ಮದಲ್ಲಿ ಕರ್ತನಿಗೆ ನಾನು ಕರ್ತ ಫಲವು ನನಗೇ ಸೇರಬೇಕಾದ್ದು, ನೀನು ಕರ್ತ ಫಲವು ನಿನಗೆ ಸೇರಬೇಕಾದ್ದೆಂದು ವಿಷಮಬುದ್ಧಿ ಇರುವುದಿಲ್ಲವೊ ಎಲ್ಲಕ್ಕೂ ಪರಮಾತ್ಮನೆ ಕರ್ತ, ಭೋಕ್ತ ಎಂಬ ಸಮ ಬುದ್ಧಿಯೆ ಇರುವುದೋ ಅದೇ ಭಾಗವತಧರ್ಮ.

ಕರ್ತೃತ್ವ ಭೋಕ್ತೃತ್ವಗಳಲ್ಲಿ ತನಗೆ ಸ್ವಾತಂತ್ರ್ಯ ಭ್ರಮವಿಲ್ಲದೆ ಮಾಡುವುದೇ ಭಾಗವತಧರ್ಮದ ಎರಡನೆ ಲಕ್ಷಣವಾಗಿದೆ.

ಅದರಿಂದಲೆ ಅದು ಅಕ್ಷಯಫಲಜನಕವಾಗಿದೆ. ಪಾಪಪರಿಹಾರಕವಾಗಿದೆ. ಬೇರೆ ಧರ್ಮ ಹೀಗೆ ಇರುವುದಿಲ್ಲ. ಕರ್ತನು ಅಹಂಕಾರ ಮಮಕಾರರೂಪನಾದ ವಿಷಮಬುದ್ಧಿ ಯಿಂದ ಅದನ್ನು ಮಾಡಿರುತ್ತಾನೆ. ಸಕೇಶಿ ವಿಧವೆಯ ಜಪದಂತೆ' ಆ ಕರ್ಮವು ಅಶುದ್ಧ, ನಶ್ವರಫಲ ಜನಕ, ಬಹುಪಾಪಗಳಿಗೆ ಸಾಧನವೂ ಆಗಿರುತ್ತದೆ.

❖❖❖

–೨೪೨–

### ಭಾಗವತಧರ್ಮಕ್ಕೆ ಮೂರನೆ ಲಕ್ಷಣ

ನ ವ್ಯಭಿಚರತಿ ತವೇಕ್ಷಾ
ಯಯಾ ಹ್ಯಭಿಹಿತೋ ಭಾಗವತೋ ಧರ್ಮಃ ।
ಸ್ಥಿರ ಚರ ಸತ್ವ ಕದಂಬೇ-
ಷ್ವಪೃಥಗ್‌ಧಿಯೋ ಯಮುಪಾಸತೇ ತ್ವಾರ್ಯಾಃ ॥

(ಭಾ.೬.೧೬.೪೩)

ನನು ಮಾ ಹಿ ಭೂದತಿವ್ಯಾಪ್ತಿಃ। ಯದ್ಭಾಗವತಧರ್ಮಸ್ಯ ಅಕ್ಷಯಫಲತ್ವಮುಕ್ತಂ ತತ್ತಾವನ್ನ ಸಂಭವತಿ। ಕದಾಚಿತ್ಕೇನಚಿದನುಷ್ಠಿತೇನ ಭಾಗವತಧರ್ಮೇಣ ಅನ್ಯಧರ್ಮೇಣೇವ ಮುಕ್ತೇರಜನನೇನ ಫಲಾಂತರಜನನೇನ ವಾ ಅಕ್ಷಯಫಲತ್ವಸ್ಯ ವಕ್ತುಮಶಕ್ಯತ್ವಾತ್। ಸತಿ ಚೈವಂ ಭಾಗವತ ಧರ್ಮೋಪದೇಶಮಾತ್ರೇಣ ಭಗವತಃ ಕೃತಾರ್ಥತೇತ್ಯೇತದಪಿ ಗತಮಿತ್ಯತ ಆಹ ॥ ನೇತಿ ॥ ಅನೇನ ಭಾಗವತಧರ್ಮೇಣ ಮೋಕ್ಷಃ ಸ್ಯಾದಿತಿ ಯಯೇಕ್ಷಯಾ

ಪ್ರತಿಭಯಾ। ಭಾಗವತೋ ಧರ್ಮಸ್ತತ್ಸಾಧನತಯಾ ಅಭಿಹಿತಃ ಸಾ ತವ ಪ್ರೇಕ್ಷಾವಚ್ಛಿರೋಮಣೇಃ ಈಕ್ಷಾ ಕದಾಪಿ ನ ವ್ಯಭಿಚರತಿ। ಕೇನಚಿತ್ಪ್ರೇಕ್ಷ ಯೋದಿತೋ ನಾರ್ಥಂ ವ್ಯಭಿಚರತಿ। ಕಿಮು ಪ್ರೇಕ್ಷಾವಚ್ಛಿಖಾಮಣೇರಿತ್ಯಾಶಯೇನ ತವೇತ್ಯುದಿತಂ। ಏತಚ್ಚ ಪ್ರಮಾಣಸಿದ್ಧಮಿತಿ ನಾಸ್ಮಾಭಿರ್ಯತಿತವ್ಯಮಿತ್ಯಾಶಯೇ ನೋಕ್ತಂ। ಹೀತಿ॥

ಇದಮುದಿತಂ ಭವತಿ— ಸ್ಯಾದಿಯಮರ್ಥವ್ಯಭಿಚಾರಚೋದನಾ ಪ್ರೇಕ್ಷಾವತಾ ಭಗವತಾ ಮೋಕ್ಷ ಸಾಧನತಯಾ ಅಭಿಹಿತಸ್ಯ ಭಾಗವತ ಧರ್ಮಾನುಷ್ಠಾನಸ್ಯ ಯದ್ಯಭಿಧಾಯಕಸ್ಯ ಪ್ರೇಕ್ಷಾ ಅರ್ಥಂ ವ್ಯಭಿಚರೇತ್। ನಚೈತದಸ್ತಿ। ಪ್ರೇಕ್ಷಾ, ಅರ್ಥವ್ಯಭಿಚಾರಿಣೇತ್ಯಸ್ಯ ವ್ಯಾಹತತ್ವಾತ್। ಇಯಮೇವ ಹಿ ಪ್ರೇಕ್ಷಾ, ಯತ್ಕಾಲತ್ರಯೇಽಪಿ ಸ್ವಗೃಹೀತಾರ್ಥಸ್ಯಾಬಾಧಿತತತ್ವ ನಿರ್ಣಯನಂ। ತದೇತತ್ಸೂಚನಾಯೈವ ವ್ಯಾಸೇನ ತ್ರಿವಾರಂ ವೇದಾನ್ವಿಚಾರ್ಯ ಮೋಕ್ಷಸಾಧನತಯಾ ಭಾಗವತಧರ್ಮ ನಿರೂಪಣಾರ್ಥಕಂ ಭಾಗವತಂ ಕೃತಮಿತ್ಯುಚ್ಯತೇ। **ಯಥಾಹುಃ—**

''ನ ಹ್ಯತೋಽನ್ಯಃ ಶಿವಃ ಪಂಥಾ ವಿಶ್ರುತಃ ಸಂಸೃತಾವಿಹ।
ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್।

ಭಗವಾನ್ ಬ್ರಹ್ಮ ಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯ ಮನೀಷಯಾ।
ತದಪಶ್ಯದ್ಧಿ ಕೂಟಸ್ಥೇ ರತಿರಾತ್ಮನ್ಯತೋ ಭವೇತ್' ಇತಿ॥

ಇತೋಪಿ ನಾರ್ಥವ್ಯಭಿಚಾರ ಇತ್ಯಾಶಯೇನಾಹ। **ಸ್ಥಿರೇತಿ॥** ಹಿ ಯಸ್ಮಾತ್। ಆರ್ಯಾಃ। ಸ್ಥಿರಚರಸತ್ವಕದಂಬೇಷು ಚರಾಚರಭೂತ ನಿವಹೇಷು। ಅಪೃಥಗ್ಧಿಯ ಏವ ಸಂತಃ। ಯಂ ಧರ್ಮಂ। ಉಪಾಸತೇ ವಿಶೇಷೇಣ। ತಸ್ಮಾದಿತಿ। ಇದಮುದಿತಂ ಭವತಿ— ಸ್ಯಾದಯಂ ಮನೋರಥೋ ಭವತಃ ಯದ್ಯರ್ಥವ್ಯಭಿಚಾರಃ ಸಿಧ್ಯೇತ್ ನ ಚೈವಂ। ಯತೋ ಭಾಗವತ ಧರ್ಮಾಣಾಂ ಅನುಷ್ಠಾತಾರಶ್ಚೇತನಾ ಚೇತನಗಣಸ್ಥಿತಂ ಶ್ರೀಹರಿಂ ಮನಸಾ ಮಾನಯಂತಃ ಕ್ರಿಯಮಾಣಂ ತತ್ಪೂಜಾರ್ಥಮಸ್ತು ಇತ್ಯನುಸಂದಧಾನಾ ಏವಾನುತಿಷ್ಠಂತಿ। ನ ಹಿ ಭಗವತಃ ಪೂಜಾ ಭವತಿ ವಿಫಲಾ ಅಲ್ಪಫಲಾ ವಾ। ತತಃ ಶ್ರೀಹರಿಪೂಜಾತ್ವೇನ ಕ್ರಿಯಮಾಣಸ್ಯ ವಿಫಲತ್ವಾದ್ಯಸಂಭವೇನ ಸಿದ್ಧೈವ ಭಾಗವತಧರ್ಮಕಥನೇನ ಭಗವತಃ ಕೃತಾರ್ಥತೇತಿ। ಅನೇನ ಹರಿಪೂಜಾತ್ವೇನಾನುಸಂಧಾಯ ಕ್ರಿಯಮಾಣೋ ಧರ್ಮೋ ಭಾಗವತ ಇತಿ ಲಕ್ಷಣಾಂತರಂ ಚ ಸೂಚಿತಂ ಭವತಿ॥

❖❖❖

ಚಿತ್ರಕೇತುರಾಜ ಗೈದ ಸಂಕರ್ಷಣ ಸ್ತೋತ್ರ— ಭಾಗವತಧರ್ಮಕ್ಕೆ ಹೇಳಿದ ಲಕ್ಷಣವು ಬೇರೆ ಧರ್ಮದಲ್ಲಿಲ್ಲದಿದ್ದರೆ ಬೇಡ. ಆದರೂ ಭಾಗವತಧರ್ಮಕ್ಕೆ ಹೇಳಿದ ಅಕ್ಷಯಫಲ ಜನಕತ್ವವು ಅಸಂಭವಿ. ಕೆಲವೊಮ್ಮೆ ಯಾರಾದರೊಬ್ಬ ಮಾಡಿದ ಭಾಗವತ ಧರ್ಮದಿಂದ ಮುಕ್ತಿಯಾಗದಿರಬಹುದು. ನಶ್ವರ ಫಲವೂ ಉಂಟಾಗಬಹುದು. ಅದಕ್ಕೆ ಅಕ್ಷಯ ಫಲವತ್ತ್ವವನ್ನು ಹೇಳಲಾಗದು. ಹೀಗಾಗಿ ಭಾಗವತಧರ್ಮವನ್ನು ಭಾಗವತದಲ್ಲಿ ಹೇಳಿದ ಮಾತ್ರಕ್ಕೆ ಶ್ರೀವ್ಯಾಸರು ಕೃತಾರ್ಥರಾದರೆನ್ನುವಂತಿಲ್ಲ' ಎಂದು ಆಕ್ಷೇಪ ಬಂದರೆ ಚಿತ್ರಕೇತು ರಾಜನು ಉತ್ತರ ಕೊಡುತ್ತಾನೆ—

**ಶ್ರೀಹರಿ, ಭಾಗವತಧರ್ಮಾನುಷ್ಠಾನದಿಂದ ಮೋಕ್ಷ ಲಭಿಸುವುದೆಂಬ ಪ್ರಜ್ಞೆಯಿಂದ ನೀನು ಆ ಧರ್ಮವನ್ನು ಭಾಗವತದಲ್ಲಿ ಹೇಳಿರುವೆ. ಆ ನಿನ್ನ ಪ್ರಜ್ಞೆ ಎಂದೂ ಸುಳ್ಳಾಗುವುದಿಲ್ಲ. ಪ್ರಜ್ಞಾವಂತನಾದವನು ಯಾರೇ ಹೇಳಿದರೂ ಅದು ಸುಳ್ಳಾಗುವುದಿಲ್ಲ ಎಂದಮೇಲೆ, ಅನುಪಮ ಪ್ರಜ್ಞಾಶಾಲಿಯಾದ ನೀನು ಹೇಳಿದರೆ ಸುಳ್ಳಾಗದೆಂದು ಬೇರೇನು ಹೇಳಬೇಕು? ಇದು ಒಂದು ಕಾರಣ. ಇನ್ನೊಂದು ಕಾರಣ— ಸ್ಥಾವರಜಂಗಮ ಪ್ರಾಣಿಸಮೂಹಗಳಲ್ಲಿ ಇರುವ ಹರಿಯ ಪ್ರೀತಿಗಾಗಿ ಯಥಾರ್ಥಜ್ಞಾನಿಗಳಾದ ಸಾಧುಜನರೇ ಈ ಭಾಗವತ ಧರ್ಮವನ್ನು ಅನುಷ್ಠಾನ ಮಾಡುತ್ತಾರೆ. ಅದರಿಂದಲೂ ಭಾಗವತಧರ್ಮಕ್ಕೆ ಫಲವಿಲ್ಲವೆಂಬುದಿಲ್ಲ ಎಂದು.**

'ಭಾಗವತಧರ್ಮವು ಅಕ್ಷಯ ಫಲ' ನೀಡುತ್ತದೆ' ಎನ್ನುವುದು ಎಂದೂ ಸುಳ್ಳಾಗಲಾರದು. ಏಕೆಂದರೆ ಅದು ಭಗವಂತನೆ ಮಾಡಿರುವ ನಿರ್ಣಯ. ಶುಕಮುನಿಯ ಈ ಮಾತುಗಳಿಂದ ಇದು ಮನವರಿಕೆಯಾಗುವುದು—

ನ ಹ್ಯತೋಽನ್ಯಃ ಶಿವಃ ಪಂಥಾ ವಿಶ್ರುತಃ ಸಂಸ್ಕೃತಾವಿಹ ।
ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ।
ಭಗವಾನ್ ಬ್ರಹ್ಮ ಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯ ಮನೀಷಯಾ ।
ತದ್ಧಿ ಹ್ಯಪಶ್ಯತ್ ಕೂಟಸ್ಥೇ ರತಿರಾತ್ಮನ್ ಯತೋ ಭವೇತ್ ।
(ಭಾ.೨.೨.೩೬,೩೭)

'ಭಗವಾನ್ ವಾಸುದೇವನಲ್ಲಿ ಭಕ್ತಿ ಉಂಟುಮಾಡುವ ಈ ಭಾಗವತಕ್ಕಿಂತ ಬೇರೆ ಸುಲಭ ಮೋಕ್ಷ ಮಾರ್ಗವಿಲ್ಲ'.

ಭಗವಾನ್ ವ್ಯಾಸರು ಇದನ್ನು ಬರೆದರು. ಅದರಲ್ಲಿಯೂ ಲೀಲೆಯಿಂದ ವೇದಗಳನ್ನು ಮೂರು ಬಾರಿ ಆಲೋಚನೆ ಮಾಡಿ ಬರೆದರು.

ಭಾಗವತ ಧರ್ಮಾನುಷ್ಠಾನವು ಅಕ್ಷಯ ಫಲ ಪ್ರದವೆಂಬುದು ಕಾಲತ್ರಯದಲ್ಲಿಯೂ ಅಬಾಧಿತವೆಂದು ಸೂಚಿಸುವುದಕ್ಕೆ ಶ್ರೀವ್ಯಾಸರು ವೇದಗಳನ್ನು ತಾನು ಮೂರು ಬಾರಿ ಆಲೋಚಿಸಿ ಭಾಗವತವನ್ನು ರಚಿಸಿದರೆಂದು ಶುಕಮುನಿ ಹೇಳುತ್ತಾರೆ.

ಇನ್ನೊಂದು ಕಾರಣ–ಭಾಗವತಧರ್ಮಾನುಷ್ಠಾನ ಮಾಡುವವರು ಸ್ಥಾವರ ಜಂಗಮಗಳೊಳಗಿರುವ ಹರಿಯನ್ನು ನಮ್ಮ ಈ ಧರ್ಮಾನುಷ್ಠಾನದಿಂದ ಅವನು ಪ್ರೀತನಾಗಲೆಂದು, ಇದು ಅವನ ಪೂಜೆಯಾಗಲೆಂದು ಅನುಸಂಧಾನ ಮಾಡುತ್ತಾರೆ. ಇಂಥ ಭಗವಂತನ ಪೂಜೆ ಎಂದೂ ನಿಷ್ಫಲವಾಗಲಿ ನಶ್ವರ ಫಲಪ್ರದವಾಗಲಿ ಆಗದು.

ಹೀಗೆ ಭಗವಂತನ ಪೂಜಾರೂಪವಾಗಿ ಭಾಗವತಧರ್ಮವನ್ನು ನಡೆಸ ಬೇಕೆಂದು ಹೇಳುವ ಭಾಗವತರಚನೆಯಿಂದ ಭಗವಂತ ತಾನು ಕೃತಕೃತ್ಯ ನಾದೆನೆಂದು ತೃಪ್ತಿಪಟ್ಟಿದ್ದು ಯುಕ್ತವೆ ಆಗಿದೆ.

**ಹರಿಪೂಜಾರೂಪವಾಗಿ ನಡೆಸುವ ಧರ್ಮವೆ ಭಾಗವತಧರ್ಮವೆಂದು ಇನ್ನೊಂದು ಲಕ್ಷಣವನ್ನು ಈಗ ಸೂಚಸಿದಂತಾಯಿತು.**

ಧರ್ಮಂ ತು ಸಾಕ್ಷಾದ್‌ಭಗವತ್ ಪ್ರಣೀತಂ (ಶ್ಲೋ.೨೩೯) ಎಂದು ಮೊದಲನೆ ಲಕ್ಷಣ. ಮೋಕ್ಷಸಾಧನೆಗಾಗಿ ಭಗವಂತ ಹೇಳಿದ್ದೆಂಬ ಭಾಗವತ ಧರ್ಮದ ಈ ಪ್ರಧಾನಲಕ್ಷಣವನ್ನು ಹೇಳಿದ ಬಳಿಕ ಸ್ವಭಾವತಃ ಬಂಧಕ ವಾಗಿರುವ ಕರ್ಮ ಹೇಗೆ ಮೋಚಕವಾದೀತೆಂಬ ಪ್ರಶ್ನೆ ಬಂದರೆ ಒಂದು ವಸ್ತು ಮೊದಲು ಅಶುದ್ಧವಾಗಿದ್ದಾಗ ಉಂಡರೆ ರೋಗಕರವಾದರೂ ಅದೇ ವಸ್ತುವನ್ನು ಶುದ್ಧೀಕರಿಸಿ ಔಷಧವಾಗಿ ಮಾಡಿದಾಗ ರೋಗಹರವಾಗುವಂತೆ ಬಂಧಕವಾದ ಕರ್ಮವನ್ನೆ ಶುದ್ಧೀಕರಿಸಿ ಬಂಧಕವಾಗದಂತೆ ಮಾಡಿ ಭಗವಂತ ಭಕ್ತರಿಗೆ ಉಪದೇಶಿಸಿದ್ದಾನೆ. 'ನನಗೆ ಸುಖವೇ ಇರಲಿ, ದುಃಖವು ಬೇಡ' ಎಂದು ಎರಡು

ಅಂಶಗಳಿಂದ ಕೂಡಿದ ಮೋಕ್ಷ ಎಲ್ಲರಿಗೂ ಬೇಕು. ಆದರೆ ಬಂಧಕವಾದ ಕರ್ಮವನ್ನೆ ಎಲ್ಲರೂ ಮಾಡುತ್ತಿದ್ದಾರೆ. ಶರೀರಿಗಳು ಕರ್ಮ ಮಾಡುತ್ತಲೆ ಇರುವ ಸ್ವಭಾವದವರು. ಕರ್ಮ ಮಾಡದೆ ಒಂದು ಕ್ಷಣವೂ ಇರಲಾರರು. ಆ ಕರ್ಮ ಸ್ವಭಾವತಃ ಬಂಧಕವೆ ಇರುತ್ತದೆ. ಈ ಉಭಯಸಂಕಟದಲ್ಲಿ ಸಿಲುಕಿದ ಸಜ್ಜನರ ಮೇಲಿನ ಕರುಣೆಯಿಂದ ಭಗವಂತನು; ಕಾಮ್ಯಕರ್ಮವನ್ನು ಅದರಲ್ಲಿರುವ ಫಲಕಾಮನೆ ಮತ್ತು ಕರ್ತೃತ್ವಾಭಿಮಾನರೂಪವಾದ ದೋಷವನ್ನು ದೂರಮಾಡಿ ಕೊಂಡು ಕೇವಲ ಭಗವತ್‌ಪ್ರೀತಿಗಾಗಿ ಮಾಡಿದರೆ, ಅದು ಬಂಧಕವಾಗದು, ಮೋಚಕವೆ ಆಗುವುದೆಂದು ಉಪದೇಶ ಮಾಡಿರುವನು. ಬಂಧಕವಾದ ಕಾಮ್ಯಕರ್ಮವನ್ನು ಭಾಗವತಧರ್ಮವಾಗಿ ಮೋಚಕವಾಗುವಂತೆ ಸಂಸ್ಕರಿಸಿರು ವನು. ಎಲ್ಲರೂ ಬಯಸುವ ಮೋಕ್ಷವು ಸ್ವರೂಪಾನಂದ ವ್ಯಕ್ತವಾಗುವುದು. ಮತ್ತು ಬಾಹ್ಯದುಃಖ ದೂರವಾಗುವುದು ಎಂದು ಎರಡಂಶಗಳಿಂದ ಕೂಡಿರು ತ್ತದೆ. ಅವುಗಳಲ್ಲಿ ದುಃಖನಿವೃತ್ತಿಯೆಂಬ ಎರಡನೇ ಅಂಶಕ್ಕೆ ಕಾರಣವಾಗುವಂತೆ ಕರ್ಮದಲ್ಲಿ ಕರ್ತೃತ್ವಾಭಿಮಾನ ಐಹಿಕಫಲಕಾಮನೆ ಗಳೆಂಬ ದೋಷಗಳ ಪರಿಮಾರ್ಜನೆ ಮಾಡಿಕೊಂಡು ಭಗವತ್ ಪ್ರೀತಿಗಾಗಿ ಕರ್ಮ ಮಾಡುವುದೇ ಭಾಗವತಧರ್ಮ ಎನ್ನುವುದು ಎರಡನೆ ಲಕ್ಷಣ.

ರಾಜನು ತನ್ನ ಅರಮನೆಯಲ್ಲಿ ಸೊತ್ತನ್ನು ಕದ್ದ ಕಳ್ಳನನ್ನು ಹಿಡಿದು ಕಾರಾಗೃಹದಲ್ಲಿ ಬಂಧಿಸಿಟ್ಟು ಬೆತ್ತದಿಂದ ಹೊಡೆಸುತ್ತಾನೆ. ಕಳ್ಳ ತಾನು ಕದ್ದ ಮಾಲನ್ನು ಹಿಂದಿರುಗಿಸಿ ಕೊಡುವವರೆಗೂ ಹಾಗೇ ಹಿಂಸಿಸುತ್ತಾನೆ. ಹಾಗೇ ಹರಿಯೂ ತನ್ನ ಸ್ವತಂತ್ರಕರ್ತೃತ್ವವನ್ನು ಕದ್ದು ಕಳ್ಳರೆನಿಸುವ ಜೀವರನ್ನು ಸಂಸಾರದಲ್ಲಿ ಬಂಧಿಸಿಟ್ಟು ತಾಪತ್ರಯಗಳಿಂದ ಹಿಂಸಿಸುತ್ತಾನೆ. 'ಹರಿ ನೀನೇ ಸ್ವತಂತ್ರಕರ್ತ!' ಎಂದು ತಿಳಿದು ಜೀವನು ಹರಿಯ ಸ್ವತಂತ್ರ ಕರ್ತೃತ್ವವನ್ನು ಹರಿಗೇ ಹಿಂದಿರುಗಿಸುವವರೆಗೂ ಅವನಿಗೆ ಸಂಸಾರದ ತಾಪತ್ರಯಗಳಿಂದಾಗುವ ಹಿಂಸೆ ತಪ್ಪದು. 'ತಾನೆ ಸ್ವತಂತ್ರಕರ್ತ' ಎನ್ನುವ ಈ ಭ್ರಾಂತಿಯನ್ನು ದೂರ ಮಾಡಿಕೊಂಡು ಹರಿಯ ಸ್ವಾತಂತ್ರ್ಯಗುಣವನ್ನು ಹರಿಗೇ ಹಿಂದಿರುಗಿಸಿದರೆ ಹರಿ ಅವನನ್ನು ಪೀಡಿಸುವುದಿಲ್ಲ. ಆದರಿಂದ ಕರ್ತೃತ್ವಭ್ರಮೆಯನ್ನು ಬಿಟ್ಟು ಮಾಡುವ ಕರ್ಮದಿಂದ ದುಃಖ ನಿವೃತ್ತಿಯಾಗುವುದು.

ಹೀಗೆ ಮೋಕ್ಷದಲ್ಲಿರುವ ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗಳೆಂಬ ಎರಡು ದಳಗಳಲ್ಲಿ ಅನಿಷ್ಟನಿವೃತ್ತಿಯೆಂಬ ಎರಡನೆ ದಳಕ್ಕೆ ಭಾಗವತಧರ್ಮ ಕಾರಣವಾಗುತ್ತದೆ. ಆದರೆ ಇಷ್ಟ ಪ್ರಾಪ್ತಿ ಎಂಬ ಮೊದಲನೆ ದಳಕ್ಕೆ ಭಾಗವತ ಧರ್ಮವು ಹೇಗೆ ಕಾರಣವಾಗುತ್ತದೆ ಎಂಬ ಪ್ರಶ್ನೆ ಬರುತ್ತದೆ. ಕಳ್ಳನು ಕದ್ದ ಮಾಲನ್ನು ಹಿಂದಿರುಗಿಸಿದರೆ ರಾಜನು ಅವನಿಗೆ ಸಮ್ಮಾನ ಮಾಡುವುದಿಲ್ಲ ತಾನೆ? ಕೇವಲ ದಯೆಯಿಂದ 'ಹೋಗು ಎಲ್ಲಿಯಾದರೂ ಬದುಕಿಕೋ' ಎಂದು ಬಿಟ್ಟುಬಿಡುತ್ತಾನಷ್ಟೆ!

ಒಂದುವೇಳೆ ಕಳ್ಳನು ಪಶ್ಚಾತ್ತಾಪಪಟ್ಟು ಬಲು ಆದರದಿಂದ ರಾಜನ ಸೇವೆ ಮಾಡಿದರೆ ರಾಜನು ಸಂತೋಷಪಡುತ್ತಾನೆ! ಅವನಿಗೆ ತಕ್ಕ ಸಮ್ಮಾನ ಮಾಡು ತ್ತಾನೆ! ಹಾಗೇ ಕರ್ತೃತ್ವಾಭಿಮಾನವನ್ನು ಬಿಟ್ಟು ಜೀವನು ಹರಿಪ್ರೀತಿಯಾಗಲೆಂದು ಬಲು ಭಕ್ತ್ಯಾದರಗಳಿಂದ ಕರ್ಮ ಮಾಡಿದರೆ ಹರಿ ಸುಪ್ರೀತನಾಗಿ ಮೋಕ್ಷಸುಖ ನೀಡುತ್ತಾನೆ.

**ಹೀಗೆ 'ಹರಿಪೂಜಾ ಎಂಬ ಅನುಸಂಧಾನದಿಂದ ಮಾಡುವ ಕರ್ಮವು ಭಾಗವತಧರ್ಮ' ಎಂಬುದು ಮೂರನೆ ಲಕ್ಷಣ.**

❖❖❖

**—೨೪೩—**

## ಭಾಗವತಧರ್ಮದ ನಾಲ್ಕನೆ ಲಕ್ಷಣ

**ಯತ್ ಪಾದ ಪಂಕಜರಜಃ ಶಿರಸಾ ಬಿಭರ್ತಿ**
**ಶ್ರೀರಬ್ಜಜಶ್ಚ ಗಿರಿಶಃ ಸಹ ಲೋಕಪಾಲೈಃ ।**
**ಲೀಲಾತನೂಃ ಸ್ವಕೃತಸೇತುಪರೀಪ್ಸಯಾ ಯಃ**
**ಕಾಲೇ ದಧತ್ ಸ ಭಗವಾನ್ ಸ್ವಕೃತೇನ ತುಷ್ಯೇತ್ ॥**

(ಭಾ.೧೦.೬೨.೪೨)

**ಭಗವತಾ ಭವಾಪವರ್ಗಾಯ ಪ್ರಣೀತತ್ವಂ ಭಾಗವತಧರ್ಮಸ್ಯ ಪ್ರಧಾನಲಕ್ಷಣಮಭಿಧಾಯ ಕಥಂ ಬಂಧಕಸ್ವಭಾವಸ್ಯ ಕರ್ಮಣಃ ಅಪವರ್ಗಹೇತುತೇತ್ಯಾಶಂಕಾಯಾಂ ಯಥಾಹಿ ಯದೇವ ದ್ರವ್ಯಂ ಪಾರ್ಥಿವಂ ಅಶೋಧಿತಂ ಭುಕ್ತಂ ರೋಗದಾಯಕಂ ತದೇವ ಸಂಶೋಧ್ಯ ಔಷಧೀಕೃತಂ**

ತದ್ರೋಗಮೇವ ಪರಿಹರತಿ ತಥೈವ ಬಂಧಕಸ್ವಭಾವಮಪಿ ಕರ್ಮ ಕೇನಚಿತ್ಸಂಸ್ಕೃತಂ ಅಪವರ್ಗದಂ ಭವೇದೇವ । ಸ ಚಾಪವರ್ಗಃ ಸುಖಮೇವ ಮೇ ಸ್ಯಾತ್ ದುಃಖಂ ಮನಾಗಪಿ ಮಾ ಭೂದಿತಿ ಸರ್ವೈರಪ್ಯಪೇಕ್ಷ್ಯತೇ । ಕ್ರಿಯತೇ ಚ ಬಂಧಕಸ್ವಭಾವಮೇವ ಕರ್ಮ ಕ್ರಿಯಾಸ್ವಭಾವೈಃ ದೇಹಿಮಾತ್ರೈಃ ವಿನಾ ಕರ್ಮಭಿಃ ಕ್ಷಣಮಾತ್ರಮವಸ್ಥಾತುಂ ಅಶಕ್ನುವದ್ಭಿಃ। ತದೇತತ್ ಸಂಕಟಮಭಿವೀಕ್ಷ್ಯ ಜಾತಕರುಣೋ ಭಗವಾಂಸ್ತದೇವ ಕರ್ಮ, ಚಿಕಿತ್ಸಿತವಾನ್ । ತದೇವ ಹಿ ಕರ್ಮ ಭಾಗವತಧರ್ಮ ಇತ್ಯಭಿಧೀಯತೇ। ಸ ಚ ಸರ್ವಾಪೇಕ್ಷಿತಮೋಕ್ಷೋ ದ್ವಿದಲಃ। ತತ್ರ ದ್ವಿತೀಯದಲಹೇತುತಾನೇನ ಸಂಸ್ಕಾರೇಣ ಸಂಸ್ಕೃತಸ್ಯ ಭವತಿ ಇತ್ಯಾಶಯೇನ ತಚ್ಛಂಕಾಪರಿಹಾರಾಯ ಕರ್ತೃತ್ವಾದ್ಯಭಿಮಾನತ್ಯಾಗಪೂರ್ವಕಂ ಕ್ರಿಯಮಾಣೋ ಭಾಗವತೋ ಧರ್ಮ ಇತಿ ದ್ವಿತೀಯಂ ಲಕ್ಷಣಂ ನಿಗದ್ಯ। ಸ್ಯಾದೇತತ್। ಯಥಾ ಹಿ ರಾಜಾ ಸ್ವದ್ರವ್ಯಾಪಹಾರಕಂ ಚೋರಂ ನಿಗಡಾದಿನಾ ನಿಬಧ್ಯ ಪ್ರತಿದಿನಂ ಕಶಾವೇತ್ರಾದಿಭಿಃ ತಾಡಯತಿ ಯಾವದ್‌ದ್ರವ್ಯತ್ಯಾಗಂ। ತಥೈವ ಶ್ರೀಹರಿರಪಿ ಸ್ವಸ್ವಾತಂತ್ರ್ಯಾಪಹಾರಿಣಂ ಯಾವತ್ತತ್ತ್ಯಾಗಂ ಸಂಸಾರಕಾರಾಗೃಹೇ ನಿಬಧ್ಯ ದುಃಖಯೇದೇವ। ತ್ಯಾಗೇ ತು ಪುನಸ್ತಂ ಚೋರಮಿವ ಕಿಮಿತಿ ದುಃಖಯೇದಿತಿ ಕರ್ತೃತ್ವಾಭಿಮಾನತ್ಯಾಗ ಪೂರ್ವಕಂ ಕ್ರಿಯಮಾಣೇನ ಕರ್ಮಣಾ ದುಃಖನಿವೃತ್ತಿ ರ್ಭವೇದಿತಿ ದ್ವಿತೀಯದಲಹೇತುತೇತಿ। ಪ್ರಥಮದಲ ಹೇತುತಾ ತು ಕಥಂ ಭವೇತ್ । ನ ಹಿ ರಾಜ್ಞಾ ಚೋರಃ ಅಪಹೃತಂ ದ್ರವ್ಯಂ ದತ್ತವಾನಿತ್ಯುಪಕ್ರಿಯತೇ। ಕಿಂನಾಮ ದಯಾಲುನಾ ಯತ್ರ ಕ್ವ ವಾ ಗಮ್ಯತಾಮಿತಿ ತ್ಯಜ್ಯತ ಏವ ಕೇವಲಮಿತ್ಯಾಶಂಕಾಯಾಂ ಯಥಾ ಸ ಏವ ರಾಜಾ ತಸ್ಮಾ ಏವ ಚೋರಾಯ ಪಶ್ಚಾತ್ತಾಪತಪ್ತಾಯ ವಿಶೇಷತಃ ಸ್ವಸೇವಾಂ ಕುರ್ವತೇ ಪ್ರಸನ್ನೋಽಪೇಕ್ಷಿತಂ ಸರ್ವಮಪಿ ದದಾತಿ, ತಥಾ ಶ್ರೀಹರಿರಪಿ ಇತ್ಯಾಶಯೇನ ತಚ್ಛಂಕಾಪರಿಹಾರಾಯ ಅನೇನ ಸಂಸ್ಕಾರೇಣ ಸಂಸ್ಕೃತಸ್ಯ ಪ್ರಥಮದಲಹೇತುತಾಪಿ ಭವೇದೇವೇತಿ ಭಾವೇನ ಹರಿಪೂಜಾತ್ವೇನ ಅನುಸಂಧಾಯ ಕ್ರಿಯಮಾಣೋ ಭಾಗವತೋ ಧರ್ಮ ಇತಿ ತೃತೀಯಲಕ್ಷಣಮಭಿಧಾಯ, ಯಥಾನೇನ ಸಂಸ್ಕಾರೇಣ ಸಂಯುತಂ ಪ್ರಥಮದಲಹೇತುತಾಮಶ್ನುತೇ, ತಥಾ ಏತೇನಾಪೀತಿ ಭಾವೇನ ಚತುರ್ಥಂ ಲಕ್ಷಣಮಾಹ ॥ ಯತ್ಪಾದೇತಿ ॥ ಶ್ರೀ ಮಹಾಲಕ್ಷ್ಮೀಃ ಯತ್ಪಾದ ಪಂಕಜರಜಃ ಶಿರಸಾ ಬಿಭರ್ತಿ। ತೇನ ನಿತ್ಯಮುಕ್ತಾ ಆಸೀದಿತ್ಯಭಿಪ್ರಾಯಃ। ಅಬ್ಜಜೋ ಬ್ರಹ್ಮಾಪಿ ಬಿಭರ್ತಿ। ಸ ತೇನೈವ ಜೀವನ್ಮುಕ್ತೋಽಭೂದಿತಿ ಹೃದಯಂ। ಗಿರಿಶಶ್ಚ ಸಹ ಲೋಕಪಾಲೈಃ ಇಂದ್ರಾದಿಭಿಃ ಸಹ ಬಿಭರ್ತಿ।

**ತೇನೈವ ನಿಶ್ಚಿತತಾರತಮ್ಯೋಪೇತಮೋಕ್ಷ ಇತ್ಯಾಕೂತಂ । ಈದೃಶಸ್ಯ ಚ ಸರ್ವಥಾ ಪ್ರಾರಬ್ಧದೇಹಾಯೋಗ ಇತಿ ಭಾವೇನಾಹ ॥ ಯಶ್ಚೇತಿ ॥ ಯಃ ಲೀಲಯೈವ ಗೃಹೀತಾಃ ತನೂಃ ದಧತ್ ಆಸ್ತೇ । ಪ್ರಾರಬ್ಧಾಭಾವೇ ಕಿಮರ್ಥಂ ಬುದ್ಧಿಪೂರ್ವಕಂ ಶರೀರಾಣಿ ಧತ್ತ ಇತ್ಯತ ಉಕ್ತಂ ॥ ಸ್ವಕೃತೇತಿ ॥ ಸ್ವೇನ ಕೃತೋ ಯಃ ಸೇತುರ್ಮರ್ಯಾದಾ ಧರ್ಮಮಾರ್ಗಃ ತಸ್ಯ ರಿರಕ್ಷಯೇತಿ । ಕಿಂ ತಸ್ಯ ನಾಶಕಂ ಪ್ರಾಪ್ತಮಿತ್ಯತ ಉಕ್ತಂ ॥ ಕಾಲ ಇತಿ ॥ ಕಾಲೇ ತಸ್ಯ ಧರ್ಮಸ್ಯ ದುಷ್ಕರ್ಮಕಾರಿಭಿರ್ಘೋರಪ್ರಾಯೈ ರಾಜಭಿರ್ಗ್ಲಾನಿಕಾಲೇ । ತಥಾ ಅಧರ್ಮಸ್ಯ ಅಭಿವೃದ್ಧಿಕಾಲೇ ಇತಿ । ಸ ತಾದೃಶಾಃ ಸರ್ವೇಷಾಂ ಮುಕ್ತಿಪ್ರದೋ ಭಗವಾಂಶ್ಚ ಅನೇನೈವ ತುಷ್ಯತೀತ್ಯಾಶಯೇನಾಹ ॥ ಸ್ವಕೃತೇನ ತುಷ್ಯೇದಿತಿ ॥ ಅನೇನ ಹರಿಕರ್ತೃಕತಯಾ ಅನುಸಂಧಾಯ ಕ್ರಿಯಮಾಣೋ ಭಾಗವತೋ ಧರ್ಮ ಇತಿ ಚತುರ್ಥಂ ಲಕ್ಷಣಂ ಸೂಚಿತಂ ಭವತಿ । ಯಥಾಹುಃ—**

''ಏತತ್ಸಂಸೂಚಿತಂ ಬ್ರಹ್ಮನ್ ತಾಪ ತ್ರಯಚಿಕಿತ್ಸಿತಂ ।
ಯದೀಶ್ವರೇ ಭಗವತಿ ಕರ್ಮ ಬ್ರಹ್ಮಣಿ ಭಾವಿತಂ ॥

ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿಹೇತವಃ ।

ಸ ಏವಾತ್ಮವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ'' ಇತಿ ॥

❖❖❖

**ಕೋಸಲರಾಜ ನಗ್ನಜಿತನು ತನ್ನ ಮಗಳಾದ ನೀಲಾದೇವಿಯ ಸ್ವಯಂವರದಲ್ಲಿ ಶ್ರೀಕೃಷ್ಣನಿಗೆ ಹೇಳುತ್ತಾನೆ—'ನಿನ್ನ ಪಾದಕಮಲ ಧೂಳಿಯನ್ನು ಲಕ್ಷ್ಮಿ ಬ್ರಹ್ಮ ರುದ್ರರೂ ಲೋಕಪಾಲಕರೂ ಶಿರದಲ್ಲಿ ಧರಿಸುತ್ತ ಸ್ವಯೋಗ್ಯ ತಾರತಮ್ಯೋಪೇತ ಮುಕ್ತಿಗೆ ಭಾಗಿಗಳಾಗುವರು. ನೀನು ಪ್ರಾರಬ್ಧವಿಲ್ಲದವನಾದರೂ ತಾನೇ ಲೋಕಕ್ಕೆ ಹಾಕಿಕೊಟ್ಟ ಧರ್ಮ ನಿಯಮಗಳ ಪಾಲನೆಗಾಗಿ ಅಧರ್ಮ ಹೆಚ್ಚಾದಾಗಲೆಲ್ಲ ಲೀಲೆಯಿಂದ ಶರೀರ ಧರಿಸುವೆ, ಮತ್ತು ನಮ್ಮೊಳಗಿದ್ದು ಲೀಲೆಯಿಂದ ನೀನೇ ನಿನ್ನ ಪೂಜೆ ಮಾಡಿಕೊಳ್ಳುವೆ. ನಮ್ಮಿಂದಲೂ ಮಾಡಿಸುವೆ. ನೀನೆ ಮಾಡುವ ಪೂಜೆಯಿಂದ ನೀನು ಸಂತುಷ್ಟನಾಗಬೇಕು' ಎಂದು.**

ಮೋಕ್ಷದಲ್ಲಿ ಹರಿಪ್ರೀತಿ ಲಭ್ಯವಾದ ಇಷ್ಟಪ್ರಾಪ್ತಿ ಎಂಬ ಪ್ರಥಮ ದಳಕ್ಕೆ 'ಹರಿಪೂಜೆ ಎಂಬ ಅನುಸಂಧಾನದಿಂದ ಕರ್ಮ ಮಾಡುವುದೆಂ'ಬ ಮೂರನೆ

ಲಕ್ಷಣವು ಕಾರಣ ವಾಗುವಂತೆ, 'ಆ ಹರಿಪೂಜೆಗೆ ಹರಿಯೇ ಮುಖ್ಯಕರ್ತನೆಂಬ ಅನುಸಂಧಾನ ದಿಂದ ಕರ್ಮ ಮಾಡುವುದೆಂಬ ನಾಲ್ಕನೆ ಲಕ್ಷಣವೂ ಕಾರಣವಾಗುತ್ತದೆ ಎಂದು ಇಲ್ಲಿ ಹೇಳಿದಂತಾಯಿತು. ಕಳ್ಳನು ಕಳವು ಮಾಡುವುದನ್ನು ಬಿಟ್ಟು ರಾಜಸೇವೆ ಮಾಡಿದರೆ ದಯಾಳುವಾದ ರಾಜ ಅನುಗ್ರಹ ಮಾಡುವಂತೆ ಹರಿಯ ಸ್ವಾತಂತ್ರ್ಯವನ್ನು ಅಪಹರಿಸಿ ನಾನೇ ಸ್ವತಂತ್ರನೆಂಬುವನು. ಅದನ್ನು ಬಿಟ್ಟು ಕರ್ಮಮಾಡಿದರೆ ಹರಿ ಅನುಗ್ರಹಿಸುತ್ತಾನೆ.

ಹೀಗಾಗಿ ಅನಿಷ್ಟ ನಿವೃತ್ತಿ ಎಂಬ ಮೋಕ್ಷದ ಎರಡನೆ ದಳಕ್ಕೆ ಕರ್ಮವು ಕಾರಣವಾಗುವುದು. ಇದು ಬಂಧಕಕರ್ಮಕ್ಕೆ ಮಾಡಬಹುದಾದ ಶುದ್ಧೀಕರಣ. ಹೀಗೆ ಕರ್ತೃತ್ವಾದಿ ಅಭಿಮಾನತ್ಯಾಗಪೂರ್ವಕ ಮಾಡುವ ಕರ್ಮ' ಎಂಬುದು ಭಾಗವತಧರ್ಮದ ಎರಡನೆ ಲಕ್ಷಣ.

ಬಂಧಕವಾದ ಕರ್ಮವನ್ನು ಹೀಗೆ ತಕ್ಕ ಸಂಸ್ಕಾರದಿಂದ ಶುದ್ಧೀಕರಿಸಿದರೆ ಅದು ಮೋಚಕವೂ ಆಗುವುದು ಎಂಬುದು ನಾರದರ ಮಾತಿನಿಂದಲೂ ಸ್ಪಷ್ಟವಾಗುವುದು ಅವರು ಶ್ರೀವ್ಯಾಸರಲ್ಲಿ ಹೀಗೆ ಹೇಳಿಕೊಳ್ಳುವರು—

> ಏತತ್ ಸಂಸೂಚಿತಂ ಬ್ರಹ್ಮನ್ ತಾಪತ್ರಯ ಚಿಕಿತ್ಸಿತಂ ।
> ಯದೀಶ್ವರೇ ಭಗವತಿ ಕರ್ಮ ಬ್ರಹ್ಮಣಿ ಭಾವಿತಂ ॥
> ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿ ಹೇತವಃ ।
> ತ ಏವಾತ್ಮ ವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ ॥
>
> (ಭಾ.೧.೫.೩೨,೩೪)

'ಭಗವಂತನ ಸ್ವತಂತ್ರ ಕರ್ತೃತ್ವದ ಅರಿವಿನೊಂದಿಗೆ ನಾವು ಮಾಡುವ ಕರ್ಮಗಳನ್ನು ಭಗವಂತನಿಗೆ ಅರ್ಪಿಸಿದರೆ ಅವು ಭಾಗವತಧರ್ಮವೆನಿಸಿ ಸಂಸಾರ ತಾಪತ್ರಯವನ್ನು ಪರಿಹರಿಸುವ ದಿವ್ಯಔಷಧವಾಗಬಲ್ಲುವು ಎಂದು ಮುನಿಗಳು ನನಗೆ, ನಾನು ದಾಸೀಪುತ್ರನಾಗಿದ್ದಾಗ, ಉಪದೇಶಿಸಿದರು ಎನ್ನುತ್ತಾರೆ ನಾರದರು.

ರೋಗಕಾರಕ ಪದಾರ್ಥವನ್ನೇ ಔಷಧವಾಗಿ ಸಂಸ್ಕರಿಸಿದರೆ ಅದು ರೋಗ ಪರಿಹಾರಕವಾಗುವಂತೆ ನಿಷ್ಕಾಮನೆಯಿಂದ ಭಗವಂತನ ಪೂಜಾರೂಪವಾಗಿ

ಕರ್ಮ ಮಾಡಿದರೆ ಬಂಧಕವಾದ ಕರ್ಮವೇ 'ಆತ್ಮವಿನಾಶ'ಕ್ಕೆ ಅಂದರೆ ಲಿಂಗಶರೀರನಾಶಕ್ಕೆ ಕಾರಣವಾಗುತ್ತದೆ' ಎನ್ನುತ್ತಾರೆ, ನಾರದರು.

ಇಲ್ಲಿ ನಾರದರು ನುಡಿದ ಮೊದಲನೆ ಶ್ಲೋಕವು ಭಾಗವತ ಧರ್ಮದ ನಾಲ್ಕನೇ ಲಕ್ಷಣವನ್ನೂ ಎರಡನೆ ಶ್ಲೋಕವು ಮೂರನೆ ಲಕ್ಷಣವನ್ನೂ ಹೇಳುತ್ತಿದೆ.

❖❖❖

ಧರ್ಮಂ ತು ಸಾಕ್ಷಾದ್ ಭಗವತ್ ಪ್ರಣೀತಂ । (ಭಾ.೬.೩.೧೯)

ಯೇ ವೈ ಭಗವತಾ ಪ್ರೋಕ್ತಾಃ । (ಭಾ.೧೧.೨.೩೪)

ಧರ್ಮಾನ್ ಭಾಗವತಾನ್ ಬ್ರೂತ । (ಭಾ.೧೧.೨.೩೧)

ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್ । (ಭಾ.೧೧.೨.೨೩)

ಅಥ ಭಾಗವತಂ ಬ್ರೂತ ॥ (ಭಾ.೧೧.೨.೪))

ಏಷ ಭಾಗವತೋತ್ತಮಃ । (ಭಾ.೧೧.೨.೪೫)

ಎಂದು ಮುಂತಾಗಿ ಪರತತ್ವವನ್ನು ಹೇಳುವ 'ಭಗವತ್' ಶಬ್ದದಿಂದ ಭಗವಂತನನ್ನು ಭಾಗವತಧರ್ಮವನ್ನು ಭಗವದ್ಭಕ್ತರನ್ನು ಹೇಳುವಾಗ ಎಲ್ಲ ಕಡೆ 'ವಿಷ್ಣುವೇ ಭಗವಂತ' ಎನ್ನುವ ಆಗ್ರಹಕ್ಕೆ ಕಾರಣವಿಲ್ಲ'

—ಎಂದು ಪಾಷಂಡ ಮತದಿಂದ ಮತಿಗೆಟ್ಟ ಸಾಮಾನ್ಯ ಓದುಗರಿಗೆ ಹೀಗೆ ಶಂಕೆ ಬರಬಹುದು. ಅದಕ್ಕೆ 'ವಿಷ್ಣುವೇ ಭಗವಂತ' ಎಂದು ಭಾಗತವು ನಿಷ್ಕೃಷ್ಟವಾಗಿ ಹೇಳುತ್ತಿದೆ—

—೨೪೪—

**'ಭಗವಂತ'ನೆಂದರೆ ಯಾರು? ಶ್ರೀಹರಿ**

**ಅಥಾಪಿ ಯತ್ಪಾದ ನಖಾವಸೃಷ್ಟಂ**
**ಜಗದ್ ವಿರಿಂಚೋಪಹೃತಾರ್ಹಣಾಂಭಃ ।**
**ಸೇಶಂ ಪುನಾತ್ಯನ್ಯತಮೋ ಮುಕುಂದಾತ್**
**ಕೋ ನಾಮ ಲೋಕೇ ಭಗವತ್ಪದಾರ್ಥಃ ॥**

ನನು ಧರ್ಮಂ ತು ಸಾಕ್ಷಾದ್ ಭಗವದಿತಿ (೬।೩।೧೯) ''ಯೇ ವೈ ಭಗವತಾ ಪ್ರೋಕ್ತಾ'' ಇತಿ (೧೧।೨।೩೪) ''ಧರ್ಮಾನ್ ಭಾಗವತಾನಿ ''ತಿ (೧೧।೨।೩೧) - ''ತತ್ರ ಭಾಗವತಾನ್ ಧರ್ಮಾನಿ''ತಿ (೧೧।೩।೨೩) ''ಅಥ ಭಾಗವತಂ ಬ್ರೂತೇ'ತಿ ೧೧।೨।೪೪) ''ಏಷ ಭಾಗವತೋತ್ತಮ'' ಇತಿ ಚ (೧೧।೨।೪೫) ಪರವಸ್ತುವಿವಕ್ಷಯಾ ಭಗವಚ್ಛಬ್ದೋ ಭಗವತ್ಪ್ರಸಕ್ತೌ ಭಾಗವತಧರ್ಮಪ್ರಸಕ್ತೌ ಭಾಗವತಭಕ್ತಪ್ರಸಕ್ತೌ ಚ ತತ್ರ ತತ್ರ ಪ್ರಯುಕ್ತಃ। ಸ ಚ ಭವದಭಿಮತವಿಷ್ಣುಪರ ಏವೇತಿ ಕುತಃ, ಅನ್ಯಪರ ಏವ ಕಿಂ ನ ಸ್ಯಾದಿತಿ ಪಾಖಂಡವಿಭಿನ್ನಚೇತಸಸ್ತಟಸ್ಥಸ್ಯ ಶಂಕಾಂ ಪರಿಹರ್ತುಮಾಹ॥ **ಅಥಾಪೀತಿ॥** ಸ್ವಾರ್ಥೇ ತಮಪ್। ಮುಕುಂದಾದನ್ಯಃ ಕಃ ಪುರುಷಃ ಭಗವತ್ಪದಸ್ಯಾರ್ಥಃ ಭವೇತ್। ನ ಕೋಽಪಿ। ಕುತ ಇತಿ ಚೇತ್। ಪ್ರಸಿದ್ಧೋ ಹಿ ಪದಾರ್ಥತಯಾ ಸಂಭಾವ್ಯತೇ। ಯಥಾ ಪಂಕಜಪದಸ್ಯ ಪದ್ಮಂ। ನ ಚ ಮುಕುಂದಾದನ್ಯಸ್ತಥಾ। ಮುಕುಂದಸ್ತು ಪ್ರಸಿದ್ಧತರಃ। ಗೀತಾದೌ ''ಭಗವಾನುವಾಚೇ''ತ್ಯಾದೌ ತಸ್ಯೈವ ಪ್ರತೀತೇಃ। ಅನ್ಯಥಾ ಪ್ರಸಿದ್ಧಿಬಾಧಾದಿತ್ಯಾಶಯೇನ ಪ್ರಸಿದ್ಧ್ಯರ್ಥಕ ನಾಮಗ್ರಹಣಂ। ಅತ ಏವ ಲೋಕ ಇತ್ಯುಕ್ತಂ। ಅಸ್ತು ರೂಢ್ಯಾ ಮುಕುಂದೋ ಭಗವತ್ಪದಾರ್ಥಃ। ಯೋಗ ವೃತ್ತ್ಯಾಶ್ರಯಣೇ ತು ಐಶ್ವರ್ಯಾದಿ ಗುಣವಾನೇವಾರ್ಥ ಇತಿ ಲಭ್ಯತೇ। ಸ ಚ ಮುಕುಂದ ಏವೇತಿ ಕುತಃ। ನ ಚ ರೂಢಾರ್ಥತ್ಯಾಗೇ ಬಾಧಕಾಭಾವಃ। ಬಾಧಕಕಲ್ಪನಾಯಾಃ ಸರ್ವತ್ರ ಸುಲಭತ್ವಾದಿತ್ಯತೋಽಂಗೀಕೃತ್ಯಾಪಿ ಬಾಧಕಸಮಾಧಾನಮಾಹ। **ಮುಕುಂದಾದಿತಿ॥** ಐಶ್ವರ್ಯಾದಿಗುಣವಾನ್ಹಿ ಭಗವತ್ಪದಾರ್ಥತಯಾ ಭವತಾ ಅಭ್ಯುಪಗಮ್ಯತೇ। ತೇ ಚ ಗುಣಾಃ ಯತ್ರ ಮುಖ್ಯತಃ ಸಂತಿ। ತಸ್ಮಾದಿತರಂ ಪರಿತ್ಯಜ್ಯ ಸ ಏವ ಗ್ರಾಹ್ಯೋ ಭವೇತ್। ಯೇಷಾಂ ಚ ಪುನರ್ಮೋಕ್ಷದಾನೇ ನ ಸಾಮರ್ಥ್ಯಂ ತೇ ತು ಕಥಂ ಸಮಗ್ರೈಶ್ವರ್ಯಾದಿಮಂತೋ ಭವೇಯುಃ। ಅಯಂ ತು ಮೋಕ್ಷದಾತಾ ನ ಕಥಂ ಸಮಗ್ರೈಶ್ವರ್ಯವಾನಿತ್ಯತೋ ಯೋಗಾಶ್ರಯಣೇಽಪಿ ಅಯಮೇವ ಗ್ರಾಹ್ಯ ಇತಿ। ತದೇತದಭಿಪ್ರೇತ್ಯೋಕ್ತಂ। ಮುಕುಂದಾದಿತಿ। ಮುಕುಂದಾತ್ ಮೋಕ್ಷಸ್ಯ ದಾತುಃ। ಅನ್ಯತಮಃ। ಕೋ ನಾಮ। ಲೋಕೇ ಭಗವತ್ಪದಾರ್ಥ ಇತಿ। ಅಥಾಪಿ ಸ್ಯಾತ್। ಅನೇಕಾರ್ಥಂ ಹಿ ಭಗವತ್ಪದಂ। ಅತ್ರ ತು ಪೂಜ್ಯ ಏವಾರ್ಥೋ ವಿವಕ್ಷ್ಯತೇ। ಪೂಜ್ಯೇಽಪಿ ಬಹುಲಂ ತತ್ಪದಪ್ರಯೋಗದರ್ಶನಾತ್। **ತಥಾ ಚಾಹ ಹಲಾಯುಧಃ—** ''ಭಗವಾನಿತಿ ಶಬ್ದೋ ವೃದ್ಧೈಃ ಪ್ರಯುಜ್ಯತೇ ಪೂಜ್ಯ'' ಇತಿ। ಪೂಜ್ಯಸ್ತು ಮುಕುಂದ ಏವೇತಿ। ಕುತಃ। ತತೋಽನ್ಯಸ್ಯಾಪಿ ತತ್ಸಂಭವಾದಿತಿ। ಅತ್ರ

ಪ್ರಷ್ಟವ್ಯಂಸೋಽನ್ಯಃ ಕ ಇತಿ । ಹರಿಹರವಿರಿಂಚಾಸ್ತಾವಲ್ಲೋಕೇ ಪೂಜ್ಯಾ ಇತಿ ಪ್ರಸಿದ್ಧಂ । ತತ್ರ ಪೂಜ್ಯತ್ವಾರ್ಥಕಭಗವತ್ಪದಾರ್ಥವಿಚಾರೇತ್ರಯೋಽಪಿ ಸಂಭಾವಿತಾಃ ಪ್ರಾಪ್ನುವಂತ್ಯೇವ । ಹರಿರೇವೇತಿ ನಿರ್ಬಂಧಂ ಕುರ್ವಾಣಂ ಪ್ರತಿ ತು ಉಚ್ಯತೇ । ಹರೋ ವಿರಿಂಚೋ ವಾ ಕಿಂ ನ ಸ್ಯಾದಿತಿ । ಏವಂ ವದಂತಂ ಪ್ರತ್ಯಾಹ । **ಅಥಾಪೀತಿ ॥** ಪೂಜ್ಯತ್ವಾರ್ಥಕತ್ವೇಽಪಿ ಮುಕುಂದಾದ್ಧರೇರನ್ಯತಮಃ ಕೋ ನಾಮ ಲೋಕೇ ಭಗವತ್ಪದಾರ್ಥ ಇತಿ । ಕುತಃ । ಯತಃ ಯತ್ಪಾದ ನ ಖಾವಸೃಷ್ಟಂ ನಿರ್ಗಲಿತಂ । ವಿರಿಂಚೇನೋಪಹೃತಂ ಪಾದಪ್ರಕ್ಷಾಲನೋದಕಂ । ಈಶೇನ ಹರೇಣ ಸಹಿತಂ ಜಗದೇವ ಪುನಾತಿ ತತ ಇತಿ । **ಇದಮುದಿತಂ ಭವತಿ**— ಸ್ಯಾದಿಯಂ ಸಂಭಾವನಾ ಯದಿ ತ್ರಯಾಣಾಮಪಿ ಸಾಮ್ಯಂ ಭವೇತ್ । ನ ಚೈತದಸ್ತಿ । ವಿರಿಂಚಸ್ಯ ಪೂಜಕತ್ವಾತ್ । ಹರಸ್ಯ ತು ಯತ್ಪಾದೋದಕ-ಪವಿತ್ರಿತಜನಸಂಘನಿವಿಷ್ಟತ್ವಾದಿತಿ । **ಯಥೋಕ್ತಂ ।**

''ಯಚ್ಛೌಚನಿಃಸೃತಸರಿತ್ಪ್ರವರೋದಕೇನ ।
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂದಿತಿ ॥

❖❖❖

**ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—'ಚತುರ್ಮುಖನು ಅಂದು ತ್ರಿವಿಕ್ರಮನ ಪಾದನಖವನ್ನು ತೊಳೆದ ನೀರೇ ಗಂಗೆಯಾಗಿ ಹರಿದು ರುದ್ರಾದಿ ಸಮಸ್ತಚೇತನರನ್ನು ಪಾವನಗೊಳಿಸುತ್ತಿದೆ ಎಂದಮೇಲೆ ಆ ಮುಕುಂದನೊಬ್ಬ ನಲ್ಲದೆ ಇನ್ನಾರು ಲೋಕದಲ್ಲಿ ಭಗವಂತನೆನಿಸಬಲ್ಲ?' ಎಂದು.**

'ಭಗವಾನ್' ಎಂದರೆ ಕೇವಲ 'ಪೂಜ್ಯ'ನೆಂದರ್ಥವಲ್ಲ.

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯಯಶಸಃ ಶ್ರಿಯಃ ।
ಜ್ಞಾನ ವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀಂಗನಾ ।

ಐಶ್ವರ್ಯ ಎಂದರೆ ಈಶ್ವರತ್ವ ಸ್ವಾತಂತ್ರ್ಯ. ಸಮಗ್ರವಾದ ಪೂರ್ಣವಾದ ಸ್ವಾತಂತ್ರ್ಯಾದಿ ಗುಣಗಳುಳ್ಳವನು ಭಗವಾನ್ ಎನಿಸುತ್ತಾನೆ. ಪೂರ್ಣತ್ವವು ಮುಖ್ಯವಾದುದೇ ವಿವಕ್ಷಿತವಾಗಿದೆ. ಔಪಚಾರಿಕವಲ್ಲ, ಆಪೇಕ್ಷಿಕವೂ ಅಲ್ಲ. ಆದರಿಂದ ಐಶ್ವರ್ಯಾದಿ ಆರು ಗುಣಗಳೂ ಪ್ರತಿಯೊಂದೂ ಪೂರ್ಣವಾಗಿ ಯಾರಲ್ಲಿರುವುವೋ ಅವನು 'ಭಗವಾನ್'. ಯಾರಿಗೆ ಮೋಕ್ಷದಾನ ಸಾಮರ್ಥ್ಯ ವಿಲ್ಲವೋ ಆವರು ಹೇಗೆ ಪೂರ್ಣ ಐಶ್ವರ್ಯಾದಿ ಗುಣಗಳುಳ್ಳವರೆನಿಸುವರು?

ವಿಷ್ಣುವು ಮೋಕ್ಷದಾಯಕನೆಂದಮೇಲೆ ಅವನು ಪೂರ್ಣ ಐಶ್ವರ್ಯಶಾಲಿ, ಅವನೆ ಭಗವಾನ್.

ಹೀಗೆ 'ಭಗವಾನ್' ಎಂಬ ಶಬ್ದವನ್ನು ಒಡೆದು ನೋಡಿದಾಗ 'ಮುಕುಂದ' ನಾದ ಅಂದರೆ ಮೋಕ್ಷದಾಯಕನಾದ ವಿಷ್ಣುವಿಗಿಂತ ಅನ್ಯರು ಯಾರು. ಭಗವಾನ್ ಎನಿಸುವರು? 'ಮುಕುಂ' ಮೋಕ್ಷವನ್ನು 'ದ' ಕೊಡುವವನು 'ಮುಕುಂದ' ತಾನೆ?

'ಹೆಚ್ಚಾಗಿ 'ಭಗವಾನ್' ಎಂದರೆ ಪೂಜ್ಯನೆಂದಿಷ್ಟೇ ಅರ್ಥ. ಈ ಅರ್ಥದಲ್ಲಿ 'ಭಗವಾನ್' ಎಂಬ ಶಬ್ದಪ್ರಯೋಗ ರೂಢಿಯಲ್ಲಿದೆ. ನಾವು ಇಲ್ಲಿ ಈ 'ಪೂಜ್ಯ'ನೆಂಬರ್ಥವನ್ನೇ ಇಟ್ಟುಕೊಳ್ಳುತ್ತೇವೆ. ಮತ್ತು

'ತತ್ರಭವಾನ್ ಭಗವಾನಿತಿ ಶಬ್ದೋ
ವೃದ್ಧೈಃ ಪ್ರಯುಜ್ಯತೇ ಪೂಜ್ಯೇ'

ಎಂದು ಹಲಾಯುಧ ಕೋಶವೂ ಹೇಳುತ್ತದೆ. ಪೂಜ್ಯನು ಇಲ್ಲಿ ಮುಕುಂದನೇ ಎಂದೇಕೆ ಹೇಳಬೇಕು? ರುದ್ರಾದಿಗಳೂ ಪೂಜ್ಯರೇ ತಾನೆ? ಪೂಜ್ಯರು ಲೋಕದಲ್ಲಿ ಹರಿ ಹರ ವಿರಿಂಚರು ಪ್ರಸಿದ್ಧರು. ಆದರಿಂದ 'ಇಲ್ಲಿ 'ಭಗವಾನ್' ಎಂದರೆ ವಿಷ್ಣುವೆ' ಎಂದು ಆಗ್ರಹಪಡುವವರಿಗೆ, ವಿಷ್ಣುವೆ ಏಕೆ? ಬ್ರಹ್ಮರುದ್ರರು ಏಕೆ ಅಲ್ಲ? ಎನ್ನುತ್ತೇನೆ'.

—ಹೀಗೆ ಹೇಳುವವರಿಗೆ ಭಾಗವತವು ಹೇಳುತ್ತದೆ—ಹರಿ ಹರ ವಿರಿಂಚರು ಸಮಾನರೇ ಆದರೆ ಮೂವರೂ ಭಗವಂತರೆ ಎನ್ನಬಹುದಿತ್ತು. ಆದರೆ ಅವರು ಸಮಾನರಲ್ಲ. ಬ್ರಹ್ಮದೇವರು ಹರಿಪೂಜೆ ಮಾಡುವವರು ಅವನ ಪಾದಪ್ರಕ್ಷಾಳನ ಮಾಡುವವರು, ರುದ್ರದೇವರು ಹರಿಯ ಪಾದತೀರ್ಥ ಸೇವನೆಯಿಂದ ಪವಿತ್ರರಾಗುವ ಚೇತನರಲ್ಲಿ ಒಬ್ಬರು. ಭಾಗವತವು ಇದನ್ನು ಸ್ಪಷ್ಟವಾಗಿ ಹೇಳುತ್ತದೆ—

'ಸೇಶಂ ಜಗತ್ ಪುನಾತಿ'

ರುದ್ರಾದಿ ಸಮಸ್ತಚೇತನರನ್ನು ಪಾವನಗೊಳಿಸುತ್ತಿದೆ'

ಎಂದು. ಇದನ್ನು ಇನ್ನೂ ಸ್ಪಷ್ಟವಾಗಿ ಭಾಗವತವೆ ಇನ್ನೊಂದು ಕಡೆ ಹೇಳುತ್ತದೆ—

ಯಚ್ಚೌಚ ನಿಃಸೃತ ಸರಿತ್ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ।
ಧ್ಯಾತುರ್ಮನಃಶಮಲಶೈಲ ನಿಸೃಷ್ಟವಜ್ರಂ
ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಂ ॥

(ಭಾ.೩.೨೮.೨೨)

'ಯಾವ ಶ್ರೀಹರಿಯ ಪಾದಪ್ರಕ್ಷಾಳನೋದಕವನ್ನು ಬ್ರಹ್ಮದೇವನು ಧರಿಸಿ ಮಗನೆಂದು ಶಿವನಿಗೆ ಧರಿಸಲು ಕೊಟ್ಟನು. ಆ ಗಂಗಾಜಲತೀರ್ಥವನ್ನು ತಲೆಯಲ್ಲಿ ಧರಿಸಿ ಅಂದಿನವರೆಗೆ ಕೇವಲ 'ಶಿವ'ನೆಂದು ಕರೆಸಿಕೊಳ್ಳುತ್ತಿದ್ದ ಶಿವನು ಅಂದಿನಿಂದ ನಿಜವಾಗಿ 'ಶಿವ'ನೇ ಪಾವನನೇ ಮಂಗಳಕರನೇ ಆದನು'. ಎಂದು.

❖❖❖

## 'ಆರ್ಜವ' ಧರ್ಮ

### –೨೪೫–

**ಆರ್ಜವವೆಂಬ ಭಾಗವತಧರ್ಮ**

**ತಮೇವ ಯೂಯಂ ಭಜತಾತ್ಮವೃತ್ತಿಭಿ**
**ರ್ಮನೋವಚಃ ಕಾಯಗುಣೈಃ ಸ್ವಕರ್ಮಭಿಃ ।**
**ಅಮಾಯಿನಃ ಕಾಮದುಘಾಂಘ್ರಿ ಪಂಕಜಂ**
**ಯಥಾಧಿಕಾರಾವಸಿತಾರ್ಥಸಿದ್ಧಯೇ ॥**

(ಭಾ.೬.೨೧.೩೨)

ತತ್ರ ಋಜೋರ್ಭಾವಃ ಆರ್ಜವಂ ತ್ರಿಕರಣೇಷ್ವೇಕಪ್ರಕಾರತ್ವಂ। ತತ್ಪೂರ್ವಕಮೇವ ಕೃತೋ ಧರ್ಮೋಽನಂತಫಲದ ಇತ್ಯಾದೌ ತದೇವ ದರ್ಶಯತಿ। **ತಮೇವೇತಿ**॥ ಯೂಯಂ। ಅಪೇಕ್ಷಿತಪ್ರದಪಾದಪದ್ಮಂ। ತಂ ಹರಿಮೇವ। ಮನಆದಿನಿಷ್ಪನ್ನೈಃ ಸ್ವವಿಹಿತಕರ್ಮಭಿಃ। ಆತ್ಮವೃತ್ತಿಭಿಃ ಭಗವದ್ವಿಷಯತಾಂ ಪ್ರಾಪಿತೈರೇವ। ಅಮಾಯಿನಃ ಕಾಪಟ್ಯರಹಿತಾಃ ಸಂತಃ। ಯಥಾಧಿಕಾರಂ ಅಧಿಕಾರಾನತಿಕ್ರಮೇಣ ಕೃಪ್ತಾ ಯೇ ಪುರುಷಾರ್ಥಾಃ ತೇಷಾಂ ಪ್ರಾಪ್ತಯೇ ಭಜತೇತ್ಯನ್ವಯಃ। ಅತ್ರಾಮಾಯಿನಃ ಸಂತೋ ಯಥಾಧಿಕಾರಾವ ಸಿತಾರ್ಥಸಿದ್ಧಯೇ ಭಜತೇತ್ಯನೇನ ಮಾಯಾಪದೋದಿತಕಾಪಟ್ಯರಾಹಿತ್ಯ

**ಪೂರ್ವಕಂ ಕೃತಸ್ಯೈವ ಭಜನಸ್ಯ ಕೃಪ್ತಪುರುಷಾರ್ಥಹೇತುತೋಕ್ತ್ಯಾ ತತ್ಸಿದ್ಧಯೇ ತನ್ನಿವರ್ತಕಮಾರ್ಜವಂ ಅವಶ್ಯಂ ಸಂಪಾದ್ಯಮಿತಿ ಸೂಚಿತಂ ಭವತಿ ॥**

❖❖❖

**ಪೃಥುರಾಜನು ಪ್ರಜೆಗಳಿಗೆ ಹೇಳುತ್ತಾನೆ—ಅಪೇಕ್ಷಿತವಾದುದನ್ನೆಲ್ಲ ನೀಡುವ ಪಾದಕಮಲಉಳ್ಳ ಹರಿಯನ್ನೇ ಮನೋ ವಾಕ್ ಕಾಯ ಎಂಬ ತ್ರಿಕರಣ ಗಳಿಂದ ಭಗವತ್ ವಿಷಯಕವಾಗಿ ಮಾಡಿದ ಕರ್ಮಗಳಿಂದ ಯೋಗ್ಯತಾನುಸಾರ ನಿಶ್ಚಿತವಾಗಿರುವ ಪುರುಷಾರ್ಥದ ಸಿದ್ಧಿಗಾಗಿ ಕಾಪಟ್ಯವಿಲ್ಲದೆ ಭಜಿಸಿರಿ.**

ಇಲ್ಲಿ 'ಅಮಾಯಯಾ' ಎಂದರೆ ಕಾಪಟ್ಯವಿಲ್ಲದೇ ಮಾಡಿದ ಭಜನವೇ ಕೃಪ್ತ ಪುರುಷಾರ್ಥವನ್ನು ನೀಡಲು ಸಮರ್ಥವಾಗುವುದು ಎಂದು ಹೇಳಿ ಕಾಪಟ್ಯವನ್ನು ಬಿಟ್ಟು ತ್ರಿಕರಣಗಳಲ್ಲಿ ಒಂದೇ ರೀತಿ ಇರಬೇಕೆಂದು ಸೂಚಿಸಿದರು. ಇದೇ ಆರ್ಜವ.

ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜವಂ ।

(ಭಾ.೧೧.೩.೨೫)

ಎಂದು ಪ್ರಬುದ್ಧಮುನಿಗಳು ವಿದೇಹ ರಾಜನಿಗೆ ಹೇಳುವಲ್ಲಿ 'ಆರ್ಜವಂ ಶಿಕ್ಷೇತ್' ಎಂದು ಹೇಳಿದ್ದಾರೆ.

'ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸಂತೋಷ ಆರ್ಜವಂ'

(ಭಾ.೭.೧೨.೮)

ಎನ್ನುವಲ್ಲಿ ನಾರದರು ಯುಧಿಷ್ಠಿರನಿಗೆ 'ಆರ್ಜವ'ವೆಂಬ ಭಾಗವತ ಧರ್ಮವೂ ಅನುಷ್ಠೇಯ ಎಂದಿದ್ದಾರೆ.

❖❖❖

—೨೪೬—

**ಆರ್ಜವವು ಜ್ಞಾನಕಾರಣವಾಗುವುದು**

**ಸ ವೇದ ಧಾತುಃ ಪದವೀಂ ಪರಸ್ಯ**
**ದುರಂತವೀರ್ಯಸ್ಯ ರಥಾಂಗಪಾಣೇಃ ।**

**ಯೋಽಮಾಯಯಾ ಸಂತತಯಾಽನುವೃತ್ತ್ಯಾ**
**ಭಜೇತ ತತ್ಪಾದ ಸರೋಜಗಂಧಂ ॥**

(ಭಾ.೯.೩.೩೮)

ನ ಕೇವಲಂ ಪುರುಷಾರ್ಥಸಾಧಕತಯಾ ಆವಶ್ಯಕಮಿದಂ ಕಿನ್ನಾಮ ಪುರುಷಾರ್ಥಸಾಧನ ಜ್ಞಾನಾದಿಸಂಪಾದಕತಯಾಪೀತ್ಯಾಶಯೇನಾಹ ॥ **ಸ ವೇದೇತಿ** ॥ ಯಃ ಅಮಾಯಯಾ ಕಾಪಟ್ಯ ರಹಿತಯಾ । ನಿರಂತರಸೇವಯಾ । ಭಾಗವತಧರ್ಮಾನುಷ್ಠಾನರೂಪಯಾ । ಶ್ರೀಹರಿಪಾದಸರೋಜ ಗಂಧಂ । ಸೇವೇತ (ಪ್ರಣೀಯಾತ್) ಸ ಏವ । ಚಕ್ರಪಾಣೇಃ ಅಪರಿಮಿತಪರಾಕ್ರಮಸ್ಯ । ಧಾತುಃ ಭಕ್ತಪೋಷಣಾದಿಕರ್ತುಃ । ಪರಸ್ಯ ಪರಮಾತ್ಮನಃ । ಪದವೀಂ ಸ್ವರೂಪಸ್ಥಿತಿಂ । ವೇದೇತ್ಯನ್ವಯಃ ॥

❖❖❖

ಸೂತರು ಶೌನಕರಿಗೆ ಹೇಳುತ್ತಾರೆ— 'ಅಮಾಯಯಾ' ಏನೂ ಕಾಪಟ್ಯವಿಲ್ಲದೆ ಫಲಕಾಮನೆ ಇಲ್ಲದೆ ಆರ್ಜವದಿಂದ ಅನುವೃತ್ತಿಯಿಂದ ನಿರಂತರ ಸೇವೆಯಿಂದ ಹರಿಯ ಪಾದಕಮಲದ ಸುಗಂಧವನ್ನು ಅಂದರೆ ಸಚ್ಛಾಸ್ತ್ರದಲ್ಲಿ ಹೇಳಿದ ಶ್ರೀಶನ ಮಹಾಹಿಮೆಯನ್ನು ಯಾರು ಶ್ರವಣ ಮಾಡುವನೋ ಅವನೇ ಭಕ್ತರಕ್ಷಣಾದಿ ಅನಂತ ಪರಾಕ್ರಮಶಾಲಿಯಾದ ಜಗದ್ಧಾರಕನಾದ ಹರಿಯ 'ಪದವಿ'ಯನ್ನು ಸ್ವರೂಪ ಮಹಿಮೆಯನ್ನು ತಿಳಿಯಬಲ್ಲ'—ಆರ್ಜವವು ಮೋಕ್ಷಸಾಧನ ಮಾತ್ರವೇ ಅಲ್ಲ ಮೋಕ್ಷಸಾಧನ ಜ್ಞಾನಾದಿಗಳಿಗೂ ಅದು ಸಾಧನ.

❖❖❖

## –೨೪೭–

## ಹರಿಯನ್ನು ನಿರಂತರ ಕೊಂಡಾಡಬೇಕು ಅದುವೆ ನಿರಂತರಸೇವೆಯಾಗುವುದು

ಇತ್ಥಂ ಪರಸ್ಯ ನಿಜಧರ್ಮರಿರಕ್ಷಯಾತ್ತ-
ಲೀಲಾತನೋಸ್ತದನುರೂಪವಿಡಂಬನನಾನಿ ।
ಕರ್ಮಾಣಿ ಕರ್ಮಕಷಣಾನಿ ಯದೂತ್ತಮಸ್ಯ
ಗಾಯೇದಮುಷ್ಯ ಪದಯೋರನುವೃತ್ತಿಮಿಚ್ಛನ್ ॥

(ಭಾ.೧೦.೧೦೩.೪೦)

ನನು ಭಾಗವತಧರ್ಮಾನುಷ್ಠಾನಾಪರಪರ್ಯಾಯಾನುವೃತ್ತೇಃ ಜ್ಞಾನಾದಿಸಾಧನತಾಭಿಹಿತಾ । ಸಾ ನಿರಂತರಂ ವರ್ಧನೀಯೇತಿ ಚ । ಸಾ ಚ ಕೇನ ಭವೇತ್ । ತದ್ವರ್ಧನಂ ಚ ಕೇನ ಸ್ಯಾದಿತ್ಯತ ಆಹ ॥ ಇತ್ಥಮಿತಿ ॥ ಅಮುಷ್ಯ ಪದಯೋಃ ಅನುವೃತ್ತಿಂ ಇಚ್ಛನ್ । ಇತ್ಥಂ ಉದಿತಾನಿ । ಪರಸ್ಯ ಹರೇಃ । ಕರ್ಮಾಣಿ । ಕರ್ಮಕಷಣಾನಿ ಪಾಪಪರಿಹಾರಕಾಣಿ । ಗಾಯೇತ್ ಕೀರ್ತಯೇದಿತ್ಯನೇನ ಶ್ರೀಹರಿಕಥಾ ಕಥನಾದಿಕಮೇವಾನುವೃತ್ತಿಸಾಧನಮಿತ್ಯುಕ್ತಂ ಭವತೀತಿ ಭಾವೇನ ಪ್ರಥಮಶಂಕಾಪರಿಹಾರಃ ॥

❖❖❖

ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—ಭಕ್ತರ ಧರ್ಮರಕ್ಷಣೆಗಾಗಿ ಲೀಲೆಯಿಂದ ಶ್ರೀಕೃಷ್ಣರೂಪದಿಂದ ಅವತರಿಸಿದ ಸರ್ವೋತ್ತಮನಾದ ಶ್ರೀಹರಿಯು ತನ್ನ ಅವತಾರಕ್ಕೆ ಅನುಗುಣವಾಗಿ ಲೋಕವಿಡಂಬನಗೈಯುತ್ತ ಭಕ್ತರ ದುಷ್ಕರ್ಮಗಳನ್ನು ಕಳೆವ ಕರ್ಮಗಳನ್ನೇ ಮಾಡಿದ್ದಾನೆ. ಅವನ ಜ್ಞಾನಾನಂದಸ್ವರೂಪವಾದ ಎರಡು ಪಾದಗಳ 'ಅನುವೃತ್ತಿ'ಯಿಂದ ನಿರಂತರ ಸೇವೆಯಿಂದ ಮುಕ್ತಿಯಲ್ಲಿ ತಾನೂ ಜ್ಞಾನಾನಂದ ಸ್ವರೂಪನಾಗಬೇಕೆಂದು ಬಗೆವ ಭಕ್ತನು ಅವನ ಕರ್ಮಗಳನ್ನು ನಿರಂತರ ಕೊಂಡಾಡಬೇಕು. ಕೊಂಡಾಡುವುದೇ ನಿರಂತರ ಸೇವೆ.

ಹರಿಸೇವೆಯನ್ನು ನಿರಂತರ ಮಾಡುವುದು ಹೇಗೆ, ಅದನ್ನು ಬೆಳೆಸಿಕೊಳ್ಳುವುದು ಹೇಗೆ ಎಂದು ಎರಡು ಸಂಶಯ. ಮೊದಲನೇ ಸಂಶಯಕ್ಕೆ ಇಲ್ಲಿ ಪರಿಹಾರ ಹೇಳಿದಂತಾಯಿತು. ಜ್ಞಾನಾದಿ ಸಾಧನೆಗಾಗಿ ಭಾಗವತ ಧರ್ಮಾನುಷ್ಠಾನದ ನಿರಂತರ ಅನುವೃತ್ತಿಗೆ ಹರಿಕಥಾಕಥನಾದಿಗಳೇ ಸಾಧನವೆಂದು ಶುಕಮುನಿ ಹೇಳುತ್ತಿದ್ದಾರೆ.

ಅಮಾಯಯೈವಾನುವೃತ್ತ್ಯಾ ತುಷ್ಯೇದಾತ್ಮಾತ್ಮದೋ ಹರಿಃ ।

(ಭಾ.೧೧.೩.೨೩)

❖❖❖

## -೨೪೮-

## ನಿರಂತರ ಶ್ರವಣ ಕೀರ್ತನ ಸ್ಮರಣಗಳಿಂದ ನಿರಂತರ ಸೇವೆಯ ವೃದ್ಧಿ

ಮರ್ತ್ಯಸ್ತಯಾನುಸವಮೇಧಿತಯಾಽನುವೃತ್ತ್ಯಾ
ಶ್ರೀಮತ್ಕಥಾಶ್ರವಣಕೀರ್ತನ ಚಿಂತಯೈತಿ ।
ತದ್ಧಾಮ ದುಷ್ಕರಕೃತಂ ಜನತಾಪವರ್ಗಂ
ಗ್ರಾಮಾದ್ ವನಂ ಕ್ಷಿತಿಭುಜೋಽಪಿ ಯಯುರ್ಯದರ್ಥೇ ॥

(ಭಾ.೧೦.೧೦೫.೪೧)

ದ್ವಿತೀಯಶಂಕಾಂ ಪರಿಹರತಿ ॥ ಮರ್ತ್ಯ ಇತಿ ॥ ಅನುಸವಮೇಧಿತಯಾ ವರ್ಧಿತಯಾ ಇತಿ ಪೂರ್ವಮುಕ್ತ್ವಾ । ಶ್ರೀಮತೋ ಹರೇಃ ಶ್ರೀಪ್ರದಾ ಯಾ ಕಥಾ ತಸ್ಯಾಃ ಶ್ರವಣೇನ ಕೀರ್ತನೇನಾಭಿಧಾನೇನ ಚ ಯುಕ್ತಯಾ ಚಿಂತಯಾ। ಅನುಸವಂ ಏಧಿತಾ ಯಾ ಅನುವೃತ್ತಿಸ್ತಯಾನುವೃತ್ತ್ಯಾ। ಭೂಪಾಲಾ ಅಪಿ। ಯದರ್ಥೇ ಯದ್ಧಾಮಪ್ರಾಪ್ತಯೇ। ಗ್ರಾಮಾದ್ವನಂ ಯಯುಃ। ತತ್ ತಾದೃಶಧಾಮ ಸ್ಥಾನಂ। ಮರ್ತ್ಯಃ। ಏತಿ ಯಾತಿ। ಕೃತೇನ ಕರ್ಮಣಾ ದುಷ್ಕರಂ ದುಷ್ಪ್ರಾಪ್ಯಂ। ಅನೇನ ಶ್ರವಣಾದಿವರ್ಧನೇನ ತದ್ವರ್ಧನಂ ಭವತೀತ್ಯುಕ್ತ್ವಾ ದ್ವಿತೀಯಶಂಕಾಪಿ ಪರಿಹೃತಾ ಭವತಿ ॥

❖❖❖

ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—ಮಾನವನು ನಿರಂತರ ವರ್ಧಿಸುವ ಭಕ್ತಿಯಿಂದ ಹರಿಯ ಮಂಗಳ ಚರಿತ್ರೆಗಳ ಕಥನ, ಶ್ರವಣ ಚಿಂತನಗಳನ್ನು ನಿರಂತರ ಗೈದರೆ ಸಾಕು, ದುಷ್ಕರ ತಪದಿಂದ ಹೊಂದಬಹುದಾದ ಜನತೆಯ ಮೋಕ್ಷಫಲವನ್ನು ಅನಾಯಾಸವಾಗಿ ಪಡೆದುಕೊಳ್ಳುತ್ತಾನೆ. ಅದನ್ನು ಪಡೆವ ಉದ್ದೇಶದಿಂದಲ್ಲವೆ ಹಿಂದಿನ ರಾಜರುಗಳು ರಾಜ್ಯವನ್ನು ತೊರೆದು ಕಾಡಿಗೆ ಹೋದರು?

ಆದರಿಂದ ಶ್ರವಣಕಥನಾದಿಗಳಿಂದಲೆ ಹರಿಸೇವೆಯನ್ನು ಇನ್ನೂ ಬೆಳೆಸಿಕೊಳ್ಳಬೇಕು. ಇದು ಎರಡನೇ ಪ್ರಶ್ನೆಗೆ ಪರಿಹಾರ.

❖❖❖

## –೨೪೯–

### ಸದಾ ಶ್ರವಣ ಕೀರ್ತನ ಸ್ಮರಣ ಮಾಡುತ್ತಿದ್ದರೆ ಶೀಘ್ರವೆ ಮೋಕ್ಷಲಾಭ

ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ
ಸ್ಮರಂತಿ ನಂದಂತಿ ತವೇಹಿತಂ ಜನಾಃ ।
ತ ಏವ ಪಶ್ಯಂತ್ಯಚಿರೇಣ ತಾವಕಂ
ಭವಪ್ರವಾಹೋಪರಮಂ ಪದಾಂಬುಜಂ ॥

(ಭಾ.೧.೮.೩೬)

ನನು ಪ್ರತಿದಿನಂ ವರ್ಧಿತೇನ ಶ್ರವಣಾದಿನಾ ವರ್ಧಿತಯಾನುವೃತ್ತ್ಯಾ ಪೂಜಾರೂಪಯಾ ಪುರುಷಾರ್ಥಸ್ತತ್ಸಾಧನಂ ಜ್ಞಾನಾದಿಕಂ ಚ ಕಿಯತಾ ಕಾಲೇನ ಭವತೀತ್ಯಾಹ ॥ ಶೃಣ್ವಂತೀತಿ ॥ ಯೇ ಜನಾಃ । ಅಭೀಕ್ಷ್ಣಶಃ ಶ್ರವಣಾದಿ ಕುರ್ವಂತಿ । ತ ಏವ ಅಭೀಕ್ಷ್ಣಶಃ ತ್ವಾಂ ಪೂಜಯಂತಃ ಸಂತಃ ತಾವಕಂ ಪದಾಂಬುಜಂ । ಅಚಿರೇಣೈವ ಪಶ್ಯಂತಿ । ಮುಕ್ತಿಮಪ್ಯಚಿರೇಣೈವ ಯಾಂತೀತಿ ಸೂಚಯಿತುಂ ಭವಪ್ರವಾಹೋಪರಮಮಿತಿ ಪದಾಂಬುಜವಿಶೇಷಣಮಿತಿ ॥

❖❖❖

ಕುಂತಿದೇವಿ ಶ್ರೀಕೃಷ್ಣನಿಗೆ ಹೇಳುತ್ತಾಳೆ—ನಿನ್ನ ಲೀಲೆಗಳನ್ನು ಸದಾ ಆಲಿಸುತ್ತ ಹಾಡಿ ಹೊಗಳುತ್ತ ನೆನೆದು ಆನಂದಿಸುತಲಿರುವ ಸಜ್ಜನರು ಬೇಗನೆ ನಿನ್ನ ಪಾದಕಮಲಗಳ ದರ್ಶನ ಪಡೆದು ಮುಕ್ತರಾಗುವರು. ಪ್ರತಿದಿನ ಶ್ರವಣಾದಿಗಳನ್ನು ಮಾಡಿ ಬೆಳೆಸಿಕೊಂಡ ಅನುವೃತ್ತಿಯಿಂದ ಬೇಗನೆ ಅಪರೋಕ್ಷವನ್ನು ಮೋಕ್ಷವನ್ನು ಪಡೆಯುವರು.

❖❖❖

## –೨೫೦–

### 'ಎಲ್ಲ ಜೀವಿಗಳೂ ನನ್ನ ಪ್ರತಿಮೆಗಳೆ'ಂದು ಸಾಧಕರಿಗೆ ವೃಷಭನ ಉಪದೇಶ

ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿ-
ಶ್ಚರಾಣಿ ಭೂತಾನಿ ಸುತಾ ಧ್ರುವಾಣಿ ।

**ಸಂಭಾವಿತವ್ಯಾನಿ ಪದೇಪದೇ ವೋ**
**ವಿವಿಕ್ತದೃಷ್ಟಿ ಸ್ತದುತಾರ್ಹಣಂ ಮೇ ॥**

(ಭಾ.೫.೫.೨೬)

**ಸರ್ವಾಣೀತಿ ॥** ಹೇ ಸುತಾಃ । ಭವದ್ಭಿಃ ಚರಾಣಿ ಧ್ರುವಾಣಿ ಚೇತ್ಯೇವಂ ಸರ್ವಾಣ್ಯಪಿ ಭೂತಾನಿ । ಮದ್ಧಿಷ್ಣ್ಯತಯಾ ಮಮ ಪ್ರತಿಮಾತ್ವೇನ । ಪದೇ ಪದೇ । ಸಂಭಾವಿತವ್ಯಾನಿ ಮಾನನೀಯಾನಿ । ಕಿಂ ತತ್ಸಂಭಾವನೇನೇತ್ಯತ ಉಕ್ತಂ ॥ **ವಿವಿಕ್ತೇತಿ ॥** ವಃ ಯುಷ್ಮಾಕಂ ಸಂಬಂಧಿನೀ ಯಾ ವಿವಿಕ್ತತಯಾ ಪ್ರತಿಮಾತ್ವೇನ ದೃಷ್ಟಿಃ ಸಂಭಾವನಂ । ತದು ತದೇವ । ಅರ್ಹಣಂ ಪೂಜಾ । ಮತ್ಪೂಜಯಾ ತು ಅಪೇಕ್ಷಿತಸಿದ್ಧಿರಿತಿ । **ಯಥಾಹುಃ**—

''ಅಂತರ್ದೇಹೇಷು ಭೂತಾನಾಮಾತ್ಮಾಸ್ತೇ ಹರಿರವ್ಯಯಃ ।
ಸರ್ವಂ ತದ್ಧಿಷ್ಣ್ಯಮೀಕ್ಷಧ್ವಮೇವಂ ವಸ್ತೋಷಿತೋ ಹ್ಯಸಾವಿ''ತಿ ॥

❖❖❖

**ವೃಷಭದೇವನು ಪುತ್ರರಿಗೆ ಉಪದೇಶಿಸುತ್ತಾನೆ— ಮಕ್ಕಳೆ, ಎಲ್ಲ ಜಂಗಮ ಸ್ಥಾವರ ಜೀವಿಗಳನ್ನು ನನ್ನ ಪ್ರತಿಮೆಗಳಂತೆ ಎಂದು ತಿಳಿದು ಮತ್ತೆಮತ್ತೆ ಯಥಾಯೋಗ್ಯವಾಗಿ ಸಮ್ಮಾನಿಸಬೇಕು. ನಿಮ್ಮ ಈ ಸಮ್ಮಾನವೆ ನನಗೆ ಮಾಡುವ ಪೂಜೆ ಎಂದು ತಿಳಿಯಿರಿ. ಜೀವರು ಭಗವಂತನ ಪ್ರತಿಮೆಗಳು. ಅವರಲ್ಲಿ ಭಗವಂತನಿರುವನು. ಜೀವನು ಬೇರೆ ಈಶನು ಬೇರೆ ಎಂದು ತಿಳಿಯುವುದು ಮತ್ತು ಅದನ್ನು ಅಜ್ಞರಿಗೆ ಪ್ರತಿಪಾದಿಸುವುದೇ ನನಗೆ ಸಮ್ಮಾನ, ವಿವಿಕ್ತದೃಷ್ಟಿ. ಅದೇ ಭಗವಂತನಿಗೆ ಸಾಧಕನು ಸದಾ ಮಾಡಬೇಕಾದ ಪೂಜೆ. ಅದರಿಂದ ಮೋಕ್ಷಸಾಧನ ಜ್ಞಾನಾದಿ ಸಿದ್ಧಿ.**

ಅಂತರ್ದೇಹೇಷು ಭೂತಾನಾಂ ಆತ್ಮಾऽऽಸ್ತೇ ಹರಿರೀಶ್ವರಃ ।
ಸರ್ವಂ ತದ್ಧಿಷ್ಣ್ಯಮೀಕ್ಷಧ್ವಂ ಏವಂ ವಸ್ತೋಷಿತೋ ಹ್ಯಸೌ ॥

(ಭಾ.೬.೪.೧೩)

ಭೂಮಿ ಎಲ್ಲ ವೃಕ್ಷಗಳಿಂದ ಪೂರ್ತಿ ಆವೃತವಾಗಿದೆ ಎಂದು ಕೋಪದಿಂದ ವೃಕ್ಷಗಳನ್ನು ಸುಡಲು ತೊಡಗಿದ ಪ್ರಚೇತಸರಿಗೆ ಚಂದ್ರಾಂತರ್ಗತರಾದ ಬ್ರಹ್ಮದೇವರು ಉಪದೇಶಿಸುತ್ತಾರೆ—ವೃಕ್ಷಾದಿ ಸರ್ವಜೀವಿಗಳ ಶರೀರದೊಳಗೆ

ಶ್ರೀಹರಿ ನೆಲೆಸಿರುತ್ತಾನೆ. ಅವು ಅವನ ಪ್ರತಿಮೆಗಳೆಂದು ತಿಳಿದು ಅವುಗಳನ್ನು ಸಮ್ಮಾನಿಸಿರಿ. ಹಾಗೆ ಮಾಡುವುದರಿಂದ ಹರಿ ಸುಪ್ರೀತನಾಗುತ್ತಾನೆ' ಎಂದು.

❖❖❖

—೨೫೧—

## ಎಲ್ಲ ಜೀವಿಗಳನ್ನೂ ತ್ರಿಕರಣದಿಂದ ಪೂಜಿಸಲು ಸಿದ್ಧರಿಗೆ ವೃಷಭನ ಉಪದೇಶ

**ಮನೋವಚೋದೃಕ್ಕರಣೈರ್ಹಿ ತಸ್ಯ**
**ಸಾಕ್ಷಾತ್ಕೃತಂ ಮೇ ಪರಿಬರ್ಹಣಂ ತತ್ ।**
**ವಿನಾ ಪುಮಾನ್ ಯೇನ ಮಹಾವಿಮೋಹ-**
**ಕೃತಾಂತಪಾಶಾನ್ನ ವಿಮೋಕ್ತುಮೀಶಃ ॥**

(ಭಾ.೫.೫.೨೭)

ಏವಂ ಸಾಧಕಸ್ಯ ಸಾಧನಪ್ರಕಾರಮುಕ್ತ್ವಾ ಸಿದ್ಧಸ್ಯ ಪೂಜಾಯಾಂ ವಿಶೇಷಂ ವದನ್, ಆವಶ್ಯಕತಾಂ ವ್ಯತಿರೇಕೇಣ ದರ್ಶಯತಿ ॥ ಮನಇತಿ ॥ ಕ್ವಚಿನ್ಮನಸಾ ಕ್ವಾಪಿ ವಚಸಾ ಕುತ್ರಚಿದ್‌ದೃಷ್ಟ್ಯೈವ ಕಸ್ಮಿಂಶ್ಚಿತ್ಕಾಯಿಕವ್ಯಾಪಾರೇಣಾಪೀತ್ಯೇವ-ಮನೇಕಧಾ । ತಸ್ಯ ಯತ್ಪರಿಬರ್ಹಣಂ ಸಂಭಾವನಂ । ತತ್ಸಾಕ್ಷಾನ್ಮೇ ಮಮೈವ ಭವತಿ । ಪುಮಾಂಶ್ಚ ಯೇನ ಸರ್ವಸತ್ವಸಂಭಾವನೇನ ವಿನಾ । ಮಹಾಮೋಹಕರಾದ್ಯಮಪಾಶಾತ್ಸಂಸಾರಾತ್ । ಸ್ವಾತ್ಮಾನಂ ಮೋಚಯಿತುಂ । ಈಶಃ ಸಮರ್ಥೋ ನ ಭವತಿ ತತ್ ತಾದೃಶಂ ಸರ್ವೈರವಶ್ಯಮನುಷ್ಠೇಯಮಿತಿ ॥

❖❖❖

ವೃಷಭದೇವನು ಮಕ್ಕಳಿಗೆ ಉಪದೇಶಿಸುತ್ತಾನೆ— ಸಿದ್ಧನು ಕೂಡ ಸಾಧಕನಂತೇ ಭಗವಂತನ ಪ್ರತಿಮಾ ಸಮ್ಮಾನವನ್ನು ಅವಶ್ಯ ಮಾಡಲೇಬೇಕು. ಮನೋವಾಕ್ಕಾಯಗಳಿಂದ ಎಲ್ಲ ಜೀವಿಗಳನ್ನು ಸಂಭಾವಿಸುವುದೇ ನನ್ನ ಸಾಕ್ಷಾತ್ ಪೂಜೆಯಾಗುವುದು. ಎಲ್ಲ ಜೀವಿಗಳನ್ನು ಹೀಗೆ ಸಮ್ಮಾನಿಸದೆ ಹೋದರೆ ಅವನು ಅಜ್ಞಾನ ಪ್ರಯುಕ್ತ ಜನನ ಮರಣರೂಪ ಯಮಪಾಶದಿಂದ ತನ್ನನ್ನು ಬಿಡಿಸಿಕೊಳ್ಳಲು ಸಮರ್ಥನಾಗಲಾರ.

ಆದರಿಂದ ಸಾಧಕರೂ ಸಿದ್ಧರೂ ಎಲ್ಲರೂ ಕೂಡ ಅಂಥ 'ವಿವಿಕ್ತದೃಷ್ಟಿ' ಪ್ರತಿಮಾಂತರ್ಗತನ ಉಪಾಸನೆಯನ್ನು ಮಾಡಲೇಬೇಕು.

-೨೫೨-

## ಉಚ್ಚ ನೀಚಗಳೆನ್ನದೆ ಎಲ್ಲ ಜೀವಿಗಳನ್ನೂ ನಮಿಸಲು ಭಗವಂತನ ಆದೇಶ

ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ
ಜ್ಯೋತೀಂಷಿ ಸತ್ವಾನಿ ದಿಶೋ ದ್ರುಮಾದೀನ್ ।
ಸರಿತ್‌ಸಮುದ್ರಾಂಶ್ಚ ಹರೇಃ ಶರೀರಂ
ಯತ್‌ಕಿಂಚ ಭೂತಂ ಪ್ರಣಮೇದನನ್ಯಃ ॥ (ಭಾ.೧೧.೨.೪೧)

ಚರಾಣ್ಯಚರಾಣೀತಿ ಸರ್ವಾಣಿ ಭೂತಾನಿ ಸಂಭಾವಿತವ್ಯಾನೀತಿ ಉದಿತೇ ಶಂಕೋದೇತಿ। ಚರಾ ದ್ವಿವಿಧಾಃ। ದ್ವಿಪದಾಶ್ಚತುಷ್ಪದಾಶ್ಚೇತಿ। ತತ್ರಾದ್ಯೇಷು ಬ್ರಾಹ್ಮಣಾಃ ಸರ್ವೇಽಪಿ ಸಂಭಾವ್ಯಂತ ಏವ। ದ್ವಿತೀಯೇಷು ಚ ಗಾವಃ ಸರ್ವಾ ಅಪಿ। ಅಚರೇಷ್ವಪಿ ತುಲಸ್ಯಾದಯಃ ಪೂಜ್ಯಂತ ಏವ। ಯೇ ನೋಭಯತ್ರಾಪಿ ಪೂಜ್ಯಾಃ ತೇ ನ ಪೂಜ್ಯಂತ ಏವ। ತತಃ ಕಿಮಿತೀದಂ ವಿಶಿಷ್ಯ ವಿಧಾನಮಿತ್ಯತ ಆಹ ॥ ಖಮಿತಿ ॥ ನಾತ್ರ ನಮ್ಯತಯಾ ಸಿದ್ಧಾನಾಮೇವ ನಮನಂ ವಿಧೀಯತೇ, ಯೇನ ಸಿದ್ಧಾರ್ಥತಾ ಶಂಕ್ಯೇತ। ಕಿಂತು ದ್ವಿಪದೇಷು ಬ್ರಾಹ್ಮಣಮಾರಭ್ಯ ಚಂಡಾಲೇಷ್ವಪಿ ಶ್ವಮಾಂಸಭಕ್ಷಕೋ ಯೋ ನೀಚಃ ತತ್ಪರ್ಯಂತಂ। ಚತುಷ್ಪದೇಷು ಗಾಮಾರಭ್ಯ ಅಸ್ಥಿಭಕ್ಷಕೋ ಯ ಆರಣ್ಯಕೋ ಮೃಗವಿಶೇಷಶ್ಚತುಷ್ಪದೇಷು ಚಾಂಡಾಲಃ ತತ್ಪರ್ಯಂತಂ। ಅಚರೇಷ್ವಪಿ ತುಲಸೀಮಾರಭ್ಯ ಯತ್ಕಿಂಚಿ ನ್ನೀಚತಮಂ ವಸ್ತು ತತ್ಪರ್ಯಂತಮೇವೇದಂ ವಂದನಂ ಕಾರ್ಯಮಿತ್ಯುಚ್ಯತೇ।

ನನು ಲಜ್ಜಯಾ ಕರ್ತುಮಶಕ್ಯಮಿತಿ ಚೇತ್। ಏವಂ ವದನ್ ಪ್ರಷ್ಟವ್ಯೋ ಜಾಯತೇ। ಕಿಂ ವಂದನಸಾಮಾನ್ಯಂ ಕಿಂವಾ ತದ್ವಿಶೇಷಃ। ಆದ್ಯೇ ಪ್ರಣಮೇದಿತಿ ತದ್ವಿಧಾನವೈಯರ್ಥ್ಯಾತ್। ದ್ವಿತೀಯೇ ಸ ಕ ಇತಿ ಪ್ರಷ್ಟವ್ಯಂ। ವಾಚಿಕಂ ಕಾಯಿಕಂ ಚ ವಂದನಮಿತಿ ಚೇತ್। ವ್ರೀಡಾ ಕಿಂ ಮಾನಸವಂದನಂ ನ ಪ್ರತಿಬಧ್ನಾತಿ। ಉಚ್ಯತೇ। ವ್ರೀಡಾ ತಾವನ್ಮನಃಪರಿಣಾಮರೂಪಾ ಮನಃಸ್ಥಾ ಸಾ ಚ ಮಾನಸಿಕಾದಿ ವಂದನವಿಷಯಕತಯಾ ಮಾನಸಿಕೀ ವಾಚನಿಕೀ ದೈಹಿಕೀ ಚೇತಿ ತ್ರಿವಿಧಾ ಭವತಿ। ತತ್ರ ಮಾನಸಿಕೀ ವ್ರೀಡಾ ಮಾನಸವಂದನಂ ಪ್ರತಿಬಧ್ನಾತ್ಯೇವ। ತಥಾಪಿ ತಾಂ ಸ್ವಬುಧ್ಯಾ ವಿನಿಗೃಹ್ಯ ಮಾನಸವಂದನಂ ಕ್ರಿಯತೇ ಇತಿ। ಏವಂ ತರ್ಹಿ ಯಥಾ ಪ್ರತಿಬಂಧಿಕಾಮಪಿ ಮಾನಸೀಂ ಲಜ್ಜಾಂ ಸ್ವಬುದ್ಧ್ಯಾ ವಿನಿಗೃಹ್ಯ ಮಾನಸವಂದನಂ ಕ್ರಿಯತೇ। ತಥಾ ವಾಚನಿಕೀಂ ದೈಹಿಕೀಂ ಚ ಲಜ್ಜಾಂ ಸ್ವಬುಧ್ಯಾ

ವಿನಿಗೃಹ್ಯ ವಾಚನಿಕಂ ದೈಹಿಕಂ ಚ ವಂದನಂ ಕ್ರಿಯತಾಂ ಅವಿಶೇಷಾತ್ । ಸತ್ಯಂ । ಜುಗುಪ್ಸಿತಂ ತದ್ದ್ವಯಮಿತಿ ಚೇತ್ । ಸಮಂ ಪ್ರಥಮೇಽಪಿ ವಿಧಿ ಬಲಾದಂಗೀಕರ್ತವ್ಯಮಿತಿ ಚೇತ್ ಅನ್ಯತ್ರಾಪಿ ದೀಯತಾಂ ದೃಷ್ಟಿಃ । ಏವಂ ಮನಸಾ ವಚಸಾ ಕರ್ಮಣಾ ಚೇತಿ ತ್ರಿವಿಧಮಪಿ ವಂದನಂ ಯಾವತ್ಸರ್ವತ್ರ ಹರಿರೇವ ಸ್ಥಿತಃ ಸರ್ವಂ ಕಾರಯತೀತಿ ನಿಶ್ಚಿತ್ಯ ತತ್ರ ಸರ್ವತ್ರ ತತ್ಪ್ರತೀಕದರ್ಶನಮಾತ್ರೇಣ ತತ್ಸ್ಮರಣಂ ಝಡಿತ್ಯೇವ ನ ಜಾಯತೇ ತಾವತ್ಪರ್ಯಂತಮೇವ ಕಾರ್ಯಂ । ತದನಂತರಂ ತು ಯಥಾ ಯಥಾ ಮಾನಸಾದ್ಯನ್ಯತರಂ ವಾ ತ್ರಿವಿಧಮಪಿ ವಾ ಯಥಾಮನಃ ಕಾರ್ಯಂ । ನ ಚ ಸರ್ವತ್ರಾವಸ್ಥಾನನಿಶ್ಚಯಪೂರ್ವಕಂ ತತ್ಸ್ಮರಣಸಂಪಾದನೇನಾಪಿ ಕಿಂಕೃತ್ಯಮಿತಿ ಮಂತವ್ಯಂ । ತಸ್ಯ ಮಹಾಫಲಹೇತುತಯಾಽವಶ್ಯಂ ಸಂಪಾದನೀಯತ್ವಾತ್ । ಈದೃಶಂ ಚ ವಂದನಂ ನ ಸಿದ್ಧಮಿತಿ ನ ಸಿದ್ಧಾರ್ಥತಾ ವಿಧಾನಸ್ಯೇತ್ಯಾ-ಶಯೇನಾಹ ॥ **ಖಮಿತಿ** ॥ ಯಥಾಹುಃ—

''ವಿಸೃಜ್ಯ ಸ್ವಯಮಾತ್ಮಸ್ಥಾಂ ದೃಶ್ಯವ್ರೀಡಾಂ ಚ ದೈಹಿಕೀಂ ।<br>
ಪ್ರಣಮೇದ್ದಂಡವದ್ಭೂಮಾವಾಶ್ವಚಂಡಾಲ ಗೋಖರಂ ॥

ಯಾವತ್ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ ।<br>
ತಾವದೇವಮುಪಾಸೀತ ವಾಙ್ಮನಃಕಾಯವೃತ್ತಿಭಿಃ ॥

ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ ।<br>
ಮದ್ಭಾವಃ ಸರ್ವಭೂತೇಷು ವಾಙ್ಮನಃಕಾಯವೃತ್ತಿಭಿರಿ'ತಿ ॥

ಪ್ರಣಮೇತ್ ಸಾಷ್ಟಾಂಗಂ ನಮೇತ್ । ಅತ ಏವೈತತ್ಸೂಚಯಿತುಂ ದಂಡವದಿತಿ ಭೂಮಾವಿತಿ ಚೋಕ್ತಂ । ಮಾನಸಮಾತ್ರವಿವಕ್ಷಾಯಾಂ ತು ಅಸಾಮಂಜಸ್ಯಾತ್ । ವಿಷಯವಿಶೇಷವಿವಕ್ಷಾಯಾಂ ಚ ಸಿದ್ಧಾರ್ಥತ್ವಾತ್ । ಏವಂ ನೃಷು ಆಶ್ವಚಾಂಡಾಲಂ, ಪಶುಷು ಚ ಆಗೋಖರಂ, ಭೂಮೌ ದಂಡವತ್ಪ್ರಣಾಮಃ ಕಿಯತ್ಪರ್ಯಂತಂ ಕರ್ತವ್ಯಂ ಇತ್ಯತ ಆಹ ॥ **ಯಾವದಿತಿ** ॥ ಮದ್ಭಾವಃ ತತ್ತದ್ವ್ಯಾಪಾರ ಕಾರಯಿತೃತಯಾಽವಸ್ಥಾನ ನಿಶ್ಚಯ ಪೂರ್ವಕಂ ಪ್ರತೀಕದರ್ಶನಕ್ಷಣ ಏವ ಮಮ ಸ್ಮೃತಿಃ । ಪ್ರಣಮೇದಿತ್ಯೇತನ್ನ ಮಾನಸವಂದನಮಾತ್ರಪರಂ । ಕಿನ್ನಾಮ ತ್ರಿವಿಧಸ್ಯಾಪಿ ವಂದನಸ್ಯ ವಿಧಾಯಕಮಿತ್ಯೇತತ್ಸೂಚನಾಯ ವಾಙ್ಮನಃಕಾಯವೃತ್ತಿಭಿರಿತಿ ವಿವೃತಂ । ತತ್ಸಂಪಾದನೇನಾಪಿ ಕಿಂಪ್ರಯೋಜನಮಿತ್ಯತಸ್ತಸ್ಯ ಸಾಧನೋತ್ತಮತಯಾ ಮತ್ಪ್ರೀತಿಸಾಧನತ್ವಾದಿತ್ಯಾಶಯೇನಾಹ ॥ **ಅಯಮಿತಿ** ॥

❖❖❖

**ವಿದೇಹರಾಜನಿಗೆ ಕವಿ ಮಹಾಮುನಿಯ ಉಪದೇಶ—ಆಕಾಶ ವಾಯು ಅಗ್ನಿ ಜಲ ಪೃಥಿವಿ ಸೂರ್ಯಾದಿ ಜ್ಯೋತಿಗಳು, ಸಕಲ ಜೀವಿಗಳು ವೃಕ್ಷಾದಿಗಳು ನದೀಸಮುದ್ರಗಳು ದೇವ ಮಾನವಾದಿಗಳು ಎಲ್ಲವೂ ಹರಿಯ ಅಧೀನ. ಅವುಗಳಿಗೆ ಇನ್ನೊಬ್ಬ ಅಧಿಪತಿ ಇಲ್ಲ. ಅವುಗಳನ್ನು ಎಲ್ಲವನ್ನು ಹರಿಗೆ ಶರೀರದಂತೆ ಪ್ರತಿಮೆಯಂತೆ ಅಧಿಷ್ಠಾನವೆಂದು ಬಗೆದು ನಮಿಸಬೇಕು.**

ಯದ್ಯಪಿ ಧರ್ಮಶಾಸ್ತ್ರಗಳಲ್ಲಿ ವಿಧಾನವಿರುವುದರಿಂದ ಮನುಷ್ಯರಲ್ಲಿ ಬ್ರಾಹ್ಮಣರಿಗೆ, ಪ್ರಾಣಿಗಳಲ್ಲಿ ಗೋವುಗಳಿಗೆ ಗಿಡಮರಗಳಲ್ಲಿಯೂ ತುಲಸಿ ಮುಂತಾದವುಗಳಿಗೆ ನಾವು ಎಲ್ಲರೂ ನಮಸ್ಕಾರವನ್ನು ಮಾಡುತ್ತಲೆ ಇದ್ದೇವೆ. 'ಪ್ರಣಮೇತ್' ನಮಸ್ಕರಿಸಬೇಕೆಂದು ಭಾಗವತವು ವಿಧಾನ ಮಾಡುವುದು ವ್ಯರ್ಥವಾಗುತ್ತದೆ. ಅದಕ್ಕೆ 'ಮನುಷ್ಯರಲ್ಲಿ ಚಂಡಾಲ ಪರ್ಯಂತ, ಪ್ರಾಣಿಗಳಲ್ಲಿ ಮಾಂಸವನ್ನು ಮಾತ್ರವಲ್ಲದೆ ಎಲುಬನ್ನೂ ತಿನ್ನುವ ಗೋಖರ, ಕತ್ತೆಗೊರವ ಎಂಬ ವನ್ಯಮೃಗಪರ್ಯಂತ, ಗಿಡಮರಗಳಲ್ಲಿಯೂ ನೀಚ ಅಪವಿತ್ರವಾದ ಗಿಡಗಳ ಪರ್ಯಂತ ಯಾವುದನ್ನೂ ಬಿಡದೆ ಎಲ್ಲ ಜೀವಿಗಳಿಗೂ ನಮಸ್ಕಾರ ಮಾಡಬೇಕು' ಎನ್ನುವುದು ಭಾಗವತದ ಅಭಿಪ್ರಾಯವೆನ್ನುವುದಾದರೆ ಭಾಗವತವು ವಿಧಾನ ಮಾಡಿದರೂ ಅನುಷ್ಠಾನ ಮಾಡಲು ನಾಚಿಕೆ ಬಿಡುವುದಿಲ್ಲ' ಎಂಬ ಸಮಸ್ಯೆ ಬರುವುದು.

ಅದಕ್ಕೆ ಹೀಗೆ ಪರಿಹಾರ– ವಂದನವೆಂದರೆ ಕಾಯಿಕ ವಾಚಿಕ ಮಾನಸಿಕ ಎಂದು ಮೂರು ಬಗೆ ಇವೆ. ಅವುಗಳಲ್ಲಿ ಮಾನಸಿಕವಂದನೆ ಮಾಡಲು ಮನಸ್ಸಿನಲ್ಲೇ, 'ಇದು ಬೇಡ ನಾಚಿಕೆಗೇಡು' ಎಂದು ಲಜ್ಜೆ ಮೂಡಿದರೂ 'ಭಾಗವತ ವಿಧಾನ ಮಾಡಿದೆ. ಅದರಿಂದ ಮನಸಿನಲ್ಲೆ ವಂದನ ಮಾಡುತ್ತೇನೆ' ಎಂದುಕೊಂಡು, 'ಬೇಡ' ಎನ್ನುವ ಮನಸ್ಸನ್ನು ಹತ್ತಿಕ್ಕಿ ಮನಸ್ಸಿನಲ್ಲೇ ನಮಸ್ಕಾರ ಮಾಡುವುದು ಅಶಕ್ಯವೇನಲ್ಲ. ಹೀಗೆ ಮಾನಸಿಕ ನಮಸ್ಕಾರಕ್ಕೆ ಲಜ್ಜೆ ಬಾಧಕ ವಾಗುವುದಿಲ್ಲ ಎಂದೊಪ್ಪಿದರೆ ಅದರಂತೆ ಕಾಯಿಕ ವಾಚಿಕ ನಮಸ್ಕಾರಗಳನ್ನು 'ಭಾಗವತವು ಮಾಡೆಂ'ದು ಹೇಳುತ್ತಿರುವಾಗ ಮಾಡದಿರಲಾಗುವುದಿಲ್ಲ ಎಂದು ಲಜ್ಜೆಯನ್ನು ಹತ್ತಿಕ್ಕಿ ನಮಸ್ಕಾರ ಮಾಡಬಹುದು.

ಕ್ರೂರಮೃಗ ಸ್ಪರ್ಶವು ಅಸಾಧ್ಯ. ಮತ್ತು ಚಂಡಾಲಸ್ಪರ್ಶ

ನಿಷೇಧವಿರುವುದರಿಂದ ಪ್ರತ್ಯಕ್ಷವಾಗಿ ಕಾಲುಮುಟ್ಟಿ ನಮಸ್ಕರಿಸಲಾಗದಿದ್ದರೂ ಮಾನಸವಾಗಿ ಅಂತರ್ಯಾಮಿ ಸ್ಮರಣ ಸಾಧ್ಯವಿದೆ ತಾನೆ? ವಿಜಯಧ್ವಜೀಯ ದಲ್ಲಿ ಹಾಗೇ ಹೇಳಿದ್ದಾರೆ.

ಅದರಿಂದ, ಹರಿಯೆ ಎಲ್ಲ ಜೀವಿಗಳೊಳಗಿದ್ದು ಅವನೇ ಅವುಗಳ ಎಲ್ಲ ವ್ಯಾಪಾರವನ್ನು ಮಾಡುತ್ತಿದ್ದಾನೆ ಎಂಬ ನಿಶ್ಚಯ ಮಾಡಿಕೊಂಡು ಅದರ ಬಲದಿಂದ ಎಲ್ಲ ಜೀವಿಗಳಲ್ಲಿಯೂ ಹರಿಯ ಸನ್ನಿಧಾನ ಸ್ಮರಣೆ ತಂದುಕೊಳ್ಳ ಬೇಕು. ಅದು ಹರಿಯ ಅನುಗ್ರಹಕ್ಕೆ ಕಾರಣವಾಗುವುದರಿಂದ ಅದು ಅಯತ್ನವಾಗಿ ಸಿದ್ಧಿಸುವ ಪರ್ಯಂತವೂ ಭಾಗವತ ಹೇಳಿದಂತೆ ಎಲ್ಲ ಜೀವಿಗಳಿಗೂ ತ್ರಿಕರಣಗಳಿಂದ ನಮಸ್ಕಾರ ಮಾಡಬೇಕು. ಇದನ್ನೂ ಕೂಡ ಭಾಗವತ ಹೇಳುತ್ತಿದೆ—

ವಿಸೃಜ್ಯ ಸ್ವಯಮಾತ್ಮಸ್ಥಾಂ ದೃಶ್ಯವ್ರೀಡಾಂ ಚ ದೈಹಿಕೀಂ
ಪ್ರಣಮೇದ್ ದಂಡವತ್ ಭೂಮೌ ಆ ಶ್ವ ಚಂಡಾಲ ಗೋಖರಂ
ಯಾವತ್ ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ
ತಾವದೇವಮುಪಾಸೀತ ವಾಙ್ಮನಃ ಕಾಯ ವೃತ್ತಿಭಿಃ
ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ
ಮದ್ಭಾವಃ ಸರ್ವಭೂತೇಷು ವಾಙ್ಮನಃ ಕಾಯವೃತ್ತಿಭಿಃ ॥

(ಭಾ.೧೧.೨೯.೧೬,೧೭,೧೮)

'ಭಕ್ತನು ತನ್ನ ಹಾಗೂ ಇತರ ಜೀವಿಗಳ ದೇಹದ ಬಗ್ಗೆ ಮನಸಿನಲ್ಲಿ ನಾಚಿಕೆಬಿಟ್ಟು ನಾಯಿ ಚಂಡಾಲ ಕತ್ತೆಗೊರವಗಳವರೆಗೆ ಎಲ್ಲ ಜೀವಿಗಳಲ್ಲಿಯೂ ಇರುವ ಹರಿಗೆ ನೆಲದಮೇಲೆ ದಂಡ ಪ್ರಣಾಮ ಮಾಡಬೇಕು. ಕೇವಲ ಮಾನಸಿಕ ನಮಸ್ಕಾರವನ್ನಲ್ಲ. ಎಲ್ಲ ಜೀವಿಗಳಲ್ಲಿ ನಾನಿರುವೆನೆಂದು ನಿಶ್ಚಯದಿಂದ ಅವುಗಳನ್ನು ಕಂಡಾಗಲೆಲ್ಲ ನನ್ನ ಸ್ಮರಣೆ ಸಹಜವಾಗಿ ಬಾರದತನಕ ಹೀಗೆ ತ್ರಿಕರಣಗಳಿಂದಲೂ ಅವುಗಳಲ್ಲಿ ನನ್ನನ್ನು ಆರಾಧಿಸುತ್ತಿರಬೇಕು. ನನ್ನ ಸ್ಮರಣೆ ಸಹಜವಾಗಿ ಬರಲು ತೊಡಗಿದ ಬಳಿಕ ಕಾಯಿಕ ವಾಚಿಕ ಮಾನಸಿಕ ಎಂಬ ಮೂರು ವಿಧ ಪ್ರಣಾಮಗಳಲ್ಲಿ ಒಂದನ್ನಾದರೂ ಮಾಡಬಹುದು. ಮೂರನ್ನಾದರೂ ಮಾಡಬಹುದು. ಎಲ್ಲ ಹರಿಪ್ರೀತಿ ಸಾಧನಗಳಲ್ಲಿಯೂ

ಉತ್ತಮವಾದುದು ಏನೆಂದರೆ, ತ್ರಿಕರಣಗಳಿಂದಲೂ ಎಲ್ಲ ಜೀವಿಗಳಲ್ಲಿ ಅಂತರ್ಯಾಮಿಯಾಗಿ ವಿರಾಜಮಾನನಾದ ನನ್ನನ್ನು ವಂದನಾದಿಗಳಿಂದ ಸೇವಿಸುವುದು.'

❖❖❖

—೨೫೩—

**ಲಜ್ಜೆಬಿಟ್ಟು ಸರ್ವತ್ರ ಭಗವಂತನನ್ನು ಕಂಡು ಆರಾಧಿಸಬೇಕು**

**ಶೃಣ್ವನ್ ಸುಭದ್ರಾಣಿ ರಥಾಂಗಪಾಣೇ-**
**ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ।**
**ಗೀತಾನಿ ನಾಮಾನಿ ತದರ್ಥಕಾನಿ**
**ಗಾಯನ್ ವಿಲಜ್ಜೋ ವಿಚರೇದಸಂಗಃ ॥**

(ಭಾ.೧೧.೨.೩೯)

ನ ಕೇವಲಂ ಭಗವತಃ ಪ್ರಣಾಮ ಏವ ವಿಲಜ್ಜೋ ಭವೇದಿತಿ ಕಿನ್ನಾಮ ಭಗವತ್ಸೇವಾಮಾತ್ರ ಇತ್ಯಾಹ ॥ **ಶೃಣ್ವನ್ನಿತಿ** ॥ ಲೋಕೇ ಮಿತ್ರಸ್ಯೋದಾಸೀನಸ್ಯ ವೈರಿಣೋ ವಾ ಸ್ವತೋ ನೀಚಸ್ಯ ವಾ ಗೃಹೇ । ಗೀತಾನಿ ವ್ಯಾಖ್ಯಾಸ್ಯಮಾನಾನಿ । ಸುಭದ್ರಾಣಿ । ರಥಾಂಗಪಾಣೇಃ । ಜನ್ಮಾನಿ, (ರೂಪಾಣಿ,) ಕರ್ಮಾಣಿ ತಚ್ಚರಿತಾನಿ । ತದರ್ಥಕಾನಿ ಜನ್ಮಕರ್ಮಪ್ರತಿಪಾದಕಾನಿ । ನಾಮಾನಿ । ಯಾನಿ ಚಾನ್ಯಾನಿ । ರಥಾಂಗಪಾಣೇಃ ಕರ್ಮಾಣಿ ಸೇವಾರೂಪಾಣಿ, ಗೃಹಸಂಮಾರ್ಜನ ನೃತ್ತಾದಿರೂಪಾಣಿ । ತಾನಿ ಸರ್ವಾಣ್ಯಪಿ । ವಿಲಜ್ಜಃ ಸನ್ನೇವ । ವಿಚರೇತ್ ವಿಶೇಷೇಣೈವಾಚರೇತ್ । ತೇನ ವಿಶೇಷತಃ ಅಸಂಗೋ ಭವೇತ್ । ಏವಂ ವಿಲಜ್ಜೋ ಭೂತ್ವಾ ಭಗವತ್ಸೇವಾಕೃತೌ ಕಿಂ ಫಲಾಂತರಂ ಚ ಸ್ಯಾದಿತ್ಯತ್ರಾಹ ॥ **ಅಸಂಗ ಇತಿ** ॥ ವಿಲಜ್ಜಃ ಸನ್ನೇವ ಶೃಣ್ವನ್, ಗಾಯನ್, ಅಸಂಗಃ ಅಕಾರವಾಚ್ಯೇ ಹರಾವೇವ ಚಿಂತನಾಖ್ಯಸಂಬಂಧವಾನ್ ಭವೇತ್ ಇತಿ । ತದನೇನ ಸರ್ವತ್ರ ಭಗವಚ್ಚಿಂತನಂ ಕಾರ್ಯಂ । ಅಭ್ಯಾಸೇನ ಪಾಟವೇ ಸತಿ ತತ್ತತ್ರೀಕದರ್ಶನಕ್ಷಣ ಏವ ತತ್ತದ್ಗತರೂಪವಿಶೇಷಸ್ಮರಣಂ ಸುಖವಿಶೇಷಶ್ಚ ಭವತಿ । ಏವಂ ಸರ್ವತ್ರ ಹರಿಮೇವ ಭಾವಯತಃ ಮಾಯಾಪರಪರ್ಯಾಯಪ್ರಕೃತಿಬಂಧಃ ಸ್ವಯಮೇವ ನಿವರ್ತತ ಇತಿ ಸೂಚಿತಂ । **ಯಥಾಹುಃ—**

**''ಏತಾವಾನೇವ ಲೋಕೇऽಸ್ಮಿನ್ ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ।**
**ಏಕಾಂತಭಕ್ತಿರ್ಗೋವಿಂದೇ ಯತ್ಸರ್ವತ್ರ ತದೀಕ್ಷಣಂ'' ॥**

❖❖❖

**ಕವಿಮಹಾಮುನಿ ವಿದೇಹರಾಜಜನಿಗೆ ಉಪದೇಶಿಸುತ್ತಾರೆ—ಲೋಕದಲ್ಲಿ ಭಕ್ತರು ಹಾಡುವ ಹರಿಯ ಪರಮಮಂಗಳಕರವಾದ ಅವತಾರ ಲೀಲೆಗಳನ್ನು ಅವನ ಗುಣಕರ್ಮಗಳನ್ನು ಹೇಳುವ ನಾಮಗಳನ್ನು ಬೇರೆ ನೃತ್ಯಗೀತಾದಿಗಳನ್ನು ಲಜ್ಜೆಬಿಟ್ಟು ಗಾನ ಪ್ರವಚನಗಳನ್ನು ಮಾಡುತ್ತ ಭಕ್ತರ ನಡುವೆ ಓಡಾಡಬೇಕು. ಇದರ ಮಹಾಫಲವೇನೆಂದರೆ ಅವನು 'ಅ-ಸಂಗ' ಪರಮಾತ್ಮನ ಚಿಂತನ ರೂಪವಾದ ಸಂಗ ಉಳ್ಳವನೂ ವಿಷಯಪದಾರ್ಥ ಸಂಗರಹಿತನೂ ಆಗುವನು.**

ಹೀಗೆ ಮಾಡುತ್ತಿದ್ದರೆ ಅಭ್ಯಾಸ ಬಲದಿಂದ ಶ್ರೀಶನ ಪ್ರತಿಮಾ ರೂಪರಾದ ಜೀವಿಗಳನ್ನು ಕಂಡಾಗಲೆಲ್ಲ ಅವನ ರೂಪಗಳ ಸ್ಮರಣೆ ಸಹಜವಾಗಿ ಬರುವುದು. ಆನಂದವಾಗುವುದು. ಇದನ್ನು ಭಾಗವತ ಹೇಳುತ್ತಿದೆ.

ಏತಾವಾನೇವ ಲೋಕೇऽಸ್ಮಿನ್ ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ।
ಏಕಾಂತ ಭಕ್ತಿರ್ಗೋವಿಂದೇ ಯತ್ ಸರ್ವತ್ರ ತದೀಕ್ಷಣಂ ॥

(ಭಾ.೭.೭.೫೬)

ಮಾನವನಿಗೆ ಈ ಲೋಕದಲ್ಲಿ ಪರಮಪ್ರಯೋಜನ ಯಾವುದೆಂದರೆ, ಗೋವಿಂದನೆ ಸರ್ವಾಂತರ್ಯಾಮಿ ಸ್ವಾಮಿ ಎಂದು ತಿಳಿದು ಅವನೇ ಸರ್ವೋತ್ತಮನೆಂದು ಭಾವಿಸಿ ಆನಂದಿಸುವುದು.

❖❖❖

## ಅಹಿಂಸಾ ಧರ್ಮ

**—೨೫೪—**

### ದ್ವೇಷಿಗಳು ಯಾರೂ ಇಲ್ಲ, ಎಲ್ಲರನ್ನೂ ಪ್ರೀತಿಸಬೇಕು

**ಜಹ್ಯಾಸುರಂ ಭಾವಮಿಮಂ ಸ್ವಮಾತ್ಮನಃ**
**ಸಮಂ ಮನೋ ಧತ್ಸ್ವ ನ ಸಂತಿ ವಿದ್ವಿಷಃ ।**

**ಋತೇಽಜಿತಾದಾತ್ಮನ ಉತ್ಪಥಸ್ಥಿತಾತ್**
**ತದ್ ವಿದ್ಧ್ಯನಂತಸ್ಯ ಮಹತ್ ಸಮರ್ಹಣಂ ॥**

(ಭಾ.೭.೮.೧೦)

ಅಕ್ರೋಧಾಪರನಾಮಕಂ ಅಹಿಂಸಾಖ್ಯಂ ಭಾಗವತಧರ್ಮಮಾಹ ॥ **ಜಹೀತಿ** ॥ ಹಿರಣ್ಯಕಶಿಪುಂ ಪ್ರತಿ ಪ್ರಹ್ಲಾದವಚನಮೇತತ್ । ಇಮಂ ಆಸುರಂ ಭಾವಂ ಸ್ವಭಾವಂ। ಜಹಿ ತ್ಯಜ। ತ್ಯಕ್ತ್ವಾ ಚ ಆತ್ಮನಃ ಮನಃ ಸಮಂ ಸರ್ವಭೂತೇಷು । ಧತ್ಸ್ವ ಸ್ಥಾಪಯ ಕುರು । ನನು ಮಿತ್ರೇ ವೋದಾಸೀನೇ ವಾ ಕಥಂಚಿತ್ಸಮಂ ಮನೋ ನಿವೇಷ್ಟುಂ ಶಕ್ಯಂ, ವಿದ್ವಿಷ್ಟೇ ತು ಕಥಂ ಶಕ್ಯತ ಇತ್ಯತ ಉಕ್ತಂ ॥ **ಋತ ಇತಿ** ॥ ಅಜಿತಾತ್ । ಅತ ಏವ ಸನ್ಮಾರ್ಗಂ ಪರಿತ್ಯಜ್ಯ ಅಸನ್ಮಾರ್ಗೇ ಪ್ರವೃತ್ತಾತ್ । ಆತ್ಮನಃ ಮನಸಃ । ಋತೇ । ವಿದ್ವಿಷಃ ವಸ್ತುತೋ ನ ಸಂತ್ಯೇವ । ವಸ್ತುತೋ ದ್ವೇಷಿಣ ಉದಾಸೀನಾ ಮಿತ್ರಂ ಚೇತಿ ನ ಸಂತ್ಯೇವ। ಮನೋದೋಷೇಣೈವ ತಥಾ ಭಾಸಂತೇ। ತಚ್ಚ ಸನ್ಮಾರ್ಗವಿರುದ್ಧಂ। ಅತಸ್ತತ್ಪರಿತ್ಯಜ್ಯ ಸರ್ವತ್ರ ಸಾಮ್ಯೇನ ಮನೋ ನಿವೇಶ್ಯಮಿತಿ । ಏವಂಕೃತೇ ಯದಿ ಮಹತ್ಪ್ರಯೋಜನಂ ವಿದ್ಯೇತ । ವಿದ್ಯತೇ ಚೇತ್ ತತ್ಕಿಮಿತ್ಯತ ಆಹ । ತದಿತಿ । ಸರ್ವಭೂತೇಷು ಸಾಮ್ಯೇನ ಮನೋನಿವೇಶನಂ ಅನಂತಸ್ಯ ಹರೇಃ । ಮಹತ್ ಅತ್ಯುತ್ತಮಂ । ಸಮರ್ಹಣಂ ಪೂಜನಮಿತಿ । ವಿದ್ಧೀತಿ । ಪೂಜಯಾ ಪ್ರಸನ್ನೇ ಚ ಭಗವತಿ ಕಿಮಲಭ್ಯಮಿತಿ ಭಾವಃ ॥

❖❖❖

'ಅಕ್ರೋಧ'ವೆಂದು ಕರೆಸುವ ಅಹಿಂಸಾ ಎಂಬ ಭಾಗವತಧರ್ಮವನ್ನು ಹಿರಣ್ಯಕಶಿಪುವಿಗೆ ಪ್ರಹ್ಲಾದ ಹೇಳುತ್ತಾನೆ—

ಈ ನಿನ್ನ ಅಸುರ ಸ್ವಭಾವವನ್ನು ಬಿಡು. ನಿನ್ನ ಸೌಹಾರ್ದಪೂರ್ಣವಾದ ಮನಸ್ಸನ್ನು ಎಲ್ಲ ಜೀವಿಗಳಲ್ಲಿಯೂ ಇರಿಸು. ದ್ವೇಷಿಜೀವಿಗಳಲ್ಲಿ ಹೇಗೆ ಮನವಿಡಬೇಕೆಂದರೆ ದುರ್ಮಾರ್ಗವನ್ನು ಹಿಡಿದ ನಿನ್ನ ಮನ ಒಂದನ್ನು ಬಿಟ್ಟರೆ ವಸ್ತುತಃ ನಿನಗೆ ದ್ವೇಷಿಗಳಾರೂ ಇಲ್ಲ. ಶತ್ರು ಮಿತ್ರ ಉದಾಸೀನರೆಂದು ಜೀವಿಗಳು ನಿನಗೆ ಕಂಡು ಬರುವುದು ನಿನ್ನ ಮನೋದೋಷದಿಂದ. ಅದು ಸನ್ಮಾರ್ಗವಲ್ಲ. ಅದಕ್ಕೆ ವಿರುದ್ಧ. ಆದರಿಂದ ಅದನ್ನು ಬಿಟ್ಟು ಸರ್ವತ್ರ ಸಮವಾಗಿ ಮನಸ್ಸನ್ನಿಡು. ಆದರಿಂದ ಮಹತ್ತಾದ ಪ್ರಯೋಜನವಿದೆ. ಏಕೆಂದರೆ ಅದು

ಭಗವಂತನ ಪೂಜೆಯಾಗುತ್ತದೆ. ಪೂಜೆಯಿಂದ ಭಗವಂತನೊಲಿದರೆ ಅಲಭ್ಯ ವೇನಿದೆ?

❖❖❖

—೨೫೫—

**ಯಾರಲ್ಲಿಯೂ ಕ್ರೋಧ ಸಲ್ಲದು**

ತಂ ದುರ್ಜಯಂ ಶತ್ರುಮಸಹ್ಯವೇಗಂ
ಅರುಂತುದಂ ತನ್ನ ವಿಜಿತ್ಯ ಕೇಚಿತ್ ।
ಕುರ್ವಂತ್ಯಸದ್‌ವಿಗ್ರಹಮತ್ರ ಮರ್ತ್ಯೈ-
ರ್ಮಿತ್ರೈರುದಾಸೀನರಿಪುಂ ವಿಮೂಢಾಃ ॥

(ಭಾ.೧೧.೨೩.೪೯)

ಉತ್ಪಥಸ್ಥಿತಾದಿತ್ಯುಕ್ತಂ ತತ್ರ ಕೋಽಯಮಸತಾಂ ಮಾರ್ಗ ಇತ್ಯತಃ ಚಿತ್ತವಿಕ್ಷೇಪ ಏವೇತ್ಯಾಶಯೇನ ತಂ ವಿಶದಯತಿ ॥ ತಮಿತಿ ॥ ತಂ ಮನೋರೂಪಂ । ಅತ್ರ ಜನೇಷು । ಕೇಚಿತ್ಪುರುಷಾಃ । ಅರುಂತುದಂ ಅತಿದುಃಖದಂ । ಅಸಹ್ಯಃ ಸೋಢುಮಶಕ್ಯೋ ವೇಗೋ ಯಸ್ಯ ತಂ । ತಸ್ಮಾತ್ ತೇ ಪುರುಷಾಃ ವಿಶೇಷೇಣ ಮೂಢಾಃ ಅಜ್ಞಾನಿನ ಇತಿ । ಅತ ಏವ ವಿಮೂಢತ್ವಂ ದ್ಯೋತಯಿತುಂ ವಸ್ತುತೋ ಯೋ ರಿಪುಸ್ತೇನ ಸಹ ಕಲಹಃ ಕರ್ತುಂ ಯೋಗ್ಯಃ । ನ ಚೋದಾಸೀನತಯಾ ಕೈಶ್ಚಿನ್ಮಿತ್ರತಯಾಪಿ ಕೃತ ಇತ್ಯಾಶಯೇನೋದಾಸೀನ-ರಿಪುಮಿತಿ ಶತ್ರುಂ ವಿಶೇಷಿತವಾನ್ । ಮಿತ್ರೈರಿತಿ ಚ ಮರ್ತ್ಯಾನಿತಿ । ಶತ್ರುಷು ಮೈತ್ರ್ಯಾಃ ಮಿತ್ರೇಷು ವೈರಸ್ಯೌದಾಸೀನ್ಯಸ್ಯ ಚ ಉಭಯತ್ರ ಕರಣಂ ಅಸನ್ಮಾರ್ಗೋ ವಿಮೂಢೈರೇವ ಸೇವ್ಯ ಇತ್ಯುಕ್ತಂ ವಿಶದೀಕೃತಮಿತಿ ಜ್ಞೇಯಂ । **ಯಥಾಹುಃ**— ''ಉತ್ಪಥಶ್ಚಿತ್ತವಿಕ್ಷೇಪ' (೧೧।೧೯।೪೩) ಇತಿ ॥

❖❖❖

ಭಿಕ್ಷುಗೀತೆ—ದುರ್ಮಾರ್ಗದಲ್ಲಿ ನಡೆಯುವ ಮನಸು ಹುಣ್ಣಿನ ಮೇಲೆ ಉಪ್ಪುಸುರಿದಂತೆ ಅತಿ ದುಃಖದಾಯಕ. ಸಹಿಸಿಕೊಳ್ಳಲು ಅಶಕ್ಯನಾದ ಶತ್ರು ಈತ ಇವನನ್ನು ವಶಪಡಿಸಿಕೊಳ್ಳದೇ ಬಲು ಅಜ್ಞರಾದ ಜನರು ವಿಷ್ಣುಭಕ್ತಿಯಲ್ಲಿ ಉದಾಸೀನರಾದವರನ್ನು ಬಿಡದೆ ಕೆಡಿಸುವ ಕಾಲನೇಮಿ ಅಸುರನಿಂದ

**ಅಭಿಮನ್ಯವಾದ ತಮ್ಮ ದುಷ್ಟಮನಸ್ಸನ್ನು ನಿಗ್ರಹಿಸಿಕೊಳ್ಳದೆ ಬೇರೆ ಮಿತ್ರರಾದ ಜನರೊಂದಿಗೆ ಕೆಟ್ಟ ಕಲಹವನ್ನು ಮಾಡುತ್ತಿರುವರು.**

ವಸ್ತುತಃ ಯಾರು ಶತ್ರುವೋ ಅವನೊಂದಿಗೆ ಕಲಹ ಮಾಡಬಹುದು. ವಸ್ತುತಃ ಉದಾಸೀನನಾಗಿದ್ದು ಕೆಲವರಿಗೆ ಮಿತ್ರನಾಗಿರುವನೊಂದಿಗೆ ಕಲಹ ಯುಕ್ತವಲ್ಲ. ಇದು ಕ್ರೋಧ, ಹಿಂಸೆ. ಆದರೂ ಮಾಡುತ್ತಾರೆ ಅಜ್ಞರು. ಶತ್ರುಗಳಲ್ಲಿ ಮೈತ್ರಿಯನ್ನೂ ಮಿತ್ರರಲ್ಲಿ ವೈರವನ್ನೂ ಇಬ್ಬರಲ್ಲೂ ಔದಾಸೀನ್ಯವನ್ನೂ ಮಾಡುವುದು ದುರ್ಮಾರ್ಗ. ಅಜ್ಞರು ಮಾತ್ರ ಈ ಮಾರ್ಗದಲ್ಲಿ ನಡೆಯುತ್ತಾರೆ.

ಉತ್ಪಥಶ್ಚಿತ್ತವಿಕ್ಷೇಪಃ । (ಭಾ.೧೧.೧೯.೪೨)

'ಉತ್ಪಥ' ಎಂದರೆ ಚಿತ್ತದ ವಿಕ್ಷೇಪ. ಶತ್ರುಗಳಲ್ಲಿ ಮೈತ್ರಿ , ಮಿತ್ರರಲ್ಲಿ ವೈರ, ಇಬ್ಬರಲ್ಲೂ ಔದಾಸೀನ್ಯ ಮಾಡುವುದೇ ಚಿತ್ತವಿಕ್ಷೇಪವೆಂದು ಉತ್ಪಥವೆಂದು ಕರೆಸಿಕೊಳ್ಳುತ್ತದೆ. ಈ ಉತ್ಪಥವಿಲ್ಲದಿರುವುದೇ ಅಕ್ರೋಧ ಅಹಿಂಸೆ.

❖❖❖

—೨೫೬—

**ಆರು ಶತ್ರುಗಳನ್ನೇ ಗೆಲ್ಲಬೇಕು**

**ದಸ್ಯೂನ್ ಪುರಂ ಷಣ್ಣವಿಜಿತ್ಯ ಲುಂಪತೋ**
**ಮನ್ಯಂತ ಏಕೇ ಸ್ವಜಿತಾ ದಿಶೋ ದಶ ।**
**ಜಿತಾತ್ಮನೋ ಜ್ಞಸ್ಯ ಸಮಸ್ಯ ದೇಹಿನಾಂ**
**ಸಾಧೋಃ ಸ್ವಮೋಹಪ್ರಭವಾಃ ಕುತಃಃ ಪರೇ ॥**

(ಭಾ.೭..೮.೧೦)

**ಅಸ್ತ್ವಯಮಸನ್ಮಾರ್ಗೋ ವಿಮೂಢೈಃ ಸೇವ್ಯಃ, ಸನ್ಮಾರ್ಗಸ್ತು ಸಾಧುಭಿರ್ಜ್ಞಾನಿಭಿಃ ಸೇವ್ಯಃ ಕೋಽಸಾವಿತ್ಯತಸ್ತತ್ರ ವಿಶೇಷಸೂಚನಾಯ ಪೂರ್ವೋದಿತಾಸನ್ಮಾರ್ಗಾನುವಾದಪೂರ್ವಕಂ ತಂ ದರ್ಶಯತಿ ॥ ದಸ್ಯೂನಿತಿ ॥ ಏಕೇ ವಿಮೂಢಾಃ । ಪುರಂ ಸ್ವಾಧಿಷ್ಠಿತಮೇವ ಶರೀರಂ । ಲುಂಪತಃ ನಾಶಯತಃ, ತತ್ರಾಪಿ ಷಟ್ಸಂಖ್ಯಾನ್ । ತೇಽಪಿ ನ ಸಂಮುಖತಯಾ ಸ್ಥಿತ್ವಾ ಯುದ್ಧಕರ್ತಾರಃ ಇತ್ಯಾಶಯೇನೋಕ್ತಂ ॥ ದಸ್ಯೂನಿತಿ ॥ ಚೋರಾನ್ ನ ವಿಜಿತ್ಯ ಅವಿಜಿತ್ವಾ । ದಶಾಪಿ ದಿಶಃ ಸ್ವೈರ್ಜಿತಾ ಮನ್ಯಂತೇ, ಇತ್ಯನೇನ ಯಥಾ ಕೇನಚಿದ್ರಾಜಾಭಾಸೇನ**

**ಸ್ವಾಧಿಷ್ಠಿತಮೇವ ಸ್ಥಾನಂ ನಿರಂತರಮೇವ ನಾಶಯತಃ ಪಂಚಷಾನಪಿ ಚೋರಾನ್ ನಿಗ್ರಹೀತುಂ ಅಶಕ್ತೇನ ಶ್ವಃ ಅನ್ಯರಿಪೋಃ ರಾಜ್ಯಂ ಗೃಹ್ಯತೇ ಅಸ್ಮಾಭಿಃ ಪರಶ್ವಶ್ಚ ಪರಸ್ಯೈತ್ಯೇವಮಾದಿರೂಪೇಣ ಕಥನಂ, ತಥಾ ಪ್ರಯತನಂ ಚ ಪ್ರೇಕ್ಷಾವತಾಂ ಅಪಹಸನೀಯಂ, ಏವಂ ಅಸನ್ಮಾರ್ಗೋಽಪೀತಿ ವಿಶೇಷಃ ಸೂಚಿತೋ ಭವತಿ। ಇದಾನೀಂ ಸತಾಂ ಮಾರ್ಗಂ ದರ್ಶಯತಿ ॥ ಜಿತೇತಿ ॥ ಜಿತೋ ವಿಜಿತಃ ಆತ್ಮಾ ಮನೋ ಯೇನ ಸ ತಸ್ಯ । ಅತ ಏವ ದೇಹಿನಾಂ ಸರ್ವೇಷಾಂ । ಸಮಸ್ಯ ಸಾಧೋಃ ನಿರ್ಮತ್ಸರಸ್ಯ । ಜ್ಞಸ್ಯ ಜ್ಞಾನಿನಃ । ಸ್ವಸ್ಯ ಮೋಹೇನ ಅಜ್ಞಾನೇನೈವ ಪ್ರತೀಯಮಾನಾಃ । ಪರೇ ವೈರಿಣಃ ಉದಾಸೀನಾಶ್ಚ । ಕುತಃ ಸ್ಯುಃ ನ ಕುತೋಽಪೀತಿ ॥ ಇದಮುದಿತಂ ಭವತಿ ॥ ಯೇ ಸ್ವಸ್ಯ ಪುರುಷಾರ್ಥನಾಶಕಾ ಮನಆದಯೋ ವೈರಿಣಃ ತೈರೇವ ಸಹ ನಿರಂತರಂ ಜ್ಞಾನಾಸಿಧಾರಣಾದಿ-ಪೂರ್ವಕವೈರಭಾವೇನ ಕಲಹಃ, ಕೇಷುಚಿದೌದಾಸೀನ್ಯಂ ಚ, ಯೇ ತು ಸ್ವಸ್ಯ ಭಕ್ತಿಜ್ಞಾನಾದಿಪುರುಷಾರ್ಥಸ್ಯ ವಿಘಟಕಾಃ, ಯೇ ತು ತತ್ಸಾಧಕಾಃ ತೇಷು ಸರ್ವೇಷು ಭೂತೇಷು ಸಖ್ಯಮೇವೇತಿ ತ್ರಿಕಂ ಸದಾನುಷ್ಠೇಯಮಿತಿ ಹಿ ಸತಾಂ ಮಾರ್ಗ ಇತಿ । ಯಥಾಹುಃ—**

**''ಪರಃ ಸ್ವಾತ್ಮೇತ್ಯಸದ್ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ ।**
**ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ'' ಇತಿ ॥**

❖❖❖

ಪ್ರಹ್ಲಾದನು ಹಿರಣ್ಯಕಶಿಪುವಿಗೆ ಹೇಳುತ್ತಾನೆ— ಕೆಲವರು ಮೂಢರು ತಮ್ಮ ಶರೀರವನ್ನೇ ಕೊಳ್ಳೆ ಹೊಡೆಯುವ ಆರುಮಂದಿ ಕಳ್ಳರಂತಿರುವ ಕಾಮಾದಿ ಶತ್ರುಗಳನ್ನು ಗೆಲ್ಲದೆ ದಶದಿಕ್ಕುಗಳನ್ನು ಗೆದ್ದೆವೆನ್ನುತ್ತಾರೆ. ತನ್ನ ರಾಜ್ಯವನ್ನೆ ಕೊಳ್ಳೆ ಹೊಡೆಯುತ್ತಿರುವ ಐದಾರು ಕಳ್ಳರನ್ನು ಗೆಲ್ಲಲಾರದ ಒಬ್ಬ ರಾಜ 'ನಾಳೆಯೆ ಒಂದು ಶತ್ರುರಾಜ್ಯವನ್ನು ಗೆಲ್ಲುವೆನು., ನಾಡಿದ್ದು ಇನ್ನೊಂದು ಶತ್ರುರಾಜ್ಯವನ್ನು ಗೆಲ್ಲುವೆನೆ'ಂದು ಹೇಳಿಕೊಂಡರೆ ಜನರು ನಗುತ್ತಾರೆ. ಹಾಗೇ ಕಾಮಾದಿಗಳಿಗೆ ವಶನಾದವನು ಆ ಆರು ಶತ್ರುಗಳನ್ನು ಗೆಲ್ಲದೆ ಹತ್ತು ದಿಕ್ಕುಗಳನ್ನು ಗೆಲ್ಲುವೆನೆಂದರೆ ಅದು ಅಪಹಾಸ್ಯವಾಗುವುದು. ಇದು ಅಸನ್ಮಾರ್ಗ. 'ಜಿತಾತ್ಮನಃ' ಮನಸ್ಸನ್ನು ವಶಪಡಿಸಿಕೊಂಡು ಎಲ್ಲ ಶರೀರಿಗಳಲ್ಲಿ ಸಮವಾಗಿ ವರ್ತಿಸುವ ಸಜ್ಜನನಾದ ಜ್ಞಾನಿಗೆ ಅಜ್ಞಾನ ಮಾತ್ರದಿಂದ ಕಾಣುವಂಥ ಶತ್ರುಗಳು ಉದಾಸೀನರು ಎಲ್ಲಿರುವರು? ಎಲ್ಲಿಯೂ ಇರುವುದಿಲ್ಲ.

ಪುರುಷಾರ್ಥನಾಶಕರಾದ ದುಷ್ಟ ಮನ ಆದಿ ಆಂತರ ಶತ್ರುಗಳನ್ನು ನಿರಂತರ ಜ್ಞಾನವೆಂಬ ಖಡ್ಗ ಹಿರಿದು ಹೊಡೆದು ಜಯಿಸಬೇಕು. ಉದಾಸೀನರಲ್ಲಿ ಉದಾಸೀನತೆಯಿಂದಿರಬೇಕು. ಭಕ್ತಿಜ್ಞಾನಾದಿ ಪುರುಷಾರ್ಥ ಸಾಧಕರಾದ ಸಾಧುಗಳಲ್ಲಿ ನಿರಂತರ ಸಖ್ಯವನ್ನೇ ಮಾಡಬೇಕು. ಇದೇ ಸನ್ಮಾರ್ಗ.

ಪರಃ ಸ್ವಶ್ಚೇತ್ಯಸದ್‌ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ
ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ ॥

(ಭಾ.೭.೫.೧೧)

ಪ್ರಹ್ಲಾದನು ಶಂಡಾಮರ್ಕರಿಗೆ ಹೇಳುತ್ತಾನೆ—'ಇವನು ಶತ್ರು ಇವನು ಮಿತ್ರ, ನಾನು ಸ್ವತಂತ್ರನೆಂದು ತಿಳಿಯುವ ಅಜ್ಞಾನ ಮೂಲಕವಾದ ದುರಾಗ್ರಹವು ಹರಿಯ ಬಂಧಕಶಕ್ತಿಯಿಂದ ಹುಟ್ಟಿ ದುರ್ಜನರಲ್ಲಿ ಕಂಡುಬರುತ್ತದೆ. ಅಂಥ ಹರಿಗೆ ನಮಸ್ಕಾರ'.

ಆದರಿಂದ 'ಅಕ್ರೋಧ'ವೆಂದೂ ಕರೆಸುವ ಅಹಿಂಸಾ ಎಂಬ ಭಾಗವತ ಧರ್ಮದಿಂದ ಭಗವಂತನ ಪ್ರೀತಿಯಾಗುವುದು. ಮೋಕ್ಷ ಲಭಿಸುವುದು. ಆದರಿಂದ ತಪ್ಪದೆ ಅದನ್ನು ಅನುಷ್ಠಾನ ಮಾಡಬೇಕು.

❖❖❖

—೨೫೭—

**ಎಲ್ಲ ನನ್ನದೆನ್ನುವವನಿಗೆ ವಿಷ್ಣುಲೋಕವಿಲ್ಲ**

**ಮನಸ್ವಿನೋ ನಿರ್ಜಿತದಿಗ್ಗಜೇಂದ್ರಾ**
**ಮಮೇತಿ ಸರ್ವೇ ಭುವಿ ಬದ್ಧವೈರಾಃ ।**
**ಮೃಧೇ ಶಯೀರನ್ ನ ತು ತದ್ ವ್ರಜಂತಿ**
**ಯನ್ನ್ಯಸ್ತದಂಡೋ ಗತವೈರೋಽಭಿಯಾತಿ ॥**

(ಭಾ.೫.೧೩.೧೯)

**ಏವಮಕ್ರೋಧಾಪರಪರ್ಯಾಯೋಽಹಿಂಸಾಖ್ಯೋ ಭಾಗವತೋ ಧರ್ಮಃ ಭಗವತ್ಪ್ರೀತಿಹೇತುತಯಾ ಪುರುಷಾರ್ಥಹೇತುತ್ವಾತ್ ಅವಶ್ಯಂ ಸಂಪಾದ್ಯ ಇತ್ಯಭಿಹಿತಂ । ಇದಾನೀಮೇತದನುಷ್ಠಾನಾಭಾವೇ ಅನರ್ಥಪ್ರಾಪ್ತೇ-**

ಶ್ಚಾಯಮಾವಶ್ಯಕ ಇತಿ ಭಾವೇನಾಹ ॥ ಮನಸ್ವಿನ ಇತಿ ॥ ನಿರ್ಜಿತಮನಸ್ತ್ವೇನ ಗತವೈರಃ ಅತ ಏವ ನ್ಯಸ್ತದಂಡಃ ಪರಾನುದ್ವೇಜಕಃ। ಕ್ರೋಧರಾಹಿತ್ಯರೂಪಾ-ಹಿಂಸಾಖ್ಯ ಭಾಗವತಧರ್ಮಾನುಷ್ಠಾತೇತಿ ಯಾವತ್। ಪುರುಷೋ ಯದ್ವಸ್ತು ಪ್ರಾಪ್ನೋತಿ ತದ್ವಸ್ತು ತೇ ನೈವ ವ್ರಜಂತಿ। ತೇ ಕೇ ಯೇ ಅಜಿತಮನಸ್ಕತಯಾ ಸ್ವಮನೋನುಸಾರೇಣ ಪ್ರವೃತ್ತಿಮಂತಃ ಭುವಿ ಭೂಮೌ।ವಿದ್ಯಮಾನೇಷು ಸರ್ವೇಷ್ವಪಿ। ಬದ್ಧವೈರಾ ಭೂತ್ವಾ। ಕದಾಚಿನ್ನಿರ್ಜಿತಾ ದಿಗ್ಗಜಸದೃಶಾ ರಾಜ್ಞಾಮಿಂದ್ರಾ ಯೈಸ್ತೇ ತಾದೃಶಾ ಭೂತ್ವಾ। ಕ್ವಚಿಚ್ಚ ಮಮೇದಂ ರಾಜ್ಯಮಿತಿ ಯುದ್ಧಾರ್ಥಂ ಗತಾಃ ಸರ್ವೇऽಪಿ ಯುದ್ಧಭೂಮಾವೇವ ಶಯೀರನ್। ಮೃತಾಶ್ಚ ನರಕಾದ್ಯನರ್ಥಮೇವ ಪ್ರಾಪ್ನುವಂತೀತಿ ಭಾವಃ ॥

❖❖❖

ಜಡಭರತನು ರಹೂಗಣ ರಾಜನಿಗೆ ಹೇಳುತ್ತಾನೆ—'ಮನಸ್ವಿನಃ' ತಮ್ಮ ಮನಬಂದಂತೆ ವರ್ತಿಸುವವರು, ಭೂಮಿಯಲ್ಲಿ ಎಲ್ಲರ ದ್ವೇಷ ಕಟ್ಟಿಕೊಂಡವರು ದಿಗ್ಗಜಗಳಂತಿರುವ ರಾಜರನ್ನೂ ಗೆಲ್ಲುವವರು ಇಂಥ ರಾಜರು ಕೂಡ 'ಮಮ' ನನಗೆ ಈ ರಾಜ್ಯಬೇಕೆಂದು ಇದು ನನ್ನ ರಾಜ್ಯವೆಂದು ಹೊಡೆದಾಡಿ ರಣರಂಗದಲ್ಲಿ ಸತ್ತುಬೀಳುತ್ತಾರೆ. ಸತ್ತಮೇಲೂ ಕೂಡ, ಅವರು ವೈರವನ್ನು ಬಿಟ್ಟಿರುವ ಹಿಂಸೆ ಮಾಡದಿರುವ ಭಾಗವತಧರ್ಮಾನುಷ್ಠಾನ ನಿರತನು ಹೊಂದುವ ವಿಷ್ಣುಲೋಕ ವನ್ನು ಹೊಂದಲಾರರು. ನರಕಾದಿ ಅನರ್ಥವನ್ನೆ ಹೊಂದುವರು.

❖❖❖

## ಬ್ರಹ್ಮಚರ್ಯ ಧರ್ಮ

### –೨೫೮–

### ಪರಬ್ರಹ್ಮನಿಗೆ ಸರ್ವಾಂಗ ಸೇವೆಯೆ ಬ್ರಹ್ಮಚರ್ಯ ಭಾಗವತಧರ್ಮ

ತತ್ವೇ ಮನೋ ದರ್ಶನೇ ದೃಗಪಿ ಸ್ತುತೌ ಚ
ವಾಕ್ ಕರ್ಮಣಿ ಹ್ಯಪಿ ಕರೌ ಶ್ರವಣಂ ಕಥಾಯಾಂ।
ಸಂಸೇವಯಾ ತ್ವಯಿ ವಿನೇತಿ ಷಡಂಗಯಾ ಕಿಂ
ಭಕ್ತಿಂ ಜನಃ ಪರಮಹಂಸಗತೌ ಲಭೇತ ॥

(ಭಾ.೭.೯.೫೦)

ಬ್ರಹ್ಮಚರ್ಯಾಖ್ಯಂ ಭಾಗವತಧರ್ಮಮಾಹ ।। **ತತ್ವ ಇತಿ ।।** ತತ್ರ ಬ್ರಹ್ಮಣಿ ಹರೌ ಚರಣಮೇವ ಬ್ರಹ್ಮಚರ್ಯಂ ನಾಮ । ಚರಣಂ ಚ ತತ್ಸೇವಯಾ ಚಿಂತನಾದಿರೂಪಯಾ ಸಂಪಾದ್ಯಂ ತದ್ವಿಷಯತ್ವಂ । ತತ್ರ ಕಾರಣಾನಿ ಚೈತಾನಿ ಷಟ್ ಮನಆದೀನಿ । ಸಾ ಚ ಷಡಂಗಸೇವಾ ಭಕ್ತಿಸಾಧನಭೂತೇತಿ ಗೀಯತೇ ।। ತತ್ವೇ ಪರತತ್ವವಿಷಯಕಂ ಮನಃ । ಪರತತ್ವಪ್ರತೀಕಸ್ಯ ದರ್ಶನೇ ದರ್ಶನವಿಷಯಿಣೀ ದೃಕ್ ಚಕ್ಷುರಪಿ । ಪರತತ್ತ್ವಸ್ಯ ಸ್ತುತೌ ಸ್ತುತಿವಿಷಯಿಣೀ ವಾಕ್ ಚ । ಪರತತ್ವಸ್ಯ ಕರ್ಮಣಿ ಮಂದಿರಮಾರ್ಜನಾದೌ ಕರ್ಮಣಿ ತದ್ವಿಷಯೌ ಕರಶ್ಚ ಕರಶ್ಚ ಕರೌ । ಕಾಯಃ ಕರಶ್ಚ । ಕರಶಬ್ದಸ್ಯ ದೇಹೇ ಪ್ರಯೋಗಸ್ತತ್ವವಿತ್ಸಂಪ್ರದಾಯಾಗತತಯಾ ರೂಢ್ಯಾ ವಾ ಅಸಾಧಾರಣ್ಯೇನ ವ್ಯಪದೇಶಾ ಭವಂತೀತಿ ಯೋಗೇನ ಅವಯವನಿವಹಾತ್ಮಕೇ ಕಾಯೇ ಕರಯೋರ್ಹೋಮದಾನಜಪಾದಿಷು ಬಹುಷೂತ್ಕೃಷ್ಟದೇಹಸಾಧನಕರ್ಮಸು ಹೇತುತಯಾ ಪ್ರಾಧಾನ್ಯೇನ ಪ್ರಧಾನಾವಯವವಾಚಕೇನ ಕರಪದೇನ ಅವಯವಿನಃ ಕಾಯಸ್ಯ ಬಹುತರಪ್ರಯೋಗಸಿದ್ಧಯಾ ನಿರೂಢಲಕ್ಷಣಯಾ ವಾ ಬೋಧ್ಯಃ । ಅತ ಏವ ಮನಉಕ್ತಿಪಾಣಿಭಿರಿತಿ ಪಾಣಿಪದಸ್ಯ ದೇಹೇ ಪ್ರಯೋಗಃ । ಅತ್ರ ಚೋಭಾವಪಿ ವಿವಕ್ಷಿತಾವಿತಿ ಸೂಚಯಿತುಂ ಕರಾವಿತಿ ದ್ವಿವಚನಂ ಪ್ರಾಯುಂಕ್ತ । ಕರಯೋರ್ದ್ವಿತ್ವವಿವಕ್ಷಯಾ ತತ್ಪ್ರಯೋಗ ಇತಿ ತು ನ ಮನೋಜ್ಞಂ ತದ್ವಚನೇ ಪ್ರಯೋಜನಾಭಾವಾತ್ । ವಾಸ್ತವಸ್ಥಿತಿಜ್ಞಾಪನಾಯೇತಿ ಚೇತ್ । ತರ್ಹಿ ಚಕ್ಷುಷೋಃ ಶ್ರವಣಯೋಶ್ಚ ಜ್ಞಾಪ್ಯತಾಂ । ಸರ್ವಾನುಭವಸಿದ್ಧಾರ್ಥಃ ಕಿಮಿತಿ ಜ್ಞಾಪನೀಯ ಇತಿ ಚೇತ್ । ಸಮಃ ಸಮಾಧಿಃ । ಅತೋ ಜ್ಞಾಪನಪ್ರಯೋಜನಾಭಾವೇನ ಸ್ವೇಚ್ಛಯೈಕವಚನೇ ದ್ವಿವಚನೇ ವಾ ಪ್ರಯೋಕ್ತವ್ಯೇ ಯತ್ಸಜಾತೀಯೇ ಸಹ ಪಠಿತೇ ಏಕವಚನಂ ಪ್ರಯುಜ್ಯ ಅತ್ರೈವ ದ್ವಿವಚನಂ ತದ್ವಿಷಯಂ ತೇನ ಜಾನೀಮಃ ಅತ್ರ ಉಭಾವಪಿ ವಿವಕ್ಷಿತಾವಿತಿ । ಏವಂಪ್ರಕಾರೇಣ ಷಡ್ಭಿರ್ಮನಆದಿಭಿರಂಗೈರುಪೇತತಯಾ ಅತ ಏವ ಸಂ ಸಮ್ಯಕ್ ಪೂರ್ಣಯಾ ತ್ವಯಿ ತ್ವದ್ವಿಷಯಿಣ್ಯಾ ಚಿಂತನಾದಿರೂಪಯಾ ಸೇವಯಾ ವಿನಾ । ಜನೋ ಮುಮುಕ್ಷುಃ ಹರೌ ಭಕ್ತಿಂ ಪೂರ್ಣಾಂ ಲಭೇತ ಕಿಂ । ಕಿಮಾಕ್ಷೇಪೇ । ನ ಲಭೇದೇವ । ಅತ ಇದಂ ಭಕ್ತಾವಂತರಂಗಸಾಧನಮಿತಿ ಭಾವಃ । ಪರಮಹಂಸಾನಾಂ ಮನಃಶುದ್ಧಿಮತಾಂ ಜನಾನಾಂ ಗತೌ ಆಶ್ರಯೇ ।।

❖❖❖

ಪ್ರಹ್ಲಾದನು ನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—ಪರತತ್ವವಾದ ನಿನ್ನಲ್ಲಿ

**ನನ್ನ ಮನ ನಿಲ್ಲಲಿ. ಪರತತ್ವ ಪ್ರತಿಮೆಗಳಲ್ಲಿ ನನ್ನ ಕಣ್ಣು, ನಿನ್ನ ಸ್ತುತಿಯಲ್ಲಿ ವಾಕು, ನಿನ್ನ ಮಂದಿರ ಮಾರ್ಜನಾದಿಗಳಲ್ಲಿ ಶರೀರ ಹಸ್ತಗಳು, ಮತ್ತು ಕಥಾಶ್ರವಣದಲ್ಲಿ ಕಿವಿ ಇರಲಿ. ಈ ರೀತಿಯಲ್ಲಿ ಆರು ಅಂಗಗಳಿಂದ ಮಾಡುವ ನಿನ್ನ ಸೇವೆ ಇಲ್ಲದಿದ್ದಲ್ಲಿ, ಶುದ್ಧಾಂತಃಕರಣರಾದ ಸುಜನರಿಗೆ ಆಶ್ರಯನಾದ ನಿನ್ನಲ್ಲಿ ಜನರಿಗೆ ಭಕ್ತಿ ದೊರಕೀತೆ? ಇಲ್ಲ.**

ಷಡಂಗಗಳಿಂದ ಮಾಡುವ ಸೇವೆಯೆ ಬ್ರಹ್ಮಚರ್ಯೆ. ಅದೇ ಭಕ್ತಿಗೆ ಅಂತರಂಗ ಸಾಧನ.

ಇಲ್ಲಿ ಕರ ಶಬ್ದವನ್ನು ದೇಹ ಎಂಬ ಅರ್ಥದಲ್ಲಿಯೂ ಇಟ್ಟುಕೊಳ್ಳಬೇಕು. ದೇಹದ ಕರ್ಮಗಳನ್ನು ಮಾಡುವ ಅವಯವಗಳಲ್ಲೆಲ್ಲ ಮುಖ್ಯವಾದುದು 'ಕರ' ಕೈ. ಅದರಿಂದ ಕೈಯನ್ನು ಹೇಳುವ ಶಬ್ದವಾದ 'ಕರ' ಶಬ್ದದಿಂದ ದೇಹವನ್ನೂ ಹೇಳುವುದು ಯುಕ್ತ. ಅದರಿಂದ 'ಕೈ' ಎಂಬರ್ಥದ ಕರಶಬ್ದ, ಮತ್ತು ದೇಹಾರ್ಥಕವಾದ ಕರಶಬ್ದಗಳನ್ನು ಜೊತೆ ಸೇರಿಸಿ ಏಕಶೇಷಮಾಡಿದರೆ 'ಕರ' ಶಬ್ದವು ದೇಹ ಮತ್ತು ಕರ ಎರಡನ್ನೂ ಹೇಳುತ್ತದೆ. ಅದರಿಂದಲೇ 'ಕರೌ' ಎಂದಾಗಿದೆ. ಕೈ ಎಂಬ ಅರ್ಥದಲ್ಲಿ ಕರಗಳು ಎರಡು ಇರುವುದರಿಂದಲೇ 'ಕರೌ' ಎರಡು ಕರಗಳು ಎಂದೇಕೆ ಶ್ಲೋಕದಲ್ಲಿ ಹೇಳಿರಬಾರದು? ಎಂದರೆ, ಕರಗಳು ಎರಡಿರುವಂತೆ, ಕಣ್ಣುಗಳೂ ಎರಡು, ಕಿವಿಗಳೂ ಎರಡು ಇರುವಾಗ 'ದೃಕ್' 'ಶ್ರವಣಂ' ಎಂದು ಏಕವಚನವೇಕೆ? ಎಂಬ ಪ್ರಶ್ನೆ ಬರುತ್ತದೆ. ಅದರಿಂದ 'ಕರೌ' ಎಂಬ ಕರಶಬ್ದವು ದೇಹ ಮತ್ತು ಕೈ ಎಂಬರ್ಥಗಳಲ್ಲಿದೆ. ಅದರಿಂದ ಷಡಂಗಗಳು ಎಂದು ಯುಕ್ತವಾಗುತ್ತದೆ.

❖❖❖

—೨೫—

**ಯಮಳಾರ್ಜುನರ ಬ್ರಹ್ಮಚರ್ಯೆ**

**ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ**
**ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।**
**ಸ್ಮೃತ್ಯಾಂ ಶಿರಸ್ತವ ಸುರಪ್ರವರ ಪ್ರಣಾಮೇ**
**ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಂ ॥** (ಭಾ.೧೦.೧೧.೩೮)

**ಅಯಂ ಚ ಭಾಗವತೋ ಧರ್ಮಃ ನ ಕೇವಲಂ ಭಕ್ತ್ಯಂತರಂಗತಯಾ ಆವಶ್ಯಕಃ, ಕಿನ್ನಾಮ ಭಾಗವತೈರಪಿ ಪ್ರಾರ್ಥಿತತ್ವಾದಿತ್ಯಾಶಯೇನಾಹ ॥ ವಾಣೀತಿ ॥ ನೌ ಆವಯೋಃ। ಮನಃ ತವ ಪಾದಯೋಃ ಸ್ಮೃತೌ ಅಸ್ತು। ಹೇ ಸುರಪ್ರವರೇತಿ ಕೃಷ್ಣಂ ಪ್ರತಿ ಯಮಲಾರ್ಜುನಸಂಬೋಧನಂ। ತವ ಪ್ರಣಾಮೇ ಶಿರೋಽಸ್ತು। ಭವತ್ತನೂನಾಂ ಮುಖ್ಯತಃ ಪ್ರತಿಮಾನಾಂ ಸತಾಂ ಅಮುಖ್ಯತಃ ಪ್ರತಿಮಾನಾಂ ಚ ದರ್ಶನೇ ದೃಷ್ಟಿರಸ್ತು ॥**

❖❖❖

**ಭಕ್ತಿಗೆ ಸಾಧನವಾಗಿರುವುದರಿಂದ ಮಾತ್ರವಲ್ಲ, ಭಕ್ತರಿಗೆ ಬಲು ಇಷ್ಟವೂ ಆಗಿರುವುದರಿಂದ ಭಾಗವತಧರ್ಮವನ್ನು ಅನುಷ್ಠಾನ ಮಾಡಬೇಕು. ಯಮಳಾರ್ಜುನರು ಈ ಧರ್ಮವನ್ನು ಬಾಲಕೃಷ್ಣನಲ್ಲಿ ಬೇಡುತ್ತಾರೆ— 'ಶ್ರೀಕೃಷ್ಣ! ನಮ್ಮ ನಾಲಿಗೆ ನಿನ್ನ ಗುಣವರ್ಣನೆಯಲ್ಲಿ ನಿರತವಾಗಲಿ. ಕಿವಿಗಳು ನಿನ್ನ ಕಥಾಶ್ರವಣದಲ್ಲಿರಲಿ. ಹಸ್ತಗಳು ನಿನ್ನ ಪೂಜಾಕರ್ಮದಲ್ಲಿರಲಿ. ಮನಸ್ಸು ನಿನ್ನ ಪಾದಗಳ ಧ್ಯಾನದಲ್ಲಿರಲಿ. ಶಿರವೂ ನಿನ್ನ ಪ್ರಣಾಮ ಮಾಡುತ್ತಿರಲಿ. ಕಣ್ಣುಗಳು ನಿನ್ನ ಮುಖ್ಯಪ್ರತಿಮೆಗಳಾದ ಸಜ್ಜನರ ಮತ್ತು ಅಮುಖ್ಯಪ್ರತಿಮೆಗಳಾದ ದೇವಪ್ರತಿಮೆಗಳ ದರ್ಶನ ಮಾಡುತ್ತಿರಲಿ.**

'ತವ ತವ ಭವತ್' ನಿನ್ನ 'ನಿನ್ನ ನಿನ್ನ' ಎಂದು ಮತ್ತೆ ಮತ್ತೆ ಹೇಳಿ ನಿನ್ನಲ್ಲೇ ನಮ್ಮ ಮನ ಆದಿಗಳು ನೆಲೆಸಲಿ ಅನ್ಯತ್ರ ಹೋಗದಿರಲೆಂದು ಕೇಳಿಕೊಳ್ಳುತ್ತಾರೆ.

❖❖❖

**–೨೬೦–**

## ಪರೀಕ್ಷಿತನ ಬ್ರಹ್ಮಚರ್ಯ

**ಸಾ ವಾಗನಂತಸ್ಯ ಗುಣಾನ್ ಗೃಣೀತೇ**
**ಕರೌ ಚ ತತ್ಕರ್ಮಕರೌ ಮನಶ್ಚ।**
**ಸ್ಮರೇದ್ ವಸಂತಂ ಸ್ಥಿರಜಂಗಮೇಷು**
**ಶೃಣೋತಿ ತತ್ಪುಣ್ಯಕಥಾಃ ಸ ಕರ್ಣಃ ॥**

(ಭಾ.೧೦.೧೦೦.೧೯)

-೨೬೧-

## ಪರೀಕ್ಷಿತನ ಬ್ರಹ್ಮಚರ್ಯ

ಶಿರಸ್ತು ತಸ್ಯೋಭಯಲಿಂಗಮಾನಮೇತ್
ತದೇವ ಯತ್‌ಪಶ್ಯತಿ ತದ್ಧಿ ಚಕ್ಷುಃ ।
ಅಂಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜಂತಿ ನಿತ್ಯಂ ॥ (ಭಾ.೧೦.೧೦೦.೨೦)

ಭಗವದ್ವಿಷಯಕತ್ವವಿಶಿಷ್ಟಾನಾಂ ವಾಗಾದೀನಾಂ ಭಾಗವತ್ವೈಃ ಸ್ತುತತ್ವಾದಪ್ಯಯಂ ಸಂಪಾದ್ಯ ಇತಿ ಭಾವೇನಾಹ ॥ ಸೇತಿ ॥ ಯಾ ಗೃಣೀತೇ ಸೈವ ವಾಗ್ಧನ್ಯಾ । ವಾಕ್ತ್ವೇನ ಭವನಂ ಸಾರ್ಥಕಮಿತಿ ಭಾವಃ । ಏವಮುತ್ತರತ್ರಾಪಿ ದ್ರಷ್ಟವ್ಯಂ । ಸ್ಥಿರೇಷು ಚರೇಷು ಚೇತಿ ಸರ್ವತ್ರ ವಸಂತಂ ಹರಿಂ । ಅನೇನಾಪಿ ಸರ್ವತ್ರ ಭಗವಚ್ಚಿಂತನಮಾವಶ್ಯಕಮಿತಿ ಲಭ್ಯತ ಇತಿ ಜ್ಞೇಯಂ ॥ ೨೬೦ ॥

ತಸ್ಯ ಹರೇಃ ಉಭಯಲಿಂಗಂ ಚರಾಚರಪ್ರತೀಕಂ । ತದುಭಯಲಿಂಗಂ । ತದ್ಧಿ ತದೇವ ಚಕ್ಷುಃ । ವಿಷ್ಣೋಸ್ತಜ್ಜನಾನಾಂ ಚ ॥ ೨೬೧ ॥

❖❖❖

ಪರೀಕ್ಷಿದ್ರಾಜನು ಶುಕಮುನಿಗಳಲ್ಲಿ ಹೇಳಿಕೊಳ್ಳುತ್ತಾನೆ—ಅನಂತನ ಗುಣಗಳನ್ನು ಬಣ್ಣಿಸುವ ನಾಲಿಗೆ ಧನ್ಯ. ನಾಲಿಗೆಯಾಗಿದ್ದು ಹರಿಗುಣವರ್ಣನೆ ಮಾಡಿ ಅದು ಸಾರ್ಥಕವೆನಿಸುತ್ತದೆ. ಹರಿಪೂಜೆಗೈವ ಕೈಗಳೆ ಕೈಗಳು, ಸ್ಥಾವರ ಜಂಗಮಗಳಲ್ಲಿ ಅಂತರ್ಯಾಮಿಯಾಗಿರುವ ಹರಿಯನ್ನು ಸ್ಮರಿಸುವ ಮನಸೆ ಮನಸು. ಹರಿಯ ಪುಣ್ಯಕಥೆ ಕೇಳುವುದೆ ನಿಜವಾಗಿ ಕಿವಿ.

ಶ್ರೀಹರಿಯ ಚಲ ಅಚಲ ಪ್ರತಿಮೆಗಳಿಗೆ ನಮಿಸುವುದೆ ನಿಜವಾಗಿ ಶಿರಸ್ಸು. ಪ್ರತಿಮೆಗಳನ್ನು ನೋಡುವುದೇ ಕಣ್ಣು. ಅವನ ಮತ್ತು ಅವನ ಭಕ್ತರ ಪಾದೋದಕ ಸೇವಿಸುವವುಗಳೇ ಷಡಂಗಗಳು.

ಎಲ್ಲ ಅಂಗಗಳು ಭಗವಂತನ ಸೇವೆಯಲ್ಲಿ ನಿರತವಾಗಿಯೇ ಇರಬೇಕೆಂದು ಭಾಗವತರು ಹೊಗಳುವರು. ಅದರಿಂದ ಬ್ರಹ್ಮಚರ್ಯರೂಪವಾದ ಈ ಷಡಂಗ ಸೇವೆ ಅವಶ್ಯ ಕರ್ತವ್ಯವಾಗಿದೆ.

❖❖❖

–೨೬೨–

ಅಂಬರೀಷನ ಬ್ರಹ್ಮಚರ್ಯ

ಸ ವೈ ಮನಃ ಕೃಷ್ಣಪದಾರವಿಂದಯೋ
ರ್ವಚಾಂಸಿ ವೈಕುಂಠಗುಣಾನುವರ್ಣನೇ ।
ಕರೌ ಹರೇರ್ಮಂದಿರ ಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತ ಸತ್ಕಥೋದಯೇ ॥

(ಭಾ.೯.೬.೬)

–೨೬೩–

ಅಂಬರೀಷನ ಬ್ರಹ್ಮಚರ್ಯ

ಮುಕುಂದ ಲಿಂಗಾಲಯ ದರ್ಶನೇ ದೃಶೌ
ತದ್ ಭೃತ್ಯ ಗಾತ್ರ ಸ್ಪರ್ಶೇಂಗ ಸಂಗಂ ।
ಘ್ರಾಣಂ ಚ ತತ್ಪಾದಸರೋಜಸೌರಭೇ
ಶ್ರೀಮತ್ ತುಲಸ್ಯಾಂ ರಸನಾಂ ತದರ್ಪಿತೇ ॥ (ಭಾ.೯.೬.೭)

–೨೬೪–

ಅಂಬರೀಷನ ಬ್ರಹ್ಮಚರ್ಯ

ಪಾದೌ ಹರೇಃ ಕ್ಷೇತ್ರ ಪದಾನುಸರ್ಪಣೇ
ಶಿರೋ ಹೃಷೀಕೇಶಪದಾಭಿವಂದನೇ ।
ಕಾಮಂ ತು ದಾಸ್ಯೇ ನ ತು ಕಾಮಕಾಮ್ಯಯಾ
ಯದುತ್ತಮ ಶ್ಲೋಕ ಜನಾಶ್ರಯಾಂ ರತಿಂ ॥

(ಭಾ.೯.೬.೮)

–೨೬೫–

ಅಂಬರೀಷನ ಬ್ರಹ್ಮಚರ್ಯ

ಏವಂ ಸದಾ ಕರ್ಮಕಲಾಪಮಾತ್ಮನಃ
ಪರೇಽಧಿಯಜ್ಞೇ ಭಗವತ್ಯಧೋಕ್ಷಜೇ ।

ಸರ್ವಾತ್ಮಭಾವಂ ವಿದಧನ್ಮಹೀಮಿಮಾಂ
ತನ್ನಿಷ್ಠ ವಿಪ್ರಾಭಿಹಿತಃ ಶಶಾಸ ಹ ॥

(ಭಾ.೯.೬.೯)

ಸರ್ವಕರಣಾನಾಂ ಭಗವದ್ವಿಷಯತಾಸಂಪಾದನಾಚರಣಮಪ್ಯಸ್ತಿ । ತತೋಽಪ್ಯಯಮವಶ್ಯಂ ಸಂಪಾದ್ಯ ಇತಿ ಭಾವೇನೋಕ್ತಂ ವಿಶದೀಕರೋತಿ ॥ ಸ ವಾ ಇತಿ ॥ ಸೋಽಂಬರೀಷಃ । ಮನಃ ಕೃಷ್ಣಪದಾರವಿಂದಯೋಶ್ಚಕಾರ । ತದ್ವಿಷಯಂ ಕೃತವಾನಿತಿ । ಏವಮುತ್ತರತ್ರಾಪಿ ಜ್ಞೇಯಂ ॥ ೨೬೨ ॥

ಶ್ರೀಮತ್ತುಲಸ್ಯಾಂ ಸ್ಥಿತೇ । ತದರ್ಪಿತೇ ಅನ್ನಾದೌ ॥ ೨೬೩ ॥

ಮನಸ ಇವ ತದ್ವಿಕಾರಾಣಾಂ ವೃತ್ತೀನಾಮಪಿ ಭಗವದ್ವಿಷಯತ್ವಂ ಸಂಪಾದ್ಯಮಿತ್ಯಾಶಯೇನಾಹ ॥ ಕಾಮಮಿತಿ ॥ ಕಾಮಂ ತು ದಾಸ್ಯ ಏವ ಚಕಾರ । ನ ತು ಕಾಮಕಾಮ್ಯಯಾ ವಿಷಯವಾಸನಯಾ ವಿಷಯೇಷು ॥ ೨೬೪ ॥

ಕಿಂಬಹುನಾ ಷೋಡಶಕಲಾತ್ಮಕದೇಹಸಂಭವಾಃ ಯೇ ವ್ಯಾಪಾರಾಸ್ತೇ ಸರ್ವೇಽಪಿ ಮನಃಶುಧ್ಯನುಸಾರೇಣ ಭಗವದ್ವಿಷಯಕತಯಾ ಕರ್ತವ್ಯಾ ಇತ್ಯಾಶಯೇನಾಹ । ಏವಮಿತಿ ॥ ಸರ್ವಾತ್ಮನಾ ಭಾವಂ ಭಕ್ತಿಂ । ಅಯಮಾಚಾರೋಽಪಿ ನ ಸಾಧಾರಣಜನಕೃತಃ ಕಿಂತು ಪರಮಭಾಗವತತಯಾ ಪ್ರಸಿದ್ಧತರೇಣೇತಿ ನ ಅನಾದರಣೀಯ ಇತಿ ಭಾವೇನ ಹ ಇತ್ಯುಕ್ತಂ । ಕಿಂಚ ಸೋಽಪ್ಯಂಬರೀಷೋ ನ ಸ್ವಬುಧ್ಯೈವಂ ಕೃತವಾನ್ ಕಿಂತು ಭಾಗವತಪ್ರಧಾನೈರುಪದಿಷ್ಟ ಏವ ತತೋಽತ್ಯುಪಾದೇಯ ಇತಿ ಸೂಚಯಿತುಂ ತನಿಷ್ಠೈರ್ಭಗವನ್ನಿಷ್ಠಾವದ್ಭಿರ್ವಿಪ್ರೈರಭಿಹಿತ ಇತಿ । ಏತಚ್ಚ ಪುರಾಣೇ ಪ್ರಸಿದ್ಧಮಿತಿ ಹೇತ್ವನೇನಾಹ । ಅನೇನ ಮನೋವೃತ್ತೀನಾಂ ವ್ಯಾಪಾರಮಾತ್ರಸ್ಯ ಭಗವದ್ವಿಷಯತ್ವಸಂಪಾದನಸ್ಯಾಧಿಕ್ಯಸ್ಯ ಕಥನೇನ ಪೂರ್ವೋಕ್ತಂ ವಿಶದೀಕೃತಮಿತಿ ಜ್ಞೇಯಂ ॥ ೨೬೫ ॥

❖❖❖

ಶುಕಮುನಿ ಪರೀಕ್ಷಿತನಿಗೆ ಅಂಬರೀಷರಾಜನ ಚರಿತ್ರೆಯನ್ನು ಹೇಳುತ್ತಾರೆ—ಅಂಬರೀಷನು ಹರಿಯ ಚರಣಾರವಿಂದಗಳಲ್ಲಿಯೆ ಮನವನ್ನು ನಿಲ್ಲಿಸಿದನು. ನಾಲಿಗೆಯನ್ನು ಹರಿಗುಣ ವರ್ಣನೆಗೇ ಮೀಸಲಿರಿಸಿದ. ಕೈಗಳನ್ನು

**ಹರಿಮಂದಿರ ಮಾರ್ಜನ ಪೂಜನಾದಿಗಳಿಗೇ ಮೀಸಲಾಗಿಟ್ಟ. ಕಿವಿಯನ್ನು ಹರಿಕಥಾಶ್ರವಣದಲ್ಲಿಯೆ ತೊಡಗಿಸಿದ.**

**ಕಣ್ಣುಗಳನ್ನು ಹರಿಮಂದಿರ ದರ್ಶನಕ್ಕೆ, ಅಂಗವನ್ನು ಹರಿಭಕ್ತರ ಮೈಸವರುವುದಕ್ಕೆ ಆಲಿಂಗಿಸುವುದಕ್ಕೆ, ಮೂಗನ್ನು ಹರಿಪಾದ ಕಮಲಗಂಧಯುಕ್ತ ವಾದ ಶ್ರೀತುಳಸಿಯ ಆಘ್ರಾಣನಕ್ಕೆ, ನಾಲಿಗೆಯನ್ನು ಹರಿವೈವೇದ್ಯವನ್ನು ಸವಿಯುವುದಕ್ಕೆ ಮೀಸಲಿರಿಸಿದನು.**

**ಕಾಲುಗಳನ್ನು ಹರಿಕ್ಷೇತ್ರಯಾತ್ರೆಗೆ, ಶಿರವನ್ನು ಹರಿಪಾದವಂದನೆಗೆಂದೇ ಮೀಸಲಿಟ್ಟ. ಅವನ ಎಲ್ಲ ಕಾಮನೆ ಹರಿಸೇವೆಗೇ ಹೊರತು ವಿಷಯ ಸೇವನೆ ಗಲ್ಲ. ಸುಖಾನುಭವವನ್ನೂ ಹರಿಭಕ್ತರ ಸಹವಾಸದಲ್ಲಿಯೇ ಕಂಡುಕೊಳ್ಳುತ್ತಿದ್ದ.**

**ಹೆಚ್ಚೇಕೆ, ಹದಿನಾರು ಕಲೆಗಳಿಂದ ಕೂಡಿದ ದೇಹದ ಎಲ್ಲ ವ್ಯಾಪಾರಗಳನ್ನೂ ಹರಿಭಕ್ತಮುನಿಗಳ ಉಪದೇಶದಂತೇ ಸರ್ವಾತ್ಮನಾ. ಭಕ್ತಿಪೂರ್ವಕವಾಗಿ ಯಜ್ಞ ಪುರುಷನಾದ ಹರಿಗೆ ಅರ್ಪಿಸುತ್ತಲೇ ರಾಜ್ಯಭಾರ ಮಾಡಿದ.**

ಮಹಾಭಾಗವತನಾದ ಅಂಬರೀಷ ರಾಜನು ಆದರದಿಂದ ನಡೆಸಿದ ಈ ಭಾಗವತಧರ್ಮವನ್ನು ಎಲ್ಲರೂ ಹಾಗೇ ನಡೆಸಬೇಕು. ವಿಶೇಷವಾಗಿ ವಿಷ್ಣುಭಕ್ತರಾದ ಬ್ರಾಹ್ಮಣೋತ್ತಮರು ಹೇಳಿದಂತೇ ಅವನು ನಡೆದುಕೊಂಡಿದ್ದು ಪ್ರಸಿದ್ಧವೇ ಇದೆ. ಅದರಿಂದ ಮುಮುಕ್ಷುಗಳೆಲ್ಲರೂ ಮನ ಇಂದ್ರಿಯ ವೃತ್ತಿಗಳೆಲ್ಲವನ್ನು ಹರಿ ಯಲ್ಲೇ ಅರ್ಪಿಸಬೇಕು. ಇದೇ ಉತ್ತಮವಾದ ಬ್ರಹ್ಮಚರ್ಯವೆಂಬ ಭಾಗವತ ಧರ್ಮ.

❖❖❖

—೨೬೬—

**ಬ್ರಹ್ಮಚರ್ಯದ ಮಹತ್ವ**

**ಬಿಲೇ ಬತೋರುಕ್ರಮವಿಕ್ರಮಾನ್ ಯೇ**
**ನ ಶೃಣ್ವತಃ ಕರ್ಣಪುಟೇ ನರಸ್ಯ ।**
**ಜಿಹ್ವಾಽಸತೀ ದಾರ್ದುರಿಕೇವ ಸೂತ**
**ನ ಚೇತ್ ಪ್ರಗಾಯತ್ಯುರುಗಾಯ ಗಾಥಾಂ ॥** (ಭಾ.೨.೩.೨೦)

–೨೬೭–

**ಬ್ರಹ್ಮಚರ್ಯದ ಮಹತ್ವ**

ಭಾರಃ ಪರಂ ಪಟ್ಟಕಿರೀಟ ಜುಷ್ಟ-
ಮಪ್ಯುತ್ತಮಾಂಗಂ ನ ನಮೇನ್ಮುಕುಂದಂ ।
ಶಾವೌ ಕರೌ ನೋ ಕುರುತಃ ಸಪರ್ಯಾಂ
ಹರೇರ್ಲಸತ್ ಕಾಂಚನ ಕಂಕಣೌ ವಾ ॥ (ಭಾ.೨.೩.೨೧)

–೨೬೮–

**ಬ್ರಹ್ಮಚರ್ಯದ ಮಹತ್ವ**

ಬರ್ಹಾಯಿತೇ ತೇ ನಯನೇ ನರಾಣಾಂ
ಲಿಂಗಾನಿ ವಿಷ್ಣೋರ್ನ ನಿರೀಕ್ಷತೋ ಯೇ ।
ಪಾದೌ ನೃಣಾಂ ತೌ ದ್ರುಮಜನ್ಮಭಾಜೌ
ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ ॥ (ಭಾ.೨.೩.೨೨)

–೨೬೯–

**ಬ್ರಹ್ಮಚರ್ಯದ ಮಹತ್ವ**

ಜೀವಂಶ್ಛವೋ ಭಾಗವತಾಂಘ್ರಿರೇಣುಂ
ನ ಜಾತು ಮರ್ತ್ಯೋಽಭಿಲಷೇತ ಯಸ್ತು ।
ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ
ಶ್ವಸಂಶ್ಛವೋ ಯಸ್ತು ನ ವೇದ ಗಂಧಂ ॥

(ಭಾ.೨.೩.೨೩)

ತದೇವಂ ಭಾಗವತೋತ್ತಮೈರಪೇಕ್ಷಿತತ್ವಾತ್ ಸ್ತುತತ್ವಾತ್ ಆಚರಿತತ್ವಾಚ್ಚ ಸರ್ವಕರಣಾನಾಂ ಭಗವದ್ವಿಷಯತ್ವರೂಪಂ ಬ್ರಹ್ಮಚರ್ಯಂ ಅವಶ್ಯಂ ಸಂಪಾದ್ಯಮಿತ್ಯಭಿಹಿತಂ। ಇದಾನೀಂ ತದ್ವೈಪರೀತ್ಯೇನಾವಸ್ಥಾನಸ್ಯ ತೈರೇವ ನಿಂದಿತತ್ವಾಚ್ಚ ತದಾವಶ್ಯಕಮಿತಿ ಭಾವೇನಾಹ॥ ಬಿಲೇ ಬತೇತಿ॥ ಸ್ವೇ ದೇಹೇ। ಸೂತೇತಿ ಶೌನಕಕೃತಂ ಸಂಬೋಧನಂ। ನರಸ್ಯ ಯೇ ಕರ್ಣಪುಟೇ। ಉರುಕ್ರಮಸ್ಯ ವಿಕ್ರಮಾನ್। ನ ಶೃಣ್ವತಃ ನ ಶೃಣುತಃ ತೇ ಬಿಲೇ ತತ್ಸದೃಶೇ। ಕರ್ಣತಯಾ

ಭವನಮೇವ ವ್ಯರ್ಥಮಿತಿ ಭಾವಃ ।ಏವಮುತ್ತರತ್ರಾಪಿ ಜ್ಞೇಯಂ। ಅತ ಏವ ಪಶ್ಯತಾಂ ಕುಂಡಲಮಂಡಿತೇ ಅಪಿ ದುಃಖಕರೇ ಇತಿ ಭಾವೇನೋಕ್ತಂ ॥ **ಬತೇತಿ** ॥ ಇದಂ ಸರ್ವತ್ರ ಜ್ಞೇಯಂ। ಉರುಗಾಯಗಾಥಾಂ ನ ಪ್ರಗಾಯತಿ ಚೇತ್, ಸಾ ಜಿಹ್ವಾ ಅತಿಚಮತ್ಕೃತಿವಿಶಿಷ್ಟ ಪುಷ್ಟಜನತುಷ್ಟಿಕರವಚನಪಟೀಯಸ್ತ್ವೇನ ಲೋಕಮಾನ್ಯತಾಮಂಡಿತಾऽಪಿ ಮಂಡೂಕಜಿಹ್ವಾತುಲ್ಯೈವ। ಅತ ಏವ ಅಸತೀ ಸನ್ಮಾನ್ಯಾ ನ ಭವತಿ ॥

**ಭಾರ ಇತಿ**। ಪರಂ ಕೇವಲಂ ಭಾರಃ ಶಿಲಾವಚ್ಛರೀರಸ್ಯ। ವಾ ಅಪಿ। ಶಾವೌ ಕರೌ ಶವಸಂಬಂಧಿನೌ ತತ್ಸದೃಶೌ ॥

**ಬರ್ಹಾಯಿತೇ ಇತಿ**। ಲಿಂಗಾನಿ ಉಭಯವಿಧಾನಿ ।ಯೇ ನ ನಿರೀಕ್ಷತಃ ತೇ ನಲಿನದಲಾದಿಸದೃಶತಯಾ ಜಠರಪಿಠರೀಪೂರಣಪರೈಃ ಉಪವರ್ಣಿತೇ ದೃಷ್ಟಶತಸಹಸ್ರನಟಾದಿನರ್ತನೇ ಅಪಿ ಬರ್ಹಾಯಿತೇ ಪಿಚ್ಛಸದೃಶೇ। ಯೋ ಹರೇಃ ಕ್ಷೇತ್ರಾಣಿ ನಾನುವ್ರಜತಃ ತೌ ಶತರಾಜಸ್ಥಾನ ವಿಹರಣಪಟುತರಾವಪಿ ರಾಜಶತವರ್ಣಿತೌ ನೃಣಾಂ ಪಾದೌ ಪಾದತಯಾ ಜಾತಾವಪಿ। ದ್ರುಮಜನ್ಮ ಭಾಜೌ ದ್ರುಮತಯಾ ಜನನಮೇವ ಪ್ರಾಪ್ತಾವಿವ। ಸ್ವಯಮೇವ ಗಮನಾಭಾವೇऽಪಿ ಗಚ್ಛತೋऽನುಗಮನೇನಾಪಿ ಭಾವ್ಯಂ। ತದಪಿ ನಾಸ್ತೀತ್ಯಾಶಯೇನೋಕ್ತಂ। ನಾನುವ್ರಜತ ಇತಿ ॥

**ಜೀವಂಶ್ಛವ ಇತಿ**। ಯಃ ಮರ್ತ್ಯಃ। ಶ್ರೀವಿಷ್ಣುಪದ್ಯಾಃ ಶ್ರೀಮದ್ಭಾಗೀರಥ್ಯಾಃ ಸಂಬಂಧಿ। ಭಾಗವತಾಂಘ್ರಿರೇಣುಂ ತನ್ಮಿಶ್ರಮುದಕಂ। ಜಾತು ಕದಾಚಿದಪಿ ।ನಾಭಿಲಷೇತ। ಸ ತು ಶವ ಏವ। ತುಶಬ್ದೋದಿತಂ ವಿಶೇಷಂ ದರ್ಶಯತಿ। ಜೀವನ್ನಿತಿ ॥ ಏತಾವಾನೇವ ವಿಶೇಷೋ ಯಜ್ಜೀವನಭಾವಾ ಭಾವಾವಿತಿ। ತಸ್ಯಾಂಗಾನಿ ಶವಾಂಗಸದೃಶಾನಿ ಇತಿ ಭಾವಃ। ಅನೇನ

''ಅಂಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜಂತಿ ನಿತ್ಯಂ'

ಇತ್ಯತ್ರೋಕ್ತಂ ವಿಷ್ಣೋಃ ಪಾದೋದಕಂ ಸಾಲಗ್ರಾಮಶಿಲಾದಿತೀರ್ಥ- ಮೇಕಂ ಶ್ರೀಮದ್ಭಾಗೀರಥೀ ತೀರ್ಥಮಪರಮಿತಿ ಸೂಚಿತಂ। ಅತ ಏವ ಶ್ರೀವಿಷ್ಣುಪದ್ಯಾ ಇತ್ಯಾಹ। ಉದಕಮಿತ್ಯನುಕ್ತ್ವಾ ರೇಣುಮಿತ್ಯುಕ್ತಿಃ ತನ್ಮಿಶ್ರತಯೈತದಧಿಕಮಿತಿ ಜ್ಞಾಪಯಿತುಂ। ಅತ ಏವ ಪ್ರಾಕ್

ಯಾ ವೈ ಲಸಚ್ಛ್ರೀತುಲಸೀ ವಿಮಿಶ್ರ
ಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ''ತ್ಯುಕ್ತಂ।

ನಿತ್ಯಂ ಯಾನಿ ಪಾದೋದಕಂ ಭಜಂತಿ ತಾನ್ಯಂಗಾನೀತ್ಯುಕ್ತಂ ತನ್ಮಾ ಹಿ ಭೂತ್ । ಜನ್ಮನಿ ಏಕದಾಪಿ ಭಜಂತಿ ಚೇತ್ ತಾನ್ಯಂಗಾನಿ ವಯಂ ಸ್ತುಮಃ, ತದಪಿ ನಾಸ್ತೀತ್ಯಾಶಯೇನೋಕ್ತಂ। ಜಾತ್ವಿತಿ ।। ಶ್ರೀವಿಷ್ಣುಪದಾರ್ಪಿತಾಯಾ ಸ್ತುಲಸ್ಯಾಃ ಯಃ ಗಂಧಂ ನ ವೇದ ಸ ತು ಶವ ಏವ। ತುಶಬ್ದೋಕ್ತಂ ಶವಾದ್ವಿಶೇಷಂ ದರ್ಶಯತಿ ।। ಶ್ವಸನ್ನಿತಿ ।। ತಸ್ಯ ನಾಸಿಕಾ ಅನೇಕಸುಮಪರಿಮಲಂ ಜಿಘ್ರಂತ್ಯಪಿ ನಾನಾವಿಧತಯಾ ಸ್ತುತಾಽಪಿ ಶವನಾಸಿಕಾಸಮೇತಿ ಭಾವಃ। ಯಥಾ ಭಗವತಿ ಭಕ್ತಿವಿಶೇಷಸಿದ್ಧಯೇ ಸರ್ವಾತ್ಮನಾ ಶ್ರೀಹರಿಸೇವಾ ಕರ್ತವ್ಯಾ ತಥಾ ತದನಂತರಂ ಜ್ಞಾನಪ್ರದೇ ಗುರಾವಪಿ ಇತಿ ಭಾವೇನ ವಾ ತಸ್ಯಾ ಅಕರ್ತಾರಂ ಧಿಕ್ಕರೋತಿ ।। ಜೀವನ್ನಿತಿ ।। ಭಾಗವತಾನಾಂ ಅಂಘ್ರಿರೇಣುಮಪಿ ದ್ರವ್ಯವ್ಯಯಾಸಾಧ್ಯಂ ಜಾತ್ವಪಿ ಯೋ ನಾಭಿಲಷೇತ ಸ ಜೀವಂಶ್ಛವ ಇತಿ ।।

❖❖❖

ಶೌನಕರು ಸೂತರಿಗೆ ಹೇಳುತ್ತಾರೆ, 'ಅಯ್ಯೋ! ತ್ರಿವಿಕ್ರಮನ ಪರಾಕ್ರಮಗಳನ್ನು ಕೇಳದ ಕಿವಿಗಳಿದ್ದೇನು? ಅವು ಬಿಲಗಳೇ ಸರಿ. ಅವು ಕುಂಡಲ ಮಂಡಿತವಾದರೇನು? ಶ್ರೀಹರಿ ಸೇವೆಗಲ್ಲದ ಕಿವಿಗಳು ಇರುವುದೇ ವ್ಯರ್ಥ. ಸೂತರೇ! ನಾಲಿಗೆಯು ಬ್ರಹ್ಮಾದಿದೇವ ಸ್ತುತನಾದ ಶ್ರೀಹರಿಯ ಚರಿತೆಯನ್ನು ಚೆನ್ನಾಗಿ ವರ್ಣಿಸುವುದಿಲ್ಲವಾದರೆ, ಅದೆಷ್ಟು ಚಮತ್ಕಾರವಾಗಿ ನುಡಿಯುತ್ತಿದ್ದರೂ ಶ್ರೋತೃಗಳನ್ನು ಬಹಳಷ್ಟು ಆಕರ್ಷಿಸುತ್ತಿದ್ದರೂ ಸರಿಯೆ ಅದು ಕರ್ಕಶವಾಗಿ ವಟಗುಟ್ಟುವ ಕಪ್ಪೆಯ ನಾಲಿಗೆಯಂತೆ ಅಶ್ರಾವ್ಯವೆನಿಸುವುದು.

'ಮುಕುಂದನಿಗೆ ವಂದಿಸದ ತಲೆ ಕಿರೀಟಾದಿಗಳಿಂದ ಅಲಂಕೃತವಾದರೂ ಅದನ್ನು ನರನು ಹೊರುವುದು ಭಾರವನ್ನು ಹೊತ್ತಂತೆಯೆ ಸರಿ. ಶ್ರೀಶನ ಪೂಜೆ ಮಾಡದ ಕೈಗಳು ಹೊಳೆಯುವ ಬಂಗಾರದ ಕಂಕಣ ಧರಿಸಿದರೂ ಶವದ ಕೈಗಳಂತೆ ವ್ಯರ್ಥವೆನಿಸುವುವು.

'ಹರಿಯ ಪ್ರತಿಮೆಗಳನ್ನೂ ಪ್ರತಿಮೆಗಳಾದ ಸಜ್ಜನರನ್ನೂ ದರ್ಶನ ಮಾಡದ ಕಣ್ಣುಗಳು ಕೂಡ ನೂರಾರು ಸಾವಿರಾರು ನಟರ ನಾಟ್ಯ ನಾಟಕಗಳನ್ನು ಕಂಡಿದ್ದರೂ ಕಮಲದಂಥ ಕಣ್ಣುಗಳೆಂದು ಜನರಿಂದ ಹೊಗಳಿಸಿಕೊಂಡಿದ್ದರೂ, ಅವು ನವಿಲಗರಿಗಳೆ ಸರಿ. ವಿಷ್ಣುಕ್ಷೇತ್ರಗಳಿಗೆ ಪಾದಯಾತ್ರೆ ಮಾಡದ ಕಾಲುಗಳು

**ಕೂಡ ಗಿಡಗಳಂತೆ ಹುಟ್ಟಿವೆಯಷ್ಟೆ. ಅಂದರೆ ನೂರಾರು ದೊಡ್ಡ ರಾಜಾಸ್ಥಾನಗಳಿಗೆ ನಿರಂತರ ಹೋಗಿ ನೃತ್ಯಕಲೆಯಿಂದ ಸಮ್ಮಾನಿತವಾಗುತ್ತಿದ್ದರೂ ಆ ಕಾಲುಗಳು ವಸ್ತುತಃ ಕಾಲುಗಳಾಗಿ ಹುಟ್ಟಿವೆಯಷ್ಟೆ ಹೊರತು ಎಲ್ಲಿಯೂ ಓಡಾಡದ ಗಿಡಗಳ ಜನ್ಮದಂತೇ ಈ ಕಾಲುಗಳ ಜನ್ಮ ವ್ಯರ್ಥ. 'ನ ಅನುವ್ರಜತಃ' ಸ್ವತಃ ಯಾತ್ರೆ ಮಾಡಲು ಅಸಮರ್ಥರಾದರೂ ಸಹ ಯಾತ್ರಿಕರ ಜೊತೆಗೂ ಯಾತ್ರೆ ಮಾಡದಿದ್ದರೆ ಅಂಥ ಜನರ ಕಾಲುಗಳಿಂದ ಏನು ಪ್ರಯೋಜನ?**

**'ಭಗವದ್ಭಕ್ತರ ಪಾದಾರವಿಂದ ರಜದಿಂದ ಮಿಶ್ರಿತವಾದ ಅವರ ಪಾದೋದಕವನ್ನು ಧರಿಸಬೇಕೆಂದು ಜನ್ಮದಲ್ಲಿ ಒಂದು ಬಾರಿಯಾದರೂ ಆಸೆ ಉಂಟಾಗದಿದ್ದರೆ ಅವನು ಬದುಕಿದ್ದೂ ಸತ್ತಂತೆಯೆ. ಸತ್ತ ಹೆಣಕ್ಕೆ ಜೀವವಿಲ್ಲ. ಇವನಿಗೆ ಜೀವವಿದೆ ಎಂದು ಮಾತ್ರ ವ್ಯತ್ಯಾಸವಷ್ಟೆ. ಹರಿಪಾದೋದಕವಾಗಿರುವ ಗಂಗಾಜಲ ಸಾಲಗ್ರಾಮತೀರ್ಥಗಳನ್ನು ಸೇವಿಸದವನ ಜನ್ಮ ವ್ಯರ್ಥ. ಹರಿಪಾದಗಳಿಗೆ ಅರ್ಪಿತವಾಗಿದ್ದು ಹರಿಪಾದ ಕಮಲಧೂಳಿಮಿಶ್ರಿತವಾದ ತುಲಸಿಯ ಗಂಧವನ್ನು ಆಘ್ರಾಣಿಸದ ನರನು ಉಸಿರಾಡುವ ಹೆಣವೆ ಸರಿ. ಹೆಣ ಉಸಿರಾಡುವುದಿಲ್ಲ. ಈತ ಉಸಿರಾಡಿದರೂ ಅದರಿಂದೇನು ಪ್ರಯೋಜನವಿಲ್ಲ.**

'ಒಂದು ಬಾರಿಯಾದರೂ ಹರಿಪಾದೋದಕವನ್ನು ಧರಿಸಿದ್ದರೆ, ಹರಿನಿರ್ಮಾಲ್ಯ ತುಳಸಿಯನ್ನು ಆಘ್ರಾಣಿಸಿದ್ದರೆ ಅವನ ಜನ್ಮ ಸಾರ್ಥಕ ವಾಯಿತೆಂದು ನಾವು ಪ್ರಶಂಸಿಸುತ್ತಿದ್ದೆವು. ಅಷ್ಟೂ ಮಾಡದಿದ್ದರೆ ಅವನಿಗೂ ಶವಕ್ಕೂ ಏನು ವಿಶೇಷವಿದ್ದಂತಾಯಿತು?

'ಶ್ರೀಹರಿಯಲ್ಲಿ ಭಕ್ತಿಯು ಅಭಿವೃದ್ಧವಾಗಬೇಕಾದರೆ ಸರ್ವಪ್ರಕಾರ ಗಳಿಂದಲೂ ಹರಿಸೇವೆ ಮಾಡಬೇಕು. ಗುರುಸೇವೆ ಮಾಡಬೇಕು. ಅವರ ಪಾದಧೂಳಿಯನ್ನು ಹಣತೆತ್ತು ಕೊಂಡುಕೊಳ್ಳಬೇಕಾಗಿಲ್ಲ. ಆದರೂ ಅದನ್ನು ಸೇವಿಸದವನು ಬದುಕಿದ್ದು ಸತ್ತಂತೆಯೆ.'

ಇಲ್ಲಿಗೆ ತ್ರಿಕರಣಗಳನ್ನು ಭಗವತ್ ಪರವಾಗಿ ಮಾಡುವ 'ಬ್ರಹ್ಮಚರ್ಯ' ವೆಂಬ ಭಾಗವತಧರ್ಮ ನಿರೂಪಣೆ ಮುಗಿಯಿತು.

ಇನ್ನು ಮುಂದೆ ಭಾಗವತಧರ್ಮಾನುಷ್ಠಾನ ಮಾಡುವವರಿಗೇ ಭಕ್ತಿಸಾಧನ ವಾದ ಶ್ರವಣಾದಿಗಳಲ್ಲಿ ಅಧಿಕಾರ, ಶ್ರವಣಾದಿಗಳಲ್ಲಿ ಸುಖ, ಅದರಲ್ಲಿ ಆಸಕ್ತಿ

ಹೊರತು ಭಾಗವತ ಧರ್ಮಾನುಷ್ಠಾನವಿಲ್ಲದವರಿಗೆ ಇವು ಲಭ್ಯವಾಗುವುದಿಲ್ಲ. ಆದರಿಂದ ಭಾಗವತಧರ್ಮವನ್ನು ಅವಶ್ಯ ಸಂಪಾದಿಸಬೇಕೆಂಬ ಅಭಿಪ್ರಾಯ ದಿಂದ ಹರಿ ಕೊಟ್ಟಿದ್ದರಲ್ಲಿಯೇ ತೃಪ್ತಿಪಡುವ 'ಸಂತೋಷ' ಎಂಬ ಭಾಗವತ ಧರ್ಮವನ್ನು ನಿರೂಪಿಸುತ್ತಾರೆ.

❖❖❖

## ಸಂತೋಷದ ಧರ್ಮ

## –೨೭೦–

### ಸಿಕ್ಕದ್ದರಲ್ಲಿ ತೃಪ್ತಿಪಡುವ 'ಸಂತೋಷ'ವೆಂಬ ಭಾಗವತಧರ್ಮ

**ನಿಷ್ಕಿಂಚನಾ ಮಯ್ಯನುರಕ್ತ ಚೇತಸಃ**
**ಶಾಂತಾ ಮಹಾಂತೋಽಖಿಲಜೀವವತ್ಸಲಾಃ ।**
**ಕಾಮ್ಯೆರನಾಲಬ್ಧಧಿಯೋ ಜುಷೋ ಯೇ**
**ತೇ ನೈರಪೇಕ್ಷ್ಯಂ ಹಿ ವಿದುಃ ಸುಖಂ ಮಮ ॥**

(ಭಾ.೧೧.೧೪.೧೭)

ಇದಾನೀಮೇತಸ್ಯ ಭಾಗವತಧರ್ಮಸ್ಯಾನುಷ್ಠಾತೃಣಾಮೇವ ಭಕ್ತಿಸಾಧನೇಷು ಶ್ರವಣಾದಾವಧಿಕಾರಸ್ತತಃ ಸುಖಂ ತತ್ರ ರತಿಶ್ಚ ಭವತಿ ನೇತರೇಷಾಮಿತ್ಯಯಮವಶ್ಯಂ ಸಂಪಾದ್ಯ ಇತಿ ಭಾವೇನ ಯೇನ ಕೇನಾಪಿ ಸಂತುಷ್ಟತ್ವಾಖ್ಯಂ ಭಾಗವತಧರ್ಮಂ ದರ್ಶಯತಿ ॥ **ನಿಷ್ಕಿಂಚನಾ ಇತ್ಯಾದಿನಾ ॥** ತತ್ರ ಯಾವದ್ದೇಹಂ ಕಾಚನ ಜೀವಿಕಾಽಪೇಕ್ಷಿತೈವ । ಪ್ರಾಣರಕ್ಷಣಸ್ಯ ಪರಮ ಧರ್ಮತ್ವಾತ್ । ಸಾ ಜೀವಿಕಾ ವೃತ್ತಿಶ್ಚ ದ್ವಿವಿಧಾ । ಅಯಾಚನಾ ಸಯಾಚನಾ ಚೇತಿ । ತತ್ರಾದ್ಯಾ ದ್ವಿವಿಧಾ ಯದೃಚ್ಛಾವೃತ್ತಿಃ ಶಿಲೋಂಛವೃತ್ತಿಶ್ಚೇತಿ । ದ್ವಿತೀಯಾ ತು ತ್ರಿವಿಧಾ । ಅಸಂಚಯೋ ವಾರ್ತಾ ಶಾಲೀನೇತಿ । ಏವಂ ಪಂಚವೃತ್ತ್ಯಾ ಪ್ರಪಂಚಂ ಪಂಚದಿನಾನಿ ಪ್ರಪಂಚಯನ್ ವಿರಿಂಚಪ್ರಪಂಚೇ ಯೇನಕೇನಾಪಿ ಸಂತುಷ್ಟ ಇತ್ಯುಚ್ಯತೇ । ತತ್ರ ಯೋಗಿನಃ ಅವಸ್ಥಾಭೇದೇನ ತ್ರಿವಿಧಾಃ । ಪಕ್ವಾಃ, ಪಕ್ವಕಲ್ಪಾಃ, ಪಕ್ವಪ್ರತಿನಿಧಯಶ್ಚೇತಿ । ತತ್ರಾದ್ಯಾನಾಂ ಆದ್ಯಾ ವೃತ್ತಿಃ । ದ್ವಿತೀಯಾನಾಂ ತು ದ್ವಿತೀಯಾ । ತೃತೀಯಾನಾಮಪಿ ದಶಾವಿಶೇಷೇಣೋತ್ತರಾ ತ್ರಿವಿಧಾ ವೃತ್ತಿಃ । ತತ್ರ ಪೂರ್ವಪೂರ್ವವೃತ್ತಿಃ ಉತ್ತರೋತ್ತರಾಧಿಕಾ ಇತ್ಯಾದೌ ಆದ್ಯಯಾ ವೃತ್ತ್ಯಾ ವರ್ತಮಾನಾನ್ ದರ್ಶಯತಿ **ನಿಷ್ಕಿಂಚನಾ ಇತಿ ॥** ದ್ವಿವಿಧಾಃ

ಪ್ರಾಣಿನಃ ಸಕಿಂಚನಾಃ ನಿಷ್ಕಿಂಚನಾಶ್ಚೇತಿ ।। ತತ್ರ ಯೇ ಕಿಂಚನ ತುಚ್ಛಂ ಕಪರ್ದಿಕಾಮಾತ್ರಮಪ್ಯಾದಿಂ ಕೃತ್ವಾ ಜೀವನೌಪಯಿಕಾದಧಿಕಮುಪಾದೇಯಂ ವಸ್ತು ತೇನ ಸಹಿತಾಃ ತೇ ಸಕಿಂಚನಾಃ, ತತ ಏವ ತೇಷು ನ ವಿಶೇಷತೋ ಭಗವತ್ಪ್ರೀತಿಃ । **ಯಥಾಹುಃ—**

''ಯಾವದ್ಭ್ರಿಯೇತ ಜಠರಂ ತಾವತ್ಸ್ವತ್ವಂ ಹಿ ದೇಹಿನಾಂ ।
ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತೀ''ತಿ ।

ಕಿಂಚನಾಪಿ ತತೋಽಧಿಕಮುಪಾದೇಯಂ ನಿಷ್ಕ್ರಾಂತಂ ಯೇಭ್ಯಸ್ತೇ ನಿಷ್ಕಿಂಚನಾ ಯೋಗಿನ ಇತಿ ಚೋಚ್ಯಂತೇ । ತತ್ರ ಹೇತುಃ ।। **ಮಯ್ಯನುರಕ್ತಚೇತಸ ಇತಿ** ।। ಮಯ್ಯೇವಾನುರಕ್ತಂ ಚೇತೋ ಯೇಷಾಂ ತೇ ಮಹಾಂತೋ ಯೋಗಿಷು । ತೇಷಾಂ ಲಕ್ಷಣಂ ದರ್ಶಯತಿ । **ಅಖಿಲಜೀವವತ್ಸಲಾ ಇತಿ** ।। ಪ್ರವೃತ್ತಿಪ್ರಕಾರಮಾಹ । **ಕಾಮೈರನಾಲಬ್ಧಧಿಯ ಇತಿ** ।। ಅನುದ್ವಿಗ್ನಧಿಯೋಽಪಿ ಜುಷಃ ಕಾಮಜುಷಃ । ಅನೇನ ಸ್ವಯಮಯಾಚನೇನ ಯದೃಚ್ಛಯಾ ಲಬ್ಧೇನೈವ ಜೀವನಂ ತೇಷಾಮಿತಿ ಸೂಚಿತಂ ಭವತಿ । ಅತ ಏವ ಏವಂ ವಿಧಪ್ರವೃತ್ತಿಮತ್ತ್ವಾದೇವ ಲೋಕೇಷು ಶಾಂತಾ ಯೇನ ಕೇನಾಪಿ ಸಂತುಷ್ಟಾ ಇತ್ಯುಚ್ಯಂತೇ । ಕಿಮನೇನ ಭಾಗವತಧರ್ಮೇಣಾನುಷ್ಠಿತೇನ ಫಲಮತ ಆಹ ।। **ಯ ಇತಿ** ।। ಯೇ ಕಾಮೈರನಾಲಬ್ಧಧಿಯೋ ಯಥಾಧಿಕಾರಂ ವಿಷಯೈರಪರಿಭಾವಿತಬುದ್ಧಯಃ । ಯೇನ ಕೇನಾಪ್ಯಯಾಚಿತೇನ ಯಾಚಿತೇನ ವಾ ವಕ್ಷ್ಯಮಾಣರೀತ್ಯಾ ಜೀವನೋಪಾಯೇನ ಸಂತುಷ್ಟಮನಸಸ್ತ ಏವ । ಮಮ ಸುಖಂ ಮತ್ಕಥಾಶ್ರವಣಾದಿಜನ್ಯಂ ಸುಖಂ । ವಿದುರಿತಿ । ತೇಷಾಮೇವ ತತ್ರಾಧಿಕಾರಃ ರತಿಃ ತೇನ ಸುಖಂ ಚ ಭವತೀತಿ ಭಾವಃ । ಕುತ ಈದೃಶಾನಾಮೇವ ತತ್ರಾಧಿಕಾರಾದಿರಿತ್ಯತ ಉಕ್ತಂ ।। **ಮಮೇತಿ** ।। ಮಮ ಸುಖಂ । ನಿರಪೇಕ್ಷ್ಯಂ ಯೇನ ಕೇನಾಪಿ ಸಂತೋಷೋ ನಿರಪೇಕ್ಷಾ ತಯೈವ ಪ್ರಾಪ್ಯಮಿತಿ । ಜ್ಞಾನಿನೋ ವದಂತಿ ಹಿ ಯತೋಽತ ಇತಿ । ತಥೈವ ಜ್ಞಾನಿವಚನೇನ ಪ್ರಮಿತತ್ವಾದಿತಿ । ತೇಽಪಿ ತಥಾ ಕಿಂವದಂತೀತ್ಯತೋಽಪ್ಯುಕ್ತಂ ।। **ಮಮೇತಿ** ।। ಹಿ ಯತಸ್ತೇ । ಜ್ಞಾನಿನೋ ಮಮ ಸುಖಂ ನೈರಪೇಕ್ಷ್ಯಮಿತಿ ವಿದುಃ ಅನುಭವಂತಿ ತತ ಇತಿ ।। ಅಥವಾ । ಯೇನ ಕೇನಾಪಿ ಸಂತುಷ್ಟಿಲಕ್ಷಣಭಾಗವತೋ ಧರ್ಮಃ ಅನುಷ್ಠೇಯಃ ಇತ್ಯುದಿತೇ ಯೇನ ಕೇನಾಪಿ ಜೀವನಧಾರಣೇ ಕ್ರಿಯಮಾಣೇ ಸಂತುಷ್ಟಿಃ ಕಥಂ ಸ್ಯಾತ್ । ಇಚ್ಛಾನುಸಾರೇಣ ಸಮ್ಯಗ್ವಿಷಯಸೇವನೇ ಹಿ ಸಮ್ಯಕ್ ಸುಖಲಕ್ಷಣಾ ಸಂತುಷ್ಟಿಃ ಸ್ಯಾದಿತ್ಯತ ಆಹ ।। ಯ ಇತಿ । ಯೇ ಕಾಮೈರನಾಲಬ್ಧಧಿಯಸ್ತ ಏವ ನೈರಪೇಕ್ಷ್ಯಂ

**ಯೇನ ಕೇನಾಪಿ ಜೀವನಧಾರಣಮಾತ್ರೌಪಯಿಕವೃತ್ತಿರೂಪಯಾ ನಿರಪೇಕ್ಷಯಾ ಜನ್ಯಂ ಸುಖಂ। ವಿದುಃ ಜಾನಂತಿ। ಯತಸ್ತತಃ ಕಾಮಹತಧಿಯಾಂ ಕಥಂ ಸಂತೋಷಃ ಸ್ಯಾದಿತಿ ॥**

❖❖❖

ಶ್ರೀಕೃಷ್ಣನು ಉದ್ಧವನಿಗೆ ಹೇಳುತ್ತಾನೆ—ಪ್ರಾಣರಕ್ಷಣವು ಎಲ್ಲರಿಗೂ ಪರಮ ಧರ್ಮವಾಗಿದೆಯಾದ್ದರಿಂದ ಯಾವುದಾದರೊಂದು ಜೀವಿಕೆಯನ್ನು ಬದುಕಿರುವವರೆಗೂ ಅವಲಂಬಿಸಲೇಬೇಕು.

ಜೀವಿಕೆಯು ಅಯಾಚನ ಸಯಾಚನ ಎಂದು ಎರಡು ಬಗೆ. ಅಯಾಚನವು ಪಕ್ವಯೋಗಿಗಳ ಯದೃಚ್ಛಾವೃತ್ತಿ ಮತ್ತು ಪಕ್ವಕಲ್ಪರ, ಅಂದರೆ ಸುಮಾರಾಗಿ ಪಕ್ವರೇ ಎನ್ನಬಹುದಾದ ಯೋಗಿಗಳ ಶಿಲೋಂಛವೃತ್ತಿ, ಎಂದು ಎರಡು ವಿಧ. ಪಕ್ವಪ್ರತಿನಿಧಿಗಳ ಅಂದರೆ, ಪಕ್ವರಂತೆ ವಿಷಯ ವೈರಾಗ್ಯಭರಿತರಾಗುವವರ ಸಯಾಚನ ವೃತ್ತಿಯು ಅಸಂಚಯ ವಾರ್ತಾ ಶಾಲೀನ ಎಂದು ಮೂರು ಬಗೆ. ಈ ಮೂರು ಬಗೆಯಾದ ಸಯಾಚನ ವೃತ್ತಿ ಮತ್ತು ಎರಡು ಬಗೆಯ ಅಯಾಚನವೃತ್ತಿ ಎಂದು ಐದು ಬಗೆಯಾಗಿರುವ ಜೀವನವೃತ್ತಿ ಯೋಗಿಗಳಿಗೆ ವಿಹಿತವಾಗಿದೆ.

ವಿಷಯಸುಖದ ಕೊಚ್ಚೆಯಲ್ಲಿ ಮುಳುಗುವ ಕಾಗೆಯಂತೆ ನೂರು ಕಾಲ ಬಾಳುವುದಕ್ಕಿಂತ ಪಂಚವೃತ್ತಿಗಳಲ್ಲಿದ್ದು ಪ್ರಪಂಚದಲ್ಲಿ ಪಂಚದಿನವಾದರೂ ಬದುಕಿರುವುದು ಲೇಸು. ಪಂಚವೃತ್ತಿಗಳಲ್ಲಿಯೇ ಯಾವುದಾದರೊಂದರಿಂದ ತೃಪ್ತನಾಗಿರುವುದು 'ಸಂತೋಷ' ಎಂಬ ಭಾಗವತಧರ್ಮ. 'ಸಂತೋಷಂ ಯೇನಕೇನಚಿತ್ ಶಿಕ್ಷೇತ್' (ಭಾ.೧೧.೩.೨೬) 'ತ್ಯಾಗಃ ಸಂತೋಷ ಆರ್ಜವಂ' (ಭಾ.೭.೧೨.೮)

ಮೊದಲಿಗೆ ಪಕ್ವಯೋಗಿಗಳ ಯದೃಚ್ಛಾವೃತ್ತಿಯನ್ನು ಭಾಗವತದಲ್ಲಿ ಶ್ರೀಕೃಷ್ಣನು ಈ ಶ್ಲೋಕದಲ್ಲಿ ಉಪದೇಶಿಸುತ್ತಿದ್ದಾನೆ—

ನಿಷ್ಕಿಂಚನರು ನನ್ನಲ್ಲಿಯೇ ಎಲ್ಲಕ್ಕಿಂತ ಅಧಿಕ ಪ್ರೀತಿಉಳ್ಳ ಯೋಗಿಗಳು. ಅಧಿಕಪ್ರೀತಿ ಅವರಿಗೆ ನನ್ನಲ್ಲಿಯೇ ಇರುವುದರಿಂದ ಅವರು ಯೋಗಿಗಳೆನಿಸು ವರು. ಅವರು 'ನಿಷ್ಕಿಂಚನ'ರು ಏಕೆಂದರೆ, 'ಕಿಂಚನ' ಎಂದರೆ ಅಲ್ಪವಾದ ದ್ರವ್ಯ.

ಜೀವನ ನಿರ್ವಹಣೆಗೆ ಬೇಕಾಗುವುದಕ್ಕಿಂತ ಅಧಿಕವಾಗಿ 'ಕಿಂಚನ' ಅಲ್ಪದ್ರವ್ಯ ವನ್ನು ಕೂಡ ಬಯಸದಿರುವವರು ನಿಷ್ಕಿಂಚನರು. ಅಕಿಂಚಿನರು.

ಅಧಿಕವನ್ನು ಬಯಸುವವರು ಸಂಕಿಚನರು. ಸಕಿಂಚನರಲ್ಲಿ ಅಕಿಂಚನರಲ್ಲಿರುವಷ್ಟು ಪ್ರೀತಿ ಭಗವಂತನಿಗೆ ಇರುವುದಿಲ್ಲ.

ಯಾವದ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಂ ।
ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥

(ಭಾ.೭.೧೪.೯)

'ದೇಹಿಗಳಿಗೆ ತಮ್ಮ ಹೊಟ್ಟೆ ತುಂಬಲು ಎಷ್ಟು ಬೇಕೊ ಅಷ್ಟನ್ನು ಅವರು ತಮ್ಮದೆಂದು ಹೇಳಿಕೊಳ್ಳಬೇಕು. ಹೆಚ್ಚಿನದನ್ನು ತನ್ನದೆಂದರೆ ಅವನು ಕಳ್ಳ. ಅವನಿಗೆ ಶಿಕ್ಷೆಯಾಗಬೇಕು' ಎಂದು, ನಾರದರು ಧರ್ಮರಾಜನಿಗೆ ಗೃಹಸ್ಥಧರ್ಮವನ್ನು ಹೇಳುವಾಗ, ಹೇಳುತ್ತಾರೆ.

**'ಕಿಂಚನ' ಸ್ವಲ್ಪವಾದರೂ ಜೀವನಾವಶ್ಯಕತೆಗಿಂತ ಅಧಿಕ ದ್ರವ್ಯವನ್ನು ಲೋಭದಿಂದ ಇಟ್ಟುಕೊಳ್ಳದವನನ್ನು ನಿಷ್ಕಿಂಚನರೆನ್ನುವರು. ಅವರು ಭಗವಂತನ ಪ್ರೀತಿಯನ್ನು ಹೊರತು ಇನ್ನೇನೂ ಬೇಡುವುದಿಲ್ಲ. ಅವರ ಲಕ್ಷಣ—'ಅಖಿಲ ಜೀವ ವತ್ಸಲಾಃ' ಎಲ್ಲ ಜೀವರಲ್ಲಿ ದಯೆ ಉಳ್ಳವರು. ಅವರ ಪ್ರವೃತ್ತಿ— 'ಕಾಮೈರನಾಲಬ್ಧಧಿಯಃ' ವಿಷಯಾಸೆಯಿಂದ ಬುದ್ಧಿಗೆಡದೆ 'ಜುಷಃ' ಅನುದ್ವಿಗ್ನತೆಯಿಂದ 'ಯದೃಚ್ಛಾಲಬ್ಧ'ವಾದುದನ್ನೆ ಹರಿ ಕೊಟ್ಟದ್ದನ್ನೆ ಉಂಡು ತೃಪ್ತಿಪಡುತ್ತಾರೆ. ಇನ್ನು ಹೆಚ್ಚು ಬೇಕೆನ್ನುವುದಿಲ್ಲ. 'ಶಾಂತಾಃ' ಏನಿಲ್ಲದಿದ್ದರೂ ಸಂತುಷ್ಟರಾಗಿರುತ್ತಾರೆ.**

**ಈ ಭಾಗವತಧರ್ಮದಿಂದ ಏನು ಪ್ರಯೋಜನವೆಂದರೆ, 'ಮಮ ಸುಖಂ' ಭಗವಂತನು ಹೇಳುತ್ತಾನೆ, 'ನನ್ನ ಕಥಾಶ್ರವಣಾದಿಗಳಿಂದಲೆ ಇವರಿಗೆ ಪರಮಸುಖವು ಲಭ್ಯವಾಗುತ್ತದೆ'. 'ನೈರಪೇಕ್ಷ್ಯಂ' ಇತರ ಸುಖದ ಅಪೇಕ್ಷೆ ಇರುವುದಿಲ್ಲ. ವಿಷಯಗಳಿಂದ ಇಂಥ ದಿವ್ಯಸುಖ ಬರಲಾರದೆಂದು ಇವರು 'ವಿದುಃ' ತಿಳಿದಿರುವರು. ಅದರಿಂದ ದುರ್ವಿಷಯಗಳನ್ನು ಸೇವಿಸದೇ ಇರುವರು.**

'ಇಚ್ಛಾನುಸಾರ ವಿಷಯಪದಾರ್ಥ ಸಿಕ್ಕಿದರೆ ತಾನೆ ಸುಖ? ಏನೂ

ಸಿಗದಿದ್ದರೆ ಸಂತುಷ್ಟನಾಗುವುದು ಹೇಗೆ? ಎಂದು ಇವರು ಕೇಳುವುದಿಲ್ಲ. ಏಕೆಂದರೆ 'ಕಾಮೈರನಾಲಬ್ಧಧಿಯಃ' ವಿಷಯಸುಖದ ಇಚ್ಛೆಗಳಿಂದ ಇವರ ಬುದ್ಧಿ ಕೆಟ್ಟಿರುವುದಿಲ್ಲ. ಇವರ ಕಥಾಶ್ರವಣಾದಿ ಜನ್ಯದಿವ್ಯ ಸುಖವು ಇಚ್ಛೆಗಳಿಂದ ಬುದ್ಧಿಕೆಟ್ಟವರಿಗೆ ಎಂದೂ ಸಿಗುವುದಿಲ್ಲ. ಇದು ಪಕ್ವಯೋಗಿಗಳ ಜೀವನ ವೃತ್ತಿ, 'ಯದೃಚ್ಛಾವೃತ್ತಿ'.

❖❖❖

–೨೭೧–

**ಪಕ್ವಕಲ್ಪರಾದ ಯೋಗಿಗಳ ಶಿಲೋಂಛವೃತ್ತಿ**

**ಅಕಿಂಚನಾನಾಂ ಹಿ ಧನಂ ಶಿಲೋಂಛನಂ**
**ಸ ತೇನ ನಿರ್ವರ್ತಿತಸಾಧುಸತ್ಕ್ರಿಯಃ ।**
**ಕಥಂ ವಿಗರ್ಹ್ಯಂ ತು ಕರೋಮ್ಯಧೀಶ್ವರಾಃ**
**ಪೌರೋಧಸಂ ಹೃಷ್ಯತಿ ಯೇನ ದುರ್ಮತಿಃ ॥**

(ಭಾ.೬.೭.೩೬)

ಏವಂ ಪಕ್ವಯೋಗಿನಾಂ ಯದೃಚ್ಛಾವೃತ್ತಿಂ ಪ್ರದರ್ಶ್ಯ ಪಕ್ವಕಲ್ಪಾನಾಂ ವೃತ್ತಿಂ ದರ್ಶಯತಿ ॥ **ಅಕಿಂಚನಾನಾಮಿತಿ** ॥ ಹೇ ಅಧೀಶ್ವರಾಃ ಇತಿ ದೇವಾನ್ಪ್ರತಿ ವಿಶ್ವರೂಪಋಷೇಃ ಸಂಬೋಧನಂ । ಹಿ ಯತಃ ಅಕಿಂಚನಾನಾಂ ಯೋಗಿನಾಂ । ಶಿಲೋಂಛನಮೇವ ಧನಂ ಜೀವನೋಪಾಯ ಇತಿ ಹಿ ಪ್ರಮಿತಂ । ಯತಶ್ಚಾಹಮೇತಾವತ್ಪರ್ಯಂತಂ ತೇನೈವ ವಿಹಿತೇನ ಶಿಲೋಂಛನೇನ । ನಿರ್ವರ್ತಿತಾಃ ಸಾಧೂನಾಂ ಯಾಃ ಸತ್ಕ್ರಿಯಾಃ ದೋಷಾಜನಿಕಾಃ ಕ್ರಿಯಾಃ ಅಗ್ನಿಹೋತ್ರಾದಯೋ ಯೇನ ಸ ತಸ್ಮಾತ್ಸ ತಾದೃಶೋಽಹಂ । ವಿಗರ್ಹ್ಯಂ ಬ್ರಾಹ್ಮಣಶ್ರೇಷ್ಠಸ್ಯೈವ ನಿಂದಿತಂ । ಮಮ ಯೋಗಿನಃ ತು ವಿಶೇಷೇಣ ವಿನಿಂದಿತಂ ಪೌರೋಧಸಂ । ಕಥಂ ಕರೋಮೀತಿ । ನನು ಬಹುಭಿಃ ಪ್ರಾರ್ಥನೀಯಮೇತತ್ । ಸತ್ಯಂ । ಪ್ರಾರ್ಥಯಿತಾರ ಈದೃಶಾ ಇತ್ಯಾಹ ॥ **ದುರ್ಮತಿರಿತಿ** ॥ ಯೇನ ದುರ್ಮತಿರೇವ ಹೃಷ್ಯತಿ ನ ಪ್ರೇಕ್ಷಾವಾನಿತಿ । ವ್ರೀಹ್ಯಾದಿಸಸ್ಯವತ್ಸು ಕ್ಷೇತ್ರೇಷು ಖಲೇ ರಾಶೀಕೃತೇ ಧಾನ್ಯೇ ಕ್ಷೇತ್ರಸ್ವಾಮಿನಾ ನೀತೇ ಸತಿ ತತ್ಪರಿತ್ಯಕ್ತಧಾನ್ಯಾನಯನಂ ತೇನ ಜೀವನಂ ಶಿಲೋಂಛನಾಮೇತಿ ॥

❖❖❖

**ವಿಶ್ವರೂಪಾಚಾರ್ಯರು ದೇವತೆಗಳಿಗೆ ಹೇಳುತ್ತಾರೆ—'ದೇವತೆಗಳೆ, ವಿರಕ್ತರಿಗೆ ಶಿಲೋಂಛವೃತ್ತಿಯೆ ಧನಾರ್ಜನ ಮಾರ್ಗ. ಆ ವೃತ್ತಿಯಿಂದಲೇ ನಾನು ದೇವಕಾರ್ಯ ಪಿತೃಕಾರ್ಯ ಮುಂತಾದ ಸತ್ಕರ್ಮಗಳನ್ನು ಚೆನ್ನಾಗಿ ನಿರ್ವಹಿಸುತ್ತಿದ್ದೇನೆ. ಹೀಗಿರುವಾಗ ನಾನು ನಿಮಗೆ ಪೌರೋಹಿತ್ಯವನ್ನು ಹೇಗೆ ಕೈಗೊಳ್ಳಲಿ? ಸಂಸಾರ ನಿರ್ವಹಣೆಯಾಗದೆ ದುಃಖಪಡುವವರಿಗೆ ತಾನೆ ಈ ವೃತ್ತಿ ಸುಖಕರವಾದೀತು?'**

ಇಲ್ಲಿ 'ಪಕ್ವಕಲ್ಪ' ಯೋಗಿಗಳ ಜೀವನವೃತ್ತಿ 'ಶಿಲೋಂಛನ'ವೆಂದಿದ್ದಾರೆ. ಪಕ್ವ ಯೋಗಿಗಳಿಗೆ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ 'ಯದೃಚ್ಛಾವೃತ್ತಿ' ಪ್ರಕೃತಿಯಲ್ಲಿ ತಾನಾಗಿ ಸಿಗುವ ಪತ್ರಪುಷ್ಪ ಫಲ ತೋಯಗಳಿಂದಲೆ ಇವರ ಜೀವನ. ಪಕ್ವಯೋಗಿಗಳ ಈ ಅವಸ್ಥೆ ತುತ್ತತುದಿಯದು. ಅನಂತರ ಸ್ಥಿತಿ ಪಕ್ವಕಲ್ಪಯೋಗಿಗಳ ಈ ಶಿಲೋಂಛವೃತ್ತಿ.

'ಉಂಛಃ ಕಣಶ ಆದಾನಂ ಕಣಿಶಾದ್ಯರ್ಜನಂ ಶಿಲಂ'

ಹೊಲದಲ್ಲಿ ಧಾನ್ಯವನ್ನು ಒಕ್ಕುವ ಸ್ಥಳದಿಂದ ಧಾನ್ಯವನ್ನು ಹೊಲದ ಯಜಮಾನನು ಒಯ್ದಾಗ ಅಲ್ಲಿಯೇ ಬಿದ್ದಿರುವ ಧಾನ್ಯದಕಾಳನ್ನು ಹೆಕ್ಕಿ ಆದರಿಂದಲೇ ಜೀವಿಸುವುದು ಉಂಛವೃತ್ತಿ. ಅಲ್ಲಿಯೆ ಬಿದ್ದಿರಬಹುದಾದ ತೆನೆಗಳನ್ನು ಎತ್ತಿಕೊಂಡು ಉಣ್ಣುವುದು 'ಶಿಲ'ವೃತ್ತಿ. 'ಶಿಲ' ಮತ್ತು 'ಉಂಛ'ಗಳೇ 'ಶಿಲೋಂಛ' ವೃತ್ತಿ ಎನಿಸಿದೆ. ಪಕ್ವಕಲ್ಪರಾದ ಯೋಗಿಗಳು ಈ ವೃತ್ತಿಯಿಂದ ಬದುಕುತ್ತಾರೆ.

❖❖❖

—೨೭೨—

**ಪಕ್ವತುಲ್ಯ ಯೋಗಿಗಳ ಪ್ರವೃತ್ತಿ**

**ಮಾऽಗಾರದಾರಾತ್ಮಜದೇಹಬಂಧುಷು**
**ಸಂಗೋ ಯದಿ ಸ್ಯಾತ್ ಭಗವತ್ಪ್ರಿಯೇಷು ನಃ ।**
**ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್**
**ಸಿಧ್ಯತ್ಯದೂರಾನ್ನ ತಥೇಂದ್ರಿಯ ಪ್ರಿಯಃ ॥**

(ಭಾ.೫.೧೮.೧೦)

ಅಧುನಾ ದಶಾಭೇದೇನ ಭಿನ್ನಾನಾಂ ತ್ರಿವಿಧಾನಾಂ ಪಕ್ವತುಲ್ಯಾನಾಂ ಯೋಗಿನಾಂ ಪ್ರವೃತ್ತಿಪ್ರಕಾರಂ ದರ್ಶಯತಿ ॥ **ಮಾಗಾರೇತಿ** ॥ ಅಗಾರಾದಿಷು, ಸಂಗಃ ಕುಟುಂಬಿತಾ, ನೋऽಸ್ಮಾಕಂ, ಸಾಧಕಾನಾಂ ಮಾ ಭೂದೇವ। ಅಯಮುತ್ತಮಃ ಕಲ್ಪಃ । ಯದಿ ಚ ದೈವಾದನಾಯತ್ತ್ಯಾ ಅಜ್ಞಾನೇನ ವಾ ಸ್ಯಾತ್ । ತದಾ ತೇನ ಕುಟುಂಬೇನ ಭಗವದ್ಭಕ್ತೇನ ಭಾವ್ಯಂ। ತದ್ಯೈವ, ಹಿ ಕುಟುಂಬಿನೋऽಪಿ ಪುರುಷಾರ್ಥಸಾಧನಯೋಗ ಇತಿ ಭಾವೇನಾಹ ॥ **ಭಗವತ್ಪ್ರಿಯೇಷು ಸ್ಯಾದಿತಿ** ॥ ಕುತ ಏವಂ ಪ್ರಾರ್ಥ್ಯತ ಇತ್ಯತ ಆಹ ॥ **ಯ ಇತಿ** ॥ ಯೋऽಧಿಕಾರೀ । ಪ್ರಾಣವೃತ್ತ್ಯಾ ಪ್ರಾಣಧಾರಣಮಾತ್ರೌಪಯಿಕಯಾ ವೃತ್ತ್ಯಾ । ಪರಿತುಷ್ಟಃ ಸಂತುಷ್ಟಃ । ಸ ಏವಾತ್ಮವಾನ್ ಮನೋಜಯೇನ ವಿಶುದ್ಧಾಂತಃಕರಣಃ ಸನ್। ಶ್ರವಣಾದಾವಧಿಕೃತಃ। ಅದೂರಾತ್ ಶೀಘ್ರಮೇವ। ಸಿದ್ಧ್ಯತಿ ಅಪರೋಕ್ಷಾದಿಮಾನ್ ಭವತಿ ಯಥಾ। ನ ತಥಾ ಇಂದ್ರಿಯ ಪ್ರೀಣನಾಸಕ್ತಃ, ಪ್ರಾಣಧಾರಣೌಪಯಿಕದ್ರವ್ಯಾದಧಿಕದ್ರವ್ಯಾಸಕ್ತಃ . ಸಿಧ್ಯತಿ। ಕಿಂತು ಪುನರ್ಜನ್ಮೈವಾತ್ರ ಪ್ರಾಪ್ನೋತಿ ಯತೋऽತ ಇತಿ ॥ **ಇದಮುದಿತಂ ಭವತಿ**— ಕುಟುಂಬರಾಹಿತ್ಯೇನಾವಸ್ಥಾನಂ ಪಾರಿವ್ರಾಜ್ಯಾದಿಕಮೇವ ಮುಖ್ಯಂ। ತಥಾ ಯದೃಚ್ಛಯಾ ಲಬ್ಧೇನ ದ್ರವ್ಯೇಣ ಪ್ರಾಣಧಾರಣಮಾತ್ರಂ ಚ। ಭಗವತ್ಪ್ರಿಯೈರ್ಭಾರ್ಯಾದಿಭಿಃ ಕುಟುಂಬೈರ್ಗೃಹಿತ್ವಂ। ತಥಾ ಶಿಲೋಂಛ-ವೃತ್ತ್ಯಾ ಪ್ರಾಣಧಾರಣಮಾತ್ರಂ ಚ ತಸ್ಮಾದವಮಂ। ಇದಂ ಚ ವರ್ತನದ್ವಯ ಮಯಾಚನಯಾ । ಯಾಚನಯಾ ಪ್ರಾಣಧಾರಣಮಾತ್ರಂ ತು ತತೋऽವಮಂ । ತತ್ರಾಪ್ಯೇಕೈಕಸ್ಮಿನ್ ದಿನೇ ಜೀವನೌಪಯಿಕ ಸ್ವೀಕರಣಮುತ್ತಮಂ। ಸಾ ವೃತ್ತಿಃ ಅಸಂಚಯಪದೋದಿತಾ। ಪಕ್ಷಮಾಸಾದಿಕಾಲಪರ್ಯಂತಂ ಜೀವನೌಪಯಿಕಸ್ವೀಕರಣಂ ಮಧ್ಯಮಂ। ತಥಾ ವೃತ್ತಿಸ್ತು ವಾರ್ತೇತಿ ಗೀಯತೇ ಯಾಯಾವರಮಿತಿ ಚ। ಸಂವತ್ಸರಪರ್ಯಂತಂ ಜೀವನೌಪಯಿಕಸ್ವೀಕರಣ ಮಧಮಂ। ಇಯಂ ಚ ವೃತ್ತಿಃ ಶಾಲೀನಮಿತಿ ಶಬ್ದ್ಯತ ಇತಿ। ಇದಂ ಚ ಮನೋವಿಕ್ಷೇಪವಿಶೇಷಾವಿಶೇಷವಿವಕ್ಷಯೋಕ್ತಮುತ್ತಮತ್ವಾದಿಕಂ। ಯಸ್ಯ ಕುಟುಂಬೇ ಸತ್ಯಸತಿ ವಾ, ಯಾಚನೇऽಯಾಚನೇ ವಾ, ಸಂಗ್ರಹೇऽಸಂಗ್ರಹೇ ವಾ, ಮನೋವಿಕ್ಷೇಪವಿಶೇಷಾಭಾವಃ ತೇನ ಸಾನುಷ್ಠೇಯೇತಿ ತತ್ವಮಿತಿ ॥

❖❖❖

ಹರಿವರ್ಷ ಖಂಡದಲ್ಲಿ ಪ್ರಹ್ಲಾದ ಮುಂತಾದವರು ನರಸಿಂಹ ಮೂರ್ತಿಯ ಸ್ತೋತ್ರ ಮಾಡುತ್ತಾರೆ—

**ಮನೆ ಮಡದಿ ಮಕ್ಕಳು ದೇಹ ಸಂಬಂಧಿಗಳು ಎಂಬ ಕುಟುಂಬದಲ್ಲಿ ಅಭಿಮಾನವು ಸಾಧಕರಾದ ನಮಗೆ 'ಮಾ' ಬೇಡ. ದೈವಾತ್ ಅದು ಪ್ರಾಪ್ತವಾದಲ್ಲಿ ಕುಟುಂಬದವರು ಭಗವದ್ ಭಕ್ತರಾಗಲಿ, ಹಾಗಾದರೇನೇ ನಮಗೆ ಅವರೊಂದಿಗೆ ಪುರುಷಾರ್ಥಸಾಧನೆ ಮಾಡಿಕೊಳ್ಳಲು ಅವಕಾಶವಾದೀತು. ಏಕೆಂದರೆ ಯಾರು ಪ್ರಾಣಧಾರಣಕ್ಕೆ ಮಾತ್ರ ಸಾಕಾಗುವಷ್ಟು ದ್ರವ್ಯಸಂಪಾದನೆ ಯಲ್ಲಿ ತೃಪ್ತಿಪಡುವನೋ ಅವನೇ ಮನೋಜಯದಿಂದ ಶುದ್ಧಾಂತಃಕರಣನಾಗಿ ಬೇಗನೆ ಅಪರೋಕ್ಷಾದಿ ಸಿದ್ಧಿಗೆ ಭಾಜನನಾಗುವನು ಹೊರತು ಇಂದ್ರಿಯ ತೃಪ್ತಿಯನ್ನು ಬಯಸುವವನು ಪ್ರಾಣಧಾರಣೋಪಯುಕ್ತದ್ರವ್ಯ ಮಾತ್ರದಿಂದ ತೃಪ್ತನಾಗದವನು ಅಪರೋಕ್ಷಾದಿಗಳನ್ನು ಸಂಪಾದಿಸಲಾರನು. ಪುನರ್ಜನ್ಮವನ್ನೇ ಸಂಪಾದಿಸಿಕೊಳ್ಳುವನು.**

ಇದರ ತಾತ್ಪರ್ಯವಿಷ್ಟು—ಕುಟುಂಬವೆಂದಿಲ್ಲದೆ ಸನ್ನ್ಯಾಸಿಯಾಗುವುದು ಯೋಗಿಗೆ ಉತ್ತಮವಾದ ವೃತ್ತಿ. ಇದರಲ್ಲಿ ಯದೃಚ್ಛೆಯಿಂದ ಲಬ್ಧವಾದ ದ್ರವ್ಯದಿಂದ ಪ್ರಾಣಧಾರಣ ಮಾಡುತ್ತಾನೆ ಯೋಗಿ.

ಇನ್ನು ಭಗವತ್ಪ್ರಿಯರಾದ ಮಡದಿ ಮಕ್ಕಳು ಮುಂತಾದವರೊಂದಿಗೆ ಕುಟುಂಬಿಯಾಗಿದ್ದು ಶಿಲೋಂಛವೃತ್ತಿಯಿಂದ ಪ್ರಾಣಧಾರಣ ಮಾಡುವುದು ಎರಡನೆಯ ವೃತ್ತಿ. ಇದು ಸನ್ನ್ಯಾಸಕ್ಕಿಂತ ಕಡಿಮೆಯದು. ಈ ಎರಡೂ ವೃತ್ತಿಗಳನ್ನು ಅಯಾಚನೆಯಿಂದ ನಡೆಸಬೇಕು.

ಯಾಚಿಸಿ ಪ್ರಾಣಧಾರಣ ಮಾತ್ರವನ್ನು ಮಾಡುವ ವೃತ್ತಿ ಇನ್ನು ಕಡಿಮೆಯದು. ಅದರಲ್ಲಿ ಒಂದುದಿನಕ್ಕೆ ಸಾಲುವಷ್ಟು ಮಾತ್ರ ಯಾಚನೆಯಿಂದ ಸಂಪಾದಿಸುವುದು ಅಸಂಚಯ ಎಂಬ ವೃತ್ತಿ ಉತ್ತಮ.

ಪಕ್ಷ ಮಾಸಗಳಿಗೆ ಮಾತ್ರ ಸಾಕಾಗುವಷ್ಟು ಬೇಡಿ ಸಂಗ್ರಹಿಸುವುದು ಮಧ್ಯಮ. ಇದನ್ನು ವಾರ್ತಾ ಎನ್ನುವರು. ಅದಕ್ಕೂ ಕಡಿಮೆಯದು.

ಒಂದು ವರ್ಷಕ್ಕೆ ಮಾತ್ರ ಸಾಕಾಗುವಷ್ಟು ಬೇಡಿಪಡೆದು ಬದುಕುವುದು ಶಾಲೀನವೆಂಬ ವೃತ್ತಿ. ವಾರ್ತಾ ಮತ್ತು ಯಾಯಾವರಗಳೆಂದರೆ ಒಂದೆ. ಈ ಎಲ್ಲ ವೃತ್ತಿಗಳಲ್ಲಿ ಮನೋವಿಕ್ಷೇಪ ಕಡಿಮೆಯಾದಷ್ಟೂ ಉತ್ತಮ, ಹೆಚ್ಚಾದಷ್ಟೂ ಅಧಮವೆನಿಸುವುದು.

❖❖❖

-೨೭೩-

**ಯೋಗಿಗಳು 'ತಪೋಧನ'ರು, ತಪಸ್ಸೇ ಅವರ ಧನ**

ಸ ಚಿಂತಯನ್ ದ್ವ್ಯಕ್ಷರಮೇಕದಾಂಭ-
ಸ್ಯುಪಾಶೃಣೋತ್ ದ್ವಿರ್ಗದಿತಂ ವಚೋ ವಿಭುಃ ।
ಸ್ಪರ್ಶೇಷು ಯತ್ ಷೋಡಶಮೇಕವಿಂಶಂ
ನಿಷ್ಕಿಂಚನಾನಾಂ ನೃಪ ಯದ್ಧನಂ ವಿದುಃ ॥

(ಭಾ.೨.೯.೬)

ನನ್ವೇವಂವಿಧಯಾ ವೃತ್ತ್ಯಾ ಪ್ರಾಣಧಾರಣಮಾತ್ರೇಣ ವರ್ತನೇಽಪಿ ವಿಪದಾಗಮನೇ ಕಥಂ। ವಾಸುದೇವಭಕ್ತಾನಾಂ ವಿಪದೋ ನ ಸಂತ್ಯೇವ। ದೈವಾದ್ಯದಿ ಭವೇಯುಸ್ತದಾಪ್ಯನ್ಯೇಷಾಂ ಸಂಪದ್ಭ್ಯೋಽಪಿ ವರೀಯಸ್ಯ ಏವ। ಭಕ್ತಿಜ್ಞಾನಾದಿವಿಶೇಷಸಾಧನತ್ವಾತ್ । **ಯಥಾಹುಃ—**

''ವಿಪದಃ ಸಂತು ನಃ ಶಶ್ವತ್ತತ್ರ ತತ್ರ ಜಗತ್ಪತೇ ।
ಭವತೋ ದರ್ಶನಂ ಯತ್ಸ್ಯಾದಪುನರ್ಭವ ದರ್ಶನಂ' (೧೮।೨೮) ಇತಿ ।

ಸತ್ಯಮೇವಂ। ತದಾಪಿ ಜೀವನೋಪಾಯಃ ಕ ಇತಿ ಮದಾಶಯ ಇತಿ। ಅನ್ಯೇಷಾಮಪಿ ಕಃ। ಸಂಗ್ರಹೀತಧನಮಿತಿ ಚೇತ್ ಸಮಂ। ಕಿಂ ತದಿತ್ಯತ ಇದಮೇವೇತ್ಯಾಹ। ಸ ಇತಿ। ವಿಭುರ್ಬ್ರಹ್ಮಾ। ಅಂಭಸಿ। ಕಥಂ ಸೃಷ್ಟ್ಯುಪಯೋಗಿಜ್ಞಾನಂ ಮೇ ಸ್ಯಾದಿತಿ ಚಿಂತಯನ್ನಾಸೀತ್। ಸ ಚೈವಂ ಚಿಂತಯಾನಃ। ಏಕದಾ। ದ್ವಿವಾರಮುಚ್ಚಾರಿತಂ, ದ್ವೇ ಅಕ್ಷರೇ ಯಸ್ಮಿನ್ ತಾದೃಶಂ ವಚಃ। ಶುಶ್ರಾವ। ವಚಸಿ ತದಕ್ಷರದ್ವಯಂ ಕಿಮಿತಿ ಶಂಕಮಾನಂ ನೃಪಂ ಪ್ರತಿ ಶುಕಃ ಸ್ವಯಮಾಹ। ಹೇ ನೃಪ, ಕಾದಯೋ ಮಾವಸಾನಾಃ ಪಂಚವಿಂಶತಿವರ್ಣಾಃ ಸ್ಪರ್ಶಸಂಜ್ಞಾಃ ತೇಷು ಚ ಯತ್ಷೋಡಶಂ ತದೇಕಂ। ಯಚ್ಚೈಕವಿಂಶಂ ತದ್‌ದ್ವಿತೀಯಮಿತಿ। ವಿಜ್ಞಾತಮೇತತ್। ಷೋಡಶಂ ತಕಾರಃ ಏಕವಿಂಶಂ ತು ಪಕಾರಃ ಇತಿ। ತಯೋರರ್ಥಸ್ತು ಕ ಇತ್ಯತ ಉಕ್ತಂ। ನಿಷ್ಕಿಂಚನಾನಾಮಿತಿ॥ ನಿಷ್ಕಿಂಚನಾನಾಂ ಯೋಗಿನಾಂ। ಯದ್ಧನಂ ತದೇವ। ತಯೋರಕ್ಷರಯೋರರ್ಥಂ ವಿದುಃ ವದಂತಿ ಜ್ಞಾನಿನಃ। ನಿಷ್ಕಿಂಚನಾಸ್ತು ತಪೋಧನಾ ಇತಿ ಪ್ರಸಿದ್ಧಮಿತಿ ಭಾವಃ। ಏವಂ ಪಾರೋಕ್ಷ್ಯೇಣ ಕಥನೇನ ಭಗವದ್ವಚನಮಾತ್ರಸ್ಯ ಮಂತ್ರತುಲ್ಯತಾಂ ಸೂಚಯತಿ। ಅನೇನ ಯಥಾನ್ಯೇಷಾಂ ಸಂಗೃಹೀತಂ ಧನಂ ವಿಪತ್ಸು ಜೀವನೋಪಾಯೋ ಭವತಿ ತಥೈತೇಷಾಂ

**ಸಂಗೃಹೀತಂ ತಪ ಏವಾನ್ನಾದಿಸಂಪಾದನದ್ವಾರಾ ಜೀವನೋಪಾಯೋ ಭವತೀತಿ ಕಿಮೇತಯಾ ಚಿಂತಯಾ ಇತ್ಯುಕ್ತಂ ಭವತಿ ॥**

❖❖❖

**ಶ್ರೀಶುಕಮುನಿ ಹೇಳುತ್ತಾರೆ— ಬ್ರಹ್ಮದೇವರು ಆದಿಸೃಷ್ಟಿಯಲ್ಲಿ ಪ್ರಳಯ ಸಮುದ್ರದಲ್ಲಿ ವ್ಯಕ್ತವಾದ ಪರಮಾತ್ಮನ ನಾಭಿಕಮಲದಲ್ಲಿ ಕುಳಿತು ಮುಂದೆ ನಾನು ಸೃಷ್ಟಿಮಾಡಲು ಬೇಕಾದ ಜ್ಞಾನವು ಹೇಗೆ ಉಂಟಾದೀತೆಂದು ಆಲೋಚಿಸಿದರು. ಆಗ ಎರಡು ಅಕ್ಷರಗಳುಳ್ಳ ಒಂದು ಮಾತು ಎರಡು ಬಾರಿ ಕೇಳಿಸಿತು. ಯಾವುದು ಆ ಎರಡು ಅಕ್ಷರವೆಂದರೆ ಸ್ಪರ್ಶಾಕ್ಷರಗಳಲ್ಲಿ ಹದಿನಾರನೆಯದಾದ 'ತ' ಮತ್ತು ಇಪ್ಪತ್ತೊಂದನೆಯದಾದ 'ಪ' ಎರಡೂ ಸೇರಿ 'ತಪ' ಎಂಬ ಮಾತು ಎರಡುಬಾರಿ ಕೇಳಿಸಿತು. ಯೋಗಿಜನರಿಗೆ ಧನವೆನಿಸಿದ್ದು ತಪಸ್ಸು ಎಂದು ಜ್ಞಾನಿಗಳು ತಿಳಿಯುತ್ತಾರೆ. ಅದರಿಂದಲೆ ತಪಸ್ಸನ್ನು ಧನವೆಂದು ರಕ್ಷಿಸಿಕೊಳ್ಳುವ ಮುನಿಗಳನ್ನು ತಪೋಧನರೆನ್ನುತ್ತಾರೆ'.**

ಇದು ಬ್ರಹ್ಮದೇವರಿಗೆ ಭಗವಂತನಾಡಿದ ಮಾತು. ಅವನ ಮಾತೆಲ್ಲವೂ ಮಂತ್ರತುಲ್ಯವೆಂದು ತಿಳಿಸುವುದಕ್ಕಾಗಿ 'ತಪ' ಎಂದು ನೇರವಾಗಿ ಹೇಳದೆ 'ಸ್ಪರ್ಶಾಕ್ಷರಗಳಲ್ಲಿ ಹದಿನಾರನೆಯದು ಮತ್ತು ಇಪ್ಪತ್ತೊಂದನೆಯದು' ಎಂದು ಗೋಪ್ಯವಾಗಿ ತಿಳಿಸಿದ್ದಾರೆ ಶುಕಮುನಿಗಳು. ಧನವು ಆಪತ್ತಿನಲ್ಲಿ ರಕ್ಷಿಸುತ್ತದೆ. ಹಾಗೇ ತಪಸ್ಸು ಕೂಡ ಆಪತ್ತಿನಲ್ಲಿ ಯೋಗಿಗಳಿಗೆ ಅನ್ನಾದಿಗಳನ್ನು ತಂದಿತ್ತು ಜೀವನೋಪಾಯವಾಗಿ ಅವರನ್ನು ಕಾಪಾಡುವುದು. ಅದರಿಂದೇನೂ ಚಿಂತೆಯಿಲ್ಲ.

❖❖❖

## 'ಶೌಚ'ಧರ್ಮ

## –೨೭೪–

### ನಿಷ್ಕಾಮನೆಯೇ 'ಶೌಚ'ವೆಂಬ ಭಾಗವತಧರ್ಮ

**ವಿಷಯತೃಷೋ ನರಪಶವೋ**
**ಯ ಉಪಾಸತೇ ವಿಭೂತೀರ್ನ ಪರಂ ತ್ವಾಂ ।**

**ತೇಷಾಮಾಶಿಷ ಈಶ**
**ತದನು ವಿನಶ್ಯಂತಿ ಯಥಾ ರಾಜಕುಲಂ ॥**

(ಭಾ.೬.೧೬.೩೮)

**ಕಾಮನಾಂ ಕುರ್ವತೋ ನಿಂದತಿ ॥ ವಿಷಯೇತಿ ॥ ಹೇ ಈಶ ।** ವಿಷಯತೃಪೋ ವಿಷಯಾಕಾಂಕ್ಷಿಣಃ । ಅತ ಏವ ನರೇಷು ಪಶವಃ । ವಿಭೂತೀರ್ವಿವಿಧಮನೋಗತಪ್ರದಾನ್ । ತಥಾ ವಿದಿತ್ವಾ ಅನ್ಯಾನ್ ದೇವಾನುಪಾಸತೇ । ತತೋಽಪಿ ಪರಂ ಉತ್ತಮಂ । ತಾದೃಶಪುರುಷಾರ್ಥಪ್ರದಮಪಿ ತ್ವಾಂ ನೋಪಾಸತೇ । ತೇಷಾಂ ಪುರುಷಾಣಾಮಾಶಿಷಃ ಆಶಾಸಿತವಿಷಯಾಃ ತತ್ಪ್ರಾಪ್ತಮೇಕಂ ವಸ್ತು ಅನುಸೃತ್ಯೈವ ನಶ್ಯಂತಿ । **ಇದಮುದಿತಂ ಭವತಿ ।** ತೇ ಮನಸಿ ಬಹೂನ್ ವಿಷಯಾನನುಸಂಧಾಯ ತ್ವತ್ತೋಽನ್ಯಂ ತತ್ಪ್ರದಇತಿ ಮತ್ವಾ ತ್ವಾಮಗಣಯ್ಯ ಉಪಾಸತೇ । ತಸ್ಮಾಚ್ಚ ತೇಷ್ವೇಕಂ ಪುತ್ರರೂಪಂ ಫಲಂ ಭವತಿ । ಅಥ ಸಂಪದ್ ಆಗಂತವ್ಯಾ । ತದಂತರೇ ಜಾತಃ ಪುತ್ರೋ ಮ್ರಿಯತೇ ಇತ್ಯೇವಂಕ್ರಮೇಣಾನುಸಂಹಿತಾನಾಂ ವಿಷಯಾಣಾಮೇಕದಾ ಮೇಲನಮೇವ ದುರ್ಘಟಮಿತಿ ಕ್ವಚಿದೇಕಸ್ಯೈಕದಾ ಮೇಲನೇಽಪಿ ತಸ್ಯ ಮೇಲನಸ್ಯ ಅನು ಅನಂತರಂ ಮಿಲಿತಾಃ ಸರ್ವಾ ಅಪ್ಯಾಶಿಷ ಏಕದೈವ ವಿನಶ್ಯಂತಿ । ಯದಿ ಚ ಕಸ್ಯಚಿದ್ಯಾವಜ್ಜೀವಂ ಮೇಲನಂ ಭವತಿ ದೈವಾತ್ ತದಾಪಿ ತ ಏವ ತದನು ತಚ್ಛರೀರತ್ಯಾಗಾನಂತರಮೇವ ವಿಶೇಷೇಣ ನಶ್ಯಂತಿ । ನರಕದುಃಖಮೇವ ಪ್ರಾಪ್ನುವಂತೀತಿ ಯಾವತ್ । ಅತ್ರ ಸರ್ವತ್ರಾಪಿ ದೃಷ್ಟಾಂತಮಾಹ ॥ **ಯಥಾ ರಾಜಕುಲಮಿತಿ ॥** ಯಥಾ ರಾಜಕುಲಂ ಅಮಿಲಿತರಾಜ್ಯಂ ಕದಾಚಿನ್ಮಿಲಿತ ರಾಜ್ಯಮಪಿ ತತ್ಕಾಲ ಏವ ಗತರಾಜ್ಯಂ । ಕ್ವಚಿದ್ಯಾವಜ್ಜೀವಂ ಸ್ಥಿತಮಪ್ಯಂತೇ ನಿಶ್ಚಿತನರಕಂ ತಥೇತಿ । ಯಥಾಹುಃ—

''ಏವಂ ಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಂ ।
ಅತುಲ್ಯಾತಿಶಯಧ್ವಂಸಾದ್ಯಥಾ ಮಂಡಲವರ್ತಿನಾಂ'' ಇತಿ ॥

❖❖❖

ಚಿತ್ರಕೇತು ರಾಜನು ಮಾಡಿದ ಸಂಕರ್ಷಣ ಸ್ತೋತ್ರ— ಹೇ ಈಶ, ವಿಷಯಾಭಿಲಾಷಿ ರಾಜರುಗಳು ನರಪಶುಗಳು. ಏಕೆಂದರೆ ಅವರು ನಿನ್ನ ವಿಭೂತಿಗಳಾದ ಇಂದ್ರಾದಿ ಅನ್ಯದೇವತೆಗಳನ್ನೇ ವಿಷಯಸುಖಕ್ಕಾಗಿ ಭಜಿಸುತ್ತಾರೆ. ನಿನ್ನನ್ನು ಭಜಿಸುವುದಿಲ್ಲ. ಅವರು ಮನಸಿನಲ್ಲಿ ದುರ್ವಿಷಯಗಳನ್ನು ಬಯಸಿ

**ಅವನ್ನು ನೀನಲ್ಲದೆ ಬೇರೆಯವರು ಮಾತ್ರ ಕೊಡುವರೆಂದು ಬಗೆದು ಸರ್ವಪುರುಷಾರ್ಥಪ್ರದನಾದ ನಿನ್ನನ್ನು ಲೆಕ್ಕಿಸದೆ ಅನ್ಯರನ್ನು ಭಜಿಸುವರು. ಅವರಿಂದ ನಶ್ವರ ರಾಜ್ಯ ಧನಪುತ್ರಾದಿ ಸಂಪತ್ತನ್ನು ಬೇಡಿ ಪಡೆಯುವರು. ಆ ಸಂಪತ್ತು ನಾಶವಾದಾಗ ದುಃಖವಾಗುವುದು. ಪುತ್ರಸಂಪತ್ತು ಬಂದಾಗ ಧನಸಂಪತ್ತು ನಾಶ. ಧನಸಂಪತ್ತು ಬಂದಾಗ ಪುತ್ರಸಂಪತ್ತು ನಾಶ. ಎರಡು ಸಂಪತ್ತೂ ಸೇರಿದರೆ ಒಡನೆ ಎರಡೂ ಒಮ್ಮೆಲೇ ನಾಶವಾಗುವುದು. ಬದುಕಿರುವಾಗ ಒಂದುವೇಳೆ ದೈವಾತ್ ಎಲ್ಲ ಸಂಪತ್ತು ಜೊತೆಯಾಗಿ ಬಂದರೂ ಮರಣೋತ್ತರದಲ್ಲಿ ಅದು ಎಲ್ಲ ನಾಶವಾಗುವುದು, ನರಕ ದುಃಖವೇ ಬರುವುದು. ಇದಕ್ಕೆ ಉದಾಹರಣೆ ರಾಜ್ಯವನ್ನು ಕಳೆದುಕೊಂಡ ರಾಜರು. ಅವರಿಗೆ ಅನ್ಯದೇವತೋಪಾಸನೆಯಿಂದ ರಾಜ್ಯ ಬಂದರೂ ಅಲ್ಪಕಾಲದಲ್ಲಿ ಅದು ಕೈತಪ್ಪಿ ಹೋಗುವುದು. ಒಂದುವೇಳೆ ಬದುಕಿರುವಷ್ಟು ಕಾಲ ರಾಜ್ಯವಿದ್ದರೂ ಮರಣೋತ್ತರದಲ್ಲಿ ನರಕ ದುಃಖ ತಪ್ಪಿದ್ದಲ್ಲ.**

ಏವಂಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಂ ।
ಅತುಲ್ಯಾತಿಶಯಧ್ವಂಸಾದ್ಯಥಾ ಮಂಡಲವರ್ತಿನಾಂ ॥

(ಭಾ.೧೧.೩.೨೧)

'ಕಾಮ್ಯಪುಣ್ಯದಿಂದ ಸಂಪಾದಿಸುವ ಪರಲೋಕವೂ ಸುಖಕರವಲ್ಲ. 'ಮಂಡಲ'ದಲ್ಲಿ ರಣರಂಗದಲ್ಲಿ ವೀರನಿಗೆ 'ಅತುಲ್ಯಾತಿಶಯ' ಸರಿಮಿಗಿಲ್ಲಿಲ್ಲದ ಪ್ರತಿವೀರನೊಬ್ಬನಿದ್ದರೆ ಬಿದ್ದು ಹೋಗುತ್ತಾನೆ. ಹಾಗೇ ಪುಣ್ಯತೀರಿದಾಗ ಸರಿಮಿಗಿಲಿಲ್ಲದ ದೇವತೆಗಳು ಅವನನ್ನು ಕೆಳಗೆ ತಳ್ಳಿದರೆ ಈತ ತಲೆಕೆಳಗಾಗಿ ನರಕದಲ್ಲಿ ಬೀಳುತ್ತಾನೆ' ಎಂದು ಜಾಯಂತೇಯ ಪ್ರಬುದ್ಧ ಮುನಿ ವಿದೇಹ ರಾಜನಿಗೆ ನುಡಿಯುತ್ತಾನೆ. 'ಶೌಚಂ ತಪಸ್ತಿತಿಕ್ಷಾಂ ಚ ಶಿಕ್ಷೇತ್' (ಭಾ.೧೧.೩.೨೪) ಎಂದೂ ಹೇಳುತ್ತಾನೆ. ವಿಷಯಕಾಮನೆಯನ್ನು ನಿಂದಿಸಿ ನಿಷ್ಕಾಮನರೂಪವಾದ ಶೌಚವೆಂಬ ಮೂರನೇ ಭಾಗವತಧರ್ಮ ಉಕ್ತವಾಯಿತು.

❖❖❖

–೨೭೫–

## ವಿಷಯಾನುಭವ ನರಕದಲ್ಲಿಯೂ ಲಭ್ಯ

ವರಾನ್ ವಿಭೋ ತ್ವದ್ ವರದೇಶ್ವರಾದ್ ಬುಧಃ
ಕಥಂ ವೃಣೀತೇ ಗುಣವಿಕ್ರಿಯಾತ್ಮನಾಂ ।
ಯೇ ನಾರಕಾಣಾಮಪಿ ಸಂತಿ ದೇಹಿನಾಂ
ತಾನೀಶ ಕೈವಲ್ಯಪತೇರ್ವೃಣೀತ ಕಃ?

(ಭಾ.೪.೨೦.೨೪)

ನನು ಭಗವಂತಂ ಪರಿತ್ಯಜ್ಯ ಅನ್ಯದೇವೋಪಾಸಕ ಉತ್ತರಕಾಲಭಾವಿದುಃಖ ಮನನುಸಂಧಾಯ ಸುಖಲವಂ ತಾತ್ಕಾಲಿಕಮವೇಕ್ಷಮಾಣಃ ಅದೀರ್ಘ ದರ್ಶಿತಯಾ ಕಂಟಕಾವೃತತೃಣಭಕ್ಷಕಪಶುರಿವೇತಿ ಭವದುಕ್ತಂ ಸಂಭಾವಿತಮೇವ । ತಮೇವ ಭಗವಂತಮುಪಾಸ್ಯ ವರಾನ್ ವೃಣೀಮಃ । ನ ಹಿ ವಯಂ ತ ಇವಾದೀರ್ಘದರ್ಶಿನ ಇತ್ಯತ ಆಹ ।। ವರಾನಿತಿ ।। ಹೇ ವಿಭೋ ಭಗವನ್ । ವರಪ್ರದಾನಾಂ ಮಧ್ಯೇ ಶ್ರೇಷ್ಠಾತ್ । ತ್ವತ್ತಃ । ಬುಧಃ ಪಂಡಿತಃ । ವರಾನ್ ಅಲ್ಪೈರ್ವರಣೀಯಾನ್ ವಿಷಯಾನ್ । ಕಥಂ ವೃಣೀತೇ । ನ ಕಥಮಪಿ । ವರದೇಶ್ವರಶ್ಚೇದುದಾರತಯಾ ಅಧಿಕಮೇವ ದದ್ಯಾದಿತಿ ನ ತತ್ಪ್ರತಿಬಂಧಕಂ ಪ್ರತ್ಯುತ ಸಾಧಕಂ । ವರಣೇ ವಿಷಯವರಣೇ ಚ ಕಾನುಪಪತ್ತಿರಿತ್ಯತಸ್ತದ್ವಿಶದಯತಿ ।। ಯ ಇತಿ ।। ಹೇ ಈಶ । ಕೈವಲ್ಯದಾತುಃ ತವ ಸಕಾಶಾತ್ । ಗುಣೇಷು ವಿಷಯೇಷು ವಿಕ್ರಿಯಾ ವಿಕಾರಸ್ತೇನ ಯುಕ್ತಃ ಆತ್ಮಾ ಮನೋ ಯೇಷಾಂ ತೇಷಾಂ ವಿಷಯಲುಬ್ಧಾನಾಂ । ನಾರಕಾಣಾಂ ತತ್ಸದೃಶಾನಾಂ ತಿರ್ಯಗ್ಯೋನಿಗತಾನಾಮಪಿ । ದೇಹಿನಾಂ ಪ್ರಾಣಿನಾಂ । ಸಂತಿ ಭವಂತಿ ಯೇ ವಿಷಯಾಸ್ತಾನ್ ಕೋ ವೃಣೀತ । ನ ಕೋಽಪೀತಿ । ಅನೇನ ಕುಬೇರಸಮೀಪೇ ಪಲಾಲಪ್ರಾರ್ಥನಮಿವ ಕೈವಲ್ಯದಾತುರ್ವಿಷಯವರಣಂ ಅತ್ಯಚತುರ ತಾಪಾದಕ ಮಿತಿ ಸೂಚಿತಂ ಭವತೀತಿ ಭವತ್ಯೇವ ವರಣೇ ವರದೇಶ್ವರಾದಿತಿ ಪ್ರತಿಬಂಧಕಮೇವೇತಿ ಭಾವಃ । ಇದಮುದಿತಂ ಭವತಿ— ಸತ್ಯಂ ಯೂಯಮನ್ಯದೇವೋಪಾಸಕಜನ ಇವ ನಾದೀರ್ಘದರ್ಶಿನ ಇತಿ । ತಥಾಪಿ ಪ್ರಾಪ್ತಪರಿತ್ಯಾಗಿತಯಾ ತದಪೇಕ್ಷಯಾ ಅಧಿಕಂ ಅದೀರ್ಘದರ್ಶಿನ ಏವೇತಿ ।।

❖❖❖

ಪೃಥುರಾಜನು ಹರಿಯನ್ನು ಸ್ತುತಿಸುತ್ತಾನೆ—ವರಪ್ರದರಾದ ಬ್ರಹ್ಮಾದಿ

**ಗಳಿಗೂ ಒಡೆಯನಾದ ನಿನ್ನಿಂದ ಲೌಕಿಕ ವರಗಳನ್ನು ಯಾವ ವಿವೇಕಿ ಬಯಸಿಯಾನು? ಲೌಕಿಕ ಸುಖಗಳು ವಿಷಯಾನುಭವದಿಂದ ಮನೋವಿಕಾರ ಹೊಂದುವ ನರಕವಾಸಿಗಳಂಥ ಹೀನಯೋನಿ ಜಾತರಿಗೂ ಲಭ್ಯವಾಗುತ್ತವೆ. ಅಂಥ ವಿಷಯಸುಖಗಳನ್ನು ಮೋಕ್ಷಪ್ರದನಾದ ನಿನ್ನಿಂದ ಯಾವ ಮಾನವನು ಬೇಡುವನು? ಕುಬೇರನನ್ನು ಒಲಿಸಿಕೊಂಡು ಹುಲ್ಲನ್ನು ಬೇಡುವಂತೆ ಇದು ಬರಿ ದಡ್ಡತನವಾಗುವುದು.**

ತಾತ್ಕಾಲಿಕ ಸುಖಕ್ಕಾಗಿ ಭಗವಂತನನ್ನು ಬಿಟ್ಟು ಅನ್ಯ ದೇವತೆಗಳನ್ನು ಭಜಿಸುವವನಿಗೆ ಮುಂದೆ ಆಗುವ ದುಃಖದ ಕಲ್ಪನೆ ಇರುವುದಿಲ್ಲ. ಅದರಿಂದ ಕೇವಲ ತಾತ್ಕಾಲಿಕವಾದ ಅಲ್ಪವಾದ ವಿಷಯಸುಖವನ್ನು ಬಯಸುವವನು ದೂರದೃಷ್ಟಿ ಇಲ್ಲದವನು, ಮುಳ್ಳಿನಿಂದ ತುಂಬಿದ ಹುಲ್ಲನ್ನು ಮೇಯುವ ಪಶುವಿನಂತೆ, ಎಂದು ನೀವು ಹೇಳಿದ್ದು ಸರಿಯೆ. ನಾವು ಹಾಗೆ ಮಾಡುವುದಿಲ್ಲ. ಭಗವಂತನನ್ನೇ ಸೇವಿಸಿ, ಐಹಿಕ ಸುಖವನ್ನು ಬೇಡಿ ಪಡೆಯುತ್ತೇವೆ. ಆಗ ನಾವು ಅವಿವೇಕಿಗಳಾಗುವುದಿಲ್ಲ ತಾನೆ?' ಎಂದರೆ, ನಿಜ, ಆದರೆ ನೀವು ಕೈಗೇ ಸಿಗುವಂತಿರುವ ಮೋಕ್ಷಾನಂದವನ್ನು ಬಿಟ್ಟುಬಿಡುತ್ತಿರುವುದರಿಂದ ಆ ಅವಿವೇಕಿಗಳಿಗಿಂತ ಹೆಚ್ಚು ಅವಿವೇಕಿಗಳು ನೀವು. ದೂರದೃಷ್ಟಿ ಇಲ್ಲದವರು, ನೀವು!

❖❖❖

–೨೭೬–

**ನರಕದಲ್ಲಿಯೂ ಸಿಗುವ ವಿಷಯಾನುಭವವನ್ನು ಹರಿಯಲ್ಲಿ ಏಕೆ ಬೇಡಬೇಕು?**

**ಮಾಂ ಪ್ರಾಪ್ಯಮಾನಿನ್ಯಪವರ್ಗ ಸಂಪದಂ**
**ವಾಂಛಂತಿ ಯೇ ಸಂಪದ ಏವ ಸತ್ಪತಿಂ ।**
**ತೇ ಮಂದಭಾಗ್ಯಾ ನಿರಯೇಽಪಿ ಯೇ ಸ್ಯುಃ**
**ಮಾತ್ರಾತ್ಮಕತ್ವಾತ್ ನಿರಯೇ ಸುಸಂಗಮಃ ॥** (ಭಾ.೧೦.೭೫.೫೭)

**ಕಿಯದೇತತ್ । ಯತ್ಕೇನಚಿದ್ವಿರಕ್ತೇನ ಭಕ್ತೇನೋದಿತಂ ಅತೋ ಭಗವದುಪಾಸಕಾ ವಯಮನ್ಯೋಪಾಸಕೇಭ್ಯೋಽಧಿಕಮದೀರ್ಘದರ್ಶಿನ ಇತಿ**

**ವಚನಮತಿಸಾಹಸಮಿತ್ಯತೋ ಭಗವದ್ವಾಕ್ಯ ಮೇವೋದಾಹರತಿ ॥ ಮಾಮಿತಿ ॥ ಅಪವರ್ಗಾಖ್ಯಸಂಪತ್ಪ್ರದಂ ಮಾಂ ಉಪಾಸ್ಯ, ವಿಷಯಭೋಗರೂಪಾ ಏವ ಸಂಪದಃ ಯೇ ವಾಂಛಂತಿ। ತೇ ಮಂದಭಾಗ್ಯಾಃ ದೈವಹೀನಾಃ। ಪ್ರಾಪ್ತಮೋಕ್ಷಾಖ್ಯಫಲತ್ಯಾಗಿತ್ವೇನ ಅನ್ಯದೇವೋಪಾಸಕಾದಾಧಿಕ್ಯೇನ ದೇಶಾಂತ-ರಸ್ಥಂ ರಾಜಾನಮಪ್ರಾಪ್ಯಾಲಬ್ಧಫಲಾತ್ಪುರುಷಾದಪಿ ಪ್ರಾಪ್ಯ ಅಲಬ್ಧಫಲಪುರುಷ ಇವ ಮಂದಭಾಗ್ಯ ಇತಿ। ಮಾತ್ರಾತ್ಮಕತ್ವಾತ್ತಜ್ಜನ್ಯತ್ವಾತ್। ಯೇ ವಿಷಯಭೋಗಾಃ। ನಿರಯೇ ಪಶ್ವಾದಿದೇಹೇಽಪಿ। ಸ್ಯುಃ ಭವೇಯುಃ। ತದ್ರೂಪಾಃ ಸಂಪದ ಏವೇತ್ಯನ್ವಯಃ। ನಿರಯೇ ವಿಷಯಾಭಾವೇನ ತದಧೀನೋ ಭೋಗಃ ಕಥಂ ಸ್ಯಾದಿತ್ಯತ ಉಕ್ತಂ॥ ನಿರಯ ಇತಿ॥ ನಿರಯೇ ತತ್ಸದೃಶಪಶ್ವಾದಿದೇಹೇಽಪಿ। ಸುಸಂಗಮಃ ಮಾತ್ರಾಣಾಂ ತೃಣಜಲಾದೀ-ನಾಮನಾಯಾಸೇನ ಪ್ರಾಪ್ತಿರಸ್ತ್ಯೇವೇತಿ। ಅತೋ ಭಗವತೈವ ನಿಷೇಧಿತತ್ವಾತ್ ತತ್ಕರಣೇ ತದಪೇಕ್ಷಯಾ ಆಧಿಕ್ಯೇನ ಅದೀರ್ಘದರ್ಶಿತೇತಿ ಸಾಧೂಕ್ತಮಿತಿ। ಯಥಾಹುಃ—**

''ನ ಖಾದಂತಿ ನ ಮೇಹಂತಿ ಕಿಂ ಗ್ರಾಮಪಶವೋಽಪರೇ'' ಇತಿ ॥

❖❖❖

ರುಕ್ಮಿಣೀ ಪ್ರೇಮಕಲಹದಲ್ಲಿ ಶ್ರೀಕೃಷ್ಣನ ವಚನ—

'ವಿರಕ್ತ ಭಕ್ತನೊಬ್ಬನು ಹೇಳಿದ ಮಾತಿನಿಂದೇನು ಪ್ರಯೋಜನ? ನಾವು ಭಗವದುಪಾಸಕರು. ಅಂತಹ ನಮ್ಮನ್ನು, ಭಗವಂತನಲ್ಲಿ ನಾವು ಲೌಕಿಕ ವರಗಳನ್ನು ಬೇಡಿದ ಮಾತ್ರಕ್ಕೆ ಅನ್ಯದೇವೋಪಾಸಕರಿಗಿಂತಲೂ ಹೆಚ್ಚಿನ ದಡ್ಡರೆಂದು ಗೇಲಿಮಾಡುವುದು ಯಾವ ನ್ಯಾಯ?' ಎಂದು ಕೇಳುವವರಿಗೆ 'ಯಾರೋ ಒಬ್ಬ ಭಕ್ತನಲ್ಲ, ಸಾಕ್ಷಾದ್ ಭಗವಂತನೆ ನಿಮ್ಮನ್ನು ದಡ್ಡರೆಂದು ಗೇಲಿಮಾಡಿದ್ದಾನೆ, ನೋಡಿರಿ, ಎಂದು, ಶ್ರೀಕೃಷ್ಣನ ಮಾತನ್ನೇ ತೋರಿಸುತ್ತಾರೆ ಇಲ್ಲಿ—

**'ದೇವಿ ರುಕ್ಮಿಣಿ, ಮೋಕ್ಷದಾಯಕನಾದ ನನ್ನನ್ನು ಆರಾಧಿಸಿಯೂ ಯಾರು ಲೌಕಿಕ ವರವನ್ನು ಬೇಡುವರೋ ಅವರು ನಿರ್ಭಾಗ್ಯರೇ ಸರಿ. ಅನ್ಯದೇವೋ ಪಾಸಕರಿಗಿಂತಲೂ ಹೆಚ್ಚು ದಡ್ಡರು ಇವರು ಸಾಕ್ಷಾತ್ ಮೋಕ್ಷಫಲವನ್ನೇ ನನ್ನಿಂದ ಬೇಡಿಪಡೆಯಲು ಅವಕಾಶವಿದ್ದೂ ಅದನ್ನು ಬಿಟ್ಟು ಲೌಕಿಕ ಫಲವನ್ನು**

**ಬೇಡುತ್ತಾರೆ. ದೂರದೇಶದಲ್ಲಿದ್ದ ರಾಜನನ್ನು ಕಾಣದೆ, ಕೇಳದೆ ಅವನಿಂದ ತನ್ನ ಅಭೀಷ್ಟವನ್ನು ಸಂಪಾದಿಸದಿದ್ದವನಿಗಿಂತ, ಅವನನ್ನು ಕಂಡೂ ಅಭೀಷ್ಟವನ್ನು ಪಡೆಯದಿರುವವನು ಹೆಚ್ಚು ದಡ್ಡನು ತಾನೆ? ಮೋಕ್ಷವನ್ನು ಬೇಡದೆ ಲೌಕಿಕವನ್ನು ಬೇಡುವುದು ಏಕೆ ದಡ್ಡತನವೆಂದರೆ, ಲೌಕಿಕ ವಿಷಯಭೋಗ ನಿರಯ'ದಲ್ಲಿ ಅಂದರೆ ನರಕ ಸದೃಶವಾದ ಪಶು ಪಕ್ಷಿ ಮುಂತಾದ ಹೀನಯೋನಿಯಲ್ಲಿಯೂ ಸುಲಭವಾಗಿ ದೊರಕುತ್ತದೆ ಎನ್ನುತ್ತಾನೆ ಭಗವಂತ.**

'ನರಕ' ಎಂದರೆ ಇಲ್ಲಿ ನರಕವೇ ಅಲ್ಲ. ನರಕ ಸದೃಶವಾದ ಪ್ರಾಣಿಜನ್ಮ. ನರಕದಲ್ಲಿ ವಿಷಯಭೋಗ ಲಭ್ಯವೇ ಇಲ್ಲ ತಾನೆ? ಪ್ರಾಣಿಜನ್ಮದಲ್ಲಿ ಆಹಾರ ನಿದ್ರಾ ಭಯ ಮೈಥುನಾದಿ ವಿಷಯ ಭೋಗ ಸುಲಭವೇ ಇದೆ. ಮತ್ತು ಒಮ್ಮೆಯಾದರೂ ವಿಷ್ಣುವನ್ನು ಭಕ್ತಿಯಿಂದ ಸೇವೆ ಮಾಡುವ ವ್ಯಕ್ತಿಗೆ ಎಂದೂ ನರಕ ಇಲ್ಲ. ಅದರಿಂದ 'ನಿರಯೇಽಪಿ' ಅಂದರೆ, ನರಕಸದೃಶವಾದ ದುಃಖಯುಕ್ತವಾದ ಪ್ರಾಣಿಜನ್ಮದಲ್ಲಿಯೂ ಕೂಡ ಆಹಾರಾದಿಗಳ 'ಸು ಸಂಗಮ' ಸುಲಭವಾದ ಪ್ರಾಪ್ತಿ ಇದ್ದೇ ಇರುವುದು ತಾನೆ? ಹೀಗೆ ಭಗವಂತನೇ ನಿಷೇಧಿಸಿರುವ ವಿಷಯಸುಖವನ್ನು ಭಗವಂತನಲ್ಲಿಯೂ ಬೇಡಬಾರದು. ಬೇಡಿದರೆ ಅದು ದಡ್ಡತನವಾಗುವುದು.

ಭಗವಂತನನ್ನೇ ಉಪಾಸನ ಮಾಡಿ ವರಗಳನ್ನು ಬೇಡುವವರಿಗೆ ಅನ್ಯದೇವತೆಗಳು ಬೇಡಿದ್ದನ್ನು ಕೊಡಲು ಶಕ್ತರಲ್ಲವೆಂದು ಅವರಿಗೆ ತಿಳಿದಿದೆ. ಅದರಿಂದಲೆ ಅವರು ಭಗವಂತನನ್ನು ಸೇವಿಸುತ್ತಾರೆ. ಆದರೂ ಕಲ್ಪವೃಕ್ಷವನ್ನು ಆರಾಧಿಸಿಯೂ ಕೇವಲ ನುಚ್ಚನ್ನು ಬೇಡುವಂತೆ ಭಗವಂತನಲ್ಲಿ ಅಲ್ಪವಿಷಯ ಗಳನ್ನು ಕೆಲವರು ಏಕೆ ಬೇಡುತ್ತಾರೆ? ಎಂದರೆ ಅದು ಭಗವಂತನ ಮಾಯೆ! ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

❖❖❖

## –೨೭೭–

### ಹರಿಯಲ್ಲಿ ವಿಷಯಗಳ ಬೇಡಿಕೆ ಕಲ್ಪವೃಕ್ಷದ ಮುಂದೆ ನುಚ್ಚು ಬೇಡುವಂತೇ

**ನೂನಂ ವಿಮುಷ್ಟಮತಯಸ್ತವ ಮಾಯಯಾ ತೇ**
**ಯೇ ತ್ವಾಂ ಭವಾಪ್ಯಯ ವಿಮೋಕ್ಷಣಮನ್ಯಹೇತೋಃ ।**

**ಅರ್ಚಂತಿ ಕಲ್ಪಕತರುಂ ಕುಣಪೋಪಭೋಗ್ಯಂ**
**ಇಚ್ಛಂತಿ ಯತ್‌ಸ್ಪರ್ಶಜಂ ನಿರಯೇಽಪಿ ನೃಣಾಂ ॥**

(ಭಾ.೪.೧೦.೯)

ನನು ಭವಂತಂ ಪ್ರತಿ ಯೇ ವರಾನ್ ಪ್ರಾರ್ಥಯಂತೇ ತೇ ಪುನರನ್ಯದೈವಮಪೇಕ್ಷಿತಾರ್ಥಪ್ರದಾನೇ ಸಾಮರ್ಥ್ಯವಿಧುರಂ ವಿದಿತ್ವೈವ ತತ್ಪರಿತ್ಯಜ್ಯ, ಅಪೇಕ್ಷಿತಾರ್ಥಪ್ರದಂ ಮೋಕ್ಷಪ್ರದಂ ಜ್ಞಾತ್ವೈವೋಪಾಸತೇ। ಪ್ರಾರ್ಥಯಂತೇ ತು ಕಲ್ಪತರುಮರ್ಚಯಿತ್ವಾ ಕಣಪಿಷ್ಟಾದಿಕಮಿವ, ವಿಷಯಾನಲ್ಪಾನ್ನಶ್ವರಾಂಶ್ಚ। ಕಿಂನಿಮಿತ್ತಮತ್ರ ವಿದ್ಯತೇ ಇತ್ಯತೋ ಭವನ್ಮಾಯೈವ ಕಲ್ಪತರುಪೂಜಕಕಣಭಕ್ಷಕಸ್ಯ ಕಣಪ್ರಾರ್ಥನಾಯಾಮಿವೇತಿ ಭಾವೇನಾಹ॥ **ನೂನಮಿತಿ ॥** ಯೇ ತ್ವಾಂ ಭವಾಪ್ಯಯವಿಮೋಕ್ಷಣಂ ಜ್ಞಾತ್ವಾ। ಅನ್ಯಹೇತೋಃ ವಿಷಯಭೋಗಪ್ರಾಪ್ತಯೇ। ಅರ್ಚಂತಿ ಪೂಜಯಂತಿ। ತೇ ಕಲ್ಪತರುಂ ಅರ್ಚಂತಿ। ಕುಣಪೋಪಭೋಗ್ಯಂ ಇಚ್ಛಂತಿ। ಪಿಷ್ಟೇಚ್ಛಯಾ ಕಲ್ಪತರು-ಪೂಜನಸದೃಶಮೇತತ್ಕೃತಮರ್ಚನಮಿತಿ ಯಾವತ್। ಯತ್ಸ್ಪರ್ಶಜತ್ವಾನ್ನೃಣಾಂ, ನರಕೇ ಸುಲಭಂ ತೇ ಪುರುಷಾ ಜಾನಂತೋಽಪಿ ಏವಂ ಕುತಃ ಕುರ್ವಂತೀತ್ಯತ ಉಕ್ತಂ ॥ ತ ಇತಿ ॥ 'ತೇ। ತವ ಮಾಯಯಾ ವಿಮುಷ್ಟಾ ಹೃತಾ ಮತಿರ್ಯೇಷಾಂ ತೇ ತವ। ನೂನಂ ನಿಶ್ಚಿತಮೇತತ್। ಮಾಯೈವ ತೇಷಾಂ ಬುದ್ಧಿಮೇವಂವಿಧಾಂ ಕರೋತೀತಿ। ಅನ್ಯಥಾ ವಿದುಷಾಮೇವಂವಿಧಪ್ರವೃತ್ತ್ಯ-ಯೋಗಾದಿತಿ ॥

❖❖❖

ಧ್ರುವನ ವೈರಾಗ್ಯ ಭಾಗ್ಯ—

'ಜನನ ಮರಣಗಳಿಂದ ಮೋಕ್ಷವನ್ನು ಕೂಡ ನೀಡಬಲ್ಲ ಸಮರ್ಥನೆಂದು ನಿನ್ನನ್ನು ತಿಳಿದೂ ತಿಳಿದೂ ಕೇವಲ ವಿಷಯಸುಖಕ್ಕಾಗಿ ಆರಾಧಿಸುವವರು ಕಲ್ಪವೃಕ್ಷದ ಮುಂದೆ ನುಚ್ಚುಹಿಟ್ಟು ಮುಂತಾದುವನ್ನು ಬೇಡುವ ವರಂತೆ ಮೂಢರೇ ಸರಿ. ತಿಳಿದೂ ಹೀಗೇಕೆ ಮಾಡುತ್ತಾರೆ ಇವರು ಎಂದರೆ ನಿನ್ನ 'ಮಾಯೆಯಿಂದ' ಬಂಧಕಶಕ್ತಿಯಿಂದ ಬುದ್ಧಿ ಇಲ್ಲದವರಾಗಿದ್ದಾರೆ! ವಿಷಯ ಸುಖವು ನರಕಸದೃಶವಾದ ಪ್ರಾಣಿಜನ್ಮದಲ್ಲಿಯೂ ಸಿಕ್ಕೇ ಸಿಗುವುದು'.

❖❖❖

## –೨೭೮–

## ಶ್ರೀಹರಿ, ನಮಗೆ ಮೋಕ್ಷವೂ ಬೇಡ, ನಿನ್ನ ಪಾದಸೇವೆ ನೀಡು

ನ ನಾಕಪೃಷ್ಠಂ ನ ಚ ಪಾರಮೇಷ್ಠ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಂ ।
ನ ಯೋಗಸಿದ್ಧೀರಪುನರ್ಭವಂ ವಾ
ವಾಂಛಂತಿ ತ್ವತ್ಪಾದ ರಜಃ ಪ್ರಪನ್ನಾಃ ॥

(ಭಾ.೧೦.೧೪.೩೭)

ಏವಂ ವಿಷಯಾಣಾಮಲ್ಪಸುಖದತ್ವಾದ್ ಬಹುದುಃಖದತ್ವಾಚ್ಚಾವಶ್ಯಂ ತತ್ರ ಕಾಮನಾ ವರ್ಜನೀಯೇತ್ಯಭಿಹಿತಂ ॥ ತತ್ರೇಯಮಾಶಂಕಾ । ಸತ್ಯಂ ವಿಷಯ ಭೋಗಾ ಅಲ್ಪಸುಖದಾಃ ಮಹಾದುಃಖದಾಶ್ಚೇತಿ । ತಥಾಪಿ ತತ್ರ ಕಾಮನಾ ತ್ಯಕ್ತುಮಶಕ್ಯಾ । ನನೂಕ್ತಮೇತತ್ । ಯಚ್ಚನ್ಯೈಃ ಸಂಪಾದನೀಯಮೇತದಿತಿ । ಸತ್ಯಮಭ್ಯಾಸಬಲೇನ ಸರ್ವ ವಿಷಯಾನಪಿ ಕ್ರಮಾತ್ತ್ಯಕ್ಷ್ಯಾಮಃ, ಯದಿ ಸರ್ವಾನಪಿ ವಿಷಯಾನ್ ಪರಿತ್ಯಜ್ಯ ಭಗವದ್ಭಜನಾಸಕ್ತಾ ಲೋಕೇ ಸ್ಯುಃ ॥ ಇತ್ಯತಃ ಕ್ವ ಭವದೀಯಾ ವಿಷಯಾಃ ಕ್ವ ಸ್ವರ್ಗಾದಯಸ್ತಥಾಪಿ ತಾದೃಶಾನಪಿ ಪರಿತ್ಯಜ್ಯ ಬಹವೋ ಭಗವತ್ಸೇವಾರತಾಃ । ಕಿಮಸಾರವೈಷಯಿಕಸುಖಕಾಮನಾ ಪರಿಚಿಂತಯಾ । ತತ್ಪರಿತ್ಯಾಗಶ್ಚ ತಾದೃಶವಾಕ್ಯಾದೇವಾವಸೀಯತ ಇತ್ಯಾಶಯೇನ ತದಭಿಧಾಯಕಂ ವಾಕ್ಯಂ ಪಠತಿ ॥ ನ ನಾಕೇತಿ ॥ ರಸಾಯಾಃ ರಸಾತಲಸ್ಯ । ಯೋಗಪ್ರಾಪ್ಯಾಣಿಮಾದಿಸಿದ್ಧೀಃ । ಕಿಂ ಬಹುನಾ । ಅಪುನರ್ಭವಂ ಮೋಕ್ಷಮಪಿ ॥

❖❖❖

ನಾಗಪತ್ನಿಯರು ಕಾಲಿಯಮರ್ದನನನ್ನು ಪ್ರಾರ್ಥಿಸುತ್ತಾರೆ—

'ನಿನ್ನ ಪಾದಧೂಳಿಯನ್ನು ನಂಬಿದ ಭಕ್ತರು ಸ್ವರ್ಗವನ್ನಾಗಲಿ, ಬ್ರಹ್ಮಲೋಕ ವಾಸವನ್ನಾಗಲಿ ಸಾರ್ವಭೌಮ ಪದವಿಯನ್ನಾಗಲಿ, ರಸಾತಳದ ಒಡೆತನವನ್ನಾಗಲಿ ಯೋಗಸಿದ್ಧಿಗಳನ್ನಾಗಲಿ ಕೊನೆಗೆ ಸಂಸಾರದಿಂದ ಬಿಡುಗಡೆಯನ್ನಾಗಲಿ ಬೇಡುವುದಿಲ್ಲ'.

ಯದ್ಯಪಿ ವಿಷಯಸುಖವು ಹೇಯ, ಅದನ್ನು ಭಗವಂತನಲ್ಲಿಯೂ ಕೂಡ ಬೇಡಬಾರದು. ಆದರೂ ಅದನ್ನು ಬಿಡಲಾಗುವುದಿಲ್ಲ. ಭಗವಂತನ ಮಾಯೆ

ವಿಷಯಸುಖದಲ್ಲಿ ಕಟ್ಟಿಹಾಕುತ್ತದೆ. ಅಭ್ಯಾಸಬಲದಿಂದ ಕ್ರಮವಾಗಿ ಎಲ್ಲ ವಿಷಯಗಳನ್ನು ಬಿಡಲು ಯತ್ನಿಸಬೇಕು ಎಂದರೆ ಹಾಗೆ ಪ್ರಯತ್ನ ಮಾಡಿದವರು ಭಗವತ್ ಸೇವಾನಿರತರು ಇರುವರೆ? ಕೆಲವರು ಇರುತ್ತಾರೆ ಎಂದು ನಾಗಪತ್ನಿಯರು ಹೇಳುತ್ತಿದ್ದಾರೆ.

❖❖❖

–೨೭೯–

**ಮೋಕ್ಷಸುಖವೂ ಬೇಡ, ಹರಿಕಥಾಮೃತ ಒಂದಿದ್ದರೆ ಸಾಕು**

**ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ**
**ಕಿಂ ಚಾನ್ಯದರ್ಪಿತಭಯಂ ಭ್ರುವ ಉನ್ನಯೈಸ್ತೇ ।**
**ಯೇಽಂಗ ತ್ವದಂಘ್ರಿಶರಣಾ ಭವತಃ ಕಥಾಯಾಃ**
**ಕೀರ್ತನ್ಯತೀರ್ಥಯಶಸಃ ಕುಶಲಾ ರಸಜ್ಞಾಃ ॥**

(ಭಾ.೩.೧೬.೪೮)

**ನನು ಸತ್ಯಲೋಕಾದಿಕಮಸಾರಾನಿತ್ಯಮಿತಿ ತನ್ನ ವಾಂಛಂತೀತಿ ಯುಕ್ತಂ, ಅಪುನರ್ಭವಂ ತು ಕಿಮಿತಿ ನ ವಾಂಛಂತೀತ್ಯತಃ ಅನಭಿಜ್ಞೋ ಹಿ ಭವಾನ್ ಭಾಗವತಾನಾಂ ಭವತಃ (ಜಾಯಮಾನಸ್ಯ) ಸುಖಸ್ಯ ಕಾಷ್ಠಾಯಾಃ। ಯದ್ಭಗವತ್ಕಥಾಶ್ರವಣಾದಿಸುಖಸ್ಯ ಮೌಕ್ತಂ ಸುಖಮಪಿ ಕಲಾಂ ನಾರ್ಹತಿ । ತಥಾ ಚೋಕ್ತಂ ವೈರಾಗ್ಯಪ್ರಕರಣೇ । ತತಃ ಈದೃಶಸುಖೇ ನಿಮಗ್ನಾ ಅಪುನರ್ಭವಮಪಿ ನ ವಾಂಛಂತೀತಿ ಭಾವೇನಾಹ ॥ ನಾತ್ಯಂತಿಕಮಿತಿ ॥ ಹೇ ಅಂಗ, ತ್ವದಂಘ್ರಿರೇವ ಶರಣಂ ಯೇಷಾಂ ತೇ। ಕೀರ್ತನ್ಯಂ ಕೀರ್ತನೀಯಂ, ತೀರ್ಥಂ ಪವಿತ್ರಂ, ಯಶೋ ಯಸ್ಯ ತಸ್ಯ । ಭವತಃ । ಕಥಾಯಾಃ ರಸಜ್ಞಾಃ ಸಾರಗ್ರಾಹಿಣಃ । ಅತ ಏವ ಕುಶಲಾಃ ಯೇ ತೇ ಪುರುಷಾಃ। ತೇ ತವ ಆತ್ಯಂತಿಕಂ ಮುಖ್ಯಂ। ಪ್ರಸಾದಂ ತತ್ಸಾಧ್ಯಂ ಮೋಕ್ಷಮಪಿ ನ ವಿಗಣಯಂತಿ ಪುರುಷಾರ್ಥತಯಾ। ಯದಾ ಹಿ ಮೋಕ್ಷಸ್ಯ ಈದೃಶೀ ದಶಾ। ತದಾ ತೇ। ಭ್ರುವಃ, ಉನ್ನಯೈಃ ವಿಜೃಂಭಣವಿಶೇಷೈಃ। ಅರ್ಪಿತ ಪತನಾದಿಭಯಂ ಯಸ್ಮಿನ್ ತತ್। ಅನ್ಯಚ್ಚ ಸ್ವರ್ಗಾದಿಕಂ ತು । ನ ವಿಗಣಯಂತಿ ಇತಿ ಕಿಂ ವಕ್ತವ್ಯಮಿತಿ ॥**

❖❖❖

ಆದರೂ ಸತ್ಯಲೋಕಾದಿಗಳು ಅನಿತ್ಯವಾದ್ದರಿಂದ ಅವುಗಳನ್ನು ಏಕಾಂತ

ಭಕ್ತರು ಬೇಡುವುದಿಲ್ಲವೆಂದರೆ ನಂಬಬಹುದು. ನಿತ್ಯವಾದ ಮೋಕ್ಷವನ್ನೂ ಬೇಡ ಎನ್ನುವವರಿರುವರೆ? ಎಂದರೆ, ಹೀಗೆ ಕೇಳುವವರಿಗೆ, ಸಂಸಾರದಲ್ಲಿದ್ದೇ ಹರಿಕಥಾಶ್ರವಣಾದಿಗಳಿಂದ ಯೋಗಿಗಳು ಹೊಂದುವ ದಿವ್ಯಸುಖದ ಬಗ್ಗೆ ಏನೂ ತಿಳುವಳಿಕೆ ಇಲ್ಲ ಎನ್ನಬೇಕು. ಇದನ್ನು ವೈರಾಗ್ಯ ಪ್ರಕರಣದಲ್ಲಿ ಹೇಳಿದ್ದೇವೆ.

**ಸನಕಾದಿ ಮುನಿಗಳು ಇದನ್ನೆ ವೈಕುಂಠನಾಥನಲ್ಲಿ ಹೇಳಿಕೊಳ್ಳುತ್ತಾರೆ—**

**'ಕೀರ್ತನ ಯೋಗ್ಯ ಪವಿತ್ರಕೀರ್ತಿಉಳ್ಳ ನಿನ್ನ ಕಥಾಮೃತದ ಸವಿಯನ್ನು ಉಂಡು ಬಲ್ಲವರು ನಿನ್ನ ಪಾದಗಳನ್ನೆ ಮೊರೆ ಹೋಗುವ ಬುದ್ಧಿವಂತರು ಅದನ್ನೇ ಬಯಸುವರು ಹೊರತು ನೀನು ಅನುಗ್ರಹಿಸುವ ನಿತ್ಯವಾದ ಮೋಕ್ಷಸುಖವನ್ನೂ ಕೂಡ ಅವರು ಆದರಿಸರು. ಇನ್ನು ನಿನ್ನ ಒಂದು ಹುಬ್ಬಿನ ಕುಣಿತದಿಂದಲೇ ನಶಿಸಿ ಹೋಗುವ ಅನಿತ್ಯ ಸ್ವರ್ಗಾದಿ ಕ್ಷುದ್ರಸುಖದ ಪಾಡೇನು?**

ಭಕ್ತಿ ಜ್ಞಾನಾದಿಗಳು ಪೂರ್ತಿ ಪರಿಪಾಕವಾಗುವ ಮುನ್ನ ಹಠಯೋಗ ಬಲದಿಂದ ಮುಕ್ತಿಹೊಂದಿದ್ದ ಮುಕ್ತನು ಕೂಡ ಹರಿದರ್ಶನ ಸುಖವನ್ನು ಹೊಂದುವುದು ನಿಜವೆ. ಆದರೆ ಉತ್ತಮಾಧಿಕಾರಿಗಳು ಮುಕ್ತಿ ಸುಖವನ್ನು ಕೂಡ ಬಯಸದೆ ಕಥಾಶ್ರವಣ ಸುಖವನ್ನೇ ಬಯಸುತ್ತಾರೆ. ಅವರಿಗೆ ಶ್ರವಣದಿಂದಾಗುವ ಸುಖವು ಅಧಮಾಧಿಕಾರಿಗಳ ಮೋಕ್ಷಸುಖಕ್ಕಿಂತ ಅಧಿಕವೇ ಇರುತ್ತದೆ. ಅದರಿಂದ ಅವರು ಮೋಕ್ಷಸುಖವನ್ನು ಬಯಸಲಾರರು.

❖❖❖

## –೨೮೦–

### ಹರಿಸೇವೆ ದೊರಕುವಂತಿದ್ದರೆ ನರಕವೇ ನಮಗಾಗಲಿ

**ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾ**
**ಶ್ಚೇತೋಽಲಿವದ್ ಯದಿ ನು ತೇ ಪದಯೋ ರಮೇತ ।**
**ವಾಚಶ್ಚ ನಸ್ತುಲಸಿವದ್ ಯದಿ ತೇಽಂಘ್ರಿಶೋಭಾಃ**
**ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ॥**

(ಭಾ.೩.೧೬.೪೯)

ಭಗವತ್ಸೇವಾನಿರತಾಃ ಮುಕ್ತಿಮಪಿ ನೇಚ್ಛಂತೀತ್ಯುಕ್ತಂ ತನ್ನಾಶ್ಚರ್ಯಂ ।

**ಯತೋ ನಾರಕಂ ದುಃಖಮಪೀಚ್ಛಂತಃ ಸಂತಃ ಸೇವಾಸಮುತ್ಸುಕಾಃ ಸಂತೋऽಪಿ ಸಂತಿ । ಕಾ ಕಥಾ ಕಾಮಕಾಮನಾಂ ತ್ಯಜತಾಮಿತ್ಯಾಶಯೇನಾಹ ॥ ಕಾಮಮಿತಿ ॥ ಅಲಿವತ್ ಪದ್ಮೇ ಭ್ರಮರವತ್ ಅಂಘ್ರಿನಿಮಿತ್ತ (ಸಂಬಂಧಿ) ಶೋಭಾವತ್ಯಃ । ಪೂರ್ಯೇರ್ತ ಯದಿ । ತರ್ಹಿ । ಪಾಪ್ಯೈಃ । ನರಕೇಷು । ನಷ್ಟಾಃ ಕ್ಲಿಷ್ಟಾಃ । ಕಾಮಂ । ಭವೇಮೇತಿ ॥**

❖❖❖

**ಸನಕಾದಿಗಳು ವೈಕುಂಠನಾಥನಲ್ಲಿ ಅರಿಕೆ ಮಾಡಿಕೊಳ್ಳುತ್ತಾರೆ—**

**'ನಾವು ನಿನ್ನ ಪಾರ್ಷದರಾದ ಜಯವಿಜಯರಿಗೆ ಶಾಪವಿತ್ತು ಅಪರಾಧ ಮಾಡಿದ್ದರೆ ಅದರ ಫಲವಾಗಿ ಅವಶ್ಯ ನರಕದಲ್ಲಿ ಬೇಯಲು ಸಿದ್ಧರೆ ಇರುವೆವು. ಆದರೆ ನಮ್ಮ ಮನಸ್ಸು ಆಗಲೂ ದುಂಬಿಯಂತೆ ನಿನ್ನ ಪಾದಕಮಲದಲ್ಲಿಯೇ ಆಸಕ್ತವಾಗಿರಲಿ. ಮಾತು ತುಳಸಿಯಂತೆ ನಿನ್ನ ಪದಕಮಲಗಳನ್ನೆ ಅಲಂಕರಿಸಲಿ. ಕರ್ಣರಂಧ್ರಗಳು ನಿನ್ನ ಗುಣಗಣಗಳಿಂದ ತುಂಬಿಕೊಳ್ಳಲಿ'.**

ಪಾಪಫಲವಾದ ದುಃಖವನ್ನು ಮುನಿಗಳು ಹೇಗೆ ಪ್ರಾರ್ಥಿಸಿದರು? 'ನರಕದಲ್ಲಿಯೂ ಮನ ಆದಿ ಇಂದ್ರಿಯಗಳು ಹರಿಪರವಾಗಿದ್ದರೆ' ಎಂದೇಕೆ ಬೇಡಿದರು? ಎಂದರೆ ಪರಮಭಕ್ತರು ದುಃಖವನ್ನು ಅನುಭವಿಸುವಾಗಲೂ 'ಅದನ್ನು ಹರಿಯೇ ಕೊಟ್ಟಿದ್ದಾನೆ. ತಪಸ್ಸೆಂದು ಅದನ್ನು ಅನುಭವಿಸುತ್ತೇನೆ' ಎಂದು ಹೆಚ್ಚು ಭಕ್ತಿಯನ್ನೇ ಮಾಡುತ್ತಾರೆ. ಆದರಿಂದ 'ಸಂಸಾರದಲ್ಲಿ ಹೆಚ್ಚು ದುಃಖವನ್ನು ಅನುಭವಿಸಿದಷ್ಟೂ ಹೆಚ್ಚು ಸುಖವನ್ನು ಮುಕ್ತಿಯಲ್ಲಿ ಪಡೆಯುವರೆ'ಂದು ಬ್ರಹ್ಮತರ್ಕ ವಚನವಿದೆ.

❖❖❖

## –೨೮೧–

**ಮೋಕ್ಷದಾಯಕನಲ್ಲಿ ಬಂಧಕವಾದ ವಿಷಯಪ್ರಾರ್ಥನೆ ಸರಿಯೆ?**

**ನ ಕಾಮಯೇऽನ್ಯಂ ತವ ಪಾದ ಸೇವನಾದ್**
**ಅಕಿಂಚನ ಪ್ರಾರ್ಥ್ಯತಮಾದ್ ವರಂ ವಿಭೋ ।**
**ಆರಾಧ್ಯ ಕಸ್ತ್ವಾ ಮಪವರ್ಗದಂ ಹರೇ**
**ವೃಣೀತ ಆರ್ಯೋ ವರಮಾತ್ಮಬಂಧನಂ ॥** (ಭಾ.೧೦.೫೪.೫೭)

ಏವಂ ನಿಷ್ಕಾಮೋ ಭೂತ್ವಾ ಭಗವತ್ಸೇವಾರೂಪಂ ಕರ್ಮ ಕುರ್ಯಾದಿತ್ಯುಕ್ತಮುಪಸಂಹರನ್ ಸಂತತಂ ಶ್ರೀಹರಿಂ ಪ್ರತಿ ಇದಮೇಕಮೇವ ಪ್ರಾರ್ಥ್ಯಂ ನಾನ್ಯತ್ ತಸ್ಯಾತ್ಮಬಂಧಕತ್ವಾದಿತಿ ವಿಶೇಷಂ ಜ್ಞಾಪಯತಿ ॥ **ನ ಕಾಮಯ ಇತಿ।** ಮೋಕ್ಷಮಪಿ ಹಿತ್ವಾ ಸೇವನಂ ಕಿಮಿತಿ ಪ್ರಾರ್ಥ್ಯತ ಇತ್ಯತ ಇದಮೇಕಮೇವಾಕಿಂಚನೈರ್ಭಾಗವತೈಃ ಪ್ರಾರ್ಥ್ಯತಮಮಿತೋಽನ್ಯನ್ನಾಸ್ತ್ಯೇವ। ತಸ್ಯೈವ ಭಾಗವತಜನಪುರುಷಾರ್ಥತ್ವಾದಿತಿ ಭಾವೇನೋಕ್ತಂ। **ಅಕಿಂಚನಪ್ರಾರ್ಥ್ಯತಮಾದಿತಿ ॥** ಆತ್ಮನಃ ಸ್ವಸ್ಯ ಬಂಧಕಂ। ವೃಣೀತ ಪ್ರಾರ್ಥಯೇತ್ ॥

❖❖❖

ಮುಚುಕುಂದನು ಶ್ರೀಕೃಷ್ಣನಲ್ಲಿ ಹೇಳಿಕೊಳ್ಳುತ್ತಾನೆ—

'ಪ್ರಭು, 'ಬೇಕಾದ ವರವನ್ನು ಕೇಳು' ಎನ್ನುವಿ. ಏಕಾಂತಭಕ್ತನಿಗೆ ನಿನ್ನ ಪಾದಸೇವೆಯೇ ಅತ್ಯಂತ ಅಪೇಕ್ಷಣೀಯ. ಅದಕ್ಕಿಂತ ಬೇರೇನನ್ನೂ ನಾನು ಬಯಸಲಾರೆ. ಮೋಕ್ಷದಾಯಕನಾದ ನಿನ್ನನ್ನು ಆರಾಧಿಸಿ ಬಂಧಕವಾದ ಐಹಿಕವರವನ್ನು ಯಾವ ಜ್ಞಾನಿ ಬಯಸಿಯಾನು?'

ಭಕ್ತನು ನಿಷ್ಕಾಮನಾಗಿ ಭಗವತ್ಸೇವಾರೂಪ ಕರ್ಮವನ್ನೇ ಮಾಡಬೇಕು. ಅದನ್ನೇ ಭಗವಂತನಲ್ಲಿ ಬೇಡಬೇಕು. ಬೇರೆ ಎಲ್ಲವೂ ಬಂಧಕವೇ ಎಂದು ಮುಚುಕುಂದನ ಈ ಮಾತು ತಿಳಿಸುವುದು.

❖❖❖

–೨೮೨–

## ವಿಷಯವನ್ನು, ಬೇಡಿದವರಿಗೆ ಕೊಡಲಾರ, ಬೇಡದವರಿಗೆ ಕೊಡದಿರಲಾರ

ಸತ್ಯಂ ದಿಶತ್ಯರ್ಥಿತಮರ್ಥಿತೋ ನೃಣಾಂ
ನೈವಾರ್ಥಿತೋ ಯತ್ ಪುನರರ್ಥಿನೋ ಮದಃ ।
ಸ್ವಯಂ ವಿಧತ್ತೇ ಭಜತಾಮನಿಚ್ಛತಾಂ
ಇಚ್ಛಾಪಿಧಾನಂ ನಿಜಪಾದಪಲ್ಲವಂ ॥

(ಭಾ.೫.೧೯.೨೭)

ನನು ಭವಂತು ಭವಂತಂ ಪರಿತ್ಯಜ್ಯಾನ್ಯದೈವಂ ವಿಷಯಕಾಮನಯಾ

ಭಜಮಾನಾಃ ಪಶವಃ । ಭವಂತು ಚ ತಮಪಿ ವಿಮುಕ್ತಿದಂ ವಿಷಯಕಾಮನಯಾ ಕಣಾಶಯಾ ಕಲ್ಪತರುಮಿವ ಭಜಂತೋಽಪಿ ಭಾಗ್ಯಹೀನಾಃ । ಮಾಯಾವಿಮೋಹಿತಧಿಯಶ್ಚ । ತಥಾಪಿ ನಾಸ್ಮಾಕಂ ಕಾಚನ ಹಾನಿಃ । ತತ್ರ ವಾಸ್ತವೀಂ ಸ್ಥಿತಿಂ ತಾವತ್ಪೃಚ್ಛಾಮಃ । ಕಿಂ ವಿಷಯಕಾಮನಯಾ ಸ್ವಾತ್ಮಾನಂ ಭಜತಾಂ ಭಗವಾನ್ ಸ್ವರ್ಗಾದಿಸ್ಥಾನ್ ವಿಷಯಾನ್ ದದಾತಿ ನ ವಾ । ಆದ್ಯೇ ವಿಷಯಕಾಮನಯಾ ತಮುಪಾಸ್ಯ ವಿಷಯಾನ್ ಭುಕ್ತ್ವಾ ಅಂತೇ ಮುಕ್ತ್ಯರ್ಥಮಪಿ ನಿಷ್ಕಾಮನಯೋಪಾಸ್ಯ ತಾಂ ಸಂಪಾದಯಾಮಃ । ಭಾಗ್ಯಹೀನತ್ವಾದಿನಾ ನಿಂದಿತತ್ವಂ ತು ತಾವತ್ ಸಹ್ಯಂ ಫಲದೃಷ್ಟ್ಯಾ । ತದಪಿ ನಿಷ್ಕಾಮನಯಾ ಭಜನಸಮಯೇ ಸ್ವಯಮೇವ ಗಚ್ಛತಿ । ದ್ವಿತೀಯೇ ಅನ್ಯದೇವೋಪಾಸಕಾಃ ಕಥಂ ಪಶವಃ ಅಯಂ ವಿಷಯಾನ್ನ ದದಾತೀತ್ಯೇನಂ ಪರಿತ್ಯಜ್ಯ ಅನ್ಯೋಪಾಸನಸ್ಯ ಕ್ರಿಯಮಾಣತ್ವಾತ್ । ಪ್ರತ್ಯುತ ತ ಏವ ಭಗವದುಪಾಸಕೇಭ್ಯೋ ವರಿಷ್ಠಾಃ । ವಿಷಯಭೋಗಸ್ಯ ಏಕಸ್ಯಾಪಿ ಸಾಧಿತತ್ವಾತ್ । ನಿಷ್ಕಾಮನಯಾ ಭಗವತಂ ಭಜಂತಸ್ತೂಭಯತೋ ಭ್ರಷ್ಟಾಃ । ಯತಃ ಸ್ವಾತ್ಮಾನಮಪ್ಯುಪಾಸ್ಯ ಪ್ರಾರ್ಥಯತಾಮತ್ಯಲ್ಪಾನಪಿ ವಿಷಯಾನ್ ಯೋ ನ ದದಾತಿ ಸ ಕಥಂ ಪುನರನಿಚ್ಛತಾಂ ಮಹಾಪುರುಷಾರ್ಥಭೂತಾಂ ಮುಕ್ತಿಂ ದದ್ಯಾತ್ । **ತದಿದಮಾಭಾಣಕಂ—** ''ಗೃಹಂ ಪ್ರತಿ ಗಮನೇಽಪಿ ತಕ್ರಮದದಾನಃ ಆಜ್ಞಾಪಿತಃ ಕ್ಷೀರಂ ಕಥಂ ದದ್ಯಾದಿತಿ । ತದೇವಂ ವಾಸ್ತವೀಂ ಸ್ಥಿತಿಂ ಪೃಚ್ಛಂತಂ ಪ್ರತ್ಯಾಹ ॥ **ಸತ್ಯಮಿತಿ** ॥ ನೃಭಿಃ ವಿಷಯವಾಸನಯೋಪಾಸಿತಃ ಪ್ರಾರ್ಥಿತಶ್ಚ ಸನ್ । ತೇಷಾಂ ಅರ್ಥಿತಂ ದಿಶತೀತಿ ಸತ್ಯಂ ನಿಶ್ಚಿತಂ । ತೈರರ್ಥಿತೋಽಪಿ ಅರ್ಥಿತಂ ನೈವ ದಿಶತಿ ಇತಿ ಯತ್ ತತ್ । ಪುನಸ್ತದಪಿ । ಸತ್ಯಂ ನಿಶ್ಚಿತಂ । ನಹಿ ತತ್ತದ್ ದಾನಸಾಮರ್ಥ್ಯಾಭಾವಾತ್ । ನಾಪಿ ತತ್ರ ವಿದ್ವೇಷಾತ್ । ಕಿಂತು ತೇಷು ಕೃಪಯೈವ । ಅರ್ಥಿನಃ ಅರ್ಥಿತದಾನೇ ಮದೋ ಮಾ ಭೂದಿತಿ । ವಿಷಯಾನನಿಚ್ಛತಾಂ ಭಜತಾಂ ತು । ಸ್ವಯಂ ಅಪ್ರಾರ್ಥಿತ ಏವ । ನಿಜಪಾದಪಲ್ಲವಂ । ತೇಷಾಂ ಇಚ್ಛಾವಿಧಾನಂ ಅಪೇಕ್ಷಿತಪುರುಷಾರ್ಥ ವಿಧಾಯಕಂ । ವಿಧತ್ತೇ ಕರೋತೀತಿ ಯೋಜನಾ ।

**ಇದಮುದಿತಂ ಭವತಿ—** ಯತ್ತಾವತ್ಪೃಷ್ಟಂ ದದಾತಿ ನ ವೇತಿ ತತ್ರ ದದಾತೀತಿ ಬ್ರೂಮಃ । ತತ್ರ ಯದುಕ್ತಂ ತದತಿಸಾಹಸಂ । ನಿಷ್ಕಾಮನಯೈವ ಭಜನೇ ಮೋಕ್ಷಸ್ಯೇವಾನ್ಯಪುರುಷಾರ್ಥಾನಾಮಪಿ ಲಭ್ಯಮಾನತ್ವಾತ್ । ಏಕೇನೈವೋಭಯಸಿದ್ಧೌ ಭಾಗವತಜನವಿನಿಂದಾಂ ಸಹಿತ್ವಾಪಿ ವಿಷಯ

ಕಾಮನಯಾ ಭಜನಸ್ಯ ಅನಾವಶ್ಯಕತ್ವಾತ್ । ತದಿದಮಾಭಾಣಕಮಪ್ಯನುಕೂಲಿತಂ **ಭವತಿ**—''ಏಕಾ ಕ್ರಿಯಾ ದ್ವ್ಯರ್ಥಕರೀ''ತಿ । **ಯಥಾಹುಃ**—

''ಧರ್ಮಾರ್ಥಕಾಮಮೋಕ್ಷಾಖ್ಯಂ ಯ ಇಚ್ಛೇಚ್ಛ್ರೇಯ ಆತ್ಮನಃ ।
ಏಕಮೇವ ಹರೇಸ್ತತ್ರ ಕಾರಣಂ ಪಾದಸೇವನಮಿ''ತಿ ॥

ನ ಚ ಮುಕ್ತಿಪ್ರತಿಬಂಧಕಂ ಬಹುದುಃಖದಂ ಭಗವಾನ್ ಕಥಂ ಸ್ವಭಕ್ತಾಯ ದದಾತೀತಿ ಶಂಕ್ಯಂ । ಭಕ್ತೇಷು ದಯಯಾ ತೇಷಾಂ ಮನಃಶುದ್ಧಿಮಾಲಕ್ಷ್ಯ ಯದಾ ವೈಷಯಿಕಭೋಗದಾನಂ ತನ್ಮುಕ್ತಿಪ್ರತಿಬಂಧಕಂ ಬಹುದುಃಖದಂ ಚ ನ ಭವೇತ್ ತದೈವ ದದಾತಿ। ಯದಾ ತು ನ ಮನಃಶುದ್ಧಿಸ್ತೇಷಾಂ ನೈವ ದದಾತಿ। ಮದ್ಭಕ್ತಾನಾಂ ಐಶ್ವರ್ಯಮದೇನ ಮದವಜ್ಞಾನೇ ಮದ್ಭಕ್ತಾನಾಂ ಅವಜ್ಞಾನೇ ಚ ಬಹುದುಃಖಂ ಮುಕ್ತಿಪ್ರತಿಬಂಧಶ್ಚ ಭವೇದಿತಿ ತೈರ್ವಿಷಯಕಾಮನಯೋ-ಪಾಸಿತಃ ಪ್ರಾರ್ಥಿತಶ್ಚ ಭೂತ್ವಾ ತದ್ದಾನೇ ತು ನೈವ ಘಟತೇ। ತೇ ತು ಕಾಲವಿಶೇಷಮಜಾನಂತಃ ಪ್ರಾರ್ಥಯಂತೇ । ತದಾ ತು ಅದಾನೇ ಮನಃಖೇದೋ ಭವತಿ। ದಾನೇ ತು ಮಹದ್‌ದುಃಖಂ। ತದ್ದೃಷ್ಟ್ವಾ ದತ್ತಮೈಶ್ವರ್ಯಂ ಪುನರಪಹಾರ್ಯಂ ಚ ಭವತಿ। ತತೋ ನಿಷ್ಕಾಮನಯೈವ ಮಾಂ ಭಜಂತಃ ಅಹಂ ತೈರಪ್ರಾರ್ಥಿತ ಏವ ತೇಷಾಂ ವೈಷಯಿಕಮನ್ಯಂಚ ಪುರುಷಾರ್ಥಂ ಸರ್ವಮಪಿ ಕಾಲೇ ದದಾಮೀತಿ ಸ್ವಸಂಕಲ್ಪಾನುಸಾರೇಣ ಸ್ವಯಮೇವ ದೀಯಮಾನೇಽರ್ಥೇ ಮಾತ್ರಾ ಬಾಲಕಶರೀರಗತಂ ರೋಗಾದಿನಾ ವಿಕಾರವಿಶೇಷಂ ಪರೀಕ್ಷ್ಯ ತದೌಚಿತ್ಯೇನ ಭೋಜ್ಯೇ ಪದಾರ್ಥೇ ದೀಯಮಾನೇ ಅಯಮೇವ ಪದಾರ್ಥೋ ಮಮಾಪೇಕ್ಷಿತಃ ಸ ಏವ ದೇಯ ಇತ್ಯಾದಿಬಾಲಕಚಾಪಲ್ಯಮಿವ ಭವತೀತ್ಯೇವ ಚಾಪಲ್ಯಮಾತ್ರಮಿತಿ। ತದೇವಂ ವಿಷಯಭೋಗಸ್ಯಾಲ್ಪತ್ವಾತ್ ಬಹುದುಃಖಪ್ರದತಯಾ ತತ್ರ ಕಾಮನಯಾ ಭಗವದ್ಭಜನಸ್ಯ ಭಾಗವತ ಜನನಿಂದಿತತಯಾ ತಾಂ ಪರಿತ್ಯಜ್ಯ ನಿಷ್ಕಾಮತ್ವಾಪರ ಪರ್ಯಾಯ ಶೌಚಾಖ್ಯಭಾಗವತಧರ್ಮಸ್ಯ ನಿತ್ಯಪುರುಷಾರ್ಥಸಾಧನತಯಾ ವಿನಿಶ್ಚಿತತ್ವೇನ ತದರ್ಥಂ ಮುಮುಕ್ಷುಭಿಃ ಅವಶ್ಯಂ ತತ್ಸಂಪಾದ್ಯಮಿತಿ ಸಿದ್ಧಂ ॥

❖❖❖

ಶುಕಮುನಿ ಹೇಳುತ್ತಾರೆ—'ಭಾರತವರ್ಷದಲ್ಲಿ ಸುಜನರು ವಿಷಯಾಸೆ ಮಾಡದೆ ಮೋಕ್ಷಸಾಧನೆಯನ್ನೆ ಮಾಡುತ್ತಾರೆ. ಯದ್ಯಪಿ ಕಾಮ್ಯಕರ್ಮಿಗಳು ಹರಿಯನ್ನು ಭಜಿಸುತ್ತಾರೆ. ಹರಿ ಅವರಿಗೆ ಬೇಡಿದ ವರವನ್ನು ನೀಡುತ್ತಾನೆ. ಆದರೆ

**ಬೇಡಿದ ವರ ಸಿಕ್ಕಾಗ ಅಹಂಕಾರ ಉಂಟಾಗುವುದಾದರೆ ಹರಿ ಅದನ್ನು ಕೊಡಲಾರ. ಬೇಡದೇ ಭಜಿಸುವವರಿಗೆ ಎಳೆಚಿಗುರಿನಂತೆ ಕೋಮಲವಾದ ತನ್ನ ಪಾದಗಳನ್ನೇ, ಅಂದರೆ ಮೋಕ್ಷವನ್ನೇ, ಅದರಲ್ಲಿ ಅವರಿಗೆ ಇಚ್ಛೆ ಇಲ್ಲದಿದ್ದರೂ ಹರಿ ತಾನೇ ಕೊಡುತ್ತಾನೆ. ಮೋಕ್ಷದಲ್ಲಿ ಅವರು ಬಯಸುವುದೆಲ್ಲವೂ ದೊರಕುತ್ತದೆ'**

ಭಗವಂತನನ್ನು ಭಜಿಸುವುದು ಬಿಟ್ಟು ಅನ್ಯದೇವತೆಗಳನ್ನು ವಿಷಯಗಳಿಗಾಗಿ ಭಜಿಸುವವರು ಪಶುಗಳು. ಮತ್ತು ಮುಕ್ತಿದಾಯಕನಾದ ಹರಿಯನ್ನು ಕೂಡ ವಿಷಯಾಸೆಯಿಂದ ಭಜಿಸುವವರು ಕಲ್ಪವೃಕ್ಷದ ಮುಂದೆ ಧಾನ್ಯದ ಕಾಳಿನ ನುಚ್ಚನ್ನೆ ಬೇಡುವವನಂತೆ ಭಾಗ್ಯಹೀನರು, ಬಂಧಕ ಮಾಯೆಯಿಂದ ಬುದ್ಧಿಗೆಟ್ಟು ಅವರು ವಿಷಯಸುಖವನ್ನು ಬೇಡುವರು' ಎನ್ನುವಿರಿ ತಾನೆ? ನಿಜ. ಆದರೆ,

ವಸ್ತುತಃ ಶ್ರೀಹರಿ ಭಜಕರಿಗೆ ವಿಷಯಸುಖವನ್ನು ನೀಡುವನೆ, ಇಲ್ಲವೇ?

ನೀಡುವನೆಂದರೆ ಮೊದಲಿಗೆ ವಿಷಯಾಸೆಯಿಂದ ಸೇವೆಮಾಡಿ ವಿಷಯಸುಖವನ್ನು ಬೇಡಿ ಪಡೆದು ಬಳಿಕ ನಿಷ್ಕಾಮನೆಯಿಂದ ಸೇವೆ ಮಾಡಿ ಮುಕ್ತಿ ಪಡೆಯುತ್ತಾರೆ. ಮೊದಲಿಗೆ ವಿಷಯಗಳನ್ನು ಬೇಡಿದ ಮಾತ್ರಕ್ಕೆ ಅವರನ್ನು ನಿರ್ಭಾಗ್ಯರೆಂದೇಕೆ ಹೇಳಬೇಕು? ಬಳಿಕ ಅವರೇ ಮುಕ್ತಿಯನ್ನು ಬೇಡಿ ಪಡೆಯುತ್ತಾರೆ.

ಹರಿ ವಿಷಯಸುಖವನ್ನು ನೀಡುವುದಿಲ್ಲ ಎನ್ನುವುದಾದರೆ ವಿಷಯಕ್ಕಾಗಿ ಅನ್ಯದೇವೋಪಾಸನೆ ಮಾಡಿದ ಮಾತ್ರಕ್ಕೇ ಅವರು ಪಶುಗಳೇ ಏಕಾಗುವರು? ಹರಿ ವಿಷಯಗಳನ್ನು ಕೊಡುವುದಿಲ್ಲ ಎಂದರಿತು ಅವನನ್ನು ಭಜಿಸುವುದು ಬಿಟ್ಟು ಅನ್ಯದೇವತೆಗಳನ್ನು ಆರಾಧಿಸುವವರು ಇವರು ಪಶುಗಳಾಗಲಾರರು. ಅವರೇ ಹರಿಯ ಉಪಾಸಕರಿಗಿಂತ ಹೆಚ್ಚು ಬುದ್ಧಿವಂತರು ಎನ್ನಬೇಕು.

ಮತ್ತು ನಿಷ್ಕಾಮರಾಗಿ ಹರಿಭಜನೆ ಮಾಡಿದವರೇ ಏನೂ ಬೇಡದಿರುವವ ರಾದ್ದರಿಂದ ಹರಿ ಅವರಿಗೆ ಏನೂ ಕೊಡುವುದಿಲ್ಲ. ಅವರು ಉಭಯಭ್ರಷ್ಟ ರಾಗುವರು. ಬೇಡುವವರಿಗೆ ಅಲ್ಪವಾದ ವಿಷಯಸುಖವನ್ನು ಕೊಡದವನು ಬೇಡದವರಿಗೆ ಮಹತ್ತಾದ ಮುಕ್ತಿಸುಖವನ್ನು ಹೇಗೆ ಕೊಡುತ್ತಾನೆ ಶ್ರೀಹರಿ?

ಮನೆಗೆ ಹೋಗಿ ಬೇಡಿದರೆ ಮಜ್ಜಿಗೆಯನ್ನೂ ಕೊಡದವನು, ಬೇಡದವನಿಗೆ ಹಾಲು ಕೊಟ್ಟು ಕಳಿಸುವನೆ?

ಈ ಪ್ರಶ್ನೆಗೆ ಈ ಶ್ಲೋಕವು ಸಮಾಧಾನ ನೀಡುತ್ತಿದೆ.

ಶ್ರೀಹರಿ ವಿಷಯಸುಖವನ್ನು ಬೇಡುವವರಿಗೆ ಅದನ್ನು ಕೊಡುವನೆ ಇಲ್ಲವೆ? ಎಂದರೆ ಕೊಟ್ಟೇ ಕೊಡುವನೆಂದು ಉತ್ತರ. ಆದರೆ ನಿಷ್ಕಾಮನೆಯಿಂದ, ಏನೂ ಬೇಡದೆ ಭಕ್ತಿ ಮಾಡುವವರಿಗೆ ಮೋಕ್ಷವನ್ನು ಕೊಡುತ್ತಾನೆ. ವಿಷಯಸುಖ ವನ್ನೂ ಕೊಡುತ್ತಾನೆ. ಒಂದೇ ಉಪಾಸನೆಯಿಂದ ಇಹಪರಗಳೆರಡೂ ಸಿಗುವಾಗ ಕೇವಲ ವಿಷಯಸುಖವನ್ನು ಬಯಸಿ ನಿರ್ಭಾಗ್ಯನೆಂದೇಕೆ ಭಕ್ತನು ನಿಂದೆಗೊಳ ಗಾಗಬೇಕು? ವಿಷಯಗಳಿಗಾಗಿ ಸಕಾಮ ಭಜನೆಯನ್ನೇಕೆ ಮಾಡಬೇಕು? 'ಏಕಾಕ್ರಿಯಾ ದ್ವ್ಯರ್ಥಕರೀ' 'ಸಾಧನೆ ಒಂದಾದರೂ ಸಿದ್ಧಿಗಳೆರಡು!' ಧರ್ಮ ಅರ್ಥ ಕಾಮ ಮೋಕ್ಷ ಈ ಎಲ್ಲ ಪುರುಷಾರ್ಥಸಿದ್ದಿಗಳಿಗೂ ಶ್ರೀಹರಿಯ ನಿಷ್ಕಾಮ ಭಜನೆಯೊಂದೇ ಸಾಧನ. ಇನ್ನೊಂದು ಸಾಧನವಿಲ್ಲ.

ಹಾಗಾದರೆ, ಮೋಕ್ಷಸಾಧನೆಯನ್ನು ಕೆಡಿಸಿ ಬಲು ದುಃಖವನ್ನು ನೀಡುವ ವಿಷಯಸುಖವನ್ನು ಹರಿ ಏಕೆ ಕೊಡುತ್ತಾನೆ? ಎಂದರೆ ದಯೆಯಿಂದ ಕೊಡುತ್ತಾನೆ. ಅದಕ್ಕೆ ಮೊದಲು ಪರೀಕ್ಷೆ ಮಾಡುತ್ತಾನೆ. ಐಹಿಕ ಸಂಪತ್ತಿನಿಂದ ಭಕ್ತನಿಗೆ ಅಹಂಕಾರ ಬರುವಂತಿದ್ದರೆ ಅದನ್ನು ಕೊಡಲಾರ. ಅಹಂಕಾರ ಮುಕ್ತಿಗೆ ಪ್ರತಿಬಂಧಕ. ಆದರಿಂದ ಮನಃಶುದ್ಧಿಯನ್ನು ತಿಳಿದು, ಶುದ್ಧಿ ಇದ್ದರೆ ಎಲ್ಲ ವಿಷಯಸುಖ ನೀಡುತ್ತಾನೆ. ಶುದ್ಧಿ ಇಲ್ಲದಿದ್ದರೆ ಏನೂ ಕೊಡಲಾರ. ಪರೀಕ್ಷೆಗಾಗಿ ಕೊಟ್ಟರೂ ಕೊಟ್ಟಿದ್ದನ್ನು ಕೂಡ ಅಪಹರಿಸುತ್ತಾನೆ. ಕೊಟ್ಟರೆ ಭಕ್ತನು ಮದದಿಂದ ನನ್ನನ್ನೂ ನನ್ನ ಭಕ್ತರನ್ನೂ ತಿರಸ್ಕರಿಸಿ ತಾನು ಕೆಡುವನೆಂದು ದಯೆಯಿಂದಲೆ, ಆಗ, ಅವನಿಗೆ ಏನೂ ಕೊಡದಿರುತ್ತಾನೆ.

ಮುಕ್ತಿಗೆ ಪ್ರತಿಬಂಧಕವಾಗುವ, ಬಲು ದುಃಖವನ್ನೇ ಕೊಡುವ ಅರ್ಥಕಾಮಗಳನ್ನು ಭಕ್ತನು ಬೇಡಿದರೂ ಭಗವಂತ ಕೊಡುವುದಿಲ್ಲ. ಭಕ್ತರು ತಮ್ಮ ಮನಃಶುದ್ಧಿಯನ್ನು ತಾವು ಅರಿಯದೇ ಬೇಡುತ್ತಾರೆ. ಹರಿ ಕೊಡದಿದ್ದರೆ, 'ಕೊಡಲಿಲ್ಲ'ವೆಂದು ಖೇದಪಡುತ್ತಾರೆ. ಕೊಟ್ಟರೆ, ಮದವೇರಿ ದುಃಖವನ್ನೇ ತಂದುಕೊಳ್ಳುತ್ತಾರೆ. ಇದನ್ನರಿತು ಶ್ರೀಹರಿ ತಾನೆ ಕೊಟ್ಟಿದ್ದೂ ಉಂಟು.

ಬಲಿಚಕ್ರವರ್ತಿ ಇದಕ್ಕೆ ಉದಾಹರಣೆ. ನಿಷ್ಕಾಮನೆಯಿಂದ ಉಪಾಸಿಸುವವರಿಗೆ ಶ್ರೀಹರಿ ಅವರು ಬೇಡದಿದ್ದರೂ ಇಹಪರಗಳೆರಡನ್ನೂ ಕೊಡುವನು, ಅಂಬರೀಷ ಚಕ್ರವರ್ತಿ ಇದಕ್ಕೆ ಉದಾಹರಣೆ. ತಾಯಿಯು ಮಗುವಿನ ಹೊಟ್ಟೆಬೇನೆಯನ್ನು ಅರಿತು ಅದು ಬೇಡಿದ್ದನ್ನೆಲ್ಲ ಕೊಡದೆ ಹಿತವಾದುದನ್ನು ಮಾತ್ರ ಕೊಡುವಂತೆ ಶ್ರೀಹರಿಯು ಭಕ್ತನಿಗೆ ಹಿತವಾದುದನ್ನೇ ಕೊಡುತ್ತಾನೆ.

ವಿಷಯ ಸುಖ ಅತಿ ಅಲ್ಪವಾದರೂ ವಿಷದಂತೆ ಬಲು ದುಃಖಕರ. ಅದನ್ನು ತ್ಯಜಿಸಿ ನಿಷ್ಕಾಮನರೂಪ 'ಶೌಚ'ವೆಂಬ ಭಾಗವತಧರ್ಮವನ್ನು ಮುಮುಕ್ಷು ಅವಶ್ಯ ಸಾಧಿಸಬೇಕು.

❖❖❖

## ೨೫. ಸಖ್ಯವೆಂಬ ಭಾಗವತಧರ್ಮ

## –೨೮೩–

**ಹರಿಯುಪಕಾರ ಸ್ಮರಣೆ ಹರಿಗೆ ಅತಿಪ್ರಿಯ**

**ವಿಶ್ವಸ್ಯ ಯಃ ಸ್ಥಿತಿಲಯೋದ್ಭವಹೇತುರಾದ್ಯೋ<br>ಯೋಗೇಶ್ವರೈರಪಿ ದುರತ್ಯಯಯೋಗಮಾರ್ಗಃ ।<br>ಕ್ಷೇಮಂ ವಿಧಾಸ್ಯತಿ ಸ ನೋ ಭಗವಾಂಸ್ತ್ರಧೀಶ<br>ಸ್ತತ್ರಾಽಸ್ಮದೀಯ ವಿಮೃಶೇನ ಕಿಯಾನಿಹಾರ್ಥಃ ॥**

(ಭಾ.೩.೧೭.೩೭)

**ಯಶ್ಚಾನ್ಯೇನ ಕೃತಮುಪಕಾರಂ ಸ್ಮರತಿ ಸ ಕೃತಜ್ಞ ಇತ್ಯುಚ್ಯತೇ ಲೋಕೇ । ಭವತಿ ಚೋಪಕರ್ತುರ್ವಿಶೇಷತಃ ಪ್ರೀತಿಪಾತ್ರಂ । ಯಶ್ಚ ನ, ಸ ಕೃತಘ್ನ ಇತಿ ಗೀಯತೇ । ನ ಭವತಿ ತಥಾ । ದೃಷ್ಟಮೇವಂ ಲೋಕೇ । ಏವಂ ಭಗವಾನಪಿ ನಿರ್ನಿಮಿತ್ತಂ ಸರ್ವೇಷಾಮಪಿ ಪರಮೋಪಕಾರಕಃ, ತತ್ಸ್ಮರಣಂ ಚ ಸದಾ ಅವಹಿತೈಃ ಕಾರ್ಯಂ ವಿಶೇಷಪ್ರೀತಿಹೇತುತ್ವಾದಿತ್ಯಾಶಯೇನ ಸಖ್ಯಾಪರ ಪರ್ಯಾಯ ಪರಮೋಪಕರ್ತೃತ್ವಾನುಸಂಧಾನರೂಪಂ ಭಾಗವತಂ ಧರ್ಮಂ ವದನ್ ಭಗವತಃ ಪರಮೋಪಕಾರಿತ್ವಮೇವ ಕಥಮಿತ್ಯತಸ್ತದ್ದರ್ಶಯತಿ । ವಿಶ್ವಸ್ಯೇತಿ ॥ ಆದ್ಯಃ ಆದೌ ಸೃಷ್ಟೇಃ ಸ್ಥಿತಃ । ಯೋಗಪ್ರಭಾವಲಬ್ಧ ಚಿರಾಯುಷ್ಟ್ವಾದಿಬಲವದ್ಭಿರಪಿ ದುರತ್ಯಯೋ ಯೋಗಮಾರ್ಗೋ ಯಸ್ಯ ಸ**

**ತಾದೃಶಃ। ಯಃ ವಿಶ್ವಸ್ಯಾಪಿ ಪ್ರಪಂಚಸ್ಯ ಸ್ಥಿತ್ಯಾದಿಕರ್ತಾ। ಯ ಏವೋದ್ಭವಂ ಲಯಂ ಚಾಸ್ಮಾಭಿರಪ್ರಾರ್ಥಿತ ಏವಾಸ್ಮತ್ ಪ್ರಯೋಜನಪ್ರಾಪ್ತಯೇ ಆದ್ಯೋಽಂತಶ್ಚ ಭೂತ್ವಾ ಕರೋತಿ ಯಥಾ। ಸ ಏವ ಭಗವಾನ್ ನಃ ಅಸ್ಮಾಕಂ। ಕ್ಷೇಮಂ ಸ್ಥಿತಿಮಪಿ। ವಿಧಾಸ್ಯತಿ। ಯೋಗೇಶ್ವರೈರಿತ್ಯನೇನೇದಂ ಸೂಚಯತಿ। ತೇ ಹಿ ಯೋಗಬಲೇನ ಚಿರಾಯುಷೋ ವಯಮಿತಿ ಮನ್ಯಮಾನಾ ಮೃತಿಂ ನೇಚ್ಛಂತಿ। ತಥಾಪಿ ತೇಷಾಂ ಲಯಂ ಕರೋತ್ಯೇವ। ಏವಮನಿಚ್ಛಯಾ ಲಭ್ಯೇ ಅರ್ಥೇ ಪ್ರಯತನಮನುಪಪನ್ನಮಿತಿ। ನನು ಸ ಏವ ಕ್ಷೇಮಂ ವಿಧಾಸ್ಯತೀತಿ ಕುತಃ ಅನ್ಯ ಏವ ಕಿಂ ನ ಕುರ್ಯಾದಿತ್ಯತ ಉಕ್ತಂ॥ ತ್ರ್ಯಧೀಶ ಇತಿ॥ ಯತಃ ಸ ಏವ ತ್ರಯಾಣಾಮುತ್ಪತ್ತ್ಯಾದೀನಾಂ ಅಧೀಶೋಽತಃ ಸ ಏವ ನಸ್ತ್ರಾತೇತಿ। ಏವಂ ನಿರ್ನಿಮಿತ್ತಂ ಸತಿ ರಕ್ಷಕೇಽಸ್ಮದೀಯೇನ ವಿಮರ್ಶೇನ ರಕ್ಷಣವಿಷಯೇ ಪ್ರಯತನೇನಾರ್ಥಃ ಕಿಯಾನ್ ವ್ಯರ್ಥಂ ಪ್ರಯತನಮಿತಿ॥**

❖❖❖

**ದೇವತೆಗಳಿಗೆ ಬ್ರಹ್ಮದೇವರು ಹೇಳಿದರು—**

**'ದಿತಿದೇವಿಯ ಗರ್ಭದಲ್ಲಿ ಹಿರಣ್ಯಾಕ್ಷ ಹಿರಣ್ಯಕಶಿಪು ಮಹಾದೈತ್ಯರು ಬೆಳೆಯುತ್ತಿದ್ದರೂ ನೀವು ಅದಕ್ಕೆ ಚಿಂತಿಸಬೇಡಿ. ಜಗತ್ತಿನ ಸ್ಥಿತಿ ಲಯ ಉತ್ಪತ್ತಿಗಳಿಗೆ ಮುಖ್ಯಕಾರಣನು ಭಗವಂತನೆ. ಯೋಗೇಶ್ವರರಾದ ನಮಗೂ ತಿಳಿಯಲಾಗದ ಉಪಾಯಮಾರ್ಗ ಅವನಿಗೆ ತಿಳಿದಿರುತ್ತದೆ. ಅವನೇ ನಿಮಗೆ ಕ್ಷೇಮ ಉಂಟು ಮಾಡುತ್ತಾನೆ. ಅವನು ತಾನೆ ನಮಗೆ ರಕ್ಷಕ? ಉತ್ಪತ್ತಿ ಸ್ಥಿತಿ ಲಯ ಮೂರಕ್ಕೂ ಅವನೆ ತಾನೆ ಪ್ರಭು? ಅದರಿಂದ ಎಲ್ಲರ ರಕ್ಷಣೆಯನ್ನೂ ಅವನೇ ಮಾಡುತ್ತಾನೆ. ಅದರ ಬಗ್ಗೆ ನಾವು ಚಿಂತಿಸಿ, ಏನು ಪ್ರಯೋಜನ? ಅದು ಹರೀಚ್ಛೆಗೆ ಬಾರದಿದ್ದಲ್ಲಿ ವ್ಯರ್ಥವೆ ಸರಿ.**

ಅನ್ಯರು ಮಾಡಿದ ಉಪಕಾರಸ್ಮರಣೆ ಮಾಡುವವನು ಕೃತಜ್ಞ'ನೆನಿಸುವನು. ಅಂಥ ಕೃತಜ್ಞನು ಉಪಕಾರ ಮಾಡಿದವನಿಗೆ ಪ್ರೀತಿಪಾತ್ರನೆನಿಸುವನು. ಉಪಕಾರಸ್ಮರಣೆ ಮಾಡದವನು 'ಕೃತಘ್ನ'.

ಭಗವಂತನು ನಿರ್ನಿಮಿತ್ತವಾಗಿ ಜಗತ್ತಿಗೆ ಪರಮೋಪಕಾರಕನಾಗಿರುವುದ ರಿಂದ ಆತನ ಸ್ಮರಣೆ ಅವಶ್ಯಕರ್ತವ್ಯ. ಅವನ ವಿಶೇಷಪ್ರೀತಿಗೆ ಕಾರಣ. ಇದು ಸಖ್ಯವೆಂಬ ಭಾಗವತಧರ್ಮ ಮೇಲಿನ ಶ್ಲೋಕದಲ್ಲಿ ಸೂಚಿತವಾಗಿದೆ.

ಹೀಗೆ ಜೀವನಿಗೆ ಜ್ಞಾನಭಕ್ತ್ಯಾದಿ ಸಾಧನೆಯ ಉದ್ದೇಶದಿಂದ ದೇಹೇಂದ್ರಿಯಾದಿಗಳನ್ನಿತ್ತು ಆಯಾಕಾಲದಲ್ಲಿ ಅವನಿಗೆ ಬರುವ ವಿಘ್ನಗಳನ್ನು ನಿವಾರಿಸುತ್ತ ತನ್ನ ಸತ್ಯಸಂಕಲ್ಪದಂತೆ ಅವನಿಗೆ ಅಭೀಷ್ಟಗಳನ್ನು ಅನುಗ್ರಹಿಸುತ್ತ ರಕ್ಷಿಸುವ ಶ್ರೀಹರಿಯ ಪರಮೋಪಕಾರಿತ್ವವನ್ನು ಸದಾ ಭಕ್ತನು ಸ್ಮರಿಸುತ್ತಿರಬೇಕು. ಇಲ್ಲದಿದ್ದರೆ ಅವನು ಕೃತಘ್ನನೇ ಸರಿ. ಅಂಥ ನಿರ್ಭಾಗ್ಯನಿನ್ನಿಲ್ಲ. ಭಗವಂತನ ಮಾಯೆ ಬಂಧಕಶಕ್ತಿಯೆ ಅವನ ಮೋಹಕ್ಕೆ ಕಾರಣ.

'ಸೇವೇಜ್ಯಾವನತಿಃ ಸಖ್ಯಂ ದಾಸ್ಯಮಾತ್ಮಸಮರ್ಪಣಂ ॥ (ಭಾ.೭.೧೨.೧೧) ಎಂದು ನಾರದರು ಯುಧಿಷ್ಠಿರ ನಿಗೆ ಹೇಳುವಲ್ಲಿ 'ಸಖ್ಯ' ವೆಂಬ ಈ ಭಾಗವತಧರ್ಮ ಉಕ್ತವಾಗಿದೆ.

❖❖❖

—೨೮೪—

## ಹರಿಯುಪಕಾರ ಸ್ಮರಣೆ ಇಲ್ಲವಾಗುವುದು ಹರಿಮಾಯೆಯ ಪ್ರಭಾವ

**ನ ಯಸ್ಯ ಸಖ್ಯಂ ಪುರುಷೋ ವೇತ್ತಿ ಸಖ್ಯುಃ**
**ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।**
**ಗುಣೋ ಯಥಾ ಗುಣಿನೋಽವ್ಯಕ್ತದೃಷ್ಟಿ**
**ಸ್ತಸ್ಮೈ ಮಹೇಶಾಯ ನಮಸ್ಕರೋಮಿ ॥**

(ಭಾ.೬.೪.೨೪)

ಏವಂ ಜೀವಸ್ಯ ಜ್ಞಾನಾದಿಸಾಧನಂ ದೇಹೇಂದ್ರಿಯಾದಿ ದತ್ವಾ, ತತ್ತತ್ಕಾಲಪ್ರಾಪ್ತವಿಘ್ನ ವಿಶೇಷಾನ್ ಪರಿಹೃತ್ಯ, ತದಾ ತದಾಪೇಕ್ಷಿತಂ ಸ್ವಸಂಕಲ್ಪಿತಂ ದತ್ವಾ, ರಕ್ಷಣಂ ಕುರ್ವತೋ ಹರೇಃ ಪರಮೋಪಕಾರಿತ್ವಂ ಪ್ರತಿಪಾದ್ಯ, ಇದಾನೀಂ ತತ್ಸಂತತಮನುಸಂಧೇಯಮಿತಿ ಭಾವೇನ ತದನುಸಂಧಾನೇ ಆದರಜನನಾಯ ಏವಂ ಸತ್ಯಪಿ ಯೋ ನ ಸ್ಮರತಿ, ಸ ದೈವಹೀನಃ ಅಕೃತಜ್ಞಃ ಭಗವನ್ಮಾಯಯಾ ವಿಮೋಹಿತ ಇತಿ ವಕ್ತಿ ॥ **ನ ಯಸ್ಯೇತಿ** ॥ ಅಯಂ ಪುರುಷಃ । ಸಖ್ಯುಃ ಸ್ವಸಖಿಭೂತಸ್ಯ । ಅಸ್ಮಿನ್ನೇವ ಪುರೇ ದೇಹೇ । ಸಂವಸತಃ ಅತಿಪ್ರಸಿದ್ಧತಯಾ ವಸತಃ ।ಯಸ್ಯ ಹರೇಃ । ಸಖ್ಯಂ ನ ವೇತ್ತಿ । ಸ್ವಯಮಪಿ ಸಖಾಽಸ್ಮಿನ್ನೇವ ಪುರೇ ವಸಂಶ್ಚ ಭೂತ್ವೇತಿ ಪುನರ್ವಚನೇನ ಸಖಿತ್ವಂ ದ್ರಢಯತಿ । ಏವಮಪ್ಯವೇದನೇ ಕಿಂ ನಿಮಿತ್ತಮತ್ರಾಹ ॥ **ಅವ್ಯಕ್ತದೃಷ್ಟಿರಿತಿ** । ಅವಿಶುದ್ಧ ಬುದ್ಧಿರಿತಿ । ಅತ್ರ

**ದೃಷ್ಟಾಂತಮಾಹ ॥ ಗುಣ ಇತಿ । ಗುಣಃ ಅಪ್ರಧಾನೋ ಭೃತ್ಯೋ ಮಂದಮತಿಃ । ಗುಣಿನಃ ಸ್ವಾಮಿನಃ । ಸಖ್ಯಂ ನ ವೇತ್ತಿ ತತ್ಕೃತಮುಪಕಾರಂ ನ ಜಾನಾತಿ ನ ಸ್ಮರತಿ, ತಥೇತಿ । ಏವಂಭವನಂ ಚ ತನ್ಮಾಯಯೈವೇತಿ ಭಾವೇನ ತಸ್ಮೈ ಮಹೇಶಾಯ ನಮಸ್ಕರೋಮಿ ಇತ್ಯುಕ್ತಂ ॥**

❖❖❖

**ದಕ್ಷ ಪ್ರಜಾಪತಿಯು ಗೈದ ಹಂಸಗುಹ್ಯಸ್ತೋತ್ರ—**

**'ಜೀವಪರಮಾತ್ಮರು ಜೊತೆಯಾಗಿ ಶರೀರದಲ್ಲಿ ನೆಲೆಸಿರುವುದರಿಂದ ಅವರಿಬ್ಬರೂ ಗೆಳೆಯರು. ಆದರೂ ಜೀವನು ತನಗೆ ಶರೀರ ಇಂದ್ರಿಯಾದಿ ಪ್ರೇರಕನಾಗಿ ತನ್ನಲ್ಲಿ ಪ್ರೀತಿ ಮಾಡುವ ಗೆಳೆಯನೆಂಬುದನ್ನು ತಿಳಿದುಕೊಳ್ಳುವುದಿಲ್ಲ. ಸ್ಥೂಲದೃಷ್ಟಿಯವನು ಈ ಸೂಕ್ಷ್ಮಸಂಗತಿಯನ್ನರಿಯಲಾರ. ಇಂಗಿತಜ್ಞನಲ್ಲದ ಸೇವಕನು ಪ್ರೀತಿ ಮಾಡುವ ಪ್ರಭುವಿನ ಮುಂದೆ ನಿಂತಿದ್ದರೂ ಅವನ ಪ್ರೀತಿಯನ್ನು ತಿಳಿಯುವಷ್ಟು ಸೂಕ್ಷ್ಮ ದೃಷ್ಟಿಯು ಅವನಲ್ಲಿರುವುದಿಲ್ಲ. ಇಂಥ ಪ್ರಭುವೂ ಪ್ರೀತಿಯ ಗೆಳೆಯನೂ ಆದ ಸರ್ವಶಕ್ತನಾದ ಪರಮಾತ್ಮನನ್ನು ನಮಿಸುವೆನು.**

ದಕ್ಷ ಪ್ರಜಾಪತಿ ಹೇಳುವಂತೆಯೆ ಜೀವನು ಪರಮಾತ್ಮನ ಬಳಿಯೇ ಇದ್ದರೂ ಪರಮಾತ್ಮನನ್ನು ತಿಳಿಯುವುದಿಲ್ಲ. ಏನು ಕಾರಣ? ಇದು ಪರಮಾತ್ಮನ ಬಂಧಕಶಕ್ತಿಯ ಮಾಯೆಯ ಪ್ರಭಾವ!

❖❖❖

**—೨೮೫—**

**ಶ್ರೀಕೃಷ್ಣ ದೇವಕಿಗೆ ಮಾಡಿದುಪಕಾರ ಮಹತ್ತರ**

**ಯಥಾ ಹೃಷೀಕೇಶ ಖಲೇನ ದೇವಕೀ**
**ಕಂಸೇನ ರುದ್ಧಾऽತಿಚಿರಂ ಶುಚಾರ್ಪಿತಾ ।**
**ವಿಮೋಚಿತಾಹಂ ಚ ಸಹಾತ್ಮಜಾ ವಿಭೋ**
**ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ॥**

(ಭಾ.೧.೮.೨೬)

–೨೮೬–

## ಶ್ರೀಕೃಷ್ಣ ಕುಂತಿಗೆ ಮಾಡಿದುಪಕಾರ ಅಪಾರ

ವಿಷಾನ್ಮಹಾಗ್ನೇಃ ಪುರುಷಾದದಂಶನಾತ್
ಅಸತ್ಸಭಾಯಾ ವನವಾಸಕೃಚ್ಛ್ರತಃ ।
ಮೃಧೇಮೃಧೇಽನೇಕ ಮಹಾರಥಾಸ್ತ್ರತೋ
ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾಃ ॥

(ಭಾ.೧.೮.೨೭)

ಏವಂ ಭಗವತೋ ಮಹೋಪಕಾರಿತ್ವರೂಪಸಖ್ಯಸ್ಮರಣಂ ಕರ್ತವ್ಯಮಿತ್ಯಭಿಹಿತಂ । ತತ್ರ ಆದರಜನನಾಯ ಏವಮಾಚಾರೋಽಪ್ಯಸ್ತೀತ್ಯಾಹ ॥ **ಯಥೇತಿ** ॥ ಹೇ ಹೃಷೀಕೇಶ ಇಂದ್ರಿಯಗಣಪತೇ। ದೇವಕೀ ತೇ ಮಾತಾ।ಖಲೇನ ಇಂದ್ರಿಯಾರಾಮೇಣ ಕಂಸೇನ। ಕಾರಾಗೃಹೇ ಅತಿಚಿರಂ ರುದ್ಧಾ। ತತ ಏವ ಶುಚಾರ್ಪಿತಾ ಯಥಾ ತ್ವಯಾ ಮೋಚಿತಾ। ತಥೈವ ಹೇ ವಿಭೋ। ಸಪುತ್ರಾ ಅಹಮಪಿ। ನಾಥೇನ ತ್ವಯೈವ। ವಿಪದ್ಗಣಾತ್ ಮುಹುಃ ವಿಮೋಚಿತಾ। ಇಯಾಂಸ್ತತೋ ವಿಶೇಷಃ, ಯತ್ ಸಾ ಏಕೈವ, ವಿಪದಪ್ಯೇಕದೈವ, ವಿಮೋಚನಮಪಿ ಏಕದೈವ। ಅಹಂ ತು ಸಾತ್ಮಜಾ, ವಿಪದೋಽಪಿ ಬಹ್ವ್ಯಃ, ತತೋ ಮೋಚನಮಪಿ ಬಹುವಾರಮಿತಿ ॥

ಏತಚ್ಚ ಪರಮೋಪಕಾರಿತ್ವಂ ಪುನಃಪುನಃ ಅನುಸಂಧೇಯಮಿತಿ ಭಾವೇನ ಪೂರ್ವೋಕ್ತಂ ಅಹಂ, ಮಮ ಪುತ್ರಾಃ, ತತ್ಪತ್ನೀ ಮಮ ಸ್ನುಷಾ, ತಸ್ಯಾಃ ಸ್ನುಷಾ, ತಸ್ಯಾಃ ಪುತ್ರಶ್ಚ, ಇತ್ಯೇವಂ ಸರ್ವೇ ವಯಂ ಮುಹಃ ವಿಪದ್ಗಣಾತ್ ಮೋಚಿತಾ ಇತಿ ದೇವಕೀತೋ ವಿಶೇಷಂ ವಿಶದೀಕುರ್ವಂತೀ ಏವ ತತ್ಸ್ಮರತಿ ॥ **ವಿಷಾದಿತಿ** ॥ ಭೀಮಾಯ ದತ್ತಾತ್ ಕಾಲಕೂಟಾತ್। ಮಹಾಗ್ನೇಃ ಜತುಗೃಹದಾಹ ನಿಮಿತ್ತಾತ್ । ಪುರುಷಾದಾನಾಂ ಹಿಡಿಂಬಬಕಾದೀನಾಂ ದಂಶನಾತ್ ಭಕ್ಷಣಾತ್ । ಅಸತ್ಯಾಃ ದ್ರೌಪದೀಕೇಶ ಗ್ರಹಣಾದಿನಿಂದಿತಕರ್ಮಯುಕ್ತಾಯಾಃ ಸಭಾಯಾಃ ಸಕಾಶಾತ್ ವನವಾಸಕ್ಲೇಶಾತ್ ಪ್ರತಿಯುದ್ಧಂ ಅನೇಕೇಷಾಂ ಮಹಾರಥಾನಾಂ ನಾಗಾದ್ಯಸ್ತ್ರತಃ । ದ್ರೌಣೇಃ ವಂಶಕ್ಷಯಂ ಕರ್ತುಂ ಉದ್ಯತಸ್ಯ ಅಸ್ತ್ರತಶ್ಚ। ಹೇ ಹರೇ, ತ್ವಯೈವ ಅಭಿರಕ್ಷಿತಾಃ ಆಸ್ಮೇತಿ ॥

❖❖❖

**ಕುಂತೀದೇವಿ ಮಾಡಿದ ಶ್ರೀಕೃಷ್ಣಸ್ತುತಿ—**

**'ಹೇ 'ಹೃಷಿಕೇಶ' ಇಂದ್ರಿಯನಿಯಾಮಕನೆ, ಶ್ರೀಕೃಷ್ಣ, ನಿನ್ನ ತಾಯಿ ದೇವಕಿ ಇಂದ್ರಿಯಸುಖಾಸಕ್ತನಾದ ಕಂಸನಿಂದ ಬಹುವರ್ಷಕಾಲ ಬಂಧಿತ ಳಾಗಿದ್ದು ಮಗನಾದ ನಿನ್ನಿಂದ ಬಂಧಮುಕ್ತಳಾದಳು. ಹಾಗೇ ಪುನಃಪುನಃ ಆಪತ್ತುಗಳು ಬಂದೊದಗಿದಾಗಲೆಲ್ಲ ನನ್ನನ್ನೂ ನನ್ನ ಮಕ್ಕಳನ್ನೂ ನೀನೇ ರಕ್ಷಿಸಿದೆ'.**

ಇಲ್ಲಿ ವಿಶೇಷವಿದೆ. ದೇವಕಿಯು ಒಬ್ಬಳೆ, ಅವಳಿಗೆ ಬಂದ ಆಪತ್ತು ಒಂದೇ, ಒಂದೇ ಬಾರಿ ಬಿಡಿಸಿದ್ದಾನೆ ಶ್ರೀಕೃಷ್ಣ. ಕುಂತಿ ಹಾಗಲ್ಲ. ಅವಳ ಮಕ್ಕಳೈವರು. ವಿಪತ್ತುಗಳೂ ಬಹಳ. ಬಿಡಿಸಿದ್ದೂ ಅನೇಕಬಾರಿ. ಇದನ್ನು ಕುಂತಿ ಹೇಳಿಕೊಳ್ಳುತ್ತಾಳೆ.

**'ನಾನು, ನನ್ನ ಮಕ್ಕಳು. ನನ್ನ ಸೊಸೆ ದ್ರೌಪದಿ, ಸೊಸೆಯ ಸೊಸೆ ಉತ್ತರೆ, ಅವಳ ಮಗ ಪರೀಕ್ಷಿತ ಹೀಗೆ ಅನೇಕರು ಅನೇಕ ವಿಪತ್ತುಗಳಿಂದ ನಿನ್ನಿಂದಲೆ ರಕ್ಷಿತರಾದರು. ವಿಷದ ಲಡ್ಡುಗೆ, ಅರಗಿನಮನೆ ಬೆಂಕಿ, ಹಿಡಿಂಬಾಸುರನೆಂಬ ನರಭಕ್ಷಕನ ಬಾಯಿ, ದ್ರೌಪದಿಯ ಕೇಶಗ್ರಹಣ ನಡೆದ ಕೆಟ್ಟ ಸಭೆ, ವನವಾಸಕ್ಲೇಶ, ಯುದ್ಧಗಳಲ್ಲಿ ಭೀಷ್ಮ ಕರ್ಣಾದಿಗಳೆಸೆದ ಮಹಾಶಸ್ತ್ರಾಸ್ತ್ರಗಳು, ಅಶ್ವತ್ಥಾಮರ ಬ್ರಹ್ಮಾಸ್ತ್ರ... ಎಂದು ಲೆಕ್ಕವಿಲ್ಲದಷ್ಟು ಆಪತ್ತುಗಳು ಒದಗಿ ಬಂದರೂ ಅವೆಲ್ಲವುಗಳಿಂದ ನೀನೇ ರಕ್ಷಣೆ ಮಾಡಿದೆ' ಎಂದು.**

ಕುಂತೀದೇವಿ ಹೀಗೆ ಕೃಷ್ಣನ ಪರಮೋಪಕಾರಗಳನ್ನು ಸದಾ ನೆನೆಯು ತ್ತಿದ್ದಳು.

ಸಖ್ಯವೆಂಬ ಭಾಗವತಧರ್ಮಾಚರಣೆ ಹೀಗೆ ಪ್ರಾಚೀನ ಪರಂಪರೆಯಿಂದ ಬಂದಿರುವುದರಿಂದಲೂ ಮುಮುಕ್ಷು ಅದನ್ನು ಅವಶ್ಯ ಅನುಷ್ಠಾನ ಮಾಡಬೇಕು.

❖❖❖

**—೨೮೭—**

**ಶ್ರೀಕೃಷ್ಣನ ಸಖ್ಯ ಕುಚೇಲನಿಗೆ ಮರೆಯಲಾಗದುದು**

**ತಸ್ಯೈವ ಮೇ ಸೌಹೃದಸಖ್ಯಮೈತ್ರೀ**
**ದಾಸ್ಯಂ ಪುನರ್ಜನ್ಮನಿ ಜನ್ಮನಿ ಸ್ಯಾತ್ ।**

**ಮಹಾನುಭಾವೇನ ಗುಣಾಲಯೇನ**
**ವಿಷಜ್ಜತಸ್ತತ್ಪುರುಷಪ್ರಸಂಗಃ ॥**

(ಭಾ.೧೦.೧೦೧.೩೫)

**ಭಾಗವತಪ್ರವರ್ಯೈರಸ್ಯ ಪ್ರಾರ್ಥಿತತ್ವಾದಪೀದಂ ಅವಶ್ಯಂ ಸಂಪಾದ್ಯಮಿತಿ ಭಾವೇನಾಹ ॥ ತಸ್ಯೈವೇತಿ । ಯೋ ಮಯೋಪನೀತಂ ಪೃಥುಕಂ ಏಕಮುಷ್ಟಿಪರಿಮಿತಂ ಪ್ರೀತ್ಯಾಽಗೃಹ್ಣಾತ್, ತಸ್ಯೈವ ಕೃಷ್ಣಸ್ಯ । ಸೌಹೃದಂ ಬಂಧುತ್ವಂ, ಸಖ್ಯಂ ಪರಮೋಪಕಾರಿತ್ವಂ ಮೈತ್ರೀ ಸಹಾಧ್ಯಯನಾದ್ಯಾಗಂತುಕಃ ಸ್ನೇಹಃ, ದಾಸ್ಯಂ ಪುಂಡ್ರಧಾರಣಾದಿಕಂ, ತತ್ಸರ್ವಮಪಿ । ಪ್ರತಿಜನ್ಮನಿ । ತತ್ರಾಪಿ ಪುನಃಪುನಃ ಸ್ಯಾದಿತಿ । ಮಹಾಮಹಿಮ್ನಾ ಅನಂತಗುಣೇನ ಶ್ರೀಹರಿಣಾ ವಿಶೇಷೇಣ ಸ್ನೇಹಲಕ್ಷಣಭಕ್ತಿಸಂಪಾದನೇಚ್ಛೋಃ ಮಮ ಸಹಾಯಭೂತಃ ತತ್ಪುರುಷಾಣಾಂ ಬಹುಕಾಲಿಕಃ ಸೇವಾಲಕ್ಷಣಸಂಗಶ್ಚ ಸ್ಯಾದಿತಿ ॥**

❖❖❖

**ಸುದಾಮನು ಶ್ರೀಕೃಷ್ಣ ಗೈದ ಪರಮಾನುಗ್ರಹವನ್ನು ಕೊಂಡಾಡುತ್ತಾನೆ—**

**'ಶ್ರೀಕೃಷ್ಣನ ಸೌಹಾರ್ದ ಸಖ್ಯ ಮೈತ್ರಿ ದಾಸ್ಯಗಳೇ ನನಗೆ ಜನ್ಮಜನ್ಮಗಳಲ್ಲಿ ದೊರಕಲಿ. ಮಹಾನುಭಾವ ಗುಣಪೂರ್ಣನಾದ ಅವನೊಂದಿಗೇ ನಾನಿರಬೇಕು, ಅವನ ಭಕ್ತರ ಸಂಗವೇ ನನಗೆ ಆಗುತ್ತಿರಬೇಕು'.**

ಮುಷ್ಟಿ ಅವಲಕ್ಕಿಯನ್ನು ಮಾತ್ರ ಕೊಟ್ಟರೂ ಅದನ್ನು ಪ್ರೀತಿಯಿಂದ ಸ್ವೀಕರಿಸಿ ಅನುಗ್ರಹಿಸಿದ ಶ್ರೀಕೃಷ್ಣನ 'ಸೌಹಾರ್ದ' ಅಂದರೆ ಬಂಧುತ್ವವನ್ನು ಸ್ವಾಮಿ–ಭಕ್ತ ಭಾವವನ್ನು, ಪರಮೋಪಕಾರಿತ್ವರೂಪ ಸಖ್ಯವನ್ನೂ, ಜೊತೆಗೆ ಸೇರಿ ಅಧ್ಯಯನ ಗೈದ ಸ್ನೇಹರೂಪ ಮೈತ್ರಿಯನ್ನೂ, ವಿಷ್ಣುಪ್ರೀತಿಕರವಾದ ದ್ವಾದಶ ಪುಂಡ್ರಧಾರಣಾದಿ ಸೇವಾರೂಪವಾದ ದಾಸ್ಯವನ್ನೂ ಜನ್ಮಜನ್ಮದಲ್ಲಿ ನನಗೆ ಶ್ರೀಕೃಷ್ಣ ಕೊಡಲಿ ಎನ್ನುತ್ತಾನೆ. ನನಗೆ ಭಕ್ತಿ ಹುಟ್ಟಲು ಸಹಾಯಕವಾದ ಹರಿಭಕ್ತರ ಸೇವಾರೂಪವಾದ ಸಂಗವನ್ನೂ ಬಯಸುತ್ತಾನೆ. ಭಾಗವತಶ್ರೇಷ್ಠರು ಬೇಡಿ ಪಡೆಯುವ ಈ ಸಖ್ಯವನ್ನು ಅವಶ್ಯ ಮುಮುಕ್ಷುಗಳು ಸಂಪಾದಿಸಬೇಕು.

❖❖❖

## –೨೮೮–

## ಮದ ಬಾರದಿರಲೆಂದೇ ಧನ ನೀಡದಿರುತ್ತಾನೆ ಹರಿ

**ಭಕ್ತಾಯ ಚಿತ್ರಾ ಭಗವಾನ್ ಹಿ ಸಂಪದೋ**
**ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।**
**ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ**
**ಪಶ್ಯನ್ನಿಪಾತಂ ಧನಿನಾಂ ಮದೋದ್ಭವಂ ॥**

(ಭಾ.೧೦.೧೦೧.೩೬)

**ನನು ಹರಿಸ್ತಾವತ್ಪರಮೈಶ್ವರ್ಯಾದಿಮಾನ್ ತದ್ಭಕ್ತಶ್ಚ ತ್ವಂ ತತ ಏವ ತತ್ಪ್ರೀತಿ ವಿಷಯಶ್ಚ । ಸತ್ಯಪ್ಯೇವಂ ಸಂಪದಾದಿಕಂ ತುಭ್ಯಮದದಾನಸ್ಯ ಸಖ್ಯಾದಿಕಂ ಕಿಮಿತಿ ಪ್ರಾರ್ಥ್ಯತ ಇತ್ಯತ ಆಹ ॥ ಭಕ್ತಾಯೇತಿ । ಇದಮುದಿತಂ ಭವತಿ— ಯದ್ಯಪಿ ಹರಿಃ ಸಮಗ್ರೈಶ್ವರ್ಯವಾನ್ ಭಗವತ್ತ್ವಾದೇವ, ದಾತಾ ಚ ಭಜತಾಂ ಆತ್ಮನ ಏವ ದಾನಾತ್ । ಅಹಂ ಚ ಭಕ್ತಃ, ಏವಮಪ್ಯದಾನೇ ನಿಮಿತ್ತಂ ಮಯಿ ಕೇವಲಂ ದಯೈವ । ಸ್ವದತ್ತಧನಾನಾಂ ಧನಮದೇನ ತುಚ್ಛೀಕೃತಸ್ವಭಕ್ತಾನಾಂ ಅನರ್ಥಂ ದೃಷ್ಟ್ವಾ ಮಮ ಸೋಽನರ್ಥಃ ಬಹುದಿನಂ ಸಂಸಾರಾನುಭವಲಕ್ಷಣಃ ಮಾಭೂದಿತಿ ॥**

❖❖❖

ಸುಧಾಮನು ಶ್ರೀಕೃಷ್ಣನ ಪರಮೋಪಕಾರಿತ್ವವನ್ನು ಹೊಗಳುತ್ತಾನೆ—

'ಧನಿಕರಿಗೆ ಧನಮದದಿಂದಾಗುವ ಅಧಃಪತನವನ್ನು ದೀರ್ಘಾಲೋಚನೆ ಇಲ್ಲದ ಭಕ್ತನು ತಾನು ಕಾಣದಿದ್ದರೂ ಸರ್ವಜ್ಞನಾದ ಶ್ರೀಕೃಷ್ಣ ಮೊದಲೇ ಕಂಡು, ಭಕ್ತನು ಬಯಸಿದ ಮಾತ್ರಕ್ಕೇ ನಾನಾವಿಧ ಸಂಪತ್ತುಗಳನ್ನು ರಾಜ್ಯೈಶ್ವರ್ಯಗಳನ್ನೂ ನೀಡದಿರುವುದುಂಟು.

'ಶ್ರೀಹರಿಯು ಪರಮೈಶ್ವರ್ಯಾದಿ ಗುಣಪೂರ್ಣ. ಭಜಿಸುವವರಿಗೆ ತನ್ನನ್ನೇ ಕೊಡುವವನು ಅವನ ಭಕ್ತನು ನೀನು ಅವನ ಪ್ರೀತಿಪಾತ್ರನಾಗಿರುವೆ. ಹೀಗಿದ್ದರೂ ಅವನು ಅನ್ಯದೇವತೆಗಳಂತೆ ರಾಜ್ಯೈಶ್ವರ್ಯಾದಿಸಂಪತ್ತನ್ನು ನಿನಗೆ ಕೊಡಲಿಲ್ಲ ತಾನೆ? ಎಂದಮೇಲೆ ಅವನ ಸಖ್ಯ ದಾಸ್ಯಾದಿಗಳನ್ನೇಕೆ ನೀನು ಮಾಡುವೆ?' ಎಂದು ಕೇಳುವವರಿಗೆ ಸುಧಾಮ ಉತ್ತರ ಕೊಡುತ್ತಾನೆ—

**'ಭಕ್ತನಿಗೆ ಶ್ರೀಹರಿ ರಾಜ್ಯೈಶ್ವರ್ಯಾದಿ ನಾನಾ ಬಗೆಯ ಸಂಪತ್ತನ್ನು ಕೊಡುವುದಿಲ್ಲ ನಿಜ. ಆದರೆ ಅದು ಭಕ್ತನ ಮೇಲಿನ ದಯದಿಂದ. ತಾನು ಭಗವಾನ್ 'ಭಗ' ಎಂದರೆ ಸಮಗ್ರ ಐಶ್ವರ್ಯಾದಿ ಗುಣಉಳ್ಳವನೆ. ಭಕ್ತರಿಗೆ ತನ್ನನ್ನೇ ತಾನು ಕೊಡಬಲ್ಲವನೆ. ತನ್ನನ್ನೇ ಕೊಡುವೆನೆಂದಮೇಲೆ ಬೇರೆ ಅಭೀಷ್ಟವೆಲ್ಲವನ್ನೂ ಕೊಡಬಲ್ಲವನೆ. ಆದರೂ ಧನಿಕರು ದುರ್ಯೋಧನನಂತೆ ಧನ ಮದದಿಂದ ಕೊಬ್ಬಿ ಭಕ್ತರನ್ನು ಅವಮಾನಿಸಿ ತಾವು ಸರ್ವನಾಶಪಡುವುದು ಸರ್ವಜ್ಞನಾದ ಅವನಿಗೆ ಮೊದಲೇ ಗೊತ್ತು. ಭಕ್ತರು ಹೀಗೆ ಧನಮದದಿಂದ ಕೊಬ್ಬದಂತೆ ದಯೆಯಿಂದಲೇ ಅವರಿಗೆ ಐಶ್ವರ್ಯವನ್ನು ಕೊಡದಿರುತ್ತಾನೆ ಹೊರತು ಕೊಡಲು ಶಕ್ತಿ ಇಲ್ಲವೆಂದಲ್ಲ'**

**ಕುಚೇಲ ಪೂರ್ವಜನ್ಮದಲ್ಲಿ ತಾರಣನೆಂಬ ಬಡಬ್ರಾಹ್ಮಣ ಪಿತೃಗಳ ಅನುಗ್ರಹದಿಂದ ಐಶ್ವರ್ಯ ಬಂದ ಬಳಿಕವೂ ಶ್ರಾದ್ಧಬ್ರಾಹ್ಮಣರಿಗೆ ಸಾಸಿವೆ ಪಿಂಡ ಉಣಿಸಿ ಅವಮಾನಿಸಿದ. ಅದಕ್ಕೇ ಈ ಜನ್ಮದಲ್ಲಿ ಆತನೆ ಬಡಕುಚೇಲ!**

❖❖❖

## ೨೬. 'ಇಜ್ಯಾ' ಎಂಬ ಧರ್ಮ, ಸ್ಥೂಲಪೂಜೆ–ಸೂಕ್ಷ್ಮಪೂಜೆ

'ಇಜ್ಯಾ' ಎಂದರೆ ಭಗವಂತನ ಭಗವದ್‌ಭಕ್ತರ ಪೂಜೆ. ಇದು ೨೬ನೇ ಭಾಗವತಧರ್ಮ.

ಇಲ್ಲಿ ಪ್ರಶ್ನೆ ಬರುತ್ತದೆ, 'ಭಗವಂತನ ಪೂಜೆ ಹೇಗೆ ಮಾಡಲು ಸಾಧ್ಯ ?' ಜ್ಞಾನಾನಂದಾದಿ ಸ್ವರೂಪನಾದ ಆತನ ಸೂಕ್ಷ್ಮಪೂಜೆ ಮಾಡಬೇಕೆಂದರೆ ಹೇಗೆ? ಮೊದಲಿಗೆ ಅವನ ಧ್ಯಾನ ಮಾಡಬೇಕು ತಾನೆ? ಅವನಲ್ಲಿ ಪಾದಾದಿ ಅಂಗಗಳು ಅವನಿಗಿಂತ ಬೇರೆಯಿಲ್ಲ. ಇನ್ನು ಉಪಾಂಗಗಳು ಅಂದರೆ ಆಯುಧಗಳು ಆಭರಣಗಳು ಬೇರೆ ಇಲ್ಲ. ಇವೆಲ್ಲವನ್ನು ಹೇಗೆ ಧ್ಯಾನಿಸಬೇಕು? ಅವು ಯಾವುವು?

'ಪಾತಾಲಮೇತಸ್ಯ ಹಿ ಪಾದಮೂಲಂ' ಎಂದು ಮುಂತಾಗಿ ಭಾಗವತ (೨.೧.೨೬)ದಲ್ಲಿ ಇದನ್ನು ಹೇಳಿದ್ದಾರೆ. ಶಿಲಾಪ್ರತಿಮೆಯಂತೆ ಇಡಿ ಬ್ರಹ್ಮಾಂಡವು ಶ್ರೀಹರಿಯ ಸ್ಥೂಲಪ್ರತಿಮೆ, ಆದರ ಪಾದತಲ ಪಾತಾಲಲೋಕ, ಎಂದು ಮುಂತಾಗಿ. ನಿಜ. ಆದರೆ ಅದು ಸ್ಥೂಲಪೂಜೆ. ಪ್ರತಿಮಾಪೂಜೆಯಂತೆ ಅದು

ಹೃದಯದಲ್ಲಿ ಸೂಕ್ಷ್ಮವಾದ ಬಿಂಬಪೂಜೆ ಸಾಧ್ಯವಾಗುವವರೆಗೇ ಮಾಡಬೇಕಾದುದು. ಈ ಸೂಕ್ಷ್ಮಪೂಜೆ ಸಾಕ್ಷಾತ್ ಮೋಕ್ಷೋಪಯೋಗಿ. ಅದರಿಂದ ಸ್ಥೂಲ–ಸೂಕ್ಷ್ಮ ಪೂಜೆಗಳನ್ನು ಮಾಡುವ ಬಗೆ ಹೇಗೆ ಎಂಬುದು ಪ್ರಶ್ನೆ. ಇದನ್ನೇ ಶೌನಕರು ಸೂತರಲ್ಲಿ ಹೇಳುತ್ತಾರೆ—

'ತಾಂತ್ರಿಕಾಃ ಪರಿಚರ್ಯಾಯಾಂ ಕೇಶವಸ್ಯ ಶ್ರಿಯಃ ಪತೇಃ ।
ಅಂಗೋಪಾಂಗಾಯುಧಾಕಲ್ಪಾನ್ ಕಲ್ಪಯಂತಿ ಯಥೈವ ಯೈಃ ।
ತನ್ನೋ ವರ್ಣಯ ಭದ್ರಂ ತೇ ಕ್ರಿಯಾಯೋಗಂ ಬುಭುತ್ಸತಾಂ ।
ಯೇನ ಕ್ರಿಯಾನೈಪುಣೇನ ಮರ್ತ್ಯೋ ಯಾಯಾದಮರ್ತ್ಯತಾಂ ॥

'ವಿಷ್ಣುಪೂಜಾ ವಿಧಾನವನ್ನು ತಿಳಿಸುವ ತಂತ್ರಶಾಸ್ತ್ರಗಳಲ್ಲಿ ನಿಷ್ಣಾತರಾದವರು ಕೇಶವನ ಆರಾಧನೆಯಲ್ಲಿ ಅಂಗ ಉಪಾಂಗ ಆಯುಧ ಆಭರಣಗಳನ್ನು ಹೇಗೆ ಚಿಂತಿಸುತ್ತಾರೆ? ಅವುಗಳನ್ನು ನಮಗೆ ಹೇಳಿರಿ, ಹಾಗೆ ವಿಷ್ಣುಪೂಜೆ ಮಾಡಿದರೆ ತಾನೆ, ಮಾನವನು ಮುಕ್ತನಾಗುತ್ತಾನೆ?'

ಎಂದು ಶೌನಕರು ಸೂತರಲ್ಲಿ ಕೇಳುತ್ತಾರೆ. ಸೂತರು ದ್ವಾದಶಸ್ಕಂಧದಲ್ಲಿ ದಶಮಾಧ್ಯಾಯಪೂರ್ತಿ ಸ್ಥೂಲ ಸೂಕ್ಷ್ಮ ಎಂದು ಎರಡೂ ಪೂಜೆಗಳನ್ನು ಹೇಳುತ್ತಾರೆ.

ಈ ಬ್ರಹ್ಮಾಂಡವೇ ಕೇಶವನಿಗೆ ಬೃಹದಾಕಾರದ ಪ್ರತಿಮೆ. ಅದರಲ್ಲಿ—

**ಅಂಗಗಳು**—ಭೂಮಿಯಲ್ಲಿ ಅವನ ಪಾದಗಳಿವೆ. ಸ್ವರ್ಗದಲ್ಲಿ ಶಿರಸು, ಅಂತರಿಕ್ಷದಲ್ಲಿ ನಾಭಿ, ಸೂರ್ಯನಲ್ಲಿ ಕಣ್ಣುಗಳು. ವಾಯುವಿನಲ್ಲಿ ಮೂಗಿನ ಹೊಳ್ಳೆಗಳು, ದಿಕ್ಕುಗಳಲ್ಲಿ ಕಿವಿಗಳು, ವೃಕ್ಷಗಳಲ್ಲಿ ರೋಮಗಳು, ಮೋಡಗಳಲ್ಲಿ ತಲೆಗೂದಲುಗಳು ಎಂದು ಉಪಾಸನೆ ಮಾಡಬೇಕು.

**ಉಪಾಂಗಗಳು**—ಕೌಸ್ತುಭಮಣಿಯ ರೂಪದಿಂದ ಬ್ರಹ್ಮ, ಶ್ರೀವತ್ಸ ವನಮಾಲಾರೂಪಗಳಿಂದ ಶ್ರೀದೇವಿ. ಪೀತಾಂಬರ ರೂಪದಿಂದ ವೇದಾಭಿಮಾನಿಗಳು ಮೂರೆಳೆಯ ಯಜ್ಞೋಪವೀತರೂಪದಲ್ಲಿ 'ಅ ಉ ಮ' ಎಂಬ ಮೂರಕ್ಷರದ ಓಂಕಾರದ ಅಭಿಮಾನಿಗಳು. ಮಕರಕುಂಡಲಗಳ ರೂಪದಿಂದ

ಜ್ಞಾನ–ಕರ್ಮಾಭಿಮಾನಿಗಳು ಕಿರೀಟರೂಪದಿಂದ ಸತ್ಯಲೋಕಾಭಿಮಾನಿ. ಆಸನರೂಪದಿಂದ ಶೇಷದೇವ.

**ಆಯುಧ ಆಭರಣಗಳು**—ಪದ್ಮರೂಪದಿಂದ ಸತ್ವಾಭಿಮಾನಿ ಶ್ರೀದೇವಿ. ಗದಾರೂಪದಿಂದ ಮುಖ್ಯಪ್ರಾಣ. ಶಂಖರೂಪದಿಂದ ಜಲಾಭಿಮಾನಿ. ಸುದರ್ಶನರೂಪದಿಂದ ಅಗ್ನ್ಯಭಿಮಾನಿ. ನೀಲಖಡ್ಗರೂಪದಿಂದ ನೀಲಾಕಾಶಾಭಿ ಮಾನಿ. ಆಚ್ಛಾದಕ ಗುರಾಣಿ ರೂಪದಿಂದ ಆಚ್ಛಾದಕವಾದ ತಮೋಗುಣ. ಶಾಂರ್ಗಧನು ರೂಪದಿಂದ ಕಾಲ, ಬತ್ತಳಿಕೆ ರೂಪದಿಂದ ಪುಣ್ಯ. ಬಾಣರೂಪದಿಂದ ಇಂದ್ರಿಯಾಭಿಮಾನಿಗಳು. ರಥರೂಪದಿಂದ ಪೃಥಿವಿ, ರಥಸಂಚಾರ ಪ್ರದೇಶರೂಪದಿಂದ ಶಬ್ದಾದಿ ವಿಷಯದೇವತೆಗಳು, ದಿಗ್ವಿಜಯ ರೂಪದಿಂದ ಕರ್ಮೇಂದ್ರಿಯ ವಿಷಯದೇವತೆಗಳು ಹೀಗೆ ಕೇಶವನನ್ನು ಆರಾಧಿ ಸುತ್ತಾರೆ.

ಚಕ್ರಾಬ್ಜಮಂಡಲ ಕೇಶವಾರಾಧನಾಸ್ಥಲ. ಶರೀರ ಶುದ್ಧಿಯೆ ಪೂಜಾದೀಕ್ಷೆ. ಪಾಪ ಪರಿಹಾರ ಮಾಡಿಕೊಳ್ಳುವುದೇ ಪೂಜೆ. ಲೀಲಾಕಮಲಧಾರಿ ಕೇಶವನೇ ಪೂಜ್ಯ. ಧರ್ಮ ಯಶಸ್ಸುಗಳು ಚಾಮರ ಬೀಸಣಿಗೆಗಳು, ವೈಕುಂಠವೇ ಅರಮನೆ. ಲಕ್ಷ್ಮಿಯೇ ಶ್ವೇತಚ್ಛತ್ರ. ಯಜ್ಞಪುರುಷನಾದ ಕೇಶವನನ್ನು ವೇದಾಭಿಮಾನಿ ಗರುಡನು ವಾಹನವಾಗಿ ಹೊರುತ್ತಾನೆ. ನಿತ್ಯಾವಿಯೋಗಿನಿ ರಮಾದೇವಿ ಅರ್ಧಾಂಗಿನಿ. ತಂತ್ರ ಗ್ರಂಥಾಭಿಮಾನಿ ವಿಷ್ವಕ್ಸೇನನು ಪಾರ್ಷದ. ನಂದ ಸುನಂದಾದಿಗಳು ದ್ವಾರಪಾಲಕರು. ಅಣಿಮಾದಿ ಐಶ್ವರ್ಯಗಳು ಪ್ರಜೆಗಳು. ಇವರೆಲ್ಲರೂ ಉಪಾಂಗಗಳು.

ಇದಿಷ್ಟು ಸ್ಥೂಲಪೂಜೆ. ಸೂಕ್ಷ್ಮಪೂಜೆಯಲ್ಲಿ ಆವರಣ ಮೂರ್ತಿಗಳಾಗಿ ಸ್ಥಾಪನೆಗೊಳ್ಳುವ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೂ ಅವರಿಂದ ಉದ್ಭೂತರಾದ ಮತ್ಸ್ಯಾದಿಗಳೂ ಅಂಗೋಪಾಂಗಾಯುಧಾಭರವಣಾದಿ ಗಳಾಗಿರುತ್ತಾರೆ. ಕೇಶವನ ಈ ಅಂಗ ಉಪಾಂಗ ಆಯುಧಾಭರಣಾದಿಗಳನ್ನು ನೆನೆಯುವವನು ಜ್ಞಾನಭಕ್ತಿಮೋಕ್ಷಗಳನ್ನು ಪಡೆಯುವನು.

ಈ ಪ್ರಶ್ನೆಗೆ ಸಮಾಧಾನ ಹೀಗೆ— 'ಸ್ಯಾನ್ನಸ್ತವಾಂಘ್ರಿಃ' ಎಂದು.

❖❖❖

## –೨೮೯–

### ಭಗವಂತ ತನಗೆ ತಾನೇ ಅಂಗ ಉಪಾಂಗ ಆಯುಧ ಆಭರಣಗಳು

ಸ್ಯಾನ್ನಸ್ತವಾಂಘ್ರಿರಶುಭಾಶಯಧೂಮಕೇತುಃ
ಕ್ಷೇಮಾಯ ಯೋ ಮುನಿಭಿರಾರ್ದ್ರಹೃದೋಹ್ಯಮಾನಃ ।
ಯಃ ಸಾತ್ವಿಕೈಃ ಸಮವಿಭೂತಿಭಿರಾತ್ಮವಿದ್ಭಿ-
ರ್ವ್ಯೂಹ್ಯಾರ್ಚಿತಃ ಸವನಶಃ ಸಮವಿಕ್ರಮೈರ್ಯಃ ॥

(ಭಾ.೧೧.೬.೧೦)

ಪೂಜಾಪರಪರ್ಯಾಯಂ ಇಜ್ಯಾಲಕ್ಷಣಂ ಭಾಗವತಂ ಧರ್ಮಂ ಸಪರಿಕರಂ ವಕ್ತುಂ ಉತ್ತರಂ ಪ್ರಕರಣಂ । ನನು ಪೂಜೈವ ತಾವದ್‌ದುರ್ಘಟಾ, ಕಿಂ ತತ್ಪರಿಕರವಚನೇನ । **ತಥಾಹಿ—** ಭಗವಾನ್ ಹಿ ಕೇವಲಜ್ಞಾನಾನಂದಾದಿ ರೂಪಃ । ತಸ್ಯ ಚ ಪೂಜಾಯಾಂ ಕ್ರಿಯಮಾಣಾಯಾಂ ಧ್ಯಾನಂ ತಾವತ್ಕರ್ತವ್ಯಂ ಪಾದಮಾರಭ್ಯ ಮೌಲಿಪರ್ಯಂತಂ । ನ ಹಿ ತತ್ರ ಪಾದಾದಿವಿಭಾಗಃ ಕರ್ತುಂ ಶಕ್ಯಃ, ತತ್ರಾಪಿ ಅಂಗುಲೀಃ ಕಲ್ಪನೀಯಾಃ, ತಚ್ಚ ಕಥಂ । ಹಸ್ತೇಷು ಆಯುಧಾನಿ ಧ್ಯೇಯಾನಿ ತಾನಿ ಚ ಕಾನಿ । ಅವಯವೇಷು ಭೂಷಣಾನಿ ಧ್ಯೇಯಾನಿ ತಾನ್ಯಪಿ ಕಾನಿ । ಏವಂ ಚಕ್ಷುರಾದಾವಪೀತಿ । ನನು ಭೂಃ ಪಾದೌ, ದ್ಯೌಃ ಶಿರಃ, ಇತ್ಯಾದಿನಾ ಅವಯವಭೂಷಣಾಯುಧಾನಾಂ ಸರ್ವೇಷಾಂ ಉಕ್ತ್ಯಾ ಸುಘಟೈವ ಪೂಜೇತಿ ಚೇತ್ । ಸತ್ಯಂ । ಸಾ ಸ್ಥೂಲಾ ಸಾವಧಿಕಾ ಚ, ಪ್ರತಿಮಾಪೂಜಾಯಾ ಇವ ತಸ್ಯಾಃ ಸೂಕ್ಷ್ಮಪೂಜಾಪ್ರಾಪ್ತ್ಯವಧಿಕತ್ವಾತ್ । ಸೂಕ್ಷ್ಮಪೂಜಾಯಾ ಏವ ಸಾಕ್ಷಾತ್ ಮುಕ್ತಿಸಾಧನೇಷು ಸಾರತ್ವಾತ್ । **ಯಥಾಹುಃ—**

''ತಾಂತ್ರಿಕಾಃ ಪರಿಚರ್ಯಾಯಾಂ ಕೇಶವಸ್ಯ ಶ್ರಿಯಃ ಪತೇಃ ।
ಅಂಗೋಪಾಂಗಾಯುಧಾಕಲ್ಪಾನ್ ಕಲ್ಪಯಂತಿ ತಥೈವ ಯೈಃ ॥
ತನ್ನೋ ವರ್ಣಯ ಭದ್ರಂ ತೇ ಕ್ರಿಯಾಯೋಗಂ ಬುಭುತ್ಸತಾಂ ।
ಯೇನ ಕ್ರಿಯಾನೈಪುಣೇನ ಮರ್ತ್ಯೋ ಯಾಯಾದಮರ್ತ್ಯತಾಂ'' ಇತಿ ॥

ತಾಂತ್ರಿಕಾಃ ತಂತ್ರಂ ಪಂಚರಾತ್ರಂ ತನ್ನಿಷ್ಠಾವಂತಃ । ತದುದಿತಪೂಜಾ ಪ್ರಕಾರವಿದ ಇತಿ ಯಾವತ್ । ಕ್ರಿಯಾಯೋಗಂ ಕರ್ಮಸು ಕೌಶಲಂ । ಏವಂ ಪ್ರಾಪ್ತ ಆಹ ॥ ಸ್ಯಾನ್ನ ಇತಿ ॥ ಯಶ್ಚ ಮುನಿಭಿಃ । ಭಕ್ತಿಯುಕ್ತಮನಸಾ । ಉಹ್ಯಮಾನಃ ಧೃತಃ । ಯಶ್ಚ ಸಾತ್ವಿಕೈಃ ಸಾಧುಗುಣೈಃ । ಆತ್ಮವಿದ್ಭಿಃ ಬಿಂಬಜ್ಞಾನವದ್ಭಿಃ ವಿಜ್ಞಾನಿಭಿಃ । ತುಲ್ಯಪರಾಕ್ರಮೈಃ ಅವಿಶಿಷ್ಟೈಃ

ವಾಸುದೇವಾದಿಭಿರ್ಮೂರ್ತಿವಿಶೇಷೈಃ। ವ್ಯೂಹ್ಯ ಅವಯವಾದಿಭಾವಂ ಕಲ್ಪಯಿತ್ವಾ। ಸವನಶಃ ತ್ರಿಷವಣಂ। ಅರ್ಚಿತಃ ಪೂಜಿತಃ। ತವಾಂಘ್ರಿಃ। ನಃ ಅಸ್ಮಾಕಂ। ಕ್ಷೇಮಾಯ ಸ್ಯಾದಿತಿ ಯೋಜನಾ।

ಇದಮುದಿತಂ ಭವತಿ— ಯದ್ಯಪಿ ಭಗವಾನ್ ಕೇವಲಃ, ತಥಾಪಿ ಸ್ವರೂಪಭೂತೈಃ ವಾಸುದೇವಾದಿಭಿಃ ಚತುರ್ಮೂರ್ತಿರೂಪವಿಶೇಷೈಃ ಅವಯವಾದಿಭಾವೇನ ಸ್ಥಿತಃ ತದ್ವಿದೋ ವಿಜ್ಞಾನಿನಃ, ತೈರೇವಾಯುಧೈಃ ಯುತಾನ್ ತೈರೇವ ಭೂಷಣೈಃ ಭೂಷಿತಾನ್ ಧ್ಯಾಯಂತೋಽರ್ಚಯಂತಿ ಅರ್ಚನ ಸಾಧನೈಃ ಸ್ವವಿಹಿತೈರಿತಿ। ವಿಜ್ಞಾನಿಚರಣಜುಷಾಂ ಸುಲಭೈವ ಸಾ ಸಾಕ್ಷಾದ್ಭವಮೋಚನೀತಿ ಯುಕ್ತಂ ತದ್ವಚನಮಿತಿ। ಯಥಾಹುಃ—

''ನಮಸ್ಕೃತ್ಯ ಗುರೂನ್ ವಕ್ಷ್ಯೇ ವಿಭೂತೀ ರ್ವೈಷ್ಣವೀರಹಂ।
ಯಾ ವೇದಾಗಮತಂತ್ರಾಭ್ಯಾಮಾಚಾರ್ಯೈಃ ಪದ್ಮಜಾದಿಭಿಃ॥
ಅಂಗೋಪಾಂಗಾಯುಧಾಕಲ್ಪೈರ್ಭಗವಾಂಸ್ತಚ್ಚತುಷ್ಟಯಂ।
ಬಿಭರ್ತಿ ಸ್ಮ ಚತುರ್ಮೂರ್ತಿರ್ಭಗವಾನ್ ಹರಿರೀಶ್ವರಃ' ಇತಿ॥

ಏವಂ ಪೃಷ್ಟವತೇ ಯಾಃ ಬ್ರಹ್ಮಾದಿಭಿಃ ಪೂರ್ವಾಚಾರ್ಯೈಃ ವೇದಪಂಚರಾತ್ರಾಭ್ಯಾಂ ಪ್ರದರ್ಶಿತಾಃ ತಾಃ ವೈಷ್ಣವೀಃ ತದನ್ಯಾ ಅಪಿ ವಿಭೂತೀಃ ವಕ್ಷ್ಯೇ ಇತಿ ಪ್ರತಿಜ್ಞಾಯ, ಪೂರ್ವಂ ಅನ್ಯಾ ವಿಭೂತೀಃ ಸ್ಥೂಲಪೂಜಾಪ್ರಸ್ತಾವೇ ಪ್ರದರ್ಶ್ಯ ವೈಷ್ಣವೀರಪಿ ಪ್ರಸ್ತಾವ್ಯ ಉತ್ತರಂ ವಕ್ತಿ॥ ಅಂಗೇತಿ॥ ಹರಿಃ

''ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಃ ಪುರುಷಃ ಸ್ವಯಂ।
ಅನಿರುದ್ಧ ಇತಿ ಬ್ರಹ್ಮನ್ ಮೂರ್ತಿವ್ಯೂಹೋಽಭಿಧೀಯತೇ''

ಇತಿ ಯಚ್ಚತುಷ್ಟಯಮಭಿಹಿತಂ ತದೇವ ಚತುಷ್ಟಯಂ ಅಂಗೋಪಾಂಗಾಯುಧಾಕಲ್ಪೈಃ ಅಂಗಾದಿತ್ವೇನ ಬಿಭರ್ತಿ, ಯಃ ಅಂಗೀ, ಯಾನಿ ಅಂಗಾದೀನಿ ತದುಭಯಮಪಿ ನ ಪೃಥಕ್ ಕಿಂತು ಏಕಮೇವ ಸಮವಿಭೂತಿತ್ವಾತ್ ಸಮವೀರ್ಯತ್ವಾಚ್ಚ ಇತಿ ಭಾವೇನ ಭಗವದಿತಿ ಚತುಷ್ಟಯಂ, ಭಗವಾನಿತಿ ಹರಿಂ ಚ ವಿಶೇಷಿತವಾನ್ ಲೋಕವಿರುದ್ಧಾಂಗಾಂಗಿ ಭಾವಾದಿಃ ಕಥಂ ಘಟತೇ ಇತ್ಯತಃ ಈಶ್ವರ ಇತ್ಯಾಹ। ಅಘಟಿತಘಟನಾ ಪಟೀಯಸೀ ಖಲು ಈಶ್ವರಶಕ್ತಿಃ ಇತಿ ಕಿಂ ತಸ್ಯ ದುರ್ಘಟಮಿತಿ ಭಾವಃ॥

❖❖❖

ಪರಂಧಾಮಕ್ಕೆ ಹೊರಡೆಂದು ದೇವತೆಗಳು ಶ್ರೀಕೃಷ್ಣಲ್ಲಿ ಕೇಳಿಕೊಳ್ಳುವಾಗ ಹೇಳುತ್ತಾರೆ—

**ಇಲ್ಲಿ 'ಯಃ' ಎಂಬ ಶಬ್ದ ಮೂರುಬಾರಿ ಬರುತ್ತದೆ. ಬೇರೆಬೇರೆ ಅರ್ಥ ಇಟ್ಟುಕೊಳ್ಳಬೇಕು.**

**'ಯಃ' ಮಂಗಳಮಯ ದಿವ್ಯಪ್ರಕಾಶರೂಪವಾದ ನಿನ್ನ ಪಾದವು ಅಮಂಗಳ ಅಂಧಕಾರ ತುಂಬಿದ ಹೃದಯಾಕಾಶದಲ್ಲಿ ಬೆಳಗುತ್ತದೆ. 'ಯಃ' ಯಾವ ಪಾದವನ್ನು ಸಾತ್ವಿಕರು ಸಮಾನಬಲ ಪರಾಕ್ರಮಉಳ್ಳ ವಾಸುದೇವಾದಿ ರೂಪದಲ್ಲಿ ತ್ರಿಕಾಲದಲ್ಲಿ ಪೂಜಿಸುವರೋ 'ಯಃ' ಯಾವ ಪಾದವು ವಿಷಯವಾಸನೆಯನ್ನು ಸುಡುವಲ್ಲಿ ಧೂಮಕೇತುವಿನಂತಿರುವುದೋ ಆ ನಿನ್ನ 'ಯಃ' ಪ್ರಕಾಶರೂಪವಾದ ಪಾದ ನಮ್ಮ ಹೃದಯಾಕಾಶದಲ್ಲಿ ಬೆಳಗಲಿ'.**

'ಸಮವಿಭೂತಿಭಿರಾತ್ಮವಿದ್ಭಿಃ ವ್ಯೂಹ್ಯಾರ್ಚಿತಃ ।'

ಎಂಬ ಮಾತಿನಿಂದ ಭಗವಂತನ ಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸುತ್ತಿದ್ದಾರೆ— 'ಆತ್ಮವಿದರು ಅಂದರೆ' ಬಿಂಬಜ್ಞಾನಉಳ್ಳವರು ಸಾತ್ವಿಕರಾದ ಭಕ್ತರು. 'ಸಮವಿಭೂತಿ'ಗಳಾದ ಅಂದರೆ ವಾಸುದೇವಾದಿ ಹರಿಮೂರ್ತಿಗಳು ಹರಿಯಂತೇ ಪರಾಕ್ರಮಾದಿ ಸಕಲ ಕಲ್ಯಾಣಗುಣಗಳಲ್ಲಿಯೂ ಪರಸ್ಪರ ಸಮರು. ಅವನೆ ಅವನ ರೂಪಗಳಲ್ಲಿ ಅವಯವಿ, ಅವನೇ ಅವಯವ. ಅವುಗಳಲ್ಲಿ ಭೇದವಿಲ್ಲ. ಭೇದಾಭೇದವೂ ಇಲ್ಲ. 'ಕೇವಲ' ಸ್ವಗತ ಭೇದರಹಿತ. ಕೇವಲ ಅಚಿಂತ್ಯಶಕ್ತಿಯಿಂದ 'ಅವಯವ–ಅವಯವಿ' ಎಂದು ವ್ಯವಹಾರಗೋಚರ ನಾಗುತ್ತಾನೆ. ಹೀಗೆ 'ವ್ಯೂಹ್ಯ' ಅಂದರೆ, ಅವಯವ ಅವಯವಿ, ಭೂಷಣ–ಭೂಷ್ಯ, ಆಯುಧ– ಆಯುಧಿ ಎಂದು ವಿಭಾಗಗಳನ್ನು ಚಿಂತಿಸಿ, ವಾಸುದೇವಾದಿ ರೂಪಗಳನ್ನು ಸೂಕ್ಷ್ಮಪೂಜೆಯಲ್ಲಿ ಪೂಜಿಸುತ್ತಾರೆ.

ಬಿಂಬಜ್ಞಾನಿಗಳನ್ನು ಸೇವಿಸಿದರೆ ಅವರ ಉಪದೇಶದಿಂದ ಮೋಕ್ಷಸಾಧನ ವಾದ ಸೂಕ್ಷ್ಮವಾದ ಈ ಬಿಂಬಾರ್ಚನವನ್ನು ಹೇಗೆ ಮಾಡಬೇಕು ಎನ್ನುವುದು ಸುಲಭವಾಗಿ ತಿಳಿಯುತ್ತದೆ. ಭಾಗವತದಲ್ಲಿ ಅದನ್ನು ಸೂತರು ಶೌನಕರಿಗೆ ಹೇಳಿದ್ದಾರೆ—

ನಮಸ್ಕೃತ್ವಾ ಗುರೂನ್ ವಕ್ಷ್ಯೇ ವಿಭೂತೀರ್ವೈಷ್ಣವೀರಹಂ ।
ಯಾ ವೇದಾಗಮತಂತ್ರಾಭ್ಯಾಂ ಆಚಾರ್ಯೈಃ ಪದ್ಮಜಾದಿಭಿಃ ॥

(ಭಾ.೧೨.೧೦.೪)

ಅಂಗೋಪಾಂಗಾಯುಧಾಕಲ್ಪೈರ್ಭಗವತ್ತಚ್ಚತುಷ್ಟಯಂ ।
ಬಿಭರ್ತಿ ಸ್ಮ ಚತುರ್ಮೂರ್ತಿರ್ಭಗವಾನ್ ಹರಿರೀಶ್ವರಃ ॥

(ಭಾ.೧೨.೧೧.೨೩)

'ಗುರು ಶ್ರೀವ್ಯಾಸರನ್ನು ನಮಿಸಿ ಬ್ರಹ್ಮಾದಿ ಪೂರ್ವಾಚಾರ್ಯರು ವೇದಪಂಚರಾತ್ರಗಳಿಂದ ತೋರಿಸಿರುವ 'ಭಗವತ್' ಅಂದರೆ, ವಿಷ್ಣುಸ್ವರೂಪ ಭೂತವಾದ ರೂಪಗಳನ್ನು ಮತ್ತು ಬ್ರಹ್ಮಾದಿಸ್ವರೂಪಭೂತವಾದ ವಿಷ್ಣುವಿಭೂತಿ ಗಳನ್ನೂ ಹೇಳುತ್ತೇನೆ' ಎಂದು ಪ್ರಾರಂಭಿಸಿ, ಮೊದಲಿಗೆ ದ್ವಿತೀಯಸ್ಕಂಧದಲ್ಲಿ ವಿಭೂತಿಗಳಿಂದ ಮಾಡುವ ಸ್ಥೂಲ ಪೂಜಾಕ್ರಮವನ್ನು 'ಪಾತಾಲಮೇತಸ್ಯ ಹಿ ಪಾದಮೂಲಂ' ಎಂದು ಮುಂತಾಗಿ ಹೇಳಿ, ದ್ವಾದಶಸ್ಕಂಧದಲ್ಲಿ 'ಮಾಯಾ ದ್ಯೈರ್ನವಭಿಸ್ತತ್ವೈಃ' ಎಂದು ಮುಂತಾಗಿಯೂ ಸ್ಥೂಲ ಪೂಜಾವಿಧಾನವನ್ನು ಹೇಳುತ್ತಾರೆ. ಸ್ಥೂಲಪೂಜೆಯಲ್ಲಿ ಪಾತಾಲಾದಿ ಅನ್ಯ ರೂಪಗಳನ್ನು ಪ್ರತಿಮೆ ಗಳಾಗಿ ಹೇಳಿದ್ದರಿಂದ ಈಗ ಸೂಕ್ಷ್ಮಪೂಜೆಯಲ್ಲಿ ವಾಸುದೇವಾದಿ ವಿಷ್ಣುರೂಪ ಗಳನ್ನು ಹೇಳುತ್ತಾರೆ. ವಿಷ್ಣುರೂಪಗಳು 'ಹರಿರೀಶ್ವರಃ' ಅಚಿಂತ್ಯಶಕ್ತಿಉಳ್ಳ ಹರಿಸ್ವರೂಪಗಳಾದ್ದರಿಂದ ತಾವೇ,

ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಃ ಪುರುಷಃ ಸ್ವಯಂ।
ಅನಿರುದ್ಧ ಇತಿ ಬ್ರಹ್ಮನ್ ಮೂರ್ತಿವ್ಯೂಹೋಽಭಿಧೀಯತೇ॥

(ಭಾ.೧೨.೧೧.೨೧)

ಪರಮಪುರುಷನು ತಾನೇ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂದೆನಿಸುತ್ತಾನೆ. ಅವಯವಗಳೂ ತಾವೇ ಅವಯವಿಗಳೂ. ತಾವೇ ಭೂಷಣಗಳೂ ತಾವೇ ಭೂಷ್ಯಗಳೂ ತಾವೆ, ಆಯುಧಗಳೂ ತಾವೇ ಆಯುಧಿ ಗಳೂ ತಾವೇ ಆಗುತ್ತಾರೆ. ಬಿಂಬಮೂರ್ತಿಯು ತನಗೆ ತಾನೇ ಅಂಗ-ಉಪಾಂಗ-ಆಯುಧ-ಆಭರಣಾದಿಗಳಾಗುತ್ತಾನೆ.

ಇದರ ವಿವರವೆಲ್ಲವೂ ಅವಧೂತರ ಷೋಡಶಿಗ್ರಂಥದ 'ಬಿಂಬ ಸಂಸ್ಥಾಪನ' ಪ್ರಕರಣದಲ್ಲಿ ವಿಸ್ತಾರವಾಗಿ ಬರುತ್ತದೆ.

❖❖❖

## –೨೯೦–

## ದುರಾಚಾರಿಗಳ ದುರಾಚಾರವೂ ಭಗವಂತನ ಪೂಜೆಯೆ

**ಪ್ರಕ್ರಮವತ್ ಸ್ವಸತ್ಕೃತಂ ।**
**ಪುರುಷೇಷು ಧೀಷು ತು ಬಹಿರಂತರಸಚ್ಚರಣೇ ।**
**ತವ ಪುರುಷ ವಸಂತ್ಯಖಿಲಶಕ್ತಿಧೃತಃ ಸ್ವಕೃತಂ ॥**

(ಭಾ.೧೦.೮೭.೨೧)

ಏವಂ ಸಾಕ್ಷಾತ್ ಮುಕ್ತಿಸಾಧನಭೂತಾಂ ಪೂಜಾಂ ಉಕ್ತ್ವಾ ತಸ್ಯ ಅಮಿತಕಾರ್ಯತಾರೂಪಃ ಸಾಧನವಿಶೇಷಃ ಪೂಜಾದೌ ಸ್ವಕ್ರಿಯಮಾಣೇ ಸಮಸ್ತೇ ಕರ್ಮಣ್ಯಪಿ ಅನುಸಂಧೇಯಃ । ಸಂತತಂ ತೇನ ಸಂಸ್ಕೃತಂ ಭಾಗವತಧರ್ಮಪದಾಭಿಧೇಯಂ ಭವತಿ । ತಥಾ ಚ ಉಕ್ತಂ ಪುರಸ್ತಾತ್ । ತತ್ಕರ್ಮ ಬಂಧಕಸ್ವಭಾವಮಪಿ ಮುಕ್ತಿಮೇವ ದದಾತಿ ಇತಿ ಭಾವೇನ ಪ್ರದರ್ಶಯತಿ ॥ **ಪ್ರಕ್ರಮವದಿತಿ ॥** ತ್ರಿಚರಣೋಽಯಂ ಶ್ಲೋಕಃ । ಅನೇನ ಗಾಯತ್ರೀತುಲ್ಯತಾ ಜ್ಞಾಪಿತಾ ಭವತಿ । ಹೇ ಪುರುಷ । ಸಚ್ಚರಣೇ ಅಸಚ್ಚರಣೇ ಚೇತಿ ಸರ್ವೇಷು ಪುರುಷೇಷು । ಸಚ್ಚರಣಸಾಧನಭೂತಾಸು ಅಸಚ್ಚರಣಸಾಧನಭೂತಾಸು ಚೇತಿ ಸರ್ವಾಸು ಧೀಷು । ಇಂದ್ರಿಯೇಷು ಚ । ಪುರುಷರೂಪೇಣ ಅಂತಃ । ಕಾಲರೂಪೇಣ ಬಹಿಶ್ಚೇತಿ । ಪ್ರಕ್ರಮವತ್ ಸ್ಥಾನಗುಣಾನುಸಾರೇಣ ವ್ಯಕ್ತಗುಣತ್ವ ರೂಪಕ್ರಮೇಣ ವ್ಯಕ್ತೋ ಭೂತ್ವಾ । ತದ್ದ್ವಾರಾ ಯನ್ನಿಷ್ಪನ್ನಂ ಕರ್ಮ ತತ್ । ತವ ತ್ವತ್ಸಂಬಂಧಿ । ಕೋಽರ್ಥಃ । ಸ್ವಕೃತಂ ಸ್ವೇನ ತ್ವಯೈವ ಕೃತಮಿತಿ । ತತ್ರ ಕೇನ ಪ್ರಕಾರೇಣ ಸ್ಥಿತ್ವಾ ಕ್ರಿಯತೇ ಇತ್ಯತಃ ಸ್ವರೂಪೈಃ ಅವತಾರೈರೇವ ಇತ್ಯಾಶಯೇನ ಉಕ್ತಂ ॥ **ಅಖಿಲಶಕ್ತಿಧೃತ ಇತಿ ॥** ತಥಾ ತೇನ ಸ್ವಕೃತೇನ ಸತಾ ಅಸತಾ ವಾ ಕರ್ಮಣಾ । ಸ್ವೇನೈವ ಸತ್ಕೃತಂ ಪೂಜಿತಂ ತ್ವಾಂ ವದಂತಿ ವಿಜ್ಞಾನಿನಃ ।

ನನು ಏವಂ ಅಸದ್ಭಿಃ ಕ್ರಿಯಮಾಣಂ ಶ್ರುತ್ಯಾದ್ಯವಿಹಿತಂ ಪಾಪಂ ಕರ್ಮಾಪಿ ಭಾಗವತೋ ಧರ್ಮ ಇತಿ ಪ್ರಾಪ್ತಂ । ತಸ್ಯಾಪಿ ಭಗವತ್ಪೂಜಾರೂಪತ್ವಾತ್ ತತ್ಕರ್ತೃಕತ್ವಾಚ್ಚ । ಮೈವಂ । ಶ್ರೀಹರಿರೇವ ಸರ್ವಕರ್ಮ ಸ್ವಪೂಜಾತ್ವೇನ ಕರೋತಿ ಇತಿ ವಾಸ್ತವೀಂ ತಸ್ಯ ಸ್ಥಿತಿಂ ಜ್ಞಾಪಯಿತುಂ ಉಚ್ಯಮಾನತಯಾ ವಸ್ತುತಃ ತಸ್ಯ ತಥಾತ್ವೇಽಪಿ ತೇನ ರೂಪೇಣ ಅನುಸಂಧೀಯಮಾನತ್ವಾಭಾವಾತ್ । ತಾದೃಶಸ್ಯೈವ ಭಾಗವತ ಧರ್ಮತ್ವಾತ್ । ತಥಾ ಚೋಕ್ತಂ ಪುರಸ್ತಾತ್ । ಅತ ಏವ

ತೇಷಾಂ ತಥಾ ಅನುಸಂಧಾನಾಭಾವಾದೇವ ನ ತತ್ ಪುರುಷಾರ್ಥಸಾಧಕಂ। ಪ್ರತ್ಯುತ, ಅಹಮೇವ ಕರ್ತಾ ಮತ್ಪೂಜಾರ್ಥಮೇವ ಏತದಿತಿ ವಿಪರೀತಾನು ಸಂಧಾನಾತ್ ವಿಪರೀತಾರ್ಥಸಾಧಕಂ ಚ ಭವತಿ।

ಶ್ರುತ್ಯಾದ್ಯವಿಹಿತಸ್ಯ ಸದ್ಭಿರೇವ ಕೃತಸ್ಯ ಭಾಗವತಧರ್ಮತ್ವಂ ಸ್ಯಾದಿತಿ ಚೇತ್। ಮೈವಂ। ತತ್ರ ತಲ್ಲಕ್ಷಣಾಭಾವಾತ್। ಪ್ರಾಯೇಣ ಸದ್ಭಿಃ ತಾದೃಶಂ ನ ಕ್ರಿಯತೇ ಏವ। ಪರಮೇಶ್ವರೇಣ ವಿಷ್ಟಿಗೃಹೀತಸ್ಯ ಹಸ್ತೇನ ಇವ ಬಲಾತ್ಕೃತ್ಯ ಕದಾಚಿತ್ ಕರಣೇತು ಅಹೋ ಮಯಾ ಅಸಾಧು ಇದಮಾಚರಿತಂ ಇತ್ಯುತ್ತರ ಕಾಲೀನ ಪಶ್ಚಾತ್ತಾಪ ಬಲೇನ ತೇನ ರೂಪೇಣ ತದಾ ಅನುಸಂಧಾನಾಭಾವ ನಿಶ್ಚಯಾತ್। ಪಶ್ಚಾತ್ ತಥಾ ಅನುಸಂಧಾನೇ ಕಥಮಿತಿ ಚೇತ್। ನ ಕ್ರಿಯತೇ ಏವ ಪಶ್ಚಾತ್ ತಾದೃಶಕರ್ಮಣಿ ತಥಾ ಅನುಸಂಧಾನಂ ಸದ್ಭಿರಿತಿ ಬ್ರೂಮಃ। ಕದಾಚಿತ್ ತಥಾ ಅನುಸಂಧಾನಂ ಕೃತಂ ಚೇತ್ ಕಥಂ। ಕಿಂ ತಾವತಾ, ತಸ್ಯಾಪಿ ಭಾಗವತಧರ್ಮತ್ವಂ ಸ್ಯಾದಿತಿ ಚೇತ್। ನ। ತಲ್ಲಕ್ಷಣಾಭಾವಾತ್। ತಥಾ ಅನುಸಂಧಾನಪೂರ್ವಕ ಕ್ರಿಯಮಾಣತ್ವಸ್ಯ ತಲ್ಲಕ್ಷಣತ್ವಾತ್। ತತ್ಕರಣಸಮಯೇ ಏವ ತಥಾ ಅನುಸಂಧಾನಂ ಚೇತ್ ಕಥಂ। ಇತಿ ನೈವ ಭವತಿ। ನಹಿ ತದಾ ಅವಿಹಿತಮಿದಂ ಅನರ್ಥಸಾಧನಮಿತಿ ಶಾಸ್ತ್ರೀಯಂ ಸ್ಥೂಲಮತಿಭಿರಪಿ ಸುಗಮಂ ಅನುಸಂಧಾನಂ ಅಲಭಮಾನಸ್ಯ ವಿಷ್ಟಿಗೃಹೀತಸ್ಯ ಇವ ಪರಮೇಶ್ವರೇಣ ಚೋದ್ಯಮಾನಸ್ಯ, ತೋಯಾಭ್ಯವಹಾರಾಸಮರ್ಥಸ್ಯ ಮುಮೂರ್ಷೋಃ ಶಷ್ಕುಲೀಭಕ್ಷಣಮಿವ ಸಂಭಾವಯಿತುಮಪಿ ತಚ್ಛಕ್ಯಂ। ನನ್ವೇವಂ ಶ್ರುತ್ಯಾದಿ ವಿಹಿತಸ್ಯಾಪಿ ತಥಾ ಅನನುಸಂಧಾಯ ಕ್ರಿಯಮಾಣಸ್ಯ ಭಾಗವತಧರ್ಮತ್ವಂ ನ ಪ್ರಾಪ್ತಮಿತಿ ಚೇತ್। ಕೋ ನೇತಿ ಬ್ರೂತೇ। ತದರ್ಥಮೇವ ಏವಮನುಸಂಧಾಯ ಕರ್ತವ್ಯಮಿತಿ ಉಚ್ಯಮಾನತ್ವಾತ್। ತಮೇವಂ ವಿಶೇಷಂ ಸೂಚಯತಿ ತುನಾ ಇತಿ। ಅನೇನ ಪೂಜಾದಿಕಂ ಸರ್ವಮಪಿ ಕರ್ಮ ಭಗವತ್ಕರ್ತೃಕಂ ತತ್ಪೂಜಾತ್ಮಕಮಿತಿ ಅನುಸಂಧೇಯಮಿತಿ ಸೂಚಿತಂ ಭವತೀತಿ ॥

❖❖❖

ಇದು ಗಾಯತ್ರಿಯಂತೇ ಮೂರು ಪಾದಗಳುಳ್ಳ ಶ್ಲೋಕ, ಅದರಿಂದ ಗಾಯತ್ರೀ ತುಲ್ಯವೆಂದು ಸೂಚಿತವಾಗಿದೆ. ಬಂದಿಗಳು ಸಮ್ರಾಟನನ್ನು ಸ್ತುತಿಸಿ ಎಚ್ಚರಗೊಳಿಸುವಂತೆ ಶ್ರುತ್ಯಭಿಮಾನಿನಿ ದೇವಿ ದುರ್ಗೆ ಪ್ರಳಯದ ಕೊನೆಯಲ್ಲಿ ಹರಿಯನ್ನೆಬ್ಬಿಸುತ್ತಾಳೆ! ಅದರಿಂದ ಇದು 'ಶ್ರುತಿಗೀತೆ'ಯಲ್ಲಿ ಏಳನೇ

**ಪದ್ಯ—'ಹೇ ಪರಮಪುರುಷನೆ! ತಾರತಮ್ಯದಿಂದಿರುವ ಜೀವರಲ್ಲಿ ನೀನು ಸ್ಥಾನಗುಣಾನುಸಾರ ತಾರತಮ್ಯದಿಂದಲೆ ವ್ಯಕ್ತನಾಗಿ ಸನ್ನಿಹಿತನಾಗಿದ್ದು ಅವರ ಮೂಲಕ ನೀನು ನಿನ್ನಿಂದಲೇ ಪೂಜಿಸಿಕೊಳ್ಳುವೆ. ದುರಾಚಾರಿ ಸದಾಚಾರಿಗಳೆಲ್ಲ ರಲ್ಲಿಯೂ ಬ್ರಹ್ಮಾದಿಗಳ ಮೂಲಕ ಅವರವರ ಕರ್ಮ ಮಾಡಿಸುವಿ. ದುರಾಚಾರಿಗಳಲ್ಲಿ ಪಾಪಾಚರಣೆ ಮಾಡಿಸಿ ಅದನ್ನು ಕೂಡ ನೀನು ನಿನ್ನ ಪೂಜೆ ಯಾಗಿಯೇ ಸ್ವೀಕರಿಸುವಿ. ಹೊರಗೆ ಕಾಲರೂಪದಿಂದ ಒಳಗೆ ಪುರುಷರೂಪ ದಿಂದ ನೀನು ಏನೇನು ಪ್ರೇರಣೆ ಮಾಡುವೆಯೊ ಅದೆಲ್ಲವೂ ನೀನೆ ಮಾಡಿಕೊಳ್ಳುವ ನಿನ್ನ ಪೂಜೆ, ನಾವಾರೂ ಏನೂ ಮಾಡುತ್ತಿಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ'.**

'ನಿನಗಿದು ಪೂಜೆಯಾಗಲೆ'ಂದು ಕರ್ಮಸಮರ್ಪಣೆಯೆ ಎಲ್ಲ ಕರ್ಮ ಗಳಿಗೂ ಉತ್ತಮವಾದ ಆವಶ್ಯಕವಾದ ಸಂಸ್ಕಾರ. ಈ ಸಂಸ್ಕಾರದಿಂದ ಸಂಸ್ಕೃತ ವಾದರೇ ಕರ್ಮವು ಭಾಗವತಧರ್ಮವೆನಿಸುತ್ತದೆ, ಸಕಲಾಭೀಷ್ಟಸಾಧಕವಾಗಿ ಪರಿಣಮಿಸುತ್ತದೆ. ಈ ಸಂಸ್ಕಾರವಿಲ್ಲದ ಕರ್ಮ ಸ್ವಾಭಾವಿಕವಾಗಿ ಬಂಧಕವೇ ಆಗಿರುತ್ತದೆ.

ಇಲ್ಲಿ ಪ್ರಶ್ನೆ ಬರುತ್ತದೆ—'ದುರ್ಜನರು ಮಾಡುವ ಶಾಸ್ತ್ರವಿರುದ್ಧವಾದ ಕರ್ಮವೂ ಕೂಡ 'ಪ್ರಕ್ರಮವತ್ ಸ್ವಸತ್ಕೃತಂ' ಎಂಬ ಶ್ಲೋಕ ಹೇಳುವಂತೆ ಭಗವತ್ಪೂಜೆಯಾಗುವುದರಿಂದ ಅದೂ ಭಾಗವತ ಧರ್ಮವೆ ಎನ್ನಬೇಕಾಗು ತ್ತದೆ' ಎಂದು.

ಇದಕ್ಕೆ ಸಮಾಧಾನ—ಕರ್ಮವು ಭಾಗವತ ಧರ್ಮವಾಗಬೇಕಾದರೆ ಅದು ಭಗವತ್ಪೂಜೆಯಾದರೆ ಸಾಲದು. ಭಗವತ್ಪೂಜೆಯಾಗಲಿ ಎನ್ನುವ ಅನುಸಂಧಾನದಿಂದ ಭಕ್ತನು ಅದನ್ನು ಸಮರ್ಪಣೆ ಮಾಡಿರಬೇಕು. ಪ್ರಕೃತ ನಿಷಿದ್ಧಕರ್ಮವನ್ನು ಹಾಗೆ ಅನುಸಂಧಾನದಿಂದ ದುರ್ಜನರು ಸಮರ್ಪಣೆ ಮಾಡಿರುವುದಿಲ್ಲ. ಭಾಗವತಧರ್ಮಲಕ್ಷಣವನ್ನು ಹೇಳುವಾಗ ಹಿಂದೆ ಅದನ್ನು ಸ್ಪಷ್ಟ ಹೇಳಿದ್ದೇವೆ.

ದುರ್ಜನರಿಗೆ ಅಂಥ ಅನುಸಂಧಾನವಿರುವುದಿಲ್ಲ. ತಮ್ಮ ಪೂಜೆ ತಾವೇ ಮಾಡುತ್ತಿದ್ದೇವೆ ಎಂಬ ಅನುಸಂಧಾನದಿಂದಲೇ ದುರ್ಜನರು ಪಾಪಕರ್ಮ

ಮಾಡುತ್ತಾರೆ. ಅವರಿಗೆ ಭಗವತ್ಪೂಜೆ ಭಗವಂತನೆ ಕರ್ತ ಎಂಬ ಅನುಸಂಧಾನವೆ ಇಲ್ಲವಾದ್ದರಿಂದ ಆ ಕರ್ಮವು ಭಾಗವತ ಧರ್ಮವಾಗುವುದಿಲ್ಲ. ಪುರುಷಾರ್ಥ ಸಾಧನವೂ ಆಗುವುದಿಲ್ಲ. ತಮ್ಮ ಪೂಜೆಯಾಗಲೆಂದು ವಿಪರೀತವಾದ ಅನುಸಂಧಾನ ಅವರಿಗೆ ಇರುವುದರಿಂದ ವಿಪರೀತವಾಗಿ ಅನರ್ಥ ಸಾಧನವೇ ಆಗುತ್ತದೆ.

ಹಾಗಾದರೆ, ಸಜ್ಜನರೇ ಪಾಪಕರ್ಮವನ್ನು ಭಗವತ್ಪೂಜೆಯಾಗಲೆಂದು ಸಮರ್ಪಣ ಮಾಡಿದರೆ ಬಂಧಕವಾದ ಆ ಪಾಪಕರ್ಮವು ಈ ಸಂಸ್ಕಾರದಿಂದ ಸಂಸ್ಕೃತವಾಗಿ ಭಾಗವತಧರ್ಮವಾಗಬಹುದು. ಭಾಗವತಧರ್ಮದ ಲಕ್ಷಣ ವಾದ ಅನುಸಂಧಾನವಿದೆ ತಾನೆ? ಇಲ್ಲ, ಸಜ್ಜನರಿಗೆ ಪಾಪಕರ್ಮದಲ್ಲಿ ಅಂಥ ಅನುಸಂಧಾನ ಬರುವುದೆ ಇಲ್ಲ. ಅವರು ಪಾಪಕರ್ಮ ಮಾಡುವುದೇ ಇಲ್ಲ. ಒಂದುವೇಳೆ ಹರೀಚ್ಛೆಯಿಂದ ಪ್ರಾರಬ್ಧವಶದಿಂದ ಪಾಪಕರ್ಮ ಮಾಡಿದರೂ 'ಅಯ್ಯೋ ನಾನು ಪಾಪಮಾಡಿದೆನೆಂ'ದು ಪಶ್ಚಾತ್ತಾಪ ಪಡುತ್ತಾರೆ. ಈ ಕರ್ಮ ಹರಿಪೂಜೆಯಾಗಲೆಂದು ಅವರು ಅನುಸಂಧಾನ ಮಾಡುವುದಿಲ್ಲ ಎಂಬುದು ಈ ಪಶ್ಚಾತ್ತಾಪದಿಂದಲೇ ಸಿದ್ಧವಾಗುತ್ತದೆ.

ಪಾಪಕರವಾದ ಆ ಕರ್ಮ ಮಾಡುವಾಗ ಹಾಗೆ ಅನುಸಂಧಾನ ಬಾರದಿದ್ದರೂ, ಕರ್ಮಮಾಡಿದ ಬಳಿಕ 'ನಾನು ಮಾಡಿದ ಪಾಪಕರ್ಮ ನಿನಗೆ ಪೂಜೆಯಾಗಲೆಂ'ದು ಅನುಸಂಧಾನ ಮಾಡಿದರೆ ಅದು ಭಾಗವತಧರ್ಮ ವಾಗಲೇಬೇಕು! ಪುರುಷಾರ್ಥಸಾಧಕವಾಗಬೇಕು! ಭಾಗವತಧರ್ಮದ ಲಕ್ಷಣ ಅದರಲ್ಲಿ ಬರುತ್ತದೆ ತಾನೆ?'—ಎಂದರೆ ಇದು ಅಸಂಭವ, ಪಾಪಕರ್ಮ ಮಾಡಿದ ಮೇಲೆ, ಆ ಕರ್ಮದಲ್ಲಿ ಹಾಗೆ ಅನುಸಂಧಾನ ಸಜ್ಜನರಿಗೆ ಬರುವುದೆ ಇಲ್ಲ, ಕೇವಲ 'ಪಾಪಮಾಡಿದೆನೆಂ'ದು ಪಶ್ಚಾತ್ತಾಪವೆ ಉಂಟಾಗುವುದು. ಈ ಕರ್ಮ ಹರಿಗೆ ಇಷ್ಟವಲ್ಲದ್ದು. ಅವಿಹಿತ, ನಿಷಿದ್ಧ, ಎಂದು ಶಾಸ್ತ್ರವಚನದ ಅನುಸಂಧಾನವು ದಡ್ಡರಿಗೂ ಬರುವುದು. ಅಂಥ ಅನುಸಂಧಾನವನ್ನು ಮಾಡಲಾರದೆ, ಪ್ರಾರಬ್ಧದಿಂದ ಹರಿಪ್ರೇರಿತನಾಗಿ ಪರವಶತೆಯಿಂದ ಪಾಪಕರ್ಮ ಮಾಡುವವನು ಸಜ್ಜನನೇ ಆದರೂ ಅವನು ಕರ್ಮಮಾಡುವಾಗ 'ಹರಿಯೇ ತನಗೆ ಇಷ್ಟವಾಗಿರುವ ತನ್ನ ಪೂಜಾರೂಪವಾಗಿರುವ ಈ

ಪಾಪಕರ್ಮವನ್ನು ನನ್ನಲ್ಲಿದ್ದು ಮಾಡುತ್ತಿದ್ದಾನೆ' ಎಂಬ ಅನುಸಂಧಾನವನ್ನು ಮಾಡುವುದಿಲ್ಲ. ಆದರಿಂದಲೇ ಪಶ್ಚಾತ್ತಾಪ ಪಡುತ್ತಾನೆ ಎಂದಮೇಲೆ 'ತಾನು ಕರ್ತನಲ್ಲ ಹರಿಯೆ ಕರ್ತನೆ'ಂದು ಕರ್ಮಸಮರ್ಪಣೆಯನ್ನು ಹೇಗೆ ಮಾಡುವನು? 'ನೀರಿಳಿಯದ ಗಂಟಲೊಳಗೆ ಚಕ್ಕುಲಿಯನ್ನು ತುರುಕಿ ತಿನಿಸಿದಂತೆ' ಎಂಬ ಗಾದೆಯಂತೆ ಅವನಿಗೆ ಅಂಥ ಅನುಸಂಧಾನ ಬರುವುದೆ ಇಲ್ಲ.

'ಹಾಗಾದರೆ ವಿಹಿತಕರ್ಮವನ್ನೂ ಕೂಡ ಈ ಅನುಸಂಧಾನವಿಲ್ಲದೆ ಮಾಡಿದಾಗ ಅದು ಭಾಗವತಧರ್ಮವಾಗಲಾರದು' ಎಂದರೆ, 'ಹೌದು, ಯಾರಿಲ್ಲವೆಂದರು? ಆದರಿಂದಲೇ ಹೀಗೆ ಅನುಸಂಧಾನ ಮಾಡಿಯೇ ಕರ್ಮ ಮಾಡಬೇಕೆಂದು ಇದರಿಂದ ಸಿದ್ಧವಾಯಿತು.

'ಹೇ ಪುರುಷ! ಪರಮಪುರುಷನಾದ ಹರಿಯೆ, 'ತವ ಅಖಿಲಶಕ್ತಿಧೃತಃ' ನೀನೇ ಸರ್ವಶಕ್ತ, ಸ್ವತಂತ್ರ,' ನೀನೆ 'ಧೀಷು' ಎಲ್ಲರೊಳಗೆ ಮನ ಇಂದ್ರಿಯಗಳಲ್ಲಿ ಪ್ರೇರಕನಾಗಿ ನಿಂತು ಸ್ವತಂತ್ರನಾಗಿ ಕರ್ಮಮಾಡುತ್ತಿರುವೆ' ಎಂದು ಸ್ಪಷ್ಟವಾಗಿ ಶ್ರುತಿಗೀತೆ ಇದನ್ನು ಹೇಳುತ್ತಿದೆ.

ಯದ್ಯಪಿ ಬಲಿಚಕ್ರವರ್ತಿ ಭೂಮಿದಾನ ಕಾಲದಲ್ಲಿ ಅಸುರಾವೇಶ ಕ್ಕೊಳಗಾಗಿ ಭಕ್ತಿಯಿಲ್ಲದೆ ದಾನ ಮಾಡಿದ್ದು ಪಾಪಕರ್ಮವೆ. ಆದರೂ ವಾಮನ ಅವನನ್ನು ಬಂಧಿಸಿದಾಗ ಪಶ್ಚಾತ್ತಾಪದಿಂದ ಅದನ್ನೇ ಭಕ್ತಿಪೂರ್ವಕ ವಾಗಿ ಪೂಜೆ ಎಂದು ಅನುಸಂಧಾನ ಮಾಡಿದ. ಅದಕ್ಕೆ ಅದು ದುರಾಚಾರ ವಾಗದಿದ್ದುದರಿಂದ ಭಾಗವತಧರ್ಮದಂತೇ ಆಯಿತು. ದಾನಕಾಲದಲ್ಲಿ ಅನುಸಂಧಾನವಿಲ್ಲದ್ದರಿಂದ ಅದು ಭಾಗವತಧರ್ಮವಾಗಲಿಲ್ಲ ಎನ್ನುತ್ತಾರೆ ಅವಧೂತರು. ಆದರೂ ಭವಿಷ್ಯೋತ್ತರದಲ್ಲಿ ಮಾಧವ ಮುನಿ ಚಂಡಾಲಸ್ತ್ರೀಸಂಗ ತನಗೆ ಪ್ರಾರಬ್ಧಾನುಸಾರ ಹರಿಯ ಅನುಗ್ರಹದಿಂದ ಲಭಿಸಿದ್ದು, ಕರ್ಮಕ್ಷಯರೂಪ ಮುಕ್ತಿಸಾಧನ ಎಂದು ಸ್ವೀಕರಿಸಿದನಂತೆ. ಸ್ತುತ್ಯಧಿಕರಣ ಭಾಷ್ಯದಲ್ಲಿ 'ಧರ್ಮಸ್ವರೂಪ ಚಿತ್ರತ್ವಾತ್' ಧರ್ಮವು ನಾನಾ ಪ್ರಕಾರವಾದ್ದರಿಂದ, ಅಪರೋಕ್ಷಜ್ಞಾನಿಗಳು ಮಾಡುವ ಪಾಪಕರ್ಮವೂ ಅವರಿಗೆ ಅನುಮತವಾದ್ದ ರಿಂದ, ಧರ್ಮವೇ' ಎಂದಿದ್ದಾರೆ.

ಆದರೂ ಮಾಧವಮುನಿಯಂಥ ಸಿದ್ಧರಿಗೆ ಇಂಥ ಅನುಸಂಧಾನ ಬಂದರೂ ಮನುಷ್ಯರಾದ ನಮ್ಮಂಥ ಸಾಧಕರಿಗೆ ಇಂಥ ಅನುಸಂಧಾನ ಪ್ರಾರಬ್ಧಭೋಗ ಕಾಲದಲ್ಲಿ ಬರುವುದಿಲ್ಲ ಅವರಿಗೆ ಪಾಪಕರ್ಮಕ್ಕೆ ಅನುಮತಿ ಇಲ್ಲ ಎಂದು ಅವಧೂತರ ಅಭಿಪ್ರಾಯ ಎನ್ನಬೇಕು.

❖❖❖

–೨೯೧–

## ಎಲ್ಲ ಆಚಾರಗಳೂ ಬಿಂಬನ ಪ್ರೇರಣೆ ಎನ್ನುತ್ತಾನೆ ಧ್ರುವಕುಮಾರ

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿ ಧರಃ ಸ್ವಧಾಮ್ನಾ ।**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಂ ॥**

(ಭಾ.೪.೧೦.೬)

''ಪುರುಷ'' ಇತಿ ಸಂಬೋಧ್ಯ ''ತವಾಖಿಲಶಕ್ತಿಧೃತ'' ಇತಿ ವಿಶೇಷಿತಂ । ''ಧೀಷು'' ಇತಿ ಧೀಮಾತ್ರಗ್ರಹಣಂ ಕೃತಂ । ''ಅಂತಃ'' ಇತಿ ಪೂರ್ವಶ್ಲೋಕೇ ಉಕ್ತಂ ವಿಶದೀಕರ್ತುಮಾಹ ॥ **ಯೋಽಂತಃ ಪ್ರವಿಶ್ಯೇತಿ** ॥ ಏಕೋಽಪಿ ಅಖಿಲಶಕ್ತಿಧರಃ ಸನ್ । ತಾದೃಶಶಕ್ತಿಶಬ್ದವಾಚ್ಯೇನ ಸ್ವೇನ ಧಾಮ್ನಾ ರೂಪವಿಶೇಷೇಣ । ಏಕೈಕೇನ ಏಕೈಕಮಿತಿ । ಪ್ರಸುಪ್ತಾಂ ಸ್ವಕಾರ್ಯೇ ಅಕ್ಷಮಾಂ । ಇಮಾಂ ವಾಚಂ । ಹಸ್ತಚರಣಶ್ರವಣತ್ವಗಾದೀನ್ । ಅನ್ಯಾನ್ ಪ್ರಾಣಾನ್ ಇಂದ್ರಿಯಾಣಿ । ಅವಯವಾದೀಂಶ್ಚ । ಅಂತಃ ಪುರುಷರೂಪೇಣ ಪ್ರವಿಶ್ಯ । ಸಂಜೀವಯತಿ ತತ್ತತ್ಕಾರ್ಯಕ್ಷಮಾಣಿ ಕರೋತಿ । ತಸ್ಮೈ ತಾದೃಶರೂಪಾಯ । ಭಗವಚ್ಛಬ್ದಶಬ್ದಿತಾಯ । ಪುರುಷರೂಪಾಯ । ತುಭ್ಯಂ । ನಮೋಽಸ್ತು ತ್ವತ್ಪ್ರಾವಣ್ಯಮೇವ ಸದಾ ಭವತು ಇತಿ । ಅನೇನ ಪುರುಷರೂಪೇಣ ಅಂತಃಪ್ರವೇಶೋಕ್ತ್ಯಾ ತತ್ಪದೇನ ಸಂಬೋಧನಂ । ಶಕ್ತಿರೂಪೇಣೈವ ಪ್ರವೇಶಸ್ಯೋಕ್ತ್ಯಾಽಖಿಲಶಕ್ತಿಧೃತ ಇತಿ ವಿಶೇಷಣಂ । ಸರ್ವೇಂದ್ರಿಯೋಕ್ತ್ಯಾ ಧೀಪದಂ । ಪ್ರವಿಶ್ಯೇತಿ ಪೂರಣೇನ ಅಂತರಿತಿ ಚ ವಿಶದೀಕೃತಂ ಬೋಧ್ಯಂ ॥

❖❖❖

**ಧ್ರುವನು ಭಗವಾನ್ ವಾಸುದೇವನನ್ನು ಸ್ತುತಿಸುತ್ತಾನೆ—**

**ಸ್ತೋತ್ರಮಾಡಲು ಅಸಮರ್ಥವಾಗಿದ್ದ ನನ್ನ ವಾಗಿಂದ್ರಿಯದೊಳಗೆ ಇಂದ್ರಿಯಪ್ರೇರಕರೂಪಗಳಿಂದಲೂ ನನ್ನೊಳಗೆ ಪುರುಷರೂಪದಿಂದಲೂ ಪ್ರವೇಶಿಸಿದ್ದು ಒಬ್ಬನೆ ತನ್ನ ಬೇರೆಬೇರೆ ರೂಪಗಳಿಂದ ನನ್ನ ಬೇರೆಬೇರೆ ಇಂದ್ರಿಯ ಗಳನ್ನೂ ಹಸ್ತಾದಿ ಅವಯವಗಳನ್ನೂ ಉಜ್ಜೀವನಗೊಳಿಸುವ ಪುರುಷರೂಪಿ ಭಗವಂತನಿಗೆ ನಮಿಸುವೆನು.**

ಶ್ರುತಿಗೀತೆಯಲ್ಲಿ 'ಅಂತಃ' ಎಂದುದನ್ನು 'ಅಂತಃ ಪ್ರವಿಶ್ಯ' 'ಒಳಗೆ ಪ್ರವೇಶಿಸಿ' ಎಂದು ಅರ್ಥೈಸಿ ಪುರುಷರೂಪದಿಂದ ಒಳಗೆ ಪ್ರವೇಶಿಸಿದ್ದರಿಂದ 'ಪುರುಷ!' ಎಂದು ಸಂಬೋಧಿಸಲಾಗಿದೆ ಎಂದು ಇಲ್ಲಿ ಸ್ಪಷ್ಟಗೊಳಿಸಿದ್ದಾನೆ ಧ್ರುವಕುಮಾರ.

❖❖❖

—೨೯೨—

## ಬಿಂಬನ ಪ್ರೇರಣೆಯಿಲ್ಲದೆ ಏನೂ ಕಾರ್ಯ ನಡೆಯದೆನ್ನುತ್ತಾರೆ ನಾರದರು

**ದೇಹೇಂದ್ರಿಯಪ್ರಾಣಮನೋಧಿಯೋಽಮೀ**
**ಯದಂಶವಿದ್ಧಾಃ ಪ್ರಚರಂತಿ ಕರ್ಮಸು ।**
**ನೈವಾನ್ಯದಾ ಲೋಹಮಿವ ಪ್ರತಪ್ತಂ**
**ಸ್ಥಾನೇಷು ತದ್ ದ್ರಷ್ಟ್ರಪದೇಶಮೇಮಿ ॥**

(ಭಾ.೬.೧೬.೨೪)

ನನು ಸ್ವಸ್ವವ್ಯಾಪಾರೇಷು ವಿರಿಂಚೇನೈವ ವಾಚಾ ವಚನಮಿತ್ಯಾದಿರೂಪೇಣ ನಿಯಮಿತೇಷು ಪ್ರವರ್ತಂತ ಏವ, ಕಿಮೇತಸ್ಯಾಂತಃ ಪ್ರವೇಶೇನ। ಶಕ್ತಿಭಿಃ ಪ್ರವೇಶ ಇತಿ ಚ ನ ಜ್ಞಾಯತೇ। ಪುರುಷಸ್ಯ ಸಾಮರ್ಥ್ಯಾಭಾವೇನ ಶಕ್ತಿದ್ವಾರಾ ಕರಣೇ ಅಭಿಧೀಯಮಾನೇ ಶಕ್ತಿಮತಃ ಪ್ರವೇಶಾಪತ್ತಿರಿತ್ಯತ ಉಕ್ತಂ ವಿಶದಯತಿ ॥ **ದೇಹೇತಿ** ॥ ಅಮೀ। ಸ್ಥಾನೇಷು ಸ್ವಸ್ವಯೋಗ್ಯೇಷು। ಕರ್ಮಸು ವ್ಯಾಪಾರೇಷು। ವಿರಿಂಚೇನ ವಿರಚನಸಮಯ ಏವ ನಿಯಮಿತಾ ಅಪಿ ದೇಹಾದಯಃ। ಯಸ್ಯಾಂಶೈಃ ಸ್ವರೂಪೈಃ ವಿದ್ಧಾಃ। ಅಂತಃಶರೀರಿಭಾವೇನ ಅಧಿಷ್ಠಿತಾ ಏವ ಸ್ಥಾನೇಷು ಕರ್ಮಸು ಪ್ರಚರಂತಿ ತತ್ಕರಣಕ್ಷಮಾ ಭವಂತಿ। ಅನ್ಯದಾ ತು ನೈವ

ಭವಂತಿ। ಕುತ ಇತ್ಯತಃ ದೃಷ್ಟಾಂತೇನ ದ್ರಢಯತಿ॥ ಇವೇತಿ॥ ಯಥಾ ವಿರಿಂಚೇನ। ಸ್ಥಾನೇಷು ಸ್ವಸ್ವಯೋಗ್ಯೇಷು ಸೂಚೀಕಟಾಹಾದಿಷು ವಿಕಾರೇಷು। ವಿಕಾರಿಭಾವೇನ ಸೃಷ್ಟಿಕಾಲೇ ವಿನಿಯತಮಪಿ ಲೋಹಂ ಪ್ರತಪ್ತಂ ಪ್ರಕರ್ಷೇಣ ಪುನಃ ಪುನಃ ತತ್ತದ್ಯೋಗ್ಯತಾಪ್ರಾಪ್ತಿಪರ್ಯಂತಂ ತಪ್ತಮೇವ। ಸ್ಥಾನೇಷು ಪ್ರಚರತಿ ತದಾತ್ಮನಾ ವಿಕೃತಂ ಭವತಿ। ಇವ ಯಥೇತಿ। ತತ್ ತಾದೃಶಂ ದ್ರಷ್ಟೃಪದೇಶಂ ದ್ರಷ್ಟೃಶಬ್ದವಾಚ್ಯಂ। ಶರಣಮೇಮೀತಿ ಯೋಜನಾ।

ಇದಮುಕ್ತಂ ಭವತಿ— ಪ್ರವೇಷ್ಟವ್ಯಮೇವ ಭಗವತಾ ಭಾವಿಕಾರ್ಯ ಭಾವನಯಾ। ನ ಚ ವಿರಿಂಚೇನ ತತ್ತತ್ಕಾರ್ಯೋದ್ದೇಶೇನ ಸೃಷ್ಟಿಮಾತ್ರೇಣ ತತ್ತತ್ಕಾರ್ಯಂ ಭವಿತುಂ ಶಕ್ಯಂ। ನಿದರ್ಶನೇ ತಥಾಽದರ್ಶನಾತ್। ಅನ್ಯಥಾ ತತ್ರ ವಿನಾಪಿ ದಾಹಂ ಕಾರ್ಯೋತ್ಪಾದಪ್ರಸಂಗಾತ್। ಪ್ರವೇಶೋಽಪಿ ಭಗವತೋ ರೂಪದಾರಿದ್ರ್ಯಾಭಾವೇನ ಏಕೈಕೇನ ಸ್ವರೂಪೇಣೈವ ಏಕೈಕಂ ಅವಯವಾದಿ ಇತಿ ಕ್ರಮೇಣೈವ ತಾನ್ಯೇವ ರೂಪಾಣಿ ತತ್ತಚ್ಛಕ್ತಿಪ್ರಬೋಧಕತಯಾ ಶಕ್ತಿಶಬ್ದಶಬ್ದಿತಾನಿ ಇತಿ ನ ಶಾಕ್ತಮತಪ್ರವೇಶೋಽಪಿ ಇತಿ॥

❖❖❖

ನಾರದರು ಚಿತ್ರಕೇತುರಾಜನಿಗೆ ಉಪದೇಶಿಸಿದರು—

ದೇಹ ಇಂದ್ರಿಯ ಪ್ರಾಣ ಮನಸು ಬುದ್ಧಿಗಳು ಪರಮಾತ್ಮನ ರೂಪವಿಶೇಷಗಳಿಂದ ಪ್ರೇರಿತವಾಗಿಯೆ ತಮ್ಮತಮ್ಮ ಯೋಗ್ಯ ಕಾರ್ಯಗಳಲ್ಲಿ ತೊಡಗುತ್ತವೆ. ಕಬ್ಬಿಣವು ಬೆಂಕಿಯಲ್ಲಿ ಕಾದು ಸೂಜಿ ಕಡಾಯಿ ಮುಂತಾದ ಸ್ವಯೋಗ್ಯಕಾರ್ಯಗಳನ್ನೇ ಉಂಟುಮಾಡುತ್ತವೆ. ಪರಮಾತ್ಮನನ್ನು ದೇಹೇಂದ್ರಿಯಾದಿಗಳು ತದಭಿಮಾನಿಗಳು ಯಾರೂ ತಿಳಿಯಲಾರರು. ಅವನು ಪ್ರೇರಕನಾಗಿ ಅವುಗಳಲ್ಲಿ ನಿಂತು ಎಲ್ಲವನ್ನೂ ಸಾಕ್ಷಾತ್ ನೋಡುತ್ತಾನೆ. ಆದರಿಂದ ದ್ರಷ್ಟೃ ಎನಿಸಿದ್ದಾನೆ. ಅಂಥ ಪರಮಾತ್ಮನನ್ನು ಶರಣುಹೊಂದುತ್ತೇನೆ.

ದೇಹೇಂದ್ರಿಯಾದಿಗಳನ್ನು ಬ್ರಹ್ಮದೇವನು ಸೃಜಿಸುವಾಗಲೇ ಅವುಗಳು ಆಯಾಕಾರ್ಯಗಳಿಗೆ ಸಮರ್ಥವಾಗುವಂತೆಯೇ ಸೃಜಿಸಿದ್ದಾನೆ. ಅದಕ್ಕೆ ಪರಮಾತ್ಮನ ಪ್ರೇರಣೆ ಏಕೆ? ಅವನೇಕೆ ಅವುಗಳಲ್ಲಿ ಪ್ರವೇಶಿಸಬೇಕು ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಬೆಂಕಿಯಲ್ಲಿ ಕಾಸಿ ಬಡಿದ ಕಬ್ಬಿಣವೆ ಸೂಜಿ ಕಡಾಯಿ ಮುಂತಾದ ವಸ್ತುಗಳನ್ನು ಉತ್ಪಾದಿಸಬಲ್ಲುದು. ಆದರಿಂದ ಕಬ್ಬಿಣದಲ್ಲಿ

ಸಾಮರ್ಥ್ಯ ಮೊದಲೇ ಇದ್ದರೂ ಬೆಂಕಿಯ ಪ್ರವೇಶ ಅವಶ್ಯಬೇಕು. ಅದರಂತೆ ಪರಮಾತ್ಮನು ದೇಹೇಂದ್ರಿಯಾದಿಗಳಲ್ಲಿ ಪ್ರವೇಶಿಸಿ ಸಾಮರ್ಥ್ಯಕ್ಕೆ ಪ್ರೇರಣೆ ನೀಡಿದರೇ ಅವು ತಮ್ಮ ಕಾರ್ಯಗಳನ್ನು ಮಾಡುವುವು ಎಂದು ಸಮಾಧಾನ.

'ಅಖಿಲಶಕ್ತಿಧರಃ ಪ್ರವಿಶ್ಯ' ಎಲ್ಲ ಶಕ್ತಿಗಳನ್ನು ಪ್ರವೇಶಗೊಳಿಸಿ ಎಲ್ಲ ಕಾರ್ಯಗಳನ್ನೂ ಆಯಾ ಶಕ್ತಿಗಳಿಂದಲೇ ಮಾಡಿಸುತ್ತಾನೆ ಎಂದರೆ ಸ್ವತಃ ಪರಮಾತ್ಮನು ಸಾಮರ್ಥ್ಯವಿಲ್ಲದ್ದರಿಂದ ಶಕ್ತಿಗಳ ಮೂಲಕವೇ ಕಾರ್ಯಗಳನ್ನು ಮಾಡುವನೆಂದಂತಾಯಿತು. ಇದು ಶಾಕ್ತಮತವಾಯಿತು, ಎಂಬ ಪ್ರಶ್ನೆ ಬರುತ್ತದೆ.

ಅದಕ್ಕೆ 'ಯದಂಶ ವಿದ್ಧ' ಪರಮಾತ್ಮನ ಸ್ವರೂಪಭೂತ ಅಂಶಗಳಿಂದ ದೇಹೇಂದ್ರಿಯಾದಿಗಳು ಪ್ರವಿಷ್ಟವಾದಾಗ ಅವು ಕಾರ್ಯಕಾರಿಯಾಗುವುವು ಎನ್ನುವ ಮಾತಿನಿಂದ ಪರಮಾತ್ಮನ ಅನಂತರೂಪ ಉಳ್ಳವನಾದ್ದರಿಂದ ಅವನ ಸ್ವರೂಪವೇ ಆದ ಶಕ್ತಿರೂಪಗಳಿಂದ ದೇಹೇಂದ್ರಿಯಾದಿಗಳಲ್ಲಿ ತಾನೇ ಪ್ರವೇಶಿಸಿ ಅವುಗಳ ಶಕ್ತಿಗಳನ್ನು ಪ್ರಚೋದಿಸುತ್ತಾನೆ. ಶಕ್ತಿಪ್ರಚೋದಕವಾದ್ದರಿಂದ ಹರಿಯ ರೂಪಗಳಿಗೇ ಶಕ್ತಿ ಎಂದು ಹೆಸರು. ಹೊರತು ಹರಿಗಿಂತ ಭಿನ್ನವಾದ ಶಕ್ತಿಗಳ ಸಹಾಯವನ್ನು ಸರ್ವಶಕ್ತನು ಅಪೇಕ್ಷಿಸುವುದಿಲ್ಲ ಎಂದು 'ಅಂಶ' ಶಬ್ದದಿಂದ ಸಮಾಧಾನವನ್ನು ನೀಡುತ್ತಾರೆ.

❖❖❖

## ಇಜ್ಯಾಂಗ 'ಅವನತಿ' ಎಂಬ ಭಾಗವತ ಧರ್ಮ

ಸ್ಥೂಲ–ಸೂಕ್ಷ್ಮ ಪೂಜಾಂಗವಾದ 'ಅವನತಿ' ಅಂದರೆ ನಮನರೂಪವಾದ ೨೭ನೇ ಭಾಗವತಧರ್ಮವನ್ನು 'ನಮೋನಮಃ' (೨೯೩) ಎಂಬ ಶ್ಲೋಕದಲ್ಲಿ ತಿಳಿಸುತ್ತಾರೆ.

ಸೇವೇಜ್ಯಾವನತಿಃ ಸಖ್ಯಂ (ಭಾ.೭.೧೨.೧೧) ಎಂಬಲ್ಲಿ ಇದು ಉಕ್ತ ವಾಗಿದೆ.

❖❖❖

-೨೯೩-

## ನಮನವೂ ಒಂದು ಭಾಗವತಧರ್ಮ

ನಮೋನಮಸ್ತೇಽಸ್ತ್ವೃಷಭಾಯ ಸಾತ್ವತಾಂ
ವಿದೂರಕಾಷ್ಠಾಯ ಮುಹುಃ ಕುಯೋಗಿನಾಂ ।
ನಿರಸ್ತಸಾಮ್ಯಾತಿಶಯೇನ ರಾಧಸಾ
ಸ್ವಧಾಮನಿ ಬ್ರಹ್ಮಣಿ ರಂಸ್ಯತೇ ನಮಃ ॥

(ಭಾ.೨.೪.೧೪)

ನಿತ್ಯನಿರತಿಶಯಾನಂದಪೂರ್ಣೋಽಪಿ ಭಕ್ತಾನುಕಂಪಯಾ ಪೂಜಾಂ ಗೃಹೀತುಂ ಅತ್ರಾಗತ್ಯ ಸ್ಥಿತಃ । ಅಸ್ಯ ಭಕ್ತ್ಯಾ ಸೂಕ್ಷ್ಮಯಾ ಪೂಜಯೈವ ಪೂಜಕಾನಾಂ ಜ್ಞಾನದ್ವಾರಾ ಮುಕ್ತಿಃ । ಇತರಥಾ ನ ಭವತ್ಯೇವ । ತತಃ ಆದರೇಣ ಅನವರತಂ ಸೂಕ್ಷ್ಮಪೂಜಾ ಪೂರ್ವೋಕ್ತಾ ಕರ್ತವ್ಯಾ ಮುಮುಕ್ಷುಭಿರಿತ್ಯಾಶಯೇನ ತಸ್ಯಾಃ ಅಂಗಭೂತಂ ಅವನತಿನಾಮಾನಂ ನಮನಾಪರಪರ್ಯಾಯಂ ಭಾಗವತಧರ್ಮಮಾಹ ॥ ನಮೋ ನಮಃ ಇತಿ ॥ ಪ್ರಣಾಮೇಷು ಕರ್ತವ್ಯೇಷು ಯಥಾಶಕ್ತಿ ಬಹವ ಏವ ಕರ್ತವ್ಯಾಃ ಪೂಜಾಂಗತಯಾ ಇತಿ ಜ್ಞಾಪನಾಯ ತ್ರಿರ್ವಚನಂ । ಮನೋವೃತ್ತೇಃ ತತ್ಪ್ರಾವಣ್ಯಂ, ವಚಸಾ ನಾರಾಯಣಾಯ ನಮ ಇತ್ಯುದೀರಣಂ, ಸಾಷ್ಟಾಂಗತಯಾ ಕಾಯಸ್ಯ ಅವನತಿರಿತಿ ತ್ರಿವಿಧಮಪಿ ಕರ್ತವ್ಯಮಿತಿ ವಾ। ಸಾತ್ವತಾಂ ಪಂಚರಾತ್ರೋದಿತಪ್ರಕಾರೇಣ ಭಗವತಃ ಸೂಕ್ಷ್ಮಪೂಜಾಂ ಕುರ್ವತಾಂ ಕರ್ಮಕುಶಲಾನಾಂ ಯೋಗಿನಾಂ । ಋಷಂ ಜ್ಞಾನಂ ಉಪಲಕ್ಷಣಮೇತತ್ । ಜ್ಞಾನಾದಿರಪೇಕ್ಷಿತಾರ್ಥೋ ದಾತೃತಯಾ ಅಸ್ಯಾಸ್ತೀತಿ ಋಷಭಃ ತಸ್ಮೈ । ಕುಯೋಗಿನಾಂ ಇಂದ್ರಿಯಜಯರಹಿತಾನಾಂ । ಕರ್ಮಸು ಅಕುಶಲಾನಾಂ ವಾ ಯೋಗಿನಾಂ । ಬಹುಭಿರಪಿ ಜನ್ಮಭಿಃ ಅಜ್ಞೇಯಸ್ವರೂಪಾಯ । ಸಾಮ್ಯಾತಿಶಯರಹಿತೇನ ಸ್ವಮಹಿಮ್ನಾ। ಸ್ವಪ್ರಕಾಶೇ ಪೂರ್ಣೇ ಸ್ವಸ್ಮಿನ್ನೇವ ವಿಹರಮಾಣಾಯ ಪರಸ್ಮೈ। ನಮೋ ನಮೋ ನಮ ಇತಿ ತ್ರಿರುಕ್ತಿಃ। ಅತ್ರ ಪ್ರಣಾಮೇ ಶ್ಲೋಕಾಃ ಷೋಡಶಪರ್ಯಂತಾ ಅತ್ರೈವ ಸಂತಿ । ಅಧಿಕೇಚ್ಛಾಯಾಂ ಭಾಗವತೋಕ್ತಾಃ ಅಸ್ಮಾಭಿಃ ನಮಃಪ್ರಕರಣೇ ನಿಬದ್ಧಾಃ ದ್ರಷ್ಟವ್ಯಾಃ ॥

❖❖❖

ಶುಕಮುನಿ ಮಂಗಳಾಚರಣ ಮಾಡುತ್ತ ಹರಿಯನ್ನು ನಮಿಸುತ್ತಾರೆ—

**ಸಾತ್ವತರಿಗೆ ಅಂದರೆ ಪಾಂಚರಾತ್ರಾಗಮದಲ್ಲಿ ಹೇಳಿದಂತೆ ಭಗವಂತನ ಸೂಕ್ಷ್ಮಪೂಜೆ ಮಾಡುವವರಿಗೆ ಮತ್ತು ಕರ್ಮಕುಶಲರಾದ ಯೋಗಿಗಳಿಗೂ 'ಋಷಭ'ನು ಶ್ರೀಹರಿ. 'ಋಷ' ಜ್ಞಾನ. 'ಭ' ಉಳ್ಳವನು ಜ್ಞಾನಾದಿದಾಯಕ ಎಂದರ್ಥ. ಇಂದ್ರಿಯ ಜಯರಹಿತರಾದ, ಕರ್ಮಕೌಶಲ್ಯವಿಲ್ಲದ ಕುಯೋಗಿ ಗಳಿಗೆ ಬಹುಜನ್ಮಗಳಿಂದಲೂ ತಿಳಿಯಲಾಗದವನು. 'ಸ್ವಧಾಮ' ಸ್ವಪ್ರಕಾಶನಾದ ಪುರುಷರಲ್ಲಿಯೇ ವಿಹರಿಸುವ ಪರಮಾತ್ಮನಿಗೆ ನಮೋನಮೋನಮಃ ಪೂಜಾಂಗವಾಗಿ ಬಹುನಮನಗಳನ್ನೇ ಮಾಡಬೇಕೆಂದು 'ನಮೋ ನಮೋ ನಮಃ' ಮೂರು ಬಾರಿ ನಮನಗಳೆಂದಿದ್ದಾರೆ.**

ಭಕ್ತರ ಮೇಲಿನ ದಯೆಯಿಂದಲೇ ಪೂಜೆಯನ್ನು ಸ್ವೀಕರಿಸಲು ಬಂದ ಭಗವಂತನಿಗೆ ಆದರದಿಂದ ಹಿಂದೆ ಹೇಳಿದ ಅಂಗೋಪಾಂಗಭೂಷಣಾಯುಧ ಸಮೇತವಾದ ಸೂಕ್ಷ್ಮಪೂಜೆ ಸದಾ ಮಾಡಿದರೇ ಜ್ಞಾನದ್ವಾರಾ ಮುಕ್ತಿ ನೀಡು ತ್ತಾನೆ. ಆದರಿಂದ ಸೂಕ್ಷ್ಮಪೂಜೆ ಮಾಡಿ ಅದರ ಅಂಗವಾಗಿ ಯಥಾಶಕ್ತಿ ಅನೇಕ 'ಅವನತಿ' ನಮಸ್ಕಾರ ಮಾಡಬೇಕು ಎಂಬ ಅಭಿಪ್ರಾಯದಿಂದ ಮೂರುಬಾರಿ 'ನಮಃ' ಶಬ್ದವನ್ನು ಶುಕಮುನಿ ಹೇಳಿದ್ದಾರೆ.

ಮನದಲ್ಲಿ ನಾರಾಯಣನನ್ನು ಚಿಂತಿಸಬೇಕು. ಮಾತಿನಲ್ಲಿ 'ನಾರಾಯಣಾಯ ನಮಃ' ಎನ್ನಬೇಕು. ಕಾಯದಲ್ಲಿ ಅಷ್ಟಾಂಗಪೂರ್ವಕವಾಗಿ ನಮಿಸಬೇಕು. ಹೀಗೆ ಮೂರು ಬಗೆ ನಮನವನ್ನು ತಿಳಿಸುವ ಅಭಿಪ್ರಾಯ ದಿಂದಲೂ ಮೂರು ಬಾರಿ 'ನಮಃ' ಶಬ್ದವನ್ನು ಹೇಳಿದ್ದಾರೆ.

'ನಮಸ್ಕಾರ ಮಂತ್ರಗಳು ಭಾಗವತದಲ್ಲಿ ಬಂದವುಗಳು ಇಲ್ಲಿಯೇ ಹದಿನಾರು ಇವೆ. ಇನ್ನೂ ಹೆಚ್ಚು ಭಾಗವತೋಕ್ತ ನಮನಮಂತ್ರಗಳು ಬೇಕೆಂದರೆ ನಮಃಪ್ರಕರಣದಲ್ಲಿ ನಾವು ಸಂಗ್ರಹಿಸಿದವುಗಳನ್ನು ನೋಡಬಹುದು' ಎನ್ನುತ್ತಾರೆ ಅವಧೂತರು.

❖❖❖

## ೨೭-೨೮ ಕೀರ್ತನ–ಸೇವಾ ಧರ್ಮಗಳು

### –೨೯೪–

**ಕೀರ್ತನ ಮತ್ತು ಸೇವಾ ಎಂಬ ಭಾಗವತಧರ್ಮಗಳು**

**ಯತ್‌ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ**
**ಯದ್ ವಂದನಂ ಯತ್‌ಸ್ಮರಣಂ ಯದರ್ಹಣಂ ।**
**ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ**
**ತಸ್ಮೈ ಸುಭದ್ರಶ್ರವಸೇ ನಮೋನಮಃ ॥**

(ಭಾ.೨.೪.೧೫)

**ಕೀರ್ತನಾಖ್ಯಂ ತಥಾ ಸೇವಾಖ್ಯಂ ಭಾಗವತಂ ಧರ್ಮಂ ಅರ್ಹಣಾ ಪರನಾಮಕಂ ಪೂಜೋಪಯೋಗಿಭೂತಂ ಹರಿಮಂದಿರಮಾರ್ಜನಾದಿರೂಪಂ ಭಾಗವತಂ ಧರ್ಮಂ ಸರ್ವದಾ ಕಾರ್ಯಂ ಪೂಜಾಕಾಲೇ ಹಿ ಅವಶ್ಯ ಕಾರ್ಯತಾಜ್ಞಾಪನಾಯ ಫಲವಿಶೇಷೋಕ್ತಿಪೂರ್ವಕಂ ದರ್ಶಯತಿ । ಯತ್ಕೀರ್ತನಮಿತಿ ॥ ಯಸ್ಯ ಕೀರ್ತನಾದಿ ಲೋಕಸ್ಯ ಕಲ್ಮಷಂ ಸದ್ಯ ಏವ ವಿಧುನೋತಿ ತಸ್ಮೈ ಪರಮಪಾವನಕೀರ್ತಯೇ ನಮೋ ನಮ ಇತಿ ಆದರಾದ್ ದ್ವಿರ್ವಚನಂ ॥**

❖❖❖

**ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—**

**ಮಂಗಳ ಕೀರ್ತಿಶಾಲಿಯಾದ ಹರಿಯ ಕಥೆಯನ್ನು ಹೇಳುವುದು ಕೇಳುವುದು ಅವನ ಮೂರ್ತಿಯ ದರ್ಶನ ಮಾಡುವುದು, ನಮಿಸುವುದು ಸ್ಮರಿಸುವುದು ಪೂಜಿಸುವುದು ಎಲ್ಲವೂ ಲೋಕದ ಪಾಪವನ್ನು ಒಡನೆ ಪರಿಹರಿಸುವುದು. ಅಂಥ ಹರಿಗೆ ನಮೋನಮಃ.**

'ಕೀರ್ತನ'ವೆಂಬ ೨೭ನೇ ಭಾಗವತಧರ್ಮವನ್ನೂ 'ಸೇವಾ' ಎಂದೂ 'ಅರ್ಹಣ' ಎಂದೂ ಕರೆಸುವ ಮಂದಿರಮರ್ಜನಾದಿ ರೂಪವಾದ ೨೮ನೇ ಭಾಗವತಧರ್ಮವನ್ನೂ ಸರ್ವದಾ ಮಾಡಬೇಕು. ಪೂಜಾಕಾಲದಲ್ಲಿ ಅವಶ್ಯ ಮಾಡಬೇಕು. 'ಅರ್ಹಣ' ಎಂದರೆ ಸೇವೆ. ಪೂಜೋಪಯುಕ್ತವಾಗಿ ದೇವಾಲಯವನ್ನು ಗುಡಿಸಿ ಸಾರಿಸುವುದು ಮುಂತಾದುವನ್ನು ತಪ್ಪದೇ

ಮಾಡಬೇಕು. ಅದಕ್ಕೆ ಪಾಪ ಪರಿಹಾರರೂಪವಾದ ವಿಶೇಷಫಲವಿದೆ ಎಂದು ಶುಕಮುನಿ ಇಲ್ಲಿ ಹೇಳುತ್ತಿದ್ದಾರೆ.

ಶ್ರವಣಂ ಕೀರ್ತನಂ ಚಾಸ್ಯ ...ಸೇವೇಜ್ಯಾವನತಿಃ ಸಖ್ಯಂ ॥

(ಭಾ.೭.೧೨.೧೧)

ಎಂದು ಇದು ಉಕ್ತವಾಗಿದೆ.

❖❖❖

—೨೯೫—

## ಭಕ್ತರು ಮಾಡುವ ಪೂಜೆಯನ್ನು ಭಕ್ತರಿಗಾಗಿಯೇ ಹರಿ ಸ್ವೀಕರಿಸುತ್ತಾನೆ

**ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ**
**ಮಾನಂ ಜನಾದವಿದುಷಃ ಕರುಣೋ ವೃಣೀತೇ ।**
**ಯದ್ಯಜ್ಜನೋ ಭಗವತೇ ವಿದಧೀತ ಮಾನಂ**
**ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ॥** (ಭಾ.೭.೯.೧೧)

ನನು ಜನೇನ ಕ್ರಿಯಮಾಣಾಂ ಪೂಜಾಂ ಭಗವಾನ್ ಸ್ವೀಕರೋತಿ ನ ವಾ । ಆದ್ಯೇ ಯತ್ಪ್ರಯೋಜನಾಯ ಸ್ವೀಕರೋತಿ ತಸ್ಯ ನ್ಯೂನತ್ವಾದಪೂರ್ಣತಾ । ದ್ವಿತೀಯೇ ವ್ಯರ್ಥೋಽಯಂ ಪೂಜಾಸಮಾರಂಭ ಇತ್ಯತ ಆಹ ॥ **ನೈವೇತಿ** ॥ ಜನೋ ದ್ವಿವಿಧಃ । ವಿದ್ವಾನವಿದ್ವಾಂಶ್ಚೇತಿ । ತತ್ರ ಅವಿದ್ವದ್ವಿಷಯೇ ತಾವದುತ್ತರಂ ವಕ್ತಿ । ಅವಿದುಷೋ ಮಾನಂ ನೈವ ವೃಣೀತೇ ನೈವ ಸ್ವೀಕುರುತೇ । ಅನೇನೈವ ವಿದುಷೋ ವಿಷಯೇಽಪಿ ಉತ್ತರಂ ಸೂಚಿತಂ ಭವತಿ । ವಿದುಷಸ್ತು ವೃಣೀತೇ ನ ವೃಣೀತೇ ಚೇತಿ । ನನು ವಿರುದ್ಧಮುಭಯಂ ಕಥಂ ಯುಜ್ಯತ ಇತ್ಯತಃ ಅಭಿಸಂಧಿ ಮುದ್ಘಾಟಯತಿ । **ಆತ್ಮನೋಽರ್ಥೇ ನ ವೃಣೀತ ಇತಿ** ॥ ಸ್ವಸ್ಯ ಅಪ್ರಾಪ್ತಾರ್ಥ ಪ್ರಾಪ್ತಯೇ ನ ಸ್ವೀಕರೋತಿ । ಕುತ ಇತ್ಯತ ಉಕ್ತಂ ॥ **ನಿಜಲಾಭೇನ ಪೂರ್ಣ ಇತಿ** ॥ ಅತ ಏವ ಪ್ರಭುಃ ಸ್ವತಂತ್ರಃ । ಏವಂ ನ ವೃಣೀತ ಇತ್ಯುಪಪಾದ್ಯ, ವೃಣೀತೇ ಚ ಇತ್ಯೇತದುಪಪಾದಯತಿ ॥ **ಯದ್ಯದಿತಿ** ॥ ತತ್ಸರ್ವಮಪಿ । ಆತ್ಮನೇ ಆತ್ಮಾರ್ಥಂ ಸ್ವಪುರುಷಾರ್ಥಪ್ರಾಪ್ತಯ ಏವ ಭವತಿ । ಪೂಜಾಯಾಮಾದರಜನನಾಯ ಬಿಂಬಪ್ರತಿಬಿಂಬ ಭಾವಸ್ಮರಣಾಯ ಚ ದೃಷ್ಟಾಂತಮುಖೇನ ದರ್ಶಯತಿ ॥ **ಯಥೇತಿ** ॥ ಯಥಾ ಮುಖಸ್ಯ ಕೃತಾ ಶ್ರೀಃ ಅಲಂಕಾರಃ ಸರ್ವೋಽಪಿ ಪ್ರತಿಮುಖಸ್ಯ ವಿದ್ಯಮಾನೋ ಭವತಿ ತಥೇತಿ । ಯದ್ಯದಾಂದೋಲಿಕಂ

ಸ್ವಸ್ಯಾಪೇಕ್ಷಿತಂ ತೇನ ಸಮಸ್ತೇನಾಪಿ ಪೂಜಾಸಾಧನದ್ರವ್ಯೇಣ ಆದರೇಣ ಅನವರತಂ ಬಿಂಬಪೂಜೈವ ಕರ್ತವ್ಯಾ ಇತಿ ಸೂಚನಾಯ ಪರಪ್ರಯೋಜನಾಯ ಸ್ವೀಕರೋತೀತ್ಯಭಿಸಂಧ್ಯುದ್ಘಾಟನೇನ ಉಭಯಂ ನ ವಿರುದ್ಧಮಿತಿ ಸೂಚಿತಂ ಭವತಿ। ನನು ಸ್ವಪ್ರಯೋಜನಾರ್ಥೇ ನ ಸ್ವೀಕರೋತೀತ್ಯೇತದುಭಯತ್ರ ಸಮಂ ಪರಪ್ರಯೋಜನಾರ್ಥಂ ಸ್ವೀಕರೋತೀತಿ ಚ। ಸತಿ ಚೈವಂ ಅವಿದುಷೋ ನೈವ ಸ್ವೀಕರೋತಿ। ವಿದುಷಸ್ತು ನ ಸ್ವೀಕರೋತಿ ಸ್ವೀಕರೋತೀತಿ ವಿಶೇಷೋಕ್ತಿಃ ಕಥಮಿತಿ ಚೇತ್ ಉಚ್ಯತೇ। ಭೋಗ್ಯಂ ತಾವದ್‌ದ್ವಿವಿಧಂ। ಭಗವದಾತ್ಮಕಂ ತತೋಽನ್ಯಚ್ಚೇತಿ। ಅನ್ಯದಪಿ ದ್ವಿವಿಧಂ। ಅಪ್ರಾಕೃತಂ ಪ್ರಾಕೃತಂ ಚೇತಿ। ಪ್ರಾಕೃತಮಪಿ ತ್ರಿವಿಧಂ। ಉತ್ತಮಂ ಮಧ್ಯಮಮಧಮಮಿತಿ। ತತ್ರ ಯದ್ರೂಪಗಂಧರಸೋಪೇತಂ ತದುತ್ತಮಂ। ರೂಪೇಣ ನಯನಯೋಃ, ಗಂಧೇನ ಘ್ರಾಣಸ್ಯ, ರಸೇನ ಜಿಹ್ವಾಯಾಶ್ಚ ಆಹ್ಲಾದಕಾರಿತಯಾ ತ್ರಿವಿಧಭೋಗಭೋಗ್ಯತ್ವಾತ್। ಯಚ್ಚ ಗಂಧರಸೋಪೇತಂ ಯದ್ವಾ ರೂಪರಸೋಪೇತಂ ಯದಪಿ ರೂಪಗಂಧೋಪೇತಂ ತನ್ಮಧ್ಯಮಂ। ಭೋಗದ್ವಯಯೋಗ್ಯತ್ವಾತ್। ಯದೇಕೈಕೋಪೇತಂ ತದಧಮಂ। ಏಕೈಕಭೋಗಯೋಗ್ಯತ್ವಾತ್। ತತ್ರ ಆತ್ಮಾರ್ಥಂ ಅವಿದುಷೋ ಜನಾದಿವ ವಿದುಷೋಽಪಿ ಸ್ವೀಕರಣಂ ನಾಸ್ತ್ಯೇವ। ತಥಾ ಪೂರ್ಣತ್ವಹಾನಿಸಾಮ್ಯಾತ್। ಅನೇನೈವಾಭಿಪ್ರಾಯೇಣ ನ ಸ್ವೀಕರೋತೀತ್ಯುಚ್ಯತೇ। ಪರಪ್ರಯೋಜನಾರ್ಥಂ ತು ಸ್ವೀಕರಣಂ ವಿದುಷೋ ಜನಾದೇವ। ಸ ಹಿ ಜನೋ ರೂಪಗಂಧಾದ್ಯಾತ್ಮಕಂ ಭಗವದ್ರೂಪಂ ತದನ್ಯತ್ ಅಪ್ರಾಕೃತಂ ಪ್ರಾಕೃತಂ ಚೇತಿ ಸರ್ವಮಪಿ ಸಮರ್ಪಯತಿ, ಸ್ವೀಕುರುತೇ ಚ ಭಗವಾನ್। ತತ್ರ ಸ್ವೀಕಾರೋಽನೇಕವಿಧಃ ಭಗವದಾತ್ಮಕಸ್ಯ ಭೋಗ್ಯಸ್ಯ ಅನುಭವಃ ಮುಖ್ಯೋ ಭೋಗಃ।ಅನ್ಯಸ್ಯ ಅಪ್ರಾಕೃತಸ್ಯ ಸ್ವಮುಖ್ಯಭೋಗ್ಯಂ ಪ್ರತಿ ಮುಖ್ಯತಃ ಅಧಿಷ್ಠಾನತ್ವೇನ ಅನುಮೋದನಮೇವ। ಸ ತು ಮಧ್ಯಮೋ ಭೋಗಃ। ಪ್ರಾಕೃತಸ್ಯ ತು ಸ್ವಮುಖ್ಯಭೋಗ್ಯಂ ಪ್ರತಿ ಅಪ್ರಾಕೃತಾದಪಿ ಅಮುಖ್ಯತಃ ಅಧಿಷ್ಠಾನತಯಾ ಅನುಮೋದನಂ ಸ ತು ಅಧಮಃ। ಏವಂ ತ್ರಿವಿಧಮಪಿ ಭೋಗ್ಯಂ ವಿದುಷೋ ಜನಾತ್ಸ್ವೀಕುರುತ ಇತಿ ಪರಪ್ರಯೋಜನಾಯ ಸ್ವೀಕರೋತೀತಿ ಚ ವಿಶೇಷೋಕ್ತಿರ್ಯುಜ್ಯತೇ। ಅವಿದುಷೋ ಜನಾತ್ತು ತ್ರಿವಿಧಭೋಗ್ಯಸ್ಯ ಭೋಗ ರೂಪಂ ಸ್ವೀಕರಣಂ ನಾಸ್ತ್ಯೇವ। ತೇನ ಅಸಮರ್ಪಣಾತ್। ಸಮರ್ಪಣೇನೈವ ಪ್ರಸನ್ನೋ ಭಗವಾನ್ ಫಲಂ ಯಚ್ಛತಿ। ಯದ್ಯಪಿ ಭಗವದಾತ್ಮಕಸ್ಯ ತದನ್ಯಸ್ಯ ಅಪ್ರಾಕೃತಸ್ಯ ಚ ಅಜ್ಞಾನಾದಿನಾ ಸಮರ್ಪಣಾಭಾವೇಽಪಿ ಪ್ರಾಕೃತಂ

ಸಮರ್ಪಯತ್ಯೇವ ಸ್ವೀಕುರುತೇ ಚ ಭಗವಾನ್ । ತಥಾಪಿ ತಸ್ಯ ಅತ್ಯಲ್ಪತ್ವೇನ ಅವಿವಕ್ಷಿತತಯಾ ಸ್ವಲ್ಪಾನ್ನಸ್ಯ ಭೋಕ್ತರಿ ಭೋಜನಾಭಾವವ್ಯವಹಾರವತ್ ಅಭೋಗಂ ವಿವಕ್ಷಿತ್ವಾ ನ ಸ್ವೀಕುರುತ ಇತ್ಯುಚ್ಯತೇ । ತಥಾ ಚ ಆತ್ಮಾರ್ಥಂ ಪರಾರ್ಥಂ ವಾ ನ ಸ್ವೀಕುರುತ ಇತಿ ನೈವ ಸ್ವೀಕುರುತ ಇತಿ ವಿಶೇಷೋಕ್ತಿ-ರ್ಯುಜ್ಯತೇ ಇತಿ । ಸಮರ್ಪಣಾಭಾವೇಽಪಿ ಭೋಗಸ್ತು ಹರೇರ್ಭವತ್ಯೇವ । ಪರಂತು ಭೋಗ್ಯಪದಾರ್ಥಸ್ವಾಮಿನಃ ಫಲಂ ನಾಸ್ತಿ । ಸಮರ್ಪಣೇನೈವ ಪ್ರಸನ್ನೋ ಭಗವಾನ್ ಫಲಂ ಯಚ್ಛತೀತ್ಯುಕ್ತಂ । ಪ್ರಸಾದೋಽಪಿ ರಾಜಪ್ರಸಾದ ಇವ ನಿವೇದನೀಯಪದಾರ್ಥತಾರತಮ್ಯಾನುಸಾರೀ । ಫಲಂ ಚ ಪ್ರಸಾದಾನುರೂಪ ಮಿತಿ ಪ್ರಸಿದ್ಧಮೇವೇತಿ । ಕಿಂ ವಕ್ತವ್ಯಂ ವಿದ್ವದವಿದ್ವತ್ಪ್ರಸಾದ ಫಲಯೋರ್ಮಹದಂತರಮಿತಿ ಇತಿ ಭಾವೇನ ಭಕ್ತಾನುಗ್ರಹೋನ್ಮುಖತ್ವಂ ಪರಮದಯಾ ಲೋರ್ಹರೇಃ ಸ್ವಭಾವ ಇತ್ಯಾಹ । ಕರುಣ ಇತಿ ॥

❖❖❖

ಪ್ರಹ್ಲಾದನು ಶ್ರೀನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—

ಜನರು ಮಾಡುವ ಪೂಜೆಯನ್ನು ಭಗವಂತನು ಸ್ವೀಕರಿಸುವನೆ ಇಲ್ಲವೆ? ಸ್ವೀಕರಿಸುವನೆಂದರೆ ಅದರಿಂದ ಅವನಿಗೆ ಪ್ರಯೋಜನವಾಗಬೇಕಿದೆ ಎಂದಾಗುವುದರಿಂದ ಅವನು ಪೂರ್ಣನಲ್ಲ. ಸ್ವೀಕರಿಸುವುದಿಲ್ಲವೆಂದರೆ ನಾವು ಪೂಜೆ ಮಾಡುವುದು ವ್ಯರ್ಥವೆಂದಾಗುವುದು ಎಂಬ ಸಮಸ್ಯೆ. ವಸ್ತುತಃ ಇಲ್ಲ ಎನ್ನುತ್ತಾನೆ ಪ್ರಹ್ಲಾದ. ಭಗವಂತನು ಅಜ್ಞರು ಮಾಡುವ ಪೂಜೆಯನ್ನು ಸ್ವೀಕರಿಸುವುದಿಲ್ಲ. ವಿದ್ವಾಂಸರ ಪೂಜೆಯನ್ನು ಯದ್ಯಪಿ ಸ್ವೀಕರಿಸುತ್ತಾನೆ. ಆದರೆ ತನ್ನ ಪ್ರಯೋಜನ ಲಾಭಕ್ಕಾಗಿ ಸ್ವೀಕರಿಸುವುದಿಲ್ಲ. ಏಕೆಂದರೆ ಅವನು 'ನಿಜಲಾಭಪೂರ್ಣ' ತನ್ನ ಸ್ವರೂಪಭೂತ ಆನಂದಾದಿ ಸರ್ವಗುಣಗಳಿಂದಲೂ ಪರಿಪೂರ್ಣನಾಗಿದ್ದು ಎಲ್ಲರಿಗೂ 'ಪ್ರಭು' ನಿಯಾಮಕನಾಗಿದ್ದಾನೆ. ಸರ್ವವ್ಯಾಪ್ತನಾಗಿದ್ದಾನೆ. ಹಾಗಾದರೆ ಅವನು ಪೂಜೆಯನ್ನು ಸ್ವೀಕರಿಸುವುದೇಕೆ ಎಂದರೆ 'ಯತ್ ಯತ್ ಜನೋ ವಿದಧೀತ ಮಾನಂ' ಜನರು ಏನೇನು ಪೂಜೆ ಮಾಡುವರೋ ಅದು 'ಆತ್ಮನೇ' ಆ ಜನರಿಗಾಗಿಯೆ ಅವರ ಪುರುಷಾರ್ಥ ಲಾಭಕ್ಕಾಗಿಯೇ ಭಗವಂತನಿಗೆ ಇಷ್ಟವಾಗುತ್ತದೆ. ಇದಕ್ಕೆ ದೃಷ್ಟಾಂತವೇನೆಂದರೆ, 'ಮುಖಶ್ರೀಃ ಪ್ರತಿಮುಖಸ್ಯ' ಮುಖಕ್ಕೆ ಅಲಂಕಾರ ಮಾಡಿದರೆ ಪ್ರತಿಬಿಂಬವು

**ಸುಂದರವಾಗಿ ಕಾಣುವುದು. ಹಾಗೇ ಬಿಂಬನಾದ ಹರಿಯ ಪೂಜೆಯಿಂದ ಪ್ರತಿಬಿಂಬನಾದ ಪೂಜಕನಿಗೇ ಪುರುಷಾರ್ಥಲಾಭ.**

ಪೂಜಕನು ತನಗೆ ಅಪೇಕ್ಷಿತವಾದ ಸುಖಸಾಧನ ಪದಾರ್ಥಗಳಿಂದ ತನ್ನನ್ನೇ ಪೂಜಿಸಿಕೊಳ್ಳದೆ, ತನ್ನ ಬಿಂಬನಾದ ಭಗವಂತನನ್ನು ಪೂಜಿಸಬೇಕು. ಬಿಂಬನು ತೃಪ್ತನಾದರೆ ಪ್ರತಿಬಿಂಬನಾದ ಪೂಜಕನಿಗೇ ತೃಪ್ತಿರೂಪ ಪ್ರಯೋಜನಲಾಭ. ಹೀಗೆ ಪ್ರತಿಬಿಂಬರಾದ ಪರರ ಪ್ರಯೋಜನಕ್ಕಾಗಿಯೇ ಪರಮಾತ್ಮನು ಪೂಜೆಯನ್ನು ಸ್ವೀಕರಿಸುತ್ತಾನೆ, ತನ್ನ ಪ್ರಯೋಜನಕ್ಕಾಗಿ ಅಲ್ಲ.

ಪರಪ್ರಯೋಜನಕ್ಕಾಗಿಯೇ ಪರಮಾತ್ಮನು ಪೂಜೆಯನ್ನು ಸ್ವೀಕರಿಸುವುದಾದರೆ ಅಜ್ಞರ ಪ್ರಯೋಜನಕ್ಕಾಗಿಯೇ ಅಜ್ಞರ ಪೂಜೆಯನ್ನೂ ಕೂಡ ಅವನು ಏಕೆ ಸ್ವೀಕರಿಸುವುದಿಲ್ಲ?

ಈ ಪ್ರಶ್ನೆಗೆ ಸಮಾಧಾನ ಹೇಳಬೇಕೆಂದರೆ, ಮೊದಲಿಗೆ ಪೂಜೆಯಲ್ಲಿ ಅರ್ಪಿಸುವ ಭೋಗ್ಯಪದಾರ್ಥ ಎರಡು ಬಗೆ ಎಂಬುದನ್ನು ತಿಳಿಯಬೇಕು. ಭಗವತ್ ಸ್ವರೂಪ ಮತ್ತು ಅವನಿಗಿಂತ ಭಿನ್ನ ಎಂದು ಎರಡು ಬಗೆ ಭೋಗ್ಯಗಳಿವೆ.

ಭಿನ್ನವೂ ಎರಡು ಬಗೆ. ಅಪ್ರಾಕೃತ ಮತ್ತು ಪ್ರಾಕೃತ ಎಂದು. ಪ್ರಾಕೃತವೂ ಮೂರು ಬಗೆ ಇದೆ. ಉತ್ತಮ ಮಧ್ಯಮ ಮತ್ತು ಅಧಮ ಎಂದು.

ರೂಪ–ರಸ–ಗಂಧಯುಕ್ತವಾದುದು ಉತ್ತಮ. ಏಕೆಂದರೆ ಅದು ರೂಪದಿಂದ ಕಣ್ಣಿಗೆ, ರಸದಿಂದ ಜಿಹ್ವೆಗೆ, ಗಂಧದಿಂದ ಘ್ರಾಣಕ್ಕೆ ಎಂದು ಮೂರು ಬಗೆ ಭೋಗಕ್ಕೆ ಕಾರಣವಾಗುತ್ತದೆ. ಗಂಧ–ರಸ ಯುಕ್ತವಾದುದು, ಅಥವಾ ರೂಪ–ರಸಯುಕ್ತವಾದುದು, ಅಥವಾ ರೂಪ-ಗಂಧಯುಕ್ತವಾದುದು ಮಧ್ಯಮ, ಇದು ಎರಡು ಬಗೆಯ ಭೋಗಕ್ಕೆ ಕಾರಣವಾಗುವುದು.

ರೂಪ-ರಸ-ಗಂಧಗಳಲ್ಲಿ ಯಾವುದಾದರೊಂದೇ ಇದ್ದರೆ, ಒಂದೇ ಬಗೆಯ ಭೋಗವನ್ನು ನೀಡುವುದರಿಂದ, ಅಧಮ ಎನಿಸುವುದು.

ಶ್ರೀಹರಿ ಸ್ವಾಖ್ಯರಸವನ್ನು ಉಣುವುದು ಮುಖ್ಯಭೋಗ. ಇತರ ಅಪ್ರಾಕೃತರಸವು ಸ್ವಾಖ್ಯರಸಕ್ಕೆ ಅಧಿಷ್ಠಾನವಾಗುವುದರಿಂದ ಅದನ್ನು ಅನುಮೋದಿಸುವುದು ಮಧ್ಯಮಭೋಗ. ಪ್ರಾಕೃತರಸವು ಅವೆರಡಕ್ಕೂ ಅಧಿಷ್ಠಾನವೆಂದು ಅನುಮೋದಿಸುವುದು ಅಧಮಭೋಗ. ಈ ಯಾವ ಭೋಗವನ್ನೂ

ಕೂಡ ಶ್ರೀಹರಿ ಅಜ್ಞರಿಂದ ಹೇಗೋ ಹಾಗೇ ಜ್ಞಾನಿಗಳಿಂದಲೂ ಕೂಡ, ತನಗಾಗಿ ಸ್ವೀಕರಿಸುವುದಿಲ್ಲ. ಏಕೆಂದರೆ ಅವನು ನಿತ್ಯತೃಪ್ತ.

ಪರರ ಪ್ರಯೋಜನಕ್ಕಾಗಿ ಸ್ವೀಕರಿಸುವುದು ಜ್ಞಾನಿಗಳಿಂದ ಮಾತ್ರ. ಏಕೆಂದರೆ ಜ್ಞಾನಿಗಳು ರೂಪ ರಸ ಗಂಧ ಸ್ವರೂಪವಾದ ಭಗವತ್ಸ್ವರೂಪ ಸ್ವಾಖ್ಯರಸವನ್ನೂ, ಭಗವತ್ಸ್ವರೂಪವಲ್ಲದ ತತ್ವಾಭಿಮಾನಿ ದೇವತಾಸ್ವರೂಪವಾದ ಅಪ್ರಾಕೃತರಸವನ್ನೂ, ಪ್ರಾಕೃತರಸವನ್ನೂ ಎಲ್ಲವನ್ನೂ ಸಮರ್ಪಿಸುತ್ತಾರೆ.

ಭಕ್ತರು ಸಮರ್ಪಿಸಿದರೆ ಭಕ್ತರ ಸಂತೋಷಕ್ಕಾಗಿ ಭಕ್ತರ ಮಹಾಪುರುಷಾರ್ಥಲಾಭಕ್ಕಾಗಿಯೇ ದಯೆಯಿಂದ ಭಗವಂತನು ಅದನ್ನು ಉಂಡು, ನಿತ್ಯಪೂರ್ಣ ತೃಪ್ತನೆ, ಅಂಚಿತ್ಯಶಕ್ತಿಯಿಂದ ಪುನಃ ಬಹಳ ತೃಪ್ತನಾಗುತ್ತಾನೆ.

ಭೋಗ್ಯವನ್ನು ಅವನು ಸ್ವೀಕಾರ ಮಾಡುವುದು, ಉಣ್ಣುವುದು ಅನೇಕ ವಿಧ. ಸ್ವಾಖ್ಯರಸವನ್ನುಣ್ಣುವುದು ಮುಖ್ಯಭೋಗ.

ಭಗವಂತನಿಗಿಂತ ಅನ್ಯವಾದ ಅಪ್ರಾಕೃತವಾದ ತತ್ವದೇವಸ್ವರೂಪ ರಸವು ಭಗವಂತನ ಸ್ವಾಖ್ಯರಸಕ್ಕೆ ಅಧಿಷ್ಠಾನವಾಗಿರುವುದರಿಂದ ಭಗವಂತನು ಅದನ್ನು ಉಣ್ಣುವುದೂ ಭೋಗವೆ. ಆದರೆ ಅದು ಮಧ್ಯಮಭೋಗ.

ಪ್ರಾಕೃತರಸವು ಸ್ವಾಖ್ಯರಸಕ್ಕೂ ಅಪ್ರಾಕೃತರಸಕ್ಕೂ ಅಧಿಷ್ಠಾನವಾಗಿದೆ ಎಂದು ಪ್ರೀತಿಯಿಂದಲೇ ಅದನ್ನು ಉಣ್ಣುತ್ತಾನೆ, ಅದು ಅಧಮ ಭೋಗ.

ಹೀಗೆ ಮೂರು ಬಗೆಯ ಭೋಗವನ್ನೂ ಕೂಡ ಜ್ಞಾನಿಗಳು ಸಮರ್ಪಿಸುವುದರಿಂದ ಪರಪ್ರಯೋಜನಾರ್ಥವಾಗಿ ಭಗವಂತ ಉಣ್ಣುತ್ತಾನೆ. ಅಜ್ಞರು ಸಮರ್ಪಿಸುವುದಿಲ್ಲವಾದ್ದರಿಂದ ಭಗವಂತ ಸ್ವೀಕರಿಸುವುದಿಲ್ಲ.

ಯದ್ಯಪಿ ಭಗವಂತನ ಸ್ವಾಖ್ಯರಸವನ್ನೂ ಲಕ್ಷ್ಮ್ಯಾದಿ ದೇವತೆಗಳ ಸ್ವರೂಪ ವಾದ ಅಪ್ರಾಕೃತರಸವನ್ನೂ ಅಜ್ಞರು ಅಜ್ಞಾನದಿಂದ ಸಮರ್ಪಿಸದಿದ್ದರೂ, ತಾವು ಉಣ್ಣುವ ಪ್ರಾಕೃತರಸವನ್ನು ಅವಶ್ಯ ಸಮರ್ಪಿಸುತ್ತಾರೆ. ಅದನ್ನು ಭಗವಂತನು ಸ್ವೀಕರಿಸುತ್ತಾನೆ.

'ಅವಿದುಷೋ ಜನಾತ್ ಮಾನಂ ನೈವ ವೃಣೀತೇ' ಅಜ್ಞರು

ಸಮರ್ಪಿಸಿದ್ದನ್ನು ಸ್ವೀಕರಿಸುವುದೇ ಇಲ್ಲ ಎಂಬುದು ಅಲ್ಪಾನ್ನ ಉಣ್ಣುವವನನ್ನು ಊಟವೇ ಮಾಡುವುದಿಲ್ಲ ಎನ್ನುವಂತೆ ಪ್ರಾಕೃತರಸ ಅತ್ಯಲ್ಪವಾದುದು, ಅದನ್ನು ಸಮರ್ಪಿಸಿದರೆ ಸಮರ್ಪಿಸಿದಂತಾಗುವುದಿಲ್ಲ ಎಂಬ ಅಭಿಪ್ರಾಯದಿಂದ. ಅವರು ಸಮರ್ಪಿಸುವುದೆ ಇಲ್ಲ. ಭಗವಂತ ಸ್ವೀಕರಿಸುವುದೆ ಇಲ್ಲ ಎಂದಲ್ಲ ಎಂದು ಪ್ರಹ್ಲಾದನು ಹೇಳುತ್ತಿದ್ದಾನೆ.

ಯದ್ಯಪಿ ಸಮರ್ಪಣ ಮಾಡದಿದ್ದರೂ ಭಗವಂತನು ಬಿಂಬನಾದ್ದರಿಂದ ಪ್ರತಿಬಿಂಬರನ್ನು ಉಣಿಸುವುದಕ್ಕಾಗಿ ತಾನು ಉಣ್ಣುತ್ತಾನೆ. ಉಣದಿರುವುದಿಲ್ಲ. ಆದರೆ ಸಮರ್ಪಣ ಮಾಡಿದಾಗ ಅವನು ಉಣುವುದರಿಂದ ಮಹಾಫಲ ಲಾಭ. ಸಮರ್ಪಣ ಮಾಡದಿದ್ದಾಗ ಉಣುವುದರಿಂದ ಆ ಫಲವು ಅಜ್ಞರಿಗೆ ಸಿಗುವುದಿಲ್ಲ.

ಸಮರ್ಪಣದಿಂದ ಭಗವಂತ ಪ್ರಸನ್ನನಾಗಿ ಫಲ ನೀಡುತ್ತಾನೆ. ಸಮರ್ಪಿತವಾದ ಅನ್ನದ ತಾರತಮ್ಯಾನುಸಾರ ತಾರತಮ್ಯದಿಂದ ಪ್ರಸಾದ ಉಂಟಾಗುತ್ತದೆ. ಪ್ರಸಾದ ತಾರತಮ್ಯಾನುಸಾರ ಫಲ ಉಂಟಾಗುತ್ತದೆ. ಹೀಗಾಗಿ, ಜ್ಞಾನಿಗಳ ಮತ್ತು ಅಜ್ಞರ ಪ್ರಸಾದ ಫಲಗಳಲ್ಲಿ ಬಹಳ ಅಂತರವಿದೆ.

ಅನುಗ್ರಹ ಮಾಡಿ ಫಲ ನೀಡುವುದು ಪರಮ ದಯಾಳುವಾದ ಹರಿಯ ಪ್ರಭಾವವೆಂದು 'ಕರುಣಃ' ಎಂದು ನೃಸಿಂಹನನ್ನು ಪ್ರಹ್ಲಾದನು ಕೊಂಡಾಡುವನು.

–೨೯೬–

**ನಾಭಿರಾಜನ ಇಷ್ಟಿಯಲ್ಲಿ ಋತ್ವಿಜರು ಗೈದ ಸ್ತೋತ್ರ–ಪ್ರಾರ್ಥನೆಗಳು**

**ಅರ್ಹಸಿ ಮುಹುರರ್ಹತ್ತಮಾರ್ಹಣಮಸ್ಮಾಕಂ**
**ಅನುಪಥಾನಾಂ ನಮೋನಮ ಇತ್ಯೇತಾವತ್**
**ಸದುಪಶಿಕ್ಷಿತಂ ಕೋಽರ್ಹತಿ ಪುಮಾನ್ ಪ್ರಕೃತಿ**
**ಗುಣವ್ಯತಿರೇಕಮತಿರನೀಶ ಈಶ್ವರಸ್ಯ**
**ಪ್ರಕೃತಿ ಪುರುಷಯೋಃ ಪರಸ್ಯಾರ್ವಾಕ್ತನ ಮತಿ**
**ರ್ನಾಮರೂಪ ಕೃತಿಭಿರ್ನಿರೂಪಣಂ ॥**

(ಭಾ.೫.೩.೫)

**ಪರಿಜನಾನುರಾಗ ವಿರಚಿತಸ್ತವಲವಸಂಶಬ್ದ ಸಲಿಲ ಕಿಸಲಯ ತುಲಸೀದೂರ್ವಾಂಕುರೈರಪಿ ಸಂಭೃತಯಾ ಸಪರ್ಯಯಾ ಕಿಲ ಪರಮ! ಪರಿತುಷ್ಯಸಿ ।**

(ಭಾ.೫.೩.೭)

**ಅಥಾನಯಾಪಿ ನ ಭವತ ಇಜ್ಯಯೋರುಸಂಭಾರಭರಯಾ ಸಮುಚಿತಮರ್ಥಮಿಹೋಪಲಭಾಮಹೇ ।**

(ಭಾ.೫.೩.೮)

**ಆತ್ಮನ ಏವಾನುಸವನಮಂಜಸಾಽವ್ಯತಿರೇಕೇಣಾನು ಬೋಭೂಯ ಮಾನಾಶೇಷಪುರುಷಾರ್ಥಸ್ವರೂಪಸ್ಯ । ಕಿಂತು ನಾಥಾಶಿಷ ಆಶಾಸಾನಾನಾಮೇತದಭಿಸಂರಾಧನಮಾತ್ರಂ ಭವಿತುಮರ್ಹತಿ ॥**

**ಇತಿ ಸ್ತುತಿಃ ॥**

(ಭಾ.೫.೩.೯)

**ಅಥ ಕಥಂಚಿತ್ ಸ್ಖಲನಕ್ಷುತ್ಪತನಜೃಂಭಣದುರವಸ್ಥಾನಾದಿಷು ವಿವಶಾನಾಂ ನಃ ಶ್ರೀಮಚ್ಚರಣಾರವಿಂದಸ್ಮರಣಾಯ ಜ್ವರಮರಣ ದಶಾಯಾಮಪಿ ಸಕಲಕಶ್ಮಲನಿರಸನಾನಿ ತವ ಗುಣಕೃತ ನಾಮಧೇಯಾನಿ ವಚನಗೋಚರಾಣಿ ಭವಂತು ॥**

**ಇತಿ ಪ್ರಾರ್ಥನಂ ॥**

(ಭಾ.೫.೩.೧೨)

ಉಕ್ತಮರ್ಥಂ ಬುದ್ಧ್ಯಾರೋಹಾಯ ವಿಶದಯನ್ ಪೂಜಾಂಗಂ ಸ್ತೋತ್ರಂ ಪ್ರಾರ್ಥನಾಂ ಚ ಪ್ರದರ್ಶಯತಿ ॥ **ಅರ್ಹಸೀತಿ** ॥ ಪೂಜಾ ದ್ವಿವಿಧಾ । ಸ್ಥೂಲಾ ಸೂಕ್ಷ್ಮಾ ಚ । ತತ್ರ ಸೂಕ್ಷ್ಮಪ್ರಾಪ್ತ್ಯರ್ಥತ್ವೇನ ತದವಧಿತ್ವಾತ್ ಸ್ಥೂಲಾಯಾಃ । ಯಥಾಹುಃ—

''ಅರ್ಚಾದಾವರ್ಚಯೇತ್ತಾವದೀಶ್ವರಂ ಮಾಂ ಸ್ವಕರ್ಮಕೃತ್ ।
ಯಾವನ್ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಮಿ''ತಿ ॥

ತತೋಽನಂತರಮಪಿ ಕರಣಂ ಜನಸಂಗ್ರಹಾಯ । ತತ್ರ ಮನೋಽನವಧಾನ ನಿಮಿತ್ತಂ ವಾ । ತತಃ ಅಭ್ಯರ್ಹಿತತಯಾ ಆದೌ

ಸೂಕ್ಷ್ಮಪೂಜಾಂ ದರ್ಶಯತಿ॥ ನಮೋ ನಮ ಇತಿ॥ ನಮೋನಮ ಇತ್ಯೇತಾವದೇವ ಅನುಪಥಾನಾಂ ತ್ವದುಕ್ತಂ ಭಾಗವತಮಾರ್ಗಂ ಅನುಸರತಾಂ ಅಸ್ಮಾಕಂ ಅರ್ಹಣಂ ಮುಹುಃ ಪ್ರತಿದಿನಂ ಪ್ರತಿಸವನಂ ಅರ್ಹಸಿ ಸ್ವೀಕರೋಷಿ। ತತ್ಸೂಕ್ಷ್ಮಂ ಸಮರ್ಹಣಂ ಕೈರುಪದಿಷ್ಟಂ ಭವತಾಮತ್ರಾಹ। ಸದ್ಭಿರಿತಿ॥ ಸದ್ಭಿರ್ಭಾಗವತಧರ್ಮಪ್ರವರ್ತಕೈರ್ಭಾಗವತ ಪ್ರಧಾನೈಃ। ಉಪಶಿಕ್ಷಿತಮಿತಿ। ಇದಂ ಚಾರ್ಹಣಂ ಮನೋವೃತ್ತಿಪ್ರಾವಣ್ಯವಿಶೇಷರೂಪಂ ರೂಪವಿಶೇಷ ವಿಷಯಂ ಪೂಜಾಸ್ವಧಿಕಮಿತಿ ಭಾವೇನೋಕ್ತಂ। ಹೇ ಅರ್ಹತ್ತಮ ಪೂಜ್ಯತಮೇತಿ।

ಏವಂ ಸೂಕ್ಷ್ಮಾಮುಕ್ತ್ವಾ ತತ್ಸಾಧನಭೂತಾಂ ತತ್ರಾಶಕ್ತಾನಾಂ ಅನುಷ್ಠಾನಾಯ ಸ್ಥೂಲಪೂಜಾಂ ದರ್ಶಯತಿ। ತತ್ರಾದೌ ಅವಿದ್ವದ್ಭಿಃ ಕೃತಪೂಜಾಸ್ವೀಕಾರೋ ನಾಮ ಅಯಮೇವೇತ್ಯಾಶಯೇನಾಹ। ಹೇ ಪರಮ, ಸಪರ್ಯಯಾ ಇಜ್ಯಯಾ ಅವಿದ್ವತ್ಕೃತಯಾ ಸ್ಥೂಲಯಾ ಪರಿತುಷ್ಯಸಿ ಕಿಲೇತಿ। ತತ್ಸ್ವೀಕರಣಂ ನಾಮ ತತ್ರ ಕೃಪಾವಿಶೇಷ ಏವೇತಿ ಸೂಚಯಿತುಂ ಪರಮ ಉತ್ತಮ ಕೃಪಾಕಾರಿಷು ಇತಿ ಸಂಬೋಧನಂ। ಸಾ ಕಾ ಸ್ಥೂಲಾ ಪೂಜಾ ಇತ್ಯತಃ ತತ್ಸಾಧನಂ ಸ್ಥೂಲಂ ಪ್ರಸಿದ್ಧಮೇವ ತೈಃ ಕ್ರಿಯಮಾಣೈವ ಸ್ಥೂಲೇತಿ ಭಾವೇನೈವ ತಾನಿ ಸಾಧನಾನಿ ಪ್ರದರ್ಶಯತಿ। ಉರವೋ ಯೇ ಸಂಭಾರಾಃ ಸ್ವರ್ಣರಜತನವರತ್ನಮಯಾಃ ತಥಾ ನಾನಾವಿಧಧಾನ್ಯಪಿಷ್ಟನಿರ್ಮಿತಾಃ ಭೋಗ್ಯಾಃ ಪದಾರ್ಥವಿಶೇಷಾಃ, ಫಲವಿಶೇಷಾಃ ರಸವಿಶೇಷಾಃ, ದೀಪವಿಶೇಷಾಃ ವಾದ್ಯವಿಶೇಷಾಃ ವಸ್ತ್ರವಿಶೇಷಾಃ ಗಂಧಾದಿವಿಶೇಷಾಶ್ಚ ತೈಃ ಪೂರಿತಯಾ ಇಜ್ಯಯಾ ಇತಿ॥ ಅಥ ಅನ್ಯಾ ವಕ್ಷ್ಯತೇ॥ ಹೇ ಪರಮ ಉತ್ತಮೈರ್ಭಾಗವತೈಃ ಪೂಜಿತ। ಭವತಃ ತವ। ಇಹ ದ್ವಿವಿಧಾಯಾಮಪಿ ಪೂಜಾಯಾಂ। ಆತ್ಮನಃ ಸ್ವಸ್ಯ। ಅರ್ಥಂ ನೋಪಲಭಾಮಹೇ। ಕುತ ಇತ್ಯತಃ ಪೂರ್ಣತಯಾ ಪ್ರಾಪ್ತವ್ಯಾಭಾವಾದಿತಿ ಭಾವೇನಾಹ॥ ಆತ್ಮನ ಏವೇತಿ॥ ಆತ್ಮನಃ ಅವ್ಯತಿರೇಕೇಣ ಸ್ವರೂಪಾಭೇದೇನ। ಅನುಸವನಂ ಅಂಜಸೈವ ಅನುಬೋಭೂಯಮಾನಾಃ ಯೇ ಅಶೇಷಾಃ ಪುರುಷಾರ್ಥಾಃ ಆನಂದಾದಯಃ ತತ್ಸ್ವರೂಪಸ್ಯ ಇತಿ।

ನನು ಪೌನಃಪುನ್ಯೇ ಭೃಶಾರ್ಥೇ ಯಙ್ಲುಕ್। ಅತ್ರ ಚ ಅನುಸವನಮಂಜಸಾ ಇತ್ಯಾಭ್ಯಾಂ ಅರ್ಥದ್ವಯಸ್ಯಾಪಿ ಪ್ರಾಪ್ತ್ಯಾ ಕಿಮರ್ಥಂ ತತ್ಪ್ರಯೋಗ ಇತಿ ಚೇತ್ ಉಚ್ಯತೇ। ನಾತ್ರ ಪಾಂಡಿತ್ಯಪ್ರದರ್ಶನಾಯ ಪ್ರಯೋಗಃ ಕಿಂತು ಅರ್ಥವಿಶೇಷಜ್ಞಾಪನಾರ್ಥಮೇವ ಇತ್ಯಾಶಯೇನ ತಸ್ಯ ಅರ್ಥದ್ವಯಪದಾಭ್ಯಾಂ

ಪ್ರದರ್ಶಿತಮಿತಿ। ಅಥವಾ 'ಸ ಏಷ ಪರೋವರೀಯಾನುದ್ಗೀಥ'' ಇತ್ಯತ್ರ ಪರೋವರೀಯಾನಿತ್ಯಸ್ಯ ನಿರುಪಚರಿತಸರ್ವೋತ್ತಮತ್ವೇ ತಾತ್ಪರ್ಯಮಿವ ಅತ್ರ ತ್ರಿತಯಸ್ಯಾಪಿ ನಿರುಪಚರಿತಪೂರ್ಣತ್ವೇ ತಾತ್ಪರ್ಯಮಿತಿ ನಾನ್ಯತರವೈಯರ್ಥ್ಯ ಮಿತಿ। ತರ್ಹಿ ದ್ವಿವಿಧಾಪಿ ಪೂಜಾ ವಂಧ್ಯಾ ಭವೇದಿತ್ಯತಃ ಆತ್ಮಪ್ರಯೋಜನಾ-ಭಾವೇಽಪಿ ಭಕ್ತಪ್ರಯೋಜನೋದ್ದೇಶೇನ ಸ್ವೀಕರೋತ್ಯೇವ ಅತಃ ನ ವೈಯರ್ಥ್ಯ ಮಿತಿ ಭಾವೇನಾಹ ॥ **ಅಥೇತಿ** ।

ಅಥ ಯದ್ಯಪಿ। ಆತ್ಮನೋಽರ್ಥಂ ನೋಪಲಭಾಮಹೇ। ಕಿಂತು ತಥಾಪೀತಿ। ಹೇ ನಾಥ, ಆಶಿಷಃ ಆಶಾಸಾನಾನಾಂ ಪುರುಷಾರ್ಥಾಪೇಕ್ಷಿಣಾಂ ಪುಂಸಾಂ। ಏತತ್ತವಾರ್ಹಣಂ ಕೇವಲಂ ಪ್ರಸಾದ ಸಾಧನಂ ಭವತಿ। ತೇಷು ಪ್ರಸಾದಂ ಕರ್ತುಮೇವ ಸ್ವೀಕರೋಷಿ ಇತಿ ಯಾವತ್। ಪ್ರಸಾದನೇಽಪಿ ವಿಶೇಷೋಽಸ್ತೀತ್ಯಾಶಯೇನೋಕ್ತಂ। ಉರುಸಂಭಾರಭರಯಾಪ್ಯನಯಾ ಸ್ಥೂಲಯಾ ಅವಿದ್ವತ್ಕೃತಯಾ ಇಜ್ಯಯಾ ಹೇ ಪರಮ, ತಥಾ ನ ಪರಿತುಷ್ಯಸಿ। ಕಥಂ ಸಲಿಲಕಿಸಲಯತುಲಸೀದೂರ್ವಾಂಕುರೈಃ ಅನಾಯಾಸ ಲಭ್ಯೈಃ ಅಮೌಲ್ಯೈರಪಿ ಸಾಧನೈಃ ಸಂಭೃತಯಾ ವಿದ್ವತ್ಕೃತಯಾ ಸಪರ್ಯಯಾ ಪರಮ ಪರಿತುಷ್ಯಸಿ ಕಿಲ ಯಥಾ ತಥೇತಿ। ಬಹುಮೌಲ್ಯೈಃ ಆಯಾಸಲಭ್ಯೈಃ ಮಹಾಜನಮನೋರಂಜನೈಃ ಸಾಧನೈಃ ಸಂಭೃತಯಾ ಸಪರ್ಯಯಾ ಸಂತುಷ್ಟ್ಯಾ ಅಧಿಕಯೈವ ಭಾವ್ಯಂ। ತತ್ಕಥಂ ವಿಪರೀತಮುಚ್ಯತೇ ಇತ್ಯತಃ ತತ್ರ ಹೇತುಂ ದರ್ಶಯತಿ। ಅನಯೋಃ ಉರುಭಿಃ ಉರುಮೌಲ್ಯೈಃ ಉರ್ವಾಯಾಸಸಾಧ್ಯೈಃ ಉರುಜನಮನೋರಂಜನೈಃ ಸಂಭಾರೈಃ ಸಾಧನೈಃ ಸಂಭೃತಯಾಪಿ ಇಜ್ಯಯಾ ಭವತಃ ಸಮುಚಿತಂ ಸರ್ವೋತ್ತಮಂ ಭೋಗ್ಯಮರ್ಥಂ ಇಹ ಸಲಿಲಾದಿಭಿಃ ತದ್ವಿಪರೀತೈಃ ಸಾಧನೈಃ ಸಂಭೃತಾಯಾಂ ಪೂಜಾಯಾಂ ಯಥಾ ಉಪಲಭಾಮಹೇ ತಥಾ ನೋಪಲಭಾಮಹೇ ಇತಿ ॥

ಏವಂ ಭಗವತಃ ಪೂಜಾಂ ಕೃತ್ವಾ ತದಂಗಭೂತಂ ಸ್ತವಂ ತತ್ಪ್ರಾರ್ಥನಾಂ ಚ ಅವಶ್ಯಕರ್ತವ್ಯತಯಾ ಆಹ ॥ **ಸ್ತವಲವಸಂಶಬ್ದೇತಿ** ॥ ಅನಂತೋಽಪಿ ವೇದಾದಿಶಬ್ದರಾಶಿಃ ಭಗವತಃ ಸ್ತವ ಏವ ಸ ನಾಸ್ಮಾಭಿರನುಷ್ಠಾತುಂ ಶಕ್ಯ ಇತಿ ಕಿಮೇತದ್ವಿಧೀಯತೇ ಇತ್ಯತಃ। ಸತ್ಯಂ। ತಥಾಪಿ ತತ್ರ ಯಾವಚ್ಛಕ್ಯಂ ತಾವದೇವ ಅಸ್ಮಾಭಿರ್ವಿಧೀಯತೇ ಇತ್ಯಾಶಯೇನೋಕ್ತಂ ಸ್ತವಲವೇತಿ। ತನ್ಮಹಿಮಾ ಪ್ರತಿಪಾದಕಃ ಶಬ್ದಃ ಸ್ತವಃ। ಪುರುಷೋದ್ದೇಶ್ಯಸೂಚಕಶಬ್ದಯುಕ್ತಃ ತದ್ವಿಶೇಷಃ ಪ್ರಾರ್ಥನಮಿತಿ। ಅತ ಏವ ಅರ್ಥಿನಾಂ ಸಂ ಸಂತೋಷಕರಃ ಶಬ್ದೋ ಯಸ್ಮಿನ್

ತತ್ ಸಂಶಬ್ದಮಿತ್ಯುಕ್ತಂ। ಏತದ್ದ್ವಯಂ ಚ ನ ಸ್ವಕಪೋಲಕಲ್ಪಿತಂ ಕಿಂತು ಭಾಗವತಜನ್ಯೈಃ ಭಕ್ತಿಪೂರ್ವಕಂ ರಚಿತಮಿತ್ಯಾಶಯೇನೋಕ್ತಂ॥ **ಪರಿಜನೇತಿ** ॥ ಅತ್ರ ಅರ್ಹಸಿ ಇತ್ಯಾರಭ್ಯ ಅರ್ಹತಿ ಇತ್ಯಂತೇನ ಸ್ತೋತ್ರಂ ಪ್ರದರ್ಶಿತಂ। ಅಧುನಾ ಪ್ರಾರ್ಥನಂ ದರ್ಶಯತಿ। **ಅಥೇತಿ**। ವಿಷಯಭೇದಸೂಚಕಃ ಅಥಶಬ್ದಃ। ಕಥಂಚಿತ್ ಕೇನಾಪಿ ನಿಮಿತ್ತೇನ ಪ್ರಾಪ್ತಾಸು ದಶಾಸು ಸ್ಖಲನಾದಿನಿಮಿತ್ತಕ್ಲೇಶೋಪೇತಾಸು ತಥಾ ಮರಣಾವ್ಯವಹಿತದಶಾಯಾಮಪಿ ಪತನಾದಿನಿಮಿತ್ತಕ್ಲೇಶಾವಸ್ಥಾತೋ ಜ್ವರನಿಮಿತ್ತಕ್ಲೇಶಾವಸ್ಥಾಯಾಂ ವಿಸ್ಮೃತಿರಧಿಕಾ, ತತೋಽಪಿ ಮರಣಾವ್ಯವಹಿತದಶಾಯಾಂ, ತತ್ರಾಪಿ ಶ್ರೀಮತಶ್ಚರಣಾರವಿಂದಸ್ಮರಣಂ ಸ್ಯಾತ್। ತದರ್ಥಂ ಚ ತವ ಯಾನಿ ವಿಶಿಷ್ಟಗುಣಪ್ರವೃತ್ತಿನಿಮಿತ್ತಕಾನಿ ನಾರಾಯಣಾದಿನಾಮಧೇಯಾನಿ ತಾನಿ ಮಮ ವಚನಗೋಚರಾಣಿ ಭವಂತು। ಕಿಂ ತೇನ ತವ ಪ್ರಯೋಜನಮಿತ್ಯತ ಉಕ್ತಂ। ಸಕಲಾನಿ ಯಾನಿ ಸ್ಖಲನಾದಿನಿಮಿತ್ತಾನಿ ಕಶ್ಮಲಾನಿ ದುಃಖಾನಿ ತೇಷಾಂ ನಾಶಕಾನಿ। ಸಕಲಾನಿ ಕಶ್ಮಲಾನಿ ಯಸ್ಮಾತ್ಸಂಸಾರಾತ್ ತಸ್ಯ ನಿರಸನಾನೀತಿ ವಾ ಪ್ರಾರ್ಥನಂ।

ಅನಯೋರಧಿಕೇಚ್ಛಾಯಾಂ ಭಾಗವತೋಕ್ತಂ ಅಸ್ಮಾಭಿಃ ಸಂಗೃಹೀತಂ ಸ್ತೋತ್ರಪ್ರಕರಣಂ ಪ್ರಾರ್ಥನಾಪ್ರಕರಣಂ ಚ ಅವಲೋಕ್ಯ ಸ್ವಪುರುಷಾರ್ಥಃ ಸಾಧನೀಯಃ ಸದ್ಭಿರಿತಿ ॥

❖❖❖

ನಾಭಿರಾಜನು ಪುತ್ರಕಾಮೇಷ್ಟಿಯನ್ನು ಮಾಡಿದಾಗ ಪತ್ನಿಯಾದ ಮೇರುದೇವಿಯಲ್ಲಿ ಶ್ರೀಹರಿ ಋಷಭರೂಪದಿಂದ ಪುತ್ರನಾಗಿ ಅವತರಿಸಿದ. ಆ ಇಷ್ಟಿಕಾಲದಲ್ಲಿ ಭಗವಂತ ಪ್ರತ್ಯಕ್ಷನಾಗಿ ನಿಂತು ಋತ್ವಿಜರು ಗೈದ ಸ್ತುತಿ ಮತ್ತು ಪ್ರಾರ್ಥನೆಗಳನ್ನು ಕೇಳಿ ಅನುಗ್ರಹಿಸಿದ—

**ಸ್ತುತಿ**—ಶ್ರೀಹರಿ, ನಾವು ಮತ್ತೆಮತ್ತೆ ಸಲ್ಲಿಸುವ ಸೂಕ್ಷ್ಮಪೂಜೆಯನ್ನು ದಯೆಯಿಂದ ಸ್ವೀಕರಿಸು. 'ನಮೋ ನಮಃ' ಎನ್ನುವುದನ್ನು, ಹೃದಯದಲ್ಲಿ ಬಿಂಬನನ್ನಾರಾಧಿಸುವ ಈ ಸೂಕ್ಷ್ಮಪೂಜೆನ್ನು ಸಜ್ಜನರು ನಮಗೆ ಹೇಳಿಕೊಟ್ಟಿದ್ದಾರೆ. ಪ್ರಕೃತಿಯ ಗುಣವೈಷಮ್ಯಜನ್ಯವಾದ ಬಾಹ್ಯ ಪ್ರಪಂಚವನ್ನು ಮಾತ್ರ ತಿಳಿಯಬಲ್ಲ ಅಲ್ಪಬುದ್ಧಿಯ ನಮಗೆ ಅಪ್ರಾಕೃತನಾದ ಬಿಂಬನಾದ ನಿನ್ನ ಸ್ವರೂಪ ಹೇಗೆ ತಿಳಿದೀತು? ಅದು ಬುದ್ಧಿಗೆ ಎಟುಕಲಾರದು. ಅಸಮರ್ಥನಾದ ಯಾವ

ಪುರುಷನು ತಾನೆ ಪ್ರಕೃತಿ ಪುರುಷವಿಲಕ್ಷಣ ಸರ್ವಶಕ್ತನಾದ ನಿನ್ನನ್ನು ನಾಮರೂಪ ಆಕೃತಿಗಳಿಂದ ವರ್ಣಿಸಬಲ್ಲ?

ಕರುಣೆಗಳಲ್ಲಿ ಸರ್ವೋತ್ತಮನೆ, ಸ್ಥೂಲಪೂಜೆಯಲ್ಲಿ ಜ್ಞಾನಿಗಳು ಭಕ್ತಿಯಿಂದ ಹೇಳುವ ಅಲ್ಪಸ್ತೋತ್ರಗಳಿಂದಲೂ ಬರಿ ನೀರು ಎಲೆ ಚಿಗುರು ತುಲಸಿ ಗರಿಕೆಗಳಿಂದ ಪೂಜಿಸಿದರೂ ಸಾಕು, ನೀನು ದಯೆಯಿಂದ ಬಲು ಸಂತುಷ್ಟನಾಗುವೆ. ಹಾಗೆ ಉತ್ಕೃಷ್ಟ ಸಾಧನ ಸಾಮಗ್ರೀ ಸಹಿತವಾದ ವೇದೋಕ್ತ ಸ್ಥೂಲ ಪೂಜಾರೂಪವಾದ ಅಜ್ಞರ ಯಜ್ಞದಿಂದಲೂ ನಿನಗೆ ಪ್ರಯೋಜನ ವೇನಾದರೂ ಇದ್ದೀತೆಂದು ನಾವು ಭಾವಿಸುವುದಿಲ್ಲ. ಏಕೆಂದರೆ, ತನ್ನ ಸ್ವರೂಪಭೂತಪೂರ್ಣಾನಂದವನ್ನೇ ಸದಾ ಚೆನ್ನಾಗಿಯೇ ಅನುಭವಿಸುವವನು ನೀನು. ಆದರೂ, ಪ್ರಭು, ಪುರುಷಾರ್ಥಗಳನ್ನು ಬಯಸುವ ನಮಗೆ ಅನುಗ್ರಹ ಮಾಡುವುದಕ್ಕಾಗಿ ದಯೆಯಿಂದಲೇ ಪೂಜೆಯನ್ನು ನೀನು ಸ್ವೀಕರಿಸುವೆ. ನಿನ್ನಾರಾಧನೆಯೇ ನಿನ್ನ ಪ್ರಸಾದಕ್ಕೆ ಸಾಧನವಾಗುತ್ತದೆ ಎಂದು ನಾವು ತಿಳಿಯುವುದಿಲ್ಲ! –ಇದು ಭಗವಂತನ ಸ್ತುತಿ.

ಎಡರುವುದು ಸೀನುವುದು ಬೀಳುವುದು ಆಕಳಿಸುವುದು ಬಂಧು ವಿಯೋಗಾದಿ ದುರವಸ್ಥೆಗಳಲ್ಲಿ ಮತ್ತು ಜ್ವರ ಮರಣಾವಸ್ಥೆಗಳಲ್ಲಿ, ನಿನ್ನ ಶ್ರೀಚರಣಕಮಲ ಸ್ಮರಣೆ ಬರಲಿ. ನಾವು ಅಶಕ್ತರಾಗಿರುವಾಗಲೂ ಸಕಲಾನಿಷ್ಟ ನಿವಾರಕವಾದ ನಿನ್ನ ಗುಣಗಳನ್ನು ಹೇಳುವ ನಾರಾಯಣಾದಿ ನಾಮಗಳು ನಮ್ಮ ನಾಲಿಗೆಗೆ.

ಅಥವಾ ಎಲ್ಲ ಅನಿಷ್ಟಗಳಿಗೆ ಕಾರಣವಾಗಿರುವ ಸಂಸಾರವೇ ನಾಶವಾಗಲಿ ಎಂದು ಪ್ರಾರ್ಥನೆ. ಹೇಗಾದರೂ ಬರಲಿ!—ಇದು ಪ್ರಾರ್ಥನೆ.

ಪೂಜೆಯು ಎರಡು ವಿಧ, ಸ್ಥೂಲಪೂಜೆ ಮತ್ತು ಸೂಕ್ಷ್ಮಪೂಜೆ ಎಂದು. ಬಾಹ್ಯಪೂಜೆಯು ಸ್ಥೂಲ, ಮಾನಸಪೂಜೆಯು ಸೂಕ್ಷ್ಮ. ಸೂಕ್ಷ್ಮಪೂಜೆಯಲ್ಲಿ ಸಾಮರ್ಥ್ಯ ಬರುವುದಕ್ಕಾಗಿ ಅದು ಬರುವವರೆಗೂ ಸ್ಥೂಲಪೂಜೆಯನ್ನು ಮಾಡಬೇಕು—

ಅರ್ಚಾದಾವರ್ಚಯೇತ್ ತಾವದೀಶ್ವರಂ ಮಾಂ ಸ್ವಕರ್ಮಕೃತ್
ಯಾವನ್ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಂ ॥ (ಭಾ.೨.೩೦.೨೫)

ಮುಮುಕ್ಷುವು ತನ್ನ ಸ್ವಕರ್ಮವನ್ನು ಮಾಡುತ್ತ ನನ್ನನ್ನು ಪ್ರಭುವೆಂದು ತಿಳಿದು ತಪ್ಪದೆ ಪ್ರತಿಮಾದಿಗಳಲ್ಲಿ ಸ್ಥೂಲಪೂಜೆಯನ್ನೂ ಮಾಡುತ್ತಿರಬೇಕು. ಎಲ್ಲಿಯವರೆಗೂ ತನ್ನ ಹೃದಯದಲ್ಲಿಯೂ ಎಲ್ಲ ಜೀವಿಗಳ ಹೃದಯಗಳಲ್ಲಿಯೂ ನೆಲೆಸಿರುವ ಬಿಂಬನಾದ ನನ್ನನ್ನು ಪೂಜಿಸುವ ಸಾಮರ್ಥ್ಯ ಬರುವುದಿಲ್ಲವೋ ಅಲ್ಲಿಯವರೆಗೂ ಈ ಸ್ಥೂಲಪೂಜೆ ಅವಶ್ಯ ಮಾಡಬೇಕು. ಎಂದು ಕಪಿಲಮೂರ್ತಿ ತಾಯಿ ದೇವಹೂತಿಗೆ ಹೇಳುತ್ತಾನೆ.

ಸೂಕ್ಷ್ಮಪೂಜೆಯ ಸಾಮರ್ಥ್ಯ ಬಂದಮೇಲೆ ಸ್ಥೂಲಪೂಜೆಯನ್ನು ಬಿಡಬೇಕೆಂದಲ್ಲ. ಜನರು ತನ್ನನ್ನು ನೋಡಿ ಕಲಿಯುವಂತಿದ್ದರೆ ತಾನು ಧರ್ಮಕರ್ಮಗಳನ್ನು ಬಿಟ್ಟು ನಡೆಯಬಾರದು. ಮತ್ತು ತನಗೂ ಮನಸು ಚೆನ್ನಾಗಿ ಸೂಕ್ಷ್ಮಬಿಂಬನಲ್ಲಿ ನೆಲೆಸುವುದು ಕೂಡ ಸ್ಥೂಲಪೂಜೆಯ ಪ್ರಯೋಜನವೆ.

ಇನ್ನೂ ಹೆಚ್ಚು ಸ್ತೋತ್ರ-ಪ್ರಾರ್ಥನಾ ಶ್ಲೋಕಗಳು ಬೇಕೆನಿಸಿದರೆ, ನಾವು ಮಾಡಿರುವ ಸ್ತೋತ್ರಪ್ರಕರಣ ಪ್ರಾರ್ಥನಾ ಪ್ರಕರಣಗಳನ್ನು ನೋಡಿ ಸಂಗ್ರಹಿಸಿಕೊಳ್ಳಬಹುದು ಎನ್ನುತ್ತಾರೆ ಅವಧೂತರು.

❖❖❖

—೨೯೭—

**ಭಾಗವತರ ನಿಂದೆ ಮಾಡಿದರೆ ಭಗವಂತನ ಪೂಜೆ ವ್ಯರ್ಥವೆ**

**ನ ಭಜತಿ ಕುಮನೀಷಿಣಾಂ ಸ ಇಜ್ಯಾಂ**
**ಹರಿರಧನಾತ್ಮಧನಪ್ರಿಯೋ ರಸಜ್ಞಃ ।**
**ಶ್ರುತಧನಕುಲಕರ್ಮಣಾಂ ಮದೈರ್ಯೇ**
**ವಿದಧತಿ ಪಾಪಮಕಿಂಚನೇಷು ಸತ್ಸು ॥**

(ಭಾ.೪.೩೧.೨೨)

**ಸ್ಥೂಲಪೂಜಾಕಾರಿಣಾಂ ಅವಿದುಷಾಂ ಸಕಾಶಾತ್ ಪೂಜಾಂ ವಿದುಷಾಂ ಸಕಾಶಾದಿವ ನ ಸ್ವೀಕರೋತಿ । ಕಿಂತು ಕಿಯದೇವ । ಕಥಂಚಿತ್ ತದನುಸಾರೇಣ ಅನುಗ್ರಹದ್ವಾರಾ ಫಲಮಪಿ ದದಾತೀತ್ಯಭಿಹಿತಂ । ಇದಾನೀಂ ತಾವದಪಿ ಫಲಂ**

ವಕ್ಷ್ಯಮಾಣೇತಿಕರ್ತವ್ಯತಾಪೂರ್ವಮನುಷ್ಠಾನೇ ಭವೇತ್। ನೇತರಥಾ। ಪ್ರತ್ಯುತ ವಿಪರೀತಮೇವ ಫಲಂ ಭವೇದಿತ್ಯಾಶಯೇನ ತಾಂ ಇತಿಕರ್ತವ್ಯತಾಂ ದರ್ಶಯತಿ॥ **ನ ಭಜತೀತಿ॥** ಯೇ ಅಕಿಂಚನೇಷು ಸತ್ಸು ಭಾಗವತೇಷು ಶ್ರುತಧನಕುಲಕರ್ಮಣಾಂ ಸಕಾಶಾದುತ್ಪನ್ನೈರ್ಮದ್ಯೈಃ ಪಾಪಂ ಅವಜ್ಞಾದಿಕಂ ಅನಿಷ್ಟಂ ವಿದಧತಿ ಕುರ್ವಂತಿ। ತೇಷಾಂ ಕುಮನೀಷಿಣಾಂ ವಿಪರೀತಬುದ್ಧೀನಾಂ ಸಕಾಶಾತ್। ಇಜ್ಯಾಂ ಪೂಜಾಂ। ಸ ಹರಿರ್ನ ಭಜತಿ ನೈವ ಸ್ವೀಕರೋತಿ। ತದಾ ಕುತಃ ಪ್ರಸಾದಃ। ಕುತಸ್ತರಾಂ ಜ್ಞಾನಭಕ್ತ್ಯಾದಿಕಂ। ಕುತಸ್ತಮಾಂ ಚ ಮುಕ್ತಿರಿತಿ। ಕುತೋ ನ ಸ್ವೀಕರೋತೀತ್ಯತ ಉಕ್ತಂ। ಯೇ ಅಧನಾಃ ಬಾಹ್ಯಧನರಹಿತಾಃ ತಥಾ ಆತ್ಮೈವ ಧನಂ ಯೇಷಾಂ ತೇ ತಾದೃಶಾನಾಮಕಿಂಚನಾನಾಂ ಸತಾಂ ಪ್ರಿಯ ಇತಿ। ಸ್ವಪ್ರಿಯಾನಿಷ್ಟಕಾರೀ ಸ್ವಸ್ಯಾಪ್ಯಪ್ರಿಯ ಇತಿ ಹೇತೋರಿತಿ ಭಾವಃ। ಧನಾದಿಮತಾಂ ಬಹುಸಂಭಾರಭೃತಾಂ ಪೂಜಾಂ ಕಥಂ ತ್ಯಕ್ಷ್ಯತೀತ್ಯತ ಉಕ್ತಂ। **ರಸಜ್ಞ ಇತಿ॥** ಸಾರಮಾತ್ರಗ್ರಾಹಿಣಃ ಕಿಂ ಪ್ರಯೋಜನಂ ಸಂಭಾರೇಣ। ಸಾರಸ್ಯ ಚ ತತ್ರಾಭಾವಾದಿತಿ ಭಾವಃ। ತತ್ಕಿಂ ಸಾರಭೂತಂ ಪೂಜಾಸಾಧನಮಿತ್ಯತಃ ಇದಮೇವೇತ್ಯಾಶಯೇನ **ಆತ್ಮಧನೇತ್ಯುಕ್ತಂ।**

**ಇದಮುಕ್ತಂ ಭವತಿ—** ಶ್ರೀಹರಿಣಾ ಸೃಷ್ಟ್ಯಾದೌ ಸರ್ವಾಣಿ ಶರೀರಾಣಿ ಸೃಷ್ಟ್ವಾಪಿ ತುಷ್ಟಿಮಲಭಮಾನೇನ ಮಾನುಷಂ ಶರೀರಂ ಸೃಷ್ಟ್ವಾ ತತ್ರಾಪಿ ತಾರತಮ್ಯೇನ ಸ್ವಯಂ ಸ್ಥಿತ್ವಾ ಪೂಜಾಪ್ರಾಪ್ತಯೇ ಇದಮೇವ ಪೂಜಾಸ್ಥಾನಂ ವರೀಯ ಇತಿ ಸಂತುಷ್ಟೇನ ಬ್ರಾಹ್ಮಣರೂಪಾಧಿಷ್ಠಾನೇಷ್ವೇವ ಪೂಜಾ ಪರಿಗೃಹೀತಾ। ತಥೈವ ಚ ಕೃತಯುಗೇ ಪ್ರವರ್ತಿತಾ। ತತಸ್ತ್ರೇತಾದಿಷು ನೃಣಾಂ ಪರಸ್ಪರಮತ್ಸರಾದಿನಾ ಪರಸ್ಪರಾವಜ್ಞಾನೇನ ಶ್ರೀಹರೇಃ ಪೂಜಾಂ ಲುಪ್ಯಮಾನಾಮವೇಕ್ಷ್ಯ ಶ್ರೀಹರಿನಿಯಮಿತಂ ಚರಂ ಬ್ರಾಹ್ಮಣಾಧಿಷ್ಠಾನಂ ಪರಿತ್ಯಾಜಯಿತ್ವಾ ಅಚರಂ ಪ್ರತಿಮಾರೂಪಮಧಿಷ್ಠಾನಂ ಕವಿಭಿಃ ಕಾರಿತಂ। ತಚ್ಚಾಧಿಷ್ಠಾನಂ ಯೇ ಮತ್ಸರಗ್ರಹಗ್ರಸ್ತಾಃ ತೇ ಆದರೇಣ ಗೃಹೀತ್ವಾ ತತ್ರ ಹರಿಂ ಶ್ರದ್ಧಯಾ ಪೂಜಯಾಮಾಸುಃ। ಯೇ ತತ್ರ ಮತ್ಸರ ಗ್ರಹೋಚ್ಚಾಟನಮಂತ್ರವಿದಃ ತೇ ಬ್ರಾಹ್ಮಣರೂಪೇಷು ಭಗವತಾ ಪ್ರದರ್ಶಿತೇಷ್ವೇವ ಅಧಿಷ್ಠಾನೇಷು ತಂ ಪೂಜಯಂತಃ ಪೂಜ್ಯಂತ ಏವ ಲೋಕೈಃ। ತತ್ರಾಪಿ ಭಾಗವತಧರ್ಮಾಣಾಮನುಷ್ಠಾತಾರಃ ಶ್ರೇಷ್ಠಾಃ।

ಸತಿ ಚೈವಂ ಇದಾನೀಂ ಕಲಿಯುಗೇ ತು ಸತ್ಕುಲಜನನರೂಪ-ಪಿಶಾಚಗೃಹೀತಾಃ ಧನಮದಾಂಧಾಃ, ಸದಾಚಾರಿತ್ವಾಭಿಮಾನಮದಿರಾಮತ್ತಾಃ,

ವಿದ್ಯಾರೂಪಾತಿ ಭಾಷಣಾಪಾದಕರೋಗಪರಿಭಾವಿತಸ್ಮೃತಯಃ, ವಿಸ್ಮೃತ ಸ್ವಗತಯಃ, ತಾದೃಶಾನಪಿ ಬ್ರಾಹ್ಮಣಾನ್ ಸಾಕ್ಷಾದ್ಭಗವತ್ಪ್ರಿಯಾನಪಿ ಅವಜಾನಂತಃ, ಸಂಭೃತಸಂಭಾರಾನ್ ಪ್ರದರ್ಶಯಂತಃ, ಉದರಂಭರಜನಮನಾಂಸಿ ರಂಜಯಂತಃ, ಪ್ರತಿಮಾದೇಃ ಪುರತೋ ಘಂಟಾಂ ವಾದಯಂತಃ, ಸ್ವಾತ್ಮನಃ ಸರ್ವತೋಽತಿಮಹತ್ತ್ವಂ ವೇದಯಂತಃ, ಭಾಗವತಶಾಸ್ತ್ರಂ ವಾಚಯಂತಃ, ಮನಸಾ ಮನೋರಥಾನ್ಮಾನಯಂತಃ, ಧನದುರ್ಮದಾಂಧಾನ್ ಶ್ರಾವಯಂತಃ, ಮಾನಮರ್ಥಯಂತಃ, ಅತಿತರಾಂ ಪೂಜಾಯಾಂ ಪ್ರವರ್ತಂತೇ। ಈದೃಶಕುಯೋಗಿಕೃತಾಂ ಪೂಜಾಂ ಹರಿರ್ನ ಸ್ವೀಕರೋತಿ। ತತೋ ಮಹದವಜ್ಞಾಭಾವರೂಪೇತಿಕರ್ತವ್ಯತಾಪೂರ್ವಕಂ ಪೂಜಾ ಕರ್ತವ್ಯಾ। ತಾಂ ತು ಪೂಜಾಂ ಭಗವಾನ್ ಸ್ವೀಕರೋತೀತಿ। **ಯಥಾಹುಃ—**

''ಪುರಾಣ್ಯನೇನ ಸೃಷ್ಟಾನಿ ನೃತಿರ್ಯಗೃಷಿದೇವತಾಃ।
ಶೇತೇ ಜೀವೇನ ರೂಪೇಣ ಪುರೇಷು ಪುರುಷೋ ಹ್ಯಸೌ ॥
ತೇಷ್ವೀಶೋ ಭಗವಾನ್ ರಾಜನ್ ತಾರತಮ್ಯೇನ ವರ್ತತೇ।
ತಸ್ಮಾತ್ಪಾತ್ರಂ ಹಿ ಪುರುಷೋ ಯಾವಾನಾತ್ಮಾ ಯಥೇಯತೇ।
ದೃಷ್ಟ್ವಾ ತೇಷಾಂ ಮಿಥೋ ನೃಣಾಮವಜ್ಞಾಮಾತ್ಮನೋ ನೃಪ ॥
ತ್ರೇತಾದಿಷು ಹರೇರರ್ಚಾ ಕ್ರಿಯಾಯೈ ಕವಿಭಿಃ ಕೃತಾ ॥
ತತೋಽರ್ಚಾಯಾಂ ಹರಿಂ ಕೇಚಿಚ್ಛ್ರದ್ಧಯಾ ಚ ಸಪರ್ಯಯಾ ॥
ಉಪಾಸತೇ ಉಪಾಸಾ ಹಿ ನಾರ್ಥದಾ ಪುರುಷದ್ವಿಷಾಂ ॥
ಪುರುಷೇಷ್ವಪಿ ರಾಜೇಂದ್ರ ಸುಪಾತ್ರಂ ಬ್ರಾಹ್ಮಣಂ ವಿದುಃ।
ತಪಸಾ ವಿದ್ಯಯಾ ತುಷ್ಟ್ಯಾ ಧತ್ತೇ ವೇದಂ ಹರೇಸ್ತನುಂ' ಇತಿ
''ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂತ್ಯಕ್ತಕರ್ಮಣಃ ॥
ನ ಪಶ್ಯಾಮಿ ಪರಂ ಭೂತಮಕರ್ತುಃ ಸಮದರ್ಶನಾತ್ ॥
ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ ॥
ತಮವಜ್ಞಾಯ ಮಾಂ ಮರ್ತ್ಯಃ ಕುರುತೇಽರ್ಚಾವಿಡಂಬನಂ ॥
ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಂ ॥
ಹಿತ್ವಾರ್ಚಾಂ ಭಜತೇ ಮೌಢ್ಯಾದ್ಭಸ್ಮನ್ಯೇವ ಜುಹೋತಿ ಸಃ ॥
ಅಹಮುಚ್ಚಾವಚೈರ್ದ್ರವ್ಯೈಃ ಕ್ರಿಯಯೋತ್ಪನ್ನಯಾನಘೇ।
ನೈವ ತೃಪ್ಯೇಽರ್ಚಿತೋಽರ್ಚಾಯಾಂ ಭೂತ ಗ್ರಾಮಾವಮಾನಿನಃ ॥
ದುಷ್ಪ್ರಜ್ಞಾ ಅವಿದಿತ್ವೈವಮವಜಾನಂತ್ಯಸೂಯವಃ ॥

ತಸ್ಮಾದ್ಬ್ರಹ್ಮಋಷೀನೇತಾನ್ ಬ್ರಹ್ಮಜ್ಞಾನ್ಶ್ರದ್ಧಯಾಽರ್ಚಯ ।
ಏವಂವಿದಾರ್ಚಿತೋಽಸ್ಮ್ಯದ್ಧಾ ನಾನ್ಯಥಾ ಸುವಿಭೂತಿಭಿ'' ರಿತಿ ॥

❖❖❖

ಪ್ರಚೇತಸರಿಗೆ ನಾರದರ ಉಪದೇಶ—

'ಪರಮಾತ್ಮನ ಪೂಜೆಗೆ ಸಲ್ಲದ ಭೌತಿಕ ಸಂಪತ್ತಿನ ದೃಷ್ಟಿಯಿಂದ ದರಿದ್ರರು, ಶ್ರೀಹರಿಯನ್ನಲ್ಲದೆ ಮತ್ತೊಂದನ್ನು ಆಶ್ರಯಿಸದವರು ಸಜ್ಜನರು ಭಾಗವತರು. ಅವರಲ್ಲಿ ಅಪಚಾರಗೈವ, ವಿದ್ಯೆ ಧನ ಕುಲ ಆಚಾರಗಳ ಮದದಿಂದ ಕೊಬ್ಬಿದ ದುರ್ಬುದ್ಧಿಯ ಶ್ರೀಮಂತರ ಪೂಜೆಯನ್ನು ಹರಿ ಒಲ್ಲನು. ಅವರಲ್ಲಿ ಹರಿ ಅನುಗ್ರಹ ಮಾಡಲಾರ. ಜ್ಞಾನ ಭಕ್ತ್ಯಾದಿಗಳನ್ನು ನೀಡಲಾರ. ಮೋಕ್ಷವನ್ನೂ ನೀಡಲಾರ. ಏಕೆಂದರೆ ಆ ಭಾಗವತರು ಆತ್ಮಧನರು, ಅಂತರ್ಯಾಮಿಯಾದ ಪರಮಾತ್ಮನನ್ನೇ ತಮ್ಮ ಧನವೆಂದು ನಂಬಿದವರು. ಅವರಿಗೆ ಪ್ರಿಯನು ಶ್ರೀಹರಿ. ತನ್ನ ಭಕ್ತರನ್ನು ಅವಮಾನಿಸಿದರೆ ತನ್ನನ್ನೇ ಅವಮಾನಿಸಿದಂತೆ ತಿಳಿಯುವವನು. ಶ್ರೀಮಂತರು ಮಾಡುವ ವೈಭವೋಪೇತವಾದ ಪೂಜೆಯನ್ನು ಅವನು ಬಿಡಲು ಕಾರಣವೇನೆಂದರೆ ಅವನು 'ರಸಜ್ಞ' ರಸವನ್ನು ಮಾತ್ರ ಸ್ವೀಕರಿಸುವವನು. ಅವನಿಗೆ ವೈಭವದ ಪೂಜೆಯಲ್ಲಿ ಶ್ರೀಮಂತರ ಮದದ ಕೊಬ್ಬಿದೆ, ಹೊರತು ಭಾಗವತರ ವಿನಯಭಕ್ತಿ ರಸವಿಲ್ಲ ಎಂದು ತಿಳಿದಿದೆ'.

ಅಜ್ಞರ ಮೂರ್ತಿಪೂಜೆಯು ಜ್ಞಾನಿಗಳ ಮೂರ್ತಿಪೂಜೆಯಷ್ಟು ಸರ್ವಥಾ ಭಗವಂತನಿಗೆ ಪ್ರಿಯವಲ್ಲ. ಆದರೂ ದಯೆಯಿಂದ ಅಜ್ಞರನ್ನು ಅನುಗ್ರಹಿಸುವುದಕ್ಕಾಗಿಯೇ ಅವರ ಪೂಜೆಯನ್ನು ಸ್ವಲ್ಪ ಮಾತ್ರ ಸ್ವೀಕರಿಸುತ್ತಾನೆ. ಸ್ವಲ್ಪಮಾತ್ರ ಫಲ ನೀಡುತ್ತಾನೆ. ಅವರಿಗೆ ಅಷ್ಟಾದರೂ ಪೂಜೆಯಫಲ ಸಿಗಬೇಕಾದರೆ ಅವರು ಜ್ಞಾನಿಗಳನ್ನು ಅವಮಾನಿಸಬಾರದು. ಅವಮಾನಿಸಿದರೆ ಅನಿಷ್ಟ ಫಲವೇ ದೊರಕುವುದು. ಅವರು ಮಾಡುವ ಪೂಜೆಯನ್ನು ಹರಿ ಸ್ವಲ್ಪವೂ ಸ್ವೀಕರಿಸುವುದಿಲ್ಲ.

ಅಜ್ಞರಲ್ಲಿ ಧನಮದದಿಂದ ಬಡಬ್ರಾಹ್ಮಣರನ್ನು ಅವಮಾನಿಸುವ ಪ್ರವೃತ್ತಿ ಕಲಿಕಾಲದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಹಿಂದೆ ಅದು ಇರಲಿಲ್ಲ. ಕೃತಯುಗದಲ್ಲಿ ಶ್ರೀಹರಿ ಶರೀರವನ್ನು ನಿರ್ಮಿಸಿದಾಗ ತನ್ನ ಪೂಜೆಯು

ಸಿದ್ಧಿಸಬೇಕಾದರೆ ಮಾನವ ಶರೀರವೇ ಪೂಜೆಗೆ ಅಧಿಷ್ಠಾನ, ಅದರಲ್ಲಿಯೂ ಜ್ಞಾನಿಯಾದ ಬ್ರಾಹ್ಮಣಾದಿ ಶರೀರವೇ ಉತ್ತಮವೆಂದು ಅದರಲ್ಲಿ ವಿಶೇಷವಾಗಿ ಸನ್ನಿಹಿತವಾಗಿ ಪೂಜೆಯನ್ನು ಸ್ವೀಕರಿಸಿದ. ಮುಂದೆ ತ್ರೇತಾಯುಗದಲ್ಲಿ ಜನರು ಮತ್ಸರದಿಂದ ಒಬ್ಬರನ್ನೊಬ್ಬರು ತಿರಸ್ಕರಿಸತೊಡಗಿದರು. ಅದರಿಂದ ಹರಿಪೂಜೆಯು ಶರೀರಾಧಿಷ್ಠಾನದಲ್ಲಿ ನಡೆಯದಂತಾಯಿತು. ಆಗ ಜ್ಞಾನಿಗಳು ಈ ಚಲಪ್ರತಿಮಾ ಪೂಜೆಯನ್ನು ಬಿಟ್ಟು ಅಚಲ ಪ್ರತಿಮಾದಿ ಪೂಜೆಯನ್ನು ಏರ್ಪಡಿಸಿದರು. ಆಗಲೂ ಮತ್ಸರಾದಿ ದೋಷರಹಿತರಾದವರು ಜ್ಞಾನಿಗಳು ಮಾತ್ರ ಉತ್ತಮವಾದ ಚಲಪ್ರತಿಮಾಪೂಜೆಯನ್ನೇ ಮುಂದುವರಿಸಿದರು. ಅಜ್ಞರು ಅಚಲ ಪ್ರತಿಮಾಪೂಜೆಯನ್ನೇ ಮಾಡಿದರು.

ಕಲಿಯುಗದಲ್ಲಿ ಅಜ್ಞರು ಆಡಂಬರದ ಪ್ರತಿಮಾಪೂಜೆ ಮಾಡುತ್ತ ತಾವೇ ನಿಜವಾಗಿ ಭಾಗವತರು, ಭಕ್ತರೆಂದು ತಿಳಿದುಕೊಂಡು ಭಾಗವತ ಶಾಸ್ತ್ರವನ್ನು ಧನಮದಾಂಧರಿಗೆ ಹೇಳುತ್ತ ಅವರಿಂದ ಮಾನಮರ್ಯಾದೆಗಳನ್ನು ಪಡೆಯುತ್ತ ಜ್ಞಾನಿಗಳನ್ನು ತಿರಸ್ಕರಿಸುವರು. ಅವರನ್ನು ತಿರಸ್ಕರಿಸುತ್ತಲೇ ವೈಭವದ ಆಡಂಬರದ ಮೂರ್ತಿಪೂಜೆ ಮಾಡುವರು. ಶ್ರೀಹರಿ ಅದನ್ನು ಸ್ವೀಕರಿಸದೆ ಬಿಟ್ಟು, ಭಾಗವತರಿಗೆ ಅವಮಾನ ಮಾಡದೆ ಭಕ್ತಿಯಿಂದ ಮಾಡುವ ಪೂಜೆಯನ್ನೇ ಸ್ವೀಕರಿಸಿ ಅನುಗ್ರಹಿಸುವನು.

ಇದನ್ನು ಭಾಗವತ ಶಾಸ್ತ್ರವೆ ಹತ್ತಾರು ಕಡೆ ಸ್ಪಷ್ಟ ಹೇಳಿದೆ—

ಪುರಾಣ್ಯನೇನ ಸೃಷ್ಟಾನಿ ನೃತಿರ್ಯಗೃಷಿದೇವತಾಃ ।<br>
ಶೇತೇ ಜೀವೇನ ರೂಪೇಣ ಪುರೇಷು ಪುರುಷೋ ಹ್ಯಸೌ ॥

(ಭಾ.೭.೧೪.೩೮)

ಮನುಷ್ಯ ಪಶು ಋಷಿ ದೇವ ಮುಂತಾದವರ ಶರೀರಗಳನ್ನು ಹರಿಯೇ ಸೃಷ್ಟಿ ಮಾಡಿ, ಪ್ರತಿಬಿಂಬನಾದ ಜೀವನೊಂದಿಗೆ ಬಿಂಬನಾಗಿ ತಾನು ಈ ಶರೀರಗಳಲ್ಲಿ ವಾಸ ಮಾಡಿ 'ಪುರುಷ'ನೆನಿಸಿದ್ದಾನೆ.

ತೇಷ್ವಿಶೋ ಭಗವಾನ್ ರಾಜಂಸ್ತಾರತಮ್ಯೇನ ವರ್ತತೇ<br>
ತಸ್ಮಾತ್ ಪಾತ್ರಂ ಹಿ ಪುರುಷೋ ಯಾವಾನಾತ್ಮಾ ಯಥೇಯತೇ ॥

(ಭಾ.೭.೧೪.೩೯)

ಮನುಷ್ಯ ಪ್ರಾಣಿ ಮುಂತಾದವರಲ್ಲಿ ತಾರತಮ್ಯವಿರುವುದರಿಂದ ಭಗವಂತನು ಅವರಲ್ಲಿ ತಾರತಮ್ಯದಿಂದಲೇ ಸನ್ನಿಹಿತನಾಗಿದ್ದಾನೆ. ಅವನ ಸನ್ನಿಧಾನವೆಷ್ಟೋ ಅಷ್ಟು ಜೀವನಿಗೆ ಹರಿಯ ಅಧಿಷ್ಠಾನತ್ವವಿರುವುದು.

ದೃಷ್ಟ್ವಾ ತೇಷಾಂ ಮಿಥೋ ನೃಣಾಂ ಅವಜ್ಞಾಮಾತ್ಮನೋ ನೃಪ ।
ತ್ರೇತಾದಿಷು ಹರೇರರ್ಚಾ ಕ್ರಿಯಾಯೈ ಕವಿಭಿಃ ಕೃತಾ ॥

(ಭಾ.೭.೧೫.೪೦)

ಪರಮಾತ್ಮನ ಚಲಪ್ರತಿಮೆಗಳಾದ ಜೀವರೊಳಗೆ ಪರಸ್ಪರ ಮತ್ಸರವು ತ್ರೇತಾದಿಯುಗಗಳಲ್ಲಿ ಬೆಳೆದುದರಿಂದ ಜ್ಞಾನಿಗಳು ಹರಿಯ ಉಪಾಸನೆಯನ್ನು ಅಚಲಪ್ರತಿಮೆಯಲ್ಲಿ ರೂಢಿಗೆ ತಂದರು.

ತತೋಽರ್ಚಾಯಾಂ ಹರಿಂ ಕೇಚಿಚ್ಛ್ರದ್ಧಯಾ ಚ ಸಪರ್ಯಯಾ ।
ಉಪಾಸತೇ ಉಪಾಸಾಽಪಿ ನಾರ್ಥದಾ ಪುರುಷದ್ವಿಷಾಂ ॥

(ಭಾ.೭.೧೫.೪೧)

ಆದರಿಂದ ಕೆಲವರು ಅಚಲ ಪ್ರತಿಮೆಯಲ್ಲಿ ಶ್ರದ್ಧೆಯಿಂದ ಪೂಜೆ ಮಾಡುತ್ತಾರೆ. ಆದರೆ ಚಲಪ್ರತಿಮೆಗಳಾದ ಪುರುಷರನ್ನು ದ್ವೇಷಿಸುವವರಿಗೆ ಆ ಪೂಜೆಯೂ ಫಲಿಸುವುದಿಲ್ಲ.

ಪುರುಷೇಷ್ವಪಿ ರಾಜೇಂದ್ರ ಸುಪಾತ್ರಂ ಬ್ರಾಹ್ಮಣಂ ವಿದುಃ ।
ತಪಸಾ ವಿದ್ಯಯಾ ತುಷ್ಟ್ಯಾ ಧತ್ತೇ ವೇದಂ ಹರೇಸ್ತನುಂ ॥

(ಭಾ.೭.೧೫.೪೨)

ಮಾನವರಲ್ಲಿಯೂ ಬ್ರಾಹ್ಮಣನೇ ಹರಿಪೂಜೆಗೆ ಉತ್ತಮ ಪ್ರತೀಕವಾಗಿರುವನು. ಏಕೆಂದರೆ, ಅವನು ತಪಸ್ಸು ವಿದ್ಯೆ ಯದೃಚ್ಛಾ ಲಾಭ ಸಂತೃಪ್ತಿಯಿಂದ ವೇದವೇದ್ಯನ ಉತ್ತಮ ಸನ್ನಿಧಾನ ಪಾತ್ರನೆನಿಸಿರುತ್ತಾನೆ.

ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತಕರ್ಮಣಃ ॥
ನ ಪಶ್ಯಾಮಿ ಪರಂ ಭೂತಂ ಅಕರ್ತುಃ ಸಮದರ್ಶನಾತ್ ॥

(ಭಾ.೩.೩೦.೩೩)

ನನ್ನಲ್ಲಿಯೇ ಮನಸ್ಸನ್ನಿಟ್ಟು ಕರ್ಮಗಳನ್ನು ಅರ್ಪಿಸಿ ನಿರ್ದೋಷನಾದ ನನ್ನನ್ನು ಕಾಣುವ ಪುರುಷನಿಗಿಂತ ಉತ್ತಮ ಜೀವನನ್ನು ಬೇರೆ ಕಾಣೆ.

ಅಹಂ ಸರ್ವೇಷು ಭೂತೇಷು ಭೂತಾತ್ಮಾಽವಸ್ಥಿತಃ ಸದಾ ।
ತಮವಜ್ಞಾಯ ಮಾಂ ಮರ್ತ್ಯಃ ಕುರುತೇಽರ್ಚಾವಿಡಂಭಂ ॥

(ಭಾ.೩.೩೦.೨೧)

ನಾನು ಎಲ್ಲರೊಳಗೆ ಸದಾ ಇರುತ್ತೇನೆ. ಆದರೂ ನನ್ನನ್ನು ತಿರಸ್ಕರಿಸಿ, ಪ್ರತಿಮೆಯನ್ನು ದೇವರೆಂದು ಬಗೆದು ಪೂಜಿಸಿದರೆ ಅದು ಪೂಜೆಯಲ್ಲ. ಪೂಜೆಯ ವಿಡಂಬನೆ.

ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಂ ।
ಹಿತ್ವಾರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥

(ಭಾ.೩.೩೦.೨೨)

ಎಲ್ಲ ಜೀವರೊಳಗೆ ಬಿಂಬನಾಗಿರುವ ನನ್ನನ್ನು ಪೂಜಿಸದೆ ಬಿಟ್ಟು ಪ್ರತಿಮೆಯನ್ನು ದೇವರೆಂದು ಬಗೆದು ಮೂಢತನದಿಂದ ಪೂಜಿಸಿದರೆ ಅದು ಬೂದಿಯಲ್ಲಿ ಹೋಮ ಮಾಡಿದಂತೆ ವ್ಯರ್ಥವಾಗುವುದು.

ಅಹಮುಚ್ಚಾವಚೈರ್ದ್ರವ್ಯೈಃ ಕ್ರಿಯಯೋತ್ಪನ್ನಯಾನಘೇ ।
ನೈವ ತುಷ್ಯೇಽರ್ಚಿತೋಽರ್ಚಾಯಾಂ ಭೂತಗ್ರಾಮಾವಮಾನಿನಃ ॥

(ಭಾ.೩.೩೦.೨೪)

ಬ್ರಾಹ್ಮಣಾವಮಾನ ಮಾಡಿ ಪ್ರತಿಮೆಯಲ್ಲಿ ನಾನಾ ದ್ರವ್ಯಗಳಿಂದ ಎಷ್ಟು ವೈಭವದಿಂದ ನನ್ನನ್ನುಪೂಜೆ ಮಾಡಿದರೂ ನಾನು ಸಂತುಷ್ಟನಾಗುವುದಿಲ್ಲ.

ಶ್ರುತದೇವನಿಗೆ ಶ್ರೀಕೃಷ್ಣ ಹೇಳುತ್ತಾನೆ—

ದುಷ್ಪ್ರಜ್ಞಾ ಅವಿದಿತ್ವೈವಂ ನಮವಜಾನಂತ್ಯಸೂಯವಃ ।

(ಭಾ.೧೦.೮೩.೪೪)

ಬ್ರಾಹ್ಮಣರಲ್ಲಿ ಇರುವ ಹರಿಯನ್ನು ತಿಳಿಯದೆ ದ್ವೇಷ ಅಸೂಯೆ ಮಾಡುವವರು ಅಜ್ಞಾನಿಗಳು, ಕೇವಲ ಪ್ರತಿಮಾದಿಗಳಲ್ಲಿ ಪೂಜಿಸುವರು.

ತಸ್ಮಾದ್ ಬ್ರಹ್ಮಋಷೀನೇತಾನ್ ಬ್ರಹ್ಮಜ್ಞಾನ್ ಶ್ರದ್ಧಯಾರ್ಚಯ ।
ಏವಂವಿದಾರ್ಚಿತೋಽಸ್ಮ್ಯದ್ಧಾ ನಾನ್ಯಥಾ ಸುವಿಭೂತಿಭಿಃ ॥

(ಭಾ.೧೦.೮೩.೪೬)

ಆದರಿಂದ ಬ್ರಹ್ಮಜ್ಞಾನಿಗಳಾದ ಬ್ರಹ್ಮರ್ಷಿಗಳನ್ನು ಶ್ರದ್ಧೆಯಿಂದ ಅರ್ಚಿಸು. ಅವರನ್ನು ಆರಾಧಿಸಿದರೇ ನನ್ನನ್ನು ಚೆನ್ನಾಗಿ ಆರಾಧಿಸಿದಂತಾಗುವುದು. ಹೊರತು ಎಷ್ಟು ವೈಭವದಿಂದ ಅಚಲ ಪ್ರತಿಮೆಯಲ್ಲಿ ಪೂಜಿಸಿದರೂ ಅದು ನನ್ನಾರಾಧನೆಯಾಗದು.

❖❖❖

–೨೯೮–

**ಭಾಗವತಶಾಸ್ತ್ರ ಜನ್ಮಜನ್ಮಗಳ ಪಾಪಪರಿಹಾರಕ**

ಸ ವಾಗ್ವಿಸರ್ಗೋ ಜನತಾಘವಿಪ್ಲವೋ
ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಂಕಿತಾನಿ ಯ-
ಚ್ಛೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥

(ಭಾ.೧.೫.೧೧)

ಶ್ರದ್ಧಾಪೂರ್ವಕಮನುಷ್ಠಿತಸ್ಯೈವ ಶ್ರವಣಾದೇರ್ವಿಶಿಷ್ಟಫಲಹೇತುತ್ವಾತ್ ಅತೋ ಅವಶ್ಯಂ ಸಾ ತತ್ರ ಸಂಪಾದ್ಯಾ ಮುಮುಕ್ಷುಭಿರಿತಿ ಭಾವೇನ ಜನ್ಮಾಂತರಾರ್ಜಿತಾಶೇಷಪಾಪಪರಿಹಾರಕಮಿದಂ ಭಾಗವತಂ ಶಾಸ್ತ್ರಮಿತಿ ತಾವದ್ದರ್ಶಯತಿ ॥ ಸ ವಾಗ್ವಿಸರ್ಗ ಇತಿ ॥ ಪ್ರತಿಶ್ಲೋಕಂ । ಅಬದ್ಧವತ್ಯಪಿ ಶಾಬ್ದಿಕಜುಗುಪ್ಸಿತಪದಾದಿಮತ್ಯಪಿ । ಯಸ್ಮಿನ್ನಿಬಂಧೇ ಅನಂತಸ್ಯ ಯಶಃಪ್ರತಿ ಪಾದಕಾನಿ ನಾಮಾನಿ ಸಂತಿ । ಅತ ಏವ ಯಚ್ಚ ಸಾಧವಃ ಶೃಣ್ವಂತಿ, ಗಾಯಂತಿ, ಸ ಏವ ವಾಗ್ವಿಸರ್ಗಃ ಶಾಸ್ತ್ರಮಿತಿ ಗೀಯತೇ । ಸ ಏವ ಚ ಶ್ರದ್ಧಯಾ ಶ್ರವಣಾದಿ ಕುರ್ವಂತ್ಯಾ ಜನತಾಯಾ ಅಶೇಷಪಾಪಪರಿಹಾರಕೋ ಭವತಿ । ತತಃ ತಸ್ಮಿನ್ನೇವ ಶಾಸ್ತ್ರೇ ಶ್ರದ್ಧಾ ಕಾರ್ಯೇತಿ ಭಾವಃ ॥

❖❖❖

ಶ್ರೀನಾರದರು ಶ್ರೀವ್ಯಾಸರಲ್ಲಿ ಹೇಳಿಕೊಳ್ಳುತ್ತಾರೆ— ಭಗವಂತನ ಮಹಿಮೆಯನ್ನು ಹೊಗಳುವ ಸುಜನರು ಸದಾ ಕೇಳುವ ಹೇಳುವ ಹಾಡುವ ಪವಿತ್ರ ನಾಮಗಳಿಂದ ತುಂಬಿದ್ದರೆ ಆ ಕಾವ್ಯಕೃತಿಯು ಭಾಗವತಶಾಸ್ತ್ರವೆನಿಸು ತ್ತದೆ. ಅದು ಪ್ರಶಸ್ತ ಪ್ರಶಂಸಾರ್ಹ. ಅದರಲ್ಲಿ ಪ್ರತಿಶ್ಲೋಕದಲ್ಲಿ ಚಮತ್ಕಾರಕಾರಿ

**ಯಾದ ಶಬ್ದಾಡಂಬರವಿಲ್ಲದಿದ್ದರೂ ಚಿಂತೆಯಿಲ್ಲ. ಜನರ ಜನ್ಮಜನ್ಮಾರ್ಜಿತ ಪಾಪಗಳೆಲ್ಲವನ್ನೂ ನಾಶಮಾಡುವುದು'.**

ಭಾಗವತಶಾಸ್ತ್ರದ ಶ್ರವಣಾದಿಗಳನ್ನು ಶ್ರದ್ದೆಯಿಂದ ಮಾಡಬೇಕು. ಆಗಲೆ ಶ್ರವಣದಿಂದ ಮಹಾಫಲ ದೊರಕುವುದು. ಜನ್ಮಾಂತರದ ಪಾಪರಾಶಿ ನಾಶವಾಗುವುದು.

❖❖❖

–೨೯೯–

**ಭಾಗವತ ಶಾಸ್ತ್ರವನ್ನು ಶ್ರದ್ಧೆಯಿಂದ ನಿತ್ಯ ಕೇಳಬೇಕು**

**ಯತ್ರೋತ್ತಮ ಶ್ಲೋಕ ಗುಣಾನುವಾದಃ**
**ಸಂಗೀಯತೇಽಭೀಕ್ಷ್ಣಮಮಂಗಲಘ್ನಃ ।**
**ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ**
**ಕೃಷ್ಣೇಽಮಲಾಂ ಭಕ್ತಿಮಭೀಪ್ಸಮಾನಃ ॥**

(ಭಾ.೧೨.೩.೧೫)

**ಭಾಗವತಶಾಸ್ತ್ರಸ್ಯ ಭಗವದ್ಭಕ್ತಿಸಂಪಾದಕತಯಾಪಿ ತತ್ರಾವಶ್ಯಕೀ ಶ್ರದ್ಧೇತಿ ಭಾವೇನ ಭಕ್ತಿಹೇತುತಾಂ ಪ್ರದರ್ಶಯತಿ ॥ ಯತ್ರೇತಿ ॥ ಯಸ್ಮಿನ್ವಾಗ್ವಿಸರ್ಗೇ । ಅಭೀಕ್ಷ್ಣಂ ಪುನಃ ಪುನಃ । ಸಂಗೀಯತೇ ।ತಮೇವ ವಾಗ್ವಿಸರ್ಗಂ । ನಿತ್ಯಂ ಅಭೀಕ್ಷ್ಣಂ ಶೃಣುಯಾತ್ । ತತ್ಫಲಮಿದಮಿತ್ಯಾಶಯೇನೋಕ್ತಂ ॥ ಕೃಷ್ಣ ಇತಿ ॥ ಕೃಷ್ಣೇ ಅಮಲಾಂ ಕಾಮಾದಿದೋಷರಹಿತಾಂ ಚಾಂಚಲ್ಯದೋಷರಹಿತಾಂ ಚ ದೃಢಾಂ ಭಕ್ತಿಂ ಕಾಂಕ್ಷಮಾಣ ಇತಿ ॥**

❖❖❖

ಶ್ರೀಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—'ಶ್ರೀಕೃಷ್ಣನಲ್ಲಿ ನಿರ್ಮಲವಾದ ಭಕ್ತಿಯನ್ನು ಹೊಂದಲು ಬಯಸುವವನು ರಾಜರ ರಾಜ್ಯವೈಭವವೆಲ್ಲವೂ ಹರಿಯ ಅನುಗ್ರಹವೆಂದು ತಿಳಿದು ಅಮಂಗಲ ಪರಿಹಾರಕವಾದ ಭಗವದ್ಗುಣ ವರ್ಣನೆಯಿಂದ ತುಂಬಿರುವ ವೇದ ಪಂಚರಾತ್ರ ಭಾರತ ಭಾಗವತಾದಿ ಶಾಸ್ತ್ರವನ್ನು ನಿತ್ಯವೂ ಪುನಃಪುನಃ ಶ್ರವಣ ಮಾಡಬೇಕು' ಭಾಗವತಶಾಸ್ತ್ರವು

**ಭಗವದ್ಭಕ್ತಿ ಸಂಪಾದಕವಾದ್ದರಿಂದಲೂ ಭಕ್ತರು ಅದನ್ನು ಶ್ರದ್ಧೆಯಿಂದ ಶ್ರವಣ ಮಾಡಬೇಕು.**

ಶ್ರದ್ಧಾಂ ಭಾಗವತೇ ಶಾಸ್ತ್ರೇ ನಿಂದಾಮನ್ಯತ್ರ ಚಾಪಿ ಹಿ ॥

(ಭಾ.೧೧.೩.೨೭)

ಇಲ್ಲಿ ಭಾಗವತಶಾಸ್ತ್ರಗಳಲ್ಲಿ ಶ್ರದ್ಧೆ. ಅನ್ಯತ್ರನಿಂದಾಗಳನ್ನು ಮಾಡಲು ವಿಧಿ ಇದೆ.

'ಜ್ಯೋತಿಷ್ಯ ಸಂಗೀತ ವೈದ್ಯಶಾಸ್ತ್ರ ಕಾಮಶಾಸ್ತ್ರ, ಅರ್ಥಶಾಸ್ತ್ರಾದಿಗಳನ್ನು ಅಭ್ಯಾಸ ಮಾಡಿದರೆ ಜ್ಞಾನಸಾಧನೆಗೆ ಪೋಷಕವಾಗುವುದರಿಂದ ಹೇಯವಲ್ಲ. ಧನಕೀರ್ತಿ ಪ್ರತಿಷ್ಠೆಗಳಿಗಾಗಿ ಮಾಡಬಾರದು. ಭಾಗವತಶಾಸ್ತ್ರಜ್ಞಾನವಿಲ್ಲದಿರುವಾಗಲಂತೂ ಸರ್ವಥಾ ಹೇಯ. ಭಾಗವತಾಧ್ಯಯನರ್ರೇ ಅಡ್ಡಿಯಾದೀತು. ಅದಕ್ಕೆ ವಿರೋಧಿಯಾದ ದುರಾಗಮ ದುರ್ದರ್ಶನಗಳನ್ನು ನಿಂದಿಸಲೇಬೇಕು. ಇಲ್ಲದಿದ್ದರೆ ತಮಸ್ಸಾಗುವುದು' ಎಂದು ಭಾಗವತತಾತ್ಪರ್ಯ (೧೧.೩.೨೭)ದಲ್ಲಿ ಹೇಳಿದ್ದಾರೆ.

❖❖❖

## –೩೦೦–

## ಶ್ರದ್ಧೆಯಿಂದ ಭಾಗವತಶಾಸ್ತ್ರ ಶ್ರವಣ ಮಾಡಿದರೆ ನಿರ್ಮಲ ಬಿಂಬಜ್ಞಾನ ಲಾಭ

**ಯತ್ರೋತ್ತಮಶ್ಲೋಕಗುಣಾನುವಾದಃ**
**ಪ್ರಸ್ತೂಯತೇ ಗ್ರಾಮ್ಯಕಥಾವಿಘಾತಃ ।**
**ನಿಷೇವ್ಯಮಾಣೋಽನುದಿನಂ ಮುಮುಕ್ಷೋ–**
**ರ್ಮತಿಂ ಸತೀಂ ಯಚ್ಛತಿ ವಾಸುದೇವೇ ॥**

(ಭಾ.೫.೧೨.೧೩)

ಬಿಂಬಜ್ಞಾನಸಾಧನತ್ವಾಚ್ಚ ಅತ್ರಶ್ರದ್ಧಾ ಆವಶ್ಯಕೀ ಇತಿ ದರ್ಶಯತಿ ॥ **ಯತ್ರೇತಿ ॥** ಯತ್ರ ಯೇಷಾಂ ಸಮೀಪೇ । ವಿಷಯವಾರ್ತಾಪ್ರತಿಬಂಧಕ ಉತ್ತಮಶ್ಲೋಕಗುಣಾನುವಾದಃ । ಪ್ರಸ್ತೂಯತೇ ಪ್ರಸಜ್ಜತೇ । ಪ್ರಕರ್ಷೇಣ ಸ್ತೂಯತ ಇತಿ ವಾ । ಸ ಚ ಅನುದಿನಂ ನಿಷೇವ್ಯಮಾಣಃ । ಮುಮುಕ್ಷೋಃ ।

**ವಾಸುದೇವಾಪರಪರ್ಯಾಯೇ ಬಿಂಬರೂಪೇ ಹರೌ। ಸತೀಂ ಸ್ವಯೋಗ್ಯಾಂ ಮತಿಂ ಜ್ಞಾನಂ। ಯಚ್ಛತಿ ದದಾತಿ। ತೇಷಾಮಿತಿ ಪೂರ್ವೇಣಾನ್ವಯಃ॥**

❖❖❖

**ರಹೂಗಣ ರಾಜನಿಗೆ ಜಡಭರತನ ಉಪದೇಶ—**

**ಮಹಾತ್ಮರ ಸಂಗದಲ್ಲಿ ಬಿಂಬಜ್ಞಾನ ಲಾಭ ಹೇಗೆಂದರೆ, ವಿಷಯ ಸುಖಭೋಗದ ಬಗ್ಗೆ ಮಾತಿಗೆ ಅವಕಾಶವೇ ಬಾರದಂತೆ ಅದಕ್ಕೆ ಪ್ರತಿಬಂಧಕವಾಗಿ ಅಲ್ಲಿ ಹರಿಯ ಗುಣಗಾನವೇ ನಡೆಯುವುದು, ಶುಕ ಪರೀಕ್ಷಿತರ ಸಂವಾದದಂತೆ. ಅದನ್ನು ಪ್ರತಿದಿನ ಚೆನ್ನಾಗಿ ಶ್ರವಣಾದಿಗಳಿಂದ ಸೇವಿಸಿದರೆ, ಮುಮುಕ್ಷುವಿಗೆ ಬಿಂಬಮೂರ್ತಿ ವಾಸುದೇವನ ಬಗ್ಗೆ ಭಕ್ತಿಯೆಂಬ ಸಾಣೆಯಲ್ಲಿ ತಿಕ್ಕಿ ಶುದ್ಧವಾದ ಒಳ್ಳೆಯ ಜ್ಞಾನವನ್ನು ನೀಡುವುದು. ಅದರಿಂದ ಭಾಗವತಶಾಸ್ತ್ರದಲ್ಲಿ ಶ್ರದ್ಧೆ ಆವಶ್ಯಕ.**

❖❖❖

**–೩೦೧–**

**ಬೇರೆ ಶಾಸ್ತ್ರ ಶ್ರವಣ ಪಾಪಕರ**

**ಮೃಷಾಗಿರಸ್ತಾ ಹ್ಯಸತೀರಸತ್ಕಥಾ**
**ನ ಕಥ್ಯತೇ ಯದ್ ಭಗವಾನಧೋಕ್ಷಜಃ।**
**ತದೇವ ಸತ್ಯಂ ತದುಹೈವ ಮಂಗಲಂ**
**ತದೇವ ಪುಣ್ಯಂ ಭಗವದ್‌ಗುಣೋದಯಂ॥**

(ಭಾ.೧೨.೧೨.೪೮)

ನ ಕೇವಲಂ ಶ್ರದ್ಧಾ ಜ್ಞಾನಾದಿಮಾತ್ರಸಾಧಿಕಾ। ಕಿಂ ನಾಮ। ತದ್‌ದ್ವಾರಾ ಮೋಕ್ಷಸ್ಯಾಪಿ। ತತೋ ಭಾಗವತಶಾಸ್ತ್ರೇ ಸಾ ಅವಶ್ಯಂ ಕರ್ತವ್ಯೇತಿಭಾವೇನ ಶ್ರದ್ಧಾಪೂರ್ವಕಂ ಶ್ರುತಸ್ಯ ಭಾಗವತಶಾಸ್ತ್ರಸ್ಯ ಮುಕ್ತ್ಯಾದಿಹೇತುತಾಂ ಪ್ರದರ್ಶಯತಿ। ಮೃಷಾ ಗಿರ ಇತಿ॥ ಯತ್ರ ಯಸ್ಮಿನ್ವಾಕ್ಯಜಾತೇ ಉತ್ತಮಶ್ಲೋಕಸ್ಯ ಯಶೋಽನುಗೀಯತೇ ತದ್ವಾಕ್ಯಜಾತಮೇವ। ಸತ್ಯಂ ಸತ್ ನೃಣಾಂ ಸಾಧುಭಾವಲಕ್ಷಣಂ ಮೋಕ್ಷಾದಿಪುರುಷಾರ್ಥಂ ಯಾಪಯತೀತಿ ಸತ್ಯಶಬ್ದವಾಚ್ಯಂ। ಕೇನ ಪ್ರಕಾರೇಣ ಮೋಕ್ಷದಂ ತದೇವೋತ್ಕೃಷ್ಟಂ ಮಂಗಲಂ

ತತ್ಸೂಚಕಂ। ಹೇತಿ ಪ್ರಸಿದ್ಧಂ ತಥಾತ್ವಮಿತಿ ದರ್ಶಯತಿ। ತದೇವ ಪುಣ್ಯಪ್ರದಂ ತದೇವ ಭಗವದ್ಗುಣಾನಾಂ ಉದಯೋ ಜ್ಞಾನಂ ಯಸ್ಮಾತ್ತಾದೃಶಂ ॥

❖❖❖

ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—

ಅಧೋಕ್ಷಜನ ಗುಣವರ್ಣನ ಮಾಡದ ಮಾತುಗಳು ವ್ಯರ್ಥ ಪ್ರಲಾಪಗಳು ಅಶುಭ, ಪಾಪಕರ. ಹರಿಗುಣವರ್ಣನ ಮಾಡುವ ಮಾತುಗಳೇ 'ಸತ್ಯ' ಅಂದರೆ 'ಸತ್' ಆದ ಮೋಕ್ಷಾದಿ ಪುರುಷಾರ್ಥಕ್ಕೆ 'ಯ' ಸಾಧಕ, ಅವು ಹೇಗೆ ಸಾಧಕವೆಂದರೆ, ತದ್–ಉ–ಹ–ಏವ ಅವೇ 'ಉ' ಉತ್ಕೃಷ್ಟ ಮಂಗಲಸೂಚಕ, ಪುಣ್ಯಪ್ರದ, ಭಗವದ್ಗುಣದ 'ಉದಯ' ಜ್ಞಾನವನ್ನು ನೀಡುವವು. ಭಾಗವತಶಾಸ್ತ್ರದಲ್ಲಿ ಶ್ರದ್ಧೆ ಇರಿಸಿದರೆ ಕೇವಲ ಜ್ಞಾನಮಾತ್ರವಲ್ಲ ಜ್ಞಾನದ್ವಾರಾ ಮೋಕ್ಷವು ಸಿದ್ಧಿಸುವುದು.

❖❖❖

–೩೦೨–

**ಭಾಗವತ ಶಾಸ್ತ್ರ ಶ್ರವಣ ದುಃಖನಾಶಕ**

ತದೇವ ಪುಣ್ಯಂ ರುಚಿರಂ ನವಂ ನವಂ
ತದೇವ ಶಶ್ವನ್ಮನಸೋ ಮಹೋತ್ಸವಂ ।
ತದೇವ ಶೋಕಾರ್ಣವಶೋಷಣಂ ನೃಣಾಂ
ಯತ್ತ್ರೋತ್ತಮಶ್ಲೋಕಯಶೋಽನುಗೀಯತೇ ॥

(ಭಾ.೧೨.೧೨.೪೯)

ಪುಣ್ಯಂ ತದೇವ। ನವಂ ನವಂ ಅರ್ಥವಿಶೇಷಪ್ರದರ್ಶಕಂ ಭೂತ್ವಾ ರುಚಿರಂ ಮನೋರಮಂ ಭವತಿ। ತದೇವ ಶಶ್ವತ್ ಸರ್ವದಾ ಮನಸೋ ಮಹೋತ್ಸವಪ್ರದಂ। ಏವಂ ಜ್ಞಾನಾದಿಜನನದ್ವಾರಾ ತದೇವ ಶೋಕಾರ್ಣವಸ್ಯ ಸಂಸಾರಸಮುದ್ರಸ್ಯ ಶೋಷಕಮಿತಿ ॥

❖❖❖

ಸೂತರು ಶೌನಕಾದಿಗಳಿಗೆ ಹೇಳುತ್ತಾರೆ.

ಹರಿಗುಣವರ್ಣನ ಮಾಡುವ ಗ್ರಂಥವೇ ಪುಣ್ಯಪ್ರದ ಮನೋಹರ. ಕೇಳಿದಂತೆಲ್ಲ ಹೊಸಹೊಸ ಪ್ರಮೇಯಗಳನ್ನು ಹೇಳುತ್ತದೆ. ಮನಸಿಗೆ ಶಾಶ್ವತ ಮೋಕ್ಷಸುಖಕ್ಕೆ ಸದೃಶವಾದ ಆನಂದ ನೀಡುತ್ತದೆ. ಶೋಕಸಾಗರವನ್ನು ಬತ್ತಿಸುತ್ತದೆ. ಆದರಿಂದ ಭಾಗವತಶಾಸ್ತ್ರದಲ್ಲಿ ಶ್ರದ್ಧೆ ಇರಿಸಬೇಕು.

❖❖❖

–೩೦೩–

**ಬೇರೆ ಶಾಸ್ತ್ರಶ್ರವಣ ವ್ಯರ್ಥ**

ಯಸ್ಯಾಂ ನ ಮೇ ಪಾವನಮಂಗ ಕರ್ಮ
ಸ್ಥಿತ್ಯುದ್ಭವತ್ರಾಣನಿರೋಧಮಸ್ಯ ।
ಲೀಲಾವತಾರೇಹಿತಕರ್ಮ ವಾ ಸ್ಯಾತ್
ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ ॥

(ಭಾ.೧೧.೧೧.೨೦)

ಏವಂ ಭಾಗವತಶಾಸ್ತ್ರೇ ಶ್ರದ್ಧಾಮಭಿಧಾಯ ದುಃಶಾಸ್ತ್ರನಿಂದಾಮಾಹ ॥ ಯಸ್ಯಾಮಿತಿ ॥ ಅಸ್ಯ ಜಗತಃ। ಸ್ಥಿತ್ಯಾದಿಕರ್ತೃತ್ವರೂಪಂ ವಾ। ಲೀಲಾವತಾರೈರೀಹಿತಂ ಕೃತಂ ಯಮಲಾರ್ಜುನಭಂಜನಾದಿಕಂ ಕರ್ಮ ವಾ। ಉಪಲಕ್ಷಣಮೇತತ್। ಮೇ ಮಮ ಮಾಹಾತ್ಮ್ಯಸೂಚಕಂ। ಅತ ಏವ ಪಾವನಂ ಕರ್ಮಮಾತ್ರಂ।ಯಸ್ಯಾಂ ವಾಚಿ ನ ಸ್ಯಾತ್ ಯಾ ವಾಕ್ ಸರ್ವಥಾ ಭಾಗವತಮಾಹಾತ್ಮ್ಯಪ್ರತಿಪಾದಿಕಾ ನ ಭವತಿ। ತಾಂ ಗಿರಂ। ಧೀರೋ ಜ್ಞಾನೀ। ಸರ್ವಥಾ ನ ಬಿಭೃಯಾತ್ ನೋಪಾದದ್ಯಾತ್। ಕುತ ಇತ್ಯತಃ ಪರಮಪುರುಷಾರ್ಥಾಸಾಧಕತ್ವಾತ್ತಸ್ಯ ಇತಿ ಭಾವೇನೋಕ್ತಂ॥ ವಂಧ್ಯಾಮಿತಿ ॥ ಅನೇನ ಅಭಾಗವತಶಾಸ್ತ್ರಸ್ಯ ಪುರುಷಾರ್ಥಾಸಾಧಕತಯಾ ತತ್ರ ಹೇಯತ್ವಬುದ್ಧಿರೂಪತ್ಯಾಗ ಏವ ಕರ್ತವ್ಯ ಇತಿ ಸೂಚಿತಂ ಭವತಿ ॥

❖❖❖

ಶ್ರೀಕೃಷ್ಣ ಉದ್ಧವನಿಗೆ ಹೇಳುತ್ತಾನೆ—

ಪ್ರಿಯ ಉದ್ಧವ, ನಾನು ನಡೆಸುತ್ತಿರುವ ಪ್ರಪಂಚದ ಅಸ್ತಿತ್ವ ಉತ್ಪತ್ತಿ ರಕ್ಷಣೆ ವಿನಾಶಗಳಾಗಲಿ ಲೀಲಾವತಾರಗಳಿಂದ ಮಾಡಿದ ಕಾರ್ಯಗಳಾಗಲಿ ಯಾವ

ಗ್ರಂಥದಲ್ಲಿ ವರ್ಣಿತವಾಗುವುದಿಲ್ಲವೋ ಅಂಥ ಗ್ರಂಥ ನಿಷ್ಫಲ. ಜ್ಞಾನಿಯು ಅದನ್ನು ಶ್ರವಣಾದಿಗಳಿಗೆ ಸ್ವೀಕರಿಸಬಾರದು. ಬಂಜೆಯಂತೆ ಅದು. ಮೋಕ್ಷಾದಿ ಫಲವನ್ನು ನೀಡದು. ಅದನ್ನು ಬಿಟ್ಟುಬಿಡಬೇಕು.

❖❖❖

–೩೦೪–

**ಬೇರೆ ಶಾಸ್ತ್ರಶ್ರವಣ ದುಃಖಕರ**

ಗಾಂ ದುಗ್ಧದೋಹಾಮಸತೀಂ ಚ ಭಾರ್ಯಾಂ
ದೇಹಂ ಪರಾಧೀನಮಸತ್‌ಪ್ರಜಾಂ ಚ ।
ವಿತ್ತಂ ತ್ವತೀರ್ಥೀಕೃತಮಂಗ ವಾಚಂ
ಹೀನಾಂ ಮಯಾ ರಕ್ಷತಿ ದುಃಖದುಃಖೀ ॥

(ಭಾ.೧೧.೧೧.೧೯)

ನ ಕೇವಲಂ ಪುರುಷಾರ್ಥಾಸಾಧಕತಯಾ ತತ್ಪರಿತ್ಯಾಗಃ।ಕಿಂ ನಾಮ ಬಹುಕ್ಲೇಶಪ್ರದತಯಾಪೀತ್ಯಭಿಪ್ರೇತ್ಯಾಹ ॥ **ಗಾಮಿತಿ** ॥ ಪರಗೃಹೇ ದುಗ್ಧ ಏವ ದೋಹಃ ಕ್ಷೀರಂ ಯಸ್ಯಾಃ ಸಾ ಸ್ವಗೃಹಾನಯನಾನಂತರಂ ಸರ್ವಥಾ ಕ್ಷೀರರಹಿತಾಂ ಗಾಂ । ಅಸತೀಂ ಸ್ವೈರಿಣೀಂ ಪರುಷಭಾಷಿಣೀಂ ಭಾರ್ಯಾಂ ಚ । ತಥಾ ಪರೇಷಾಮೇವ ಅಧೀನಂ ಸತ್ ನಸಿಪ್ರೋತವೃಷಭ ಇವ ತೇಷಾಮೇವ ಸತತಂ ಕಾರ್ಯಕರಂ ನ ಪುನಃ ಸ್ವಾಭಿಮಾನಿನಃ ಹಿತಕರಂ ಈದೃಶಂ ದೇಹಂ । ಅಸತೀಂ ದುಷ್ಟಾಂ ಸ್ವಚ್ಛಾಯಾಽನನುವರ್ತಿನೀಂ ಪ್ರಜಾಂ ಪುತ್ರಾದಿರೂಪಾಂ ಚ । ತೀರ್ಥಯಾತ್ರಾದಿಷ್ವವಿನಿಯುಕ್ತತಯಾ ಅಪವಿತ್ರೀಕೃತಂ ವಿತ್ತಂ ಚ । ಮಯಾ ಹೀನಾಂ ಮದುತ್ಕರ್ಷಾಪ್ರತಿಪಾದಿಕಾಂ ವಾಚಂ ಚ । ಹೇ ಅಂಗ । ದುಃಖದುಃಖೀ ಬಹುಕ್ಲೇಶವಾನೇವ ಭೂತ್ವಾ ರಕ್ಷತಿ । ಉತ್ತರತ್ರ ಫಲಭ್ರಾಂತ್ಯಾ ತದ್ರಕ್ಷಣನಿಮಿತ್ತಂ ದುಃಖಂ ರಕ್ಷಣಸಮಯೇ ಅನುಭವತಿ । ಫಲಂ ತು ನಾಸ್ತ್ಯೇವೇತಿ ಪ್ರಾಗೇವೋಕ್ತಮಿತಿ ಭಾವಃ । **ಯಥಾಹುಃ**—

''ಶಬ್ದಬ್ರಹ್ಮಣಿ ನಿಷ್ಣಾತೋ ನ ನಿಷ್ಣೀಯಾತ್ಪರೇ ಯದಿ ॥
ಶ್ರಮಸ್ತಸ್ಯ ಭ್ರಮಫಲೋ ಹ್ಯಧೇನುಮಿವ ರಕ್ಷತ'' ಇತಿ ॥

❖❖❖

**ಶ್ರೀಕೃಷ್ಣನು ಉದ್ಧವನಿಗೆ ಉಪದೇಶಿಸುತ್ತಾನೆ—**

**ಪರರ ಗೃಹದಲ್ಲಿದ್ದು ಹಾಲೆಲ್ಲವನ್ನೂ ಕೊಟ್ಟು, ಈಗ ಮನೆಗೆ ಬಂದಮೇಲೆ ಹಾಲು ಕೊಡದ ಆಕಳನ್ನೂ ಸ್ವೈರಿಣಿಯಾದ ಶೀಲಗೆಟ್ಟ ಹೆಂಡತಿಯನ್ನೂ ತನ್ನ ಹಿತಕ್ಕಾಗಿ ಪರಲೋಕಸಾಧನೆ ಮಾಡದೆ ಅನ್ಯರ ಚಾಕರಿಗೇ ಮೀಸಲಾಗಿರುವ ಹಾಳು ಶರೀರವನ್ನೂ ನಡತೆಗೆಟ್ಟ ಮಕ್ಕಳನ್ನೂ ಸತ್ಪಾತ್ರರಿಗೆ ವಿನಿಯೋಗ ಮಾಡದೆ ಧರ್ಮಕಾರ್ಯಕ್ಕೂ ವಿನಿಯೋಗಿಸದೆ ಕೂಡಿಟ್ಟಿರುವ ಹಣವನ್ನೂ ಕಾಪಾಡಿ ಕೊಂಡಿರುವುದರಲ್ಲಿ ಏನೂ ಸುಖವಿಲ್ಲ, ದುಃಖಕ್ಕೇ ಅದು ಕಾರಣವಾಗುವುದು. ಹಾಗೇ ಹರಿಯ ಮಹಿಮೆಯನ್ನು ವರ್ಣಿಸದ ದುರಾಗಮ ದುಷ್ಟಕಾವ್ಯಾದಿ ಗ್ರಂಥವನ್ನು ಪಠನ ಪಾಠನಾದಿಗಳಿಂದ ಪರಂಪರೆಯಲ್ಲಿ ರಕ್ಷಿಸಿಕೊಳ್ಳುವವನು ಬಲು ಕ್ಲೇಶವನ್ನೇ ಹೊಂದುತ್ತಾನೆ.**

ಮುಂದೆ ಪ್ರಯೋಜನವಾದೀತೆಂದು ಭ್ರಾಂತಿಯಿಂದ ರಕ್ಷಿಸಿಕೊಂಡು ರಕ್ಷಿಸುವ ಸಮಯದಲ್ಲಿಯೂ ದುಃಖವೆ. ಕೊನೆಗೆ ಫಲವಂತೂ ಇಲ್ಲ.

ಶಬ್ದ ಬ್ರಹ್ಮಣಿ ನಿಷ್ಣಾತೋ ನ ನಿಷ್ಣೀಯಾತ್ ಪರೇ ಯದಿ
ಶ್ರಮಸ್ತಸ್ಯ ಭ್ರಮಫಲೋ ಹ್ಯಧೇನುಮಿವ ರಕ್ಷತಃ ॥

(ಭಾ.೧೧.೧೧.೧೮)

ಪರೋಕ್ಷಜ್ಞಾನವನ್ನು ಸಂಪಾದಿಸಿದವನು ವೇದವನ್ನು ಯಾಗಾದಿ ಕಾಮ್ಯಕರ್ಮಗಳಿಗಾಗಿ ಆದರಿಸಿ ಅದರ ಅರ್ಥವಾದ ಪರಬ್ರಹ್ಮನನ್ನು ಆದರಿಸದಿದ್ದರೆ ಅವನ ಶ್ರಮಕ್ಕೆ ಅಜ್ಞಾನ ತಮಸ್ಸುಗಳೇ ಫಲ. ಹಾಲು ಕೊಡದ ಹಸುವನ್ನು ಸಾಕುವಂತೆ ವ್ಯರ್ಥವಾಗುವುದು ಎಂದು ಶ್ರೀಕೃಷ್ಣನು ಉದ್ಧವನಿಗೆ ಉಪದೇಶಿಸುತ್ತಾನೆ.

ಆದರೆ ಮುಂದೆ ಭಾಗವತದಲ್ಲಿಯೇ ಶ್ರೀಶುಕರು ಕಲಿಯುಗದಲ್ಲಿ ಜನರು ಕಲಿದೋಷದಿಂದ ಹೇಗೆ ದಾರಿತಪ್ಪಿ ನಡೆಯುತ್ತಾರೆ ಎನ್ನುವುದನ್ನು ಹೇಳುತ್ತ,

ಗಾಶ್ಚಾಪಯಸ್ವಿನೀಃ ತ್ಯಕ್ಷ್ಯಂತಿ ॥ (ಭಾ.೧೨.೩.೩೬)

'ಹಾಲು ಕೊಡುವುದನ್ನು ನಿಲ್ಲಿಸಿದರೆ ಅಂಥ ಬರಡಾದ ಹಸುಗಳನ್ನು ತ್ಯಾಗ ಮಾಡುತ್ತಾರೆ' ಇದು ಕಲಿದೋಷ ಎಂದಿದ್ದಾರೆ. ಆದರಿಂದ ಬರಡಾದ ಹಸುವನ್ನು

ತ್ಯಾಗ ಮಾಡದೆ ಸಾಕುವುದರಿಂದ ಹಾಲು ಮಾರುವ ವೃತ್ತಿಯವನಿಗೆ ಏನೂ ಆರ್ಥಿಕ ಲಾಭವಿಲ್ಲವೆನ್ನುವಲ್ಲಿಯೆ ತಾತ್ಪರ್ಯ. ಹೊರತು ಪಾರಮಾರ್ಥಿಕ ಲಾಭ ವಿಲ್ಲವೆಂದಲ್ಲ. ಹಾಗೇ ಶೀಲಗೆಟ್ಟ ಹೆಂಡತಿಯನ್ನು ಪರಿತ್ಯಾಗ ಮಾಡಬೇಕೆಂದೂ ಭಾಗವತ ಹೇಳುತ್ತಿಲ್ಲ. ಏಕೆಂದರೆ ತಾ.ನಿರ್ಣಯ (೨೧.೩೭೨)ದಲ್ಲಿ ಹೇಳಿ ದ್ದಾರೆ—

'ಪತ್ನಿ ಶೀಲಗೆಟ್ಟರೆ ಪತಿಗೆ ಪುಣ್ಯಲೋಕವಿಲ್ಲವಾಗುತ್ತದೆ. ಅರ್ಧಾಂಗಿ ಕೆಟ್ಟರೆ ಅರ್ಧ ಅಂಗ ಕೆಟ್ಟಂತೆ. ಅವಳು ಶೀಲಗೆಟ್ಟರೆ ಅವಳನ್ನು ಸಂತತಿಗಾಗಿ ಸ್ವೀಕರಿಸಿದರೂ ಸುಖವಿಲ್ಲ. ತ್ಯಜಿಸಿದರೂ ಸುಖವಿಲ್ಲ. 'ನಾತಿ ಚರಾಮಿ' ಎಂದು ಅಗ್ನಿಸಾಕ್ಷಿಯಾಗಿ ಹೇಳಿದಮೇಲೆ, ಅವಳನ್ನು ತ್ಯಾಗ ಮಾಡಿದರೂ, ಹೋಗಲಿ ಏನಾದರೂ ಮಾಡಲಿ ಎಂದು ಉಪೇಕ್ಷೆಯಿಂದ ಬಿಟ್ಟರೂ ಪರಲೋಕ ಸರ್ವಥಾ ಇಲ್ಲವಾಗುವುದು. ಬರಡು ಹಸುವನ್ನು ಸಾಕಿದರೆ ಪುಣ್ಯಸಂಪಾದನೆಯಾದರೂ ಇದೆ. ಕೆಟ್ಟಹೆಂಡತಿಯನ್ನು ಸಾಕಿದ್ದರಿಂದ ಪುಣ್ಯವಿಲ್ಲ, ಆದರೆ ಅವಳು ಮತ್ತೆಮತ್ತೆ ತಪ್ಪು ಮಾಡುತ್ತಿದ್ದರೆ ಪತಿಗೆ ಅಪಕೀರ್ತಿಯೂ ಬರುತ್ತದೆ. ಅದನ್ನು ನೋಡುವುದರಿಂದ ಅವನಿಗೆ ನಿತ್ಯ ದುಃಖವೆ, ಆದರಿಂದ ಅವಳನ್ನು ದುರ್ಜನ ಸಂಗದಿಂದ ದೂರಮಾಡಿ, ರಕ್ಷಿಸುತ್ತ ಅವಳು ತಾನೇ ಶೀಲಗೆಡದಂತೆ ತನ್ನ ಶೀಲವನ್ನು ರಕ್ಷಿಸಿಕೊಳ್ಳುವಂತೆ ಉಪಾಯವಾಗಿ ನೋಡಿಕೊಳ್ಳಬೇಕು ಹೊರತು ತ್ಯಾಗ ಮಾಡುವುದಾಗಲಿ ಬಲಾತ್ಕಾರವಾಗಿ ಬಂಧನದಲ್ಲಿಟ್ಟು ಹಿಂಸಿಸುವುದಾಗಲಿ ಸಲ್ಲದು' ಎನ್ನುವುದು ಭಾಗವತದ 'ಅಸತೀಂ ಚ ಭಾರ್ಯಾಂ' ಎನ್ನುವ ಮಾತಿನ ಅಭಿಪ್ರಾಯ.

❖❖❖

–೩೦೫–

**ಹರಿಯನ್ನು ಹೇಳದ ಗ್ರಂಥ ಸರ್ವಥಾ ಬೇಡ**

**ನ ತದ್ ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಯದಿ ಕರ್ಹಿಚಿದ್ ವದೇತ್ ।**
**ತದ್ಧ್ವಾಂಕ್ಷ ತೀರ್ಥಂ ನ ತು ಹಂಸಸೇವಿತಂ**
**ಯತ್ರಾಚ್ಯುತಸ್ತತ್ರ ಹಿ ಸಾಧವೋಽಮಲಾಃ ॥** (ಭಾ.೧೨.೧೨.೫೦)

ನಿರ್ಮಲಮಾನಸೈರ್ಭಾಗವತೈಃ ಪರಿತ್ಯಕ್ತತ್ವಾದಪಿ ಇದಂ ಅಭಾಗವತಶಾಸ್ತ್ರಂ ಪರಿತ್ಯಾಜ್ಯಮಿತ್ಯಾಶಯೇನಾಹ॥ **ನ ಯದ್ವಚ ಇತಿ**॥ ಚಿತ್ರಪದಮಪಿ ಯದ್ವಚಃ। ಜಗತ್ಪವಿತ್ರಂ ಹರೇರ್ಯಶಃ। ಯದಿ ಕರ್ಹಿಚಿದಪಿ ಆದಾವಂತೇ ಮಧ್ಯೇ ವಾ ನ ವದೇತ್। ತರ್ಹಿ ಧ್ವಾಂಕ್ಷೈಃ ಅಶುದ್ಧಮಾನಸೈಃ। ಅತ ಏವ ಅಸಾಧುಭಿರೇವ ಸೇವ್ಯಂ ತೀರ್ಥಂ। ನ ತು ಹಂಸೈಃ ಶುದ್ಧಮಾನಸೈಃ ಸಾಧುಭಿಃ ಸೇವಿತಂ। ಅಚ್ಯುತಯಶಃಪ್ರತಿಪಾದಕತ್ವಾಭಾವೇಽಪಿ ಹಂಸಸೇವಿತತ್ವಂ ಕಿಂ ನ ಸ್ಯಾದಿತ್ಯತ ಆಹ॥ **ಯತ್ರೇತಿ**॥ ಯತ್ರ ಯಸ್ಮಿಂಸ್ತೀರ್ಥೇ। ಅಚ್ಯುತಃ ಪ್ರತಿಪಾದ್ಯತೇ। ತತ್ರ ತಸ್ಮಿನ್ನೇವ ತೀರ್ಥೇ। ಹಂಸಾಃ ಪ್ರವರ್ತಂತ ಇತಿ ಹಿ ವ್ಯಾಪ್ತಿಃ। ಯತ್ತೀರ್ಥಂ ಭಗವತ್ಪ್ರತಿಪಾದಕಂ ತದೇವ ಹಂಸಸೇವಿತಂ ಇತಿ ವ್ಯಾಪ್ತ್ಯಾ ವ್ಯಾಪಕನಿವೃತ್ತೌ ವ್ಯಾಪ್ಯನಿವೃತ್ತೇರಪಿ ಆವಶ್ಯಕತ್ವಾನ್ನೈವಮಿತಿ ಭಾವಃ। ಅತ್ರ ಭಾಗವತಶಾಸ್ತ್ರೇ ಯತ್ರ ಯತ್ರ ಹಂಸಪರಮಹಂಸಾದಿ ತುರ್ಯಾಶ್ರಮವಾಚಕಾಃ ಶಬ್ದಾಃ ಪ್ರಯುಜ್ಯಂತೇ ತತ್ರ ಸರ್ವತ್ರ ಪ್ರಾಯೇಣ ಶುದ್ಧಮನಸ್ತ್ವರೂಪಂ ಧರ್ಮಮಾಶ್ರಿತ್ಯೈವೇತಿ ಜ್ಞೇಯಂ। ಜ್ಞಾಪಕವಿಶೇಷೇ ಸತಿ ತು ತುರ್ಯಾಶ್ರಮಬೋಧಕತ್ವಂ ಚ। ಅನ್ಯಥಾ ಜನಕಾದೀನಾಂ ಗೃಹಸ್ಥಾನಾಂ, ಅವಧೂತಾದೀನಾಂ ಬ್ರಹ್ಮಚಾರಿಣಾಂ, ವಾನಪ್ರಸ್ಥಾನಾಮಧಿಕಾರಿಣಾಂ ಚ, ಭಾಗವತೇ ಶಾಸ್ತ್ರೇ ಅನಧಿಕಾರಪ್ರಸಂಗೇನ ಬಹುವಿಪ್ಲವಾಪಾತಾತ್। ತದೇತದಭಿಪ್ರೇತ್ಯ ಪ್ರಕೃತತ್ವಾತ್ ಯತ್ರಾಚ್ಯುತಃ ತತ್ರ ಹಂಸಾಃ ಇತ್ಯೇವ ವಕ್ತವ್ಯೇ ತತ್ಪದತಾತ್ಪರ್ಯಾರ್ಥಂ ಕಥಯಾಮಾಸ ಸಾಧವೋಽಮಲಾ ಇತ್ಯನೇನೇತಿ ॥

❖❖❖

ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—

ಯಾವ ಗ್ರಂಥವು ಕಾವ್ಯಾಲಂಕಾರಾದಿಯುಕ್ತವಾದರೂ ಲೋಕಪಾವನ ಹರಿ ಮಹಿಮೆಯನ್ನು ಎಲ್ಲಿಯೂ ಆದಿ ಮಧ್ಯ ಅಂತ್ಯಗಳಲ್ಲಿ ಒಂದುಕಡೆಯಾದರೂ ವರ್ಣಿಸುವುದಿಲ್ಲವೋ ಆ ಗ್ರಂಥವು ಕಾಗೆಗಳಂತೆ ಅಶುದ್ಧ ಮನಸಿನವರಿಂದ ಸೇವ್ಯವಾದ ಗ್ರಂಥವಾಗುವುದು ಹೊರತು ಅದು ಎಂದೂ ಶುದ್ಧಮನಸಿನವರಿಂದ ಸೇವಿತವಾಗುವುದಿಲ್ಲ. ಏಕೆಂದರೆ ಕಾಗೆಗಳು ಮುಣುಗುವ ಕೊಚ್ಚೆ ನೀರಿನಲ್ಲಿ ಮಾನಸ ಸರೋವರದ ಹಂಸಗಳು ಸ್ನಾನ ಮಾಡುವುದಿಲ್ಲ. ಯಾವ ಶಾಸ್ತ್ರದಲ್ಲಿ ಹರಿಯ ಮಹಿಮೆ ವರ್ಣಿತವಾಗುವುದೋ ಆ ಗ್ರಂಥದಲ್ಲಿ ಹಂಸಗಳಂತೆ ಪರಮ ಪಾವನರಾದ ಭಾಗವತರು ಪ್ರವೃತ್ತಿ ಮಾಡುವರು. ಭಗವತ್ಪ್ರತಿಪಾದಕವಲ್ಲದ ಶಾಸ್ತ್ರವನ್ನು ಭಾಗವತರು ಸ್ವೀಕರಿಸುವುದಿಲ್ಲ.

ತ್ಯಾಗ ಮಾಡದೆ ಸಾಕುವುದರಿಂದ ಹಾಲು ಮಾರುವ ವೃತ್ತಿಯವನಿಗೆ ಏನೂ ಆರ್ಥಿಕ ಲಾಭವಿಲ್ಲವೆನ್ನುವಲ್ಲಿಯೆ ತಾತ್ಪರ್ಯ. ಹೊರತು ಪಾರಮಾರ್ಥಿಕ ಲಾಭ ವಿಲ್ಲವೆಂದಲ್ಲ. ಹಾಗೇ ಶೀಲಗೆಟ್ಟ ಹೆಂಡತಿಯನ್ನು ಪರಿತ್ಯಾಗ ಮಾಡಬೇಕೆಂದೂ ಭಾಗವತ ಹೇಳುತ್ತಿಲ್ಲ. ಏಕೆಂದರೆ ತಾ.ನಿರ್ಣಯ (೨೧.೩೭೨)ದಲ್ಲಿ ಹೇಳಿ ದ್ದಾರೆ—

'ಪತ್ನಿ ಶೀಲಗೆಟ್ಟರೆ ಪತಿಗೆ ಪುಣ್ಯಲೋಕವಿಲ್ಲವಾಗುತ್ತದೆ. ಅರ್ಧಾಂಗಿ ಕೆಟ್ಟರೆ ಅರ್ಧ ಅಂಗ ಕೆಟ್ಟಂತೆ. ಅವಳು ಶೀಲಗೆಟ್ಟರೆ ಅವಳನ್ನು ಸಂತತಿಗಾಗಿ ಸ್ವೀಕರಿಸಿದರೂ ಸುಖವಿಲ್ಲ. ತ್ಯಜಿಸಿದರೂ ಸುಖವಿಲ್ಲ. 'ನಾತಿ ಚರಾಮಿ' ಎಂದು ಅಗ್ನಿಸಾಕ್ಷಿಯಾಗಿ ಹೇಳಿದಮೇಲೆ, ಅವಳನ್ನು ತ್ಯಾಗ ಮಾಡಿದರೂ, ಹೋಗಲಿ ಏನಾದರೂ ಮಾಡಲಿ ಎಂದು ಉಪೇಕ್ಷೆಯಿಂದ ಬಿಟ್ಟರೂ ಪರಲೋಕ ಸರ್ವಥಾ ಇಲ್ಲವಾಗುವುದು. ಬರಡು ಹಸುವನ್ನು ಸಾಕಿದರೆ ಪುಣ್ಯಸಂಪಾದನೆಯಾದರೂ ಇದೆ. ಕೆಟ್ಟಹೆಂಡತಿಯನ್ನು ಸಾಕಿದ್ದರಿಂದ ಪುಣ್ಯವಿಲ್ಲ, ಆದರೆ ಅವಳು ಮತ್ತೆಮತ್ತೆ ತಪ್ಪು ಮಾಡುತ್ತಿದ್ದರೆ ಪತಿಗೆ ಅಪಕೀರ್ತಿಯೂ ಬರುತ್ತದೆ. ಅದನ್ನು ನೋಡುವುದರಿಂದ ಅವನಿಗೆ ನಿತ್ಯ ದುಃಖವೆ, ಆದರಿಂದ ಅವಳನ್ನು ದುರ್ಜನ ಸಂಗದಿಂದ ದೂರಮಾಡಿ, ರಕ್ಷಿಸುತ್ತ ಅವಳು ತಾನೇ ಶೀಲಗೆಡದಂತೆ ತನ್ನ ಶೀಲವನ್ನು ರಕ್ಷಿಸಿಕೊಳ್ಳುವಂತೆ ಉಪಾಯವಾಗಿ ನೋಡಿಕೊಳ್ಳಬೇಕು ಹೊರತು ತ್ಯಾಗ ಮಾಡುವುದಾಗಲಿ ಬಲಾತ್ಕಾರವಾಗಿ ಬಂಧನದಲ್ಲಿಟ್ಟು ಹಿಂಸಿಸುವುದಾಗಲಿ ಸಲ್ಲದು' ಎನ್ನುವುದು ಭಾಗವತದ 'ಅಸತೀಂ ಚ ಭಾರ್ಯಾಂ' ಎನ್ನುವ ಮಾತಿನ ಅಭಿಪ್ರಾಯ.

❖❖❖

—೩೦೫—

**ಹರಿಯನ್ನು ಹೇಳದ ಗ್ರಂಥ ಸರ್ವಥಾ ಬೇಡ**

**ನ ತದ್ ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಯದಿ ಕರ್ಹಿಚಿದ್ ವದೇತ್ ।**
**ತದ್ಧ್ವಾಂಕ್ಷ ತೀರ್ಥಂ ನ ತು ಹಂಸಸೇವಿತಂ**
**ಯತ್ರಾಚ್ಯುತಸ್ತತ್ರ ಹಿ ಸಾಧವೋಽಮಲಾಃ ॥** (ಭಾ.೧೨.೧೨.೫೦)

ನಿರ್ಮಲಮಾನಸೈರ್ಭಾಗವತೈಃ ಪರಿತ್ಯಕ್ತತ್ವಾದಪಿ ಇದಂ ಅಭಾಗವತಶಾಸ್ತ್ರಂ ಪರಿತ್ಯಾಜ್ಯಮಿತ್ಯಾಶಯೇನಾಹ ॥ **ನ ಯದ್ವಚ ಇತಿ** ॥ ಚಿತ್ರಪದಮಪಿ ಯದ್ವಚಃ । ಜಗತ್ಪವಿತ್ರಂ ಹರೇರ್ಯಶಃ । ಯದಿ ಕರ್ಹಿಚಿದಪಿ ಆದಾವಂತೇ ಮಧ್ಯೇ ವಾ ನ ವದೇತ್ । ತರ್ಹಿ ಧ್ವಾಂಕ್ಷೈಃ ಅಶುದ್ಧಮಾನಸೈಃ । ಅತ ಏವ ಅಸಾಧುಭಿರೇವ ಸೇವ್ಯಂ ತೀರ್ಥಂ । ನ ತು ಹಂಸೈಃ ಶುದ್ಧಮಾನಸೈಃ ಸಾಧುಭಿಃ ಸೇವಿತಂ । ಅಚ್ಯುತಯಶಃಪ್ರತಿಪಾದಕತ್ವಾಭಾವೇऽಪಿ ಹಂಸಸೇವಿತತ್ವಂ ಕಿಂ ನ ಸ್ಯಾದಿತ್ಯತ ಆಹ ॥ **ಯತ್ರೇತಿ** ॥ ಯತ್ರ ಯಸ್ಮಿಂಸ್ತೀರ್ಥೇ । ಅಚ್ಯುತಃ ಪ್ರತಿಪಾದ್ಯತೇ । ತತ್ರ ತಸ್ಮಿನ್ನೇವ ತೀರ್ಥೇ । ಹಂಸಾಃ ಪ್ರವರ್ತಂತ ಇತಿ ಹಿ ವ್ಯಾಪ್ತಿಃ । ಯತ್ತೀರ್ಥಂ ಭಗವತ್ಪ್ರತಿಪಾದಕಂ ತದೇವ ಹಂಸಸೇವಿತಂ ಇತಿ ವ್ಯಾಪ್ತ್ಯಾ ವ್ಯಾಪಕನಿವೃತ್ತೌ ವ್ಯಾಪ್ಯನಿವೃತ್ತೇರಪಿ ಆವಶ್ಯಕತ್ವಾನ್ನೈವಮಿತಿ ಭಾವಃ । ಅತ್ರ ಭಾಗವತಶಾಸ್ತ್ರೇ ಯತ್ರ ಯತ್ರ ಹಂಸಪರಮಹಂಸಾದಿ ತುರ್ಯಾಶ್ರಮವಾಚಕಾಃ ಶಬ್ದಾಃ ಪ್ರಯುಜ್ಯಂತೇ ತತ್ರ ಸರ್ವತ್ರ ಪ್ರಾಯೇಣ ಶುದ್ಧಮನಸ್ತ್ವರೂಪಂ ಧರ್ಮಮಾಶ್ರಿತ್ಯೈವೇತಿ ಜ್ಞೇಯಂ । ಜ್ಞಾಪಕವಿಶೇಷೇ ಸತಿ ತು ತುರ್ಯಾಶ್ರಮಬೋಧಕತ್ವಂ ಚ । ಅನ್ಯಥಾ ಜನಕಾದೀನಾಂ ಗೃಹಸ್ಥಾನಾಂ, ಅವಧೂತಾದೀನಾಂ ಬ್ರಹ್ಮಚಾರಿಣಾಂ, ವಾನಪ್ರಸ್ಥಾನಾಮಧಿಕಾರಿಣಾಂ ಚ, ಭಾಗವತೇ ಶಾಸ್ತ್ರೇ ಅನಧಿಕಾರಪ್ರಸಂಗೇನ ಬಹುವಿಪ್ಲವಾಪಾತಾತ್ । ತದೇತದಭಿಪ್ರೇತ್ಯ ಪ್ರಕೃತತ್ವಾತ್ ಯತ್ರಾಚ್ಯುತಃ ತತ್ರ ಹಂಸಾಃ ಇತ್ಯೇವ ವಕ್ತವ್ಯೇ ತತ್ಪದತಾತ್ಪರ್ಯಾರ್ಥಂ ಕಥಯಾಮಾಸ ಸಾಧವೋऽಮಲಾ ಇತ್ಯನೇನೇತಿ ॥

❖❖❖

ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—

ಯಾವ ಗ್ರಂಥವು ಕಾವ್ಯಾಲಂಕಾರಾದಿಯುಕ್ತವಾದರೂ ಲೋಕಪಾವನ ಹರಿ ಮಹಿಮೆಯನ್ನು ಎಲ್ಲಿಯೂ ಆದಿ ಮಧ್ಯ ಅಂತ್ಯಗಳಲ್ಲಿ ಒಂದುಕಡೆಯಾದರೂ ವರ್ಣಿಸುವುದಿಲ್ಲವೋ ಆ ಗ್ರಂಥವು ಕಾಗೆಗಳಂತೆ ಅಶುದ್ಧ ಮನಸಿನವರಿಂದ ಸೇವ್ಯವಾದ ಗ್ರಂಥವಾಗುವುದು ಹೊರತು ಅದು ಎಂದೂ ಶುದ್ಧಮನಸಿನವ ರಿಂದ ಸೇವಿತವಾಗುವುದಿಲ್ಲ. ಏಕೆಂದರೆ ಕಾಗೆಗಳು ಮುಣುಗುವ ಕೊಚ್ಚೆ ನೀರಿನಲ್ಲಿ ಮಾನಸ ಸರೋವರದ ಹಂಸಗಳು ಸ್ನಾನ ಮಾಡುವುದಿಲ್ಲ. ಯಾವ ಶಾಸ್ತ್ರದಲ್ಲಿ ಹರಿಯ ಮಹಿಮೆ ವರ್ಣಿತವಾಗುವುದೋ ಆ ಗ್ರಂಥದಲ್ಲಿ ಹಂಸಗಳಂತೆ ಪರಮ ಪಾವನರಾದ ಭಾಗವತರು ಪ್ರವೃತ್ತಿ ಮಾಡುವರು. ಭಗವತ್ಪ್ರತಿಪಾದಕವಲ್ಲದ ಶಾಸ್ತ್ರವನ್ನು ಭಾಗವತರು ಸ್ವೀಕರಿಸುವುದಿಲ್ಲ.

ಭಾಗವತದಲ್ಲಿ ಹಂಸ ಪರಮಹಂಸ ಎಂದು ಸನ್ಯಾಸಿಗಳನ್ನು ಹೇಳುವ ಶಬ್ದಗಳಿಗೆ ಪ್ರಾಯಃ ಶುದ್ಧ ಮನಸಿನವರೆಂದಿಷ್ಟೇ ಅರ್ಥ. ಸನ್ನ್ಯಾಸಿಗಳೆಂದಲ್ಲ. ಇಲ್ಲದಿದ್ದರೆ ಜನಕಾದಿ ಗೃಹಸ್ಥರಿಗೂ ಅವಧೂತಾದಿ ಬ್ರಹ್ಮಚಾರಿಗಳಿಗೂ ವಾನಪ್ರಸ್ಥರಿಗೂ ಭಾಗವತಾಧ್ಯಯನದಲ್ಲಿ ಅಧಿಕಾರ ವಿಲ್ಲವೆಂದಾದೀತು. ಆದರಿಂದಲೇ 'ಹಂಸಾಃ' ಎಂದು ಹೇಳದೆ ಅದರ ತಾತ್ಪರ್ಯಾರ್ಥವನ್ನೇ 'ಸಾಧವೋऽಮಲಾಃ' ಎಂದಿದ್ದಾರೆ. ನಿರ್ಮಲಮನಸಿನವರಾದ ಭಾಗವತರಿಂದ ಪರಿತ್ಯಕ್ತವಾದುದು ಅಭಾಗವತ ಗ್ರಂಥ. ಅದರಿಂದ ಮುಮುಕ್ಷುಗಳು ಅದನ್ನು ಪರಿತ್ಯಜಿಸಬೇಕು ಎನ್ನುತ್ತದೆ ಭಾಗವತ.

❖❖❖

—೩೦೬—

## ಹರಿಯನ್ನು ಹೇಳದ ಗ್ರಂಥ ಎಷ್ಟು ಸುಂದರವಾದರೂ ತ್ಯಾಜ್ಯವೆ

**ನ ತದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।**
**ತದ್ವಾಯಸಂ ತೀರ್ಥಮುಶಂತಿ ಮಾನಸಾ**
**ನ ಯತ್ರ ಹಂಸಾ ನ್ಯಪತನ್ನಿಮಂಕ್ಷಯಾ ॥**

(ಭಾ.೧.೫.೧೦)

ನನ್ವೇವಂ ಫಲಾಭಾವೇನ ಬಹುಕ್ಲೇಶಕರತ್ವೇನ ಚ ಪ್ರೇಕ್ಷಾವದ್ಭಿಃ ಪರಿತ್ಯಕ್ತಂ ಅಭಾಗವತಶಾಸ್ತ್ರಂ ಕಿಮಿತಿ ಪಠಂತಿ ಪಾಠಯಂತಿ ಚ ಬಹವಃ ಇತ್ಯತಃ ಪುರುಷಾರ್ಥೋऽನೇನ ಭವೇತ್ಪರತ್ರೇತಿ ಭ್ರಾಂತ್ಯಾ ಕೇಚಿತ್। ಪರೇ ತು ಪರಪುರುಷಾರ್ಥವಿಚಾರವಿರಹಿತಾ ವೈಷಯಿಕಮೇವ ಬಹುಮನ್ವಾನಾ ಅನೇನೈವ ಸ್ಯಾದಿತಿ ಮನ್ಯಮಾನಾಃ ಪಂಡಿತಂಮನ್ಯಾಃ ಪಠಂತಿ ಪಾಠಯಂತಿ ಚೇತ್ಯಭಿಪ್ರೇತ್ಯಾಹ ॥ **ನ ತದ್ವಚ ಇತಿ** ॥ ಯದ್ಧರೇರ್ಯಶೋ ಜಗತ್ಪವಿತ್ರಂ ಕದಾಪಿ ನ ವದೇತ್। ತತ ಏವ ಶಾಸ್ತ್ರಮೇವ ನ ಭವತಿ। ಯಚ್ಚ ಮಾನಸಾಃ ಮನಃಶುದ್ಧಿಮಂತಃ। ಅತ ಏವ ಹಂಸಪದವಾಚ್ಯಾಃ ಸಾಧವಃ। ನಿಮಂಕ್ಷಯಾ ಶ್ರವಣಾದಿರೂಪಾವಗಾಹನೇಚ್ಛಯಾ। ನ ನ್ಯಪತನ್ ನ ಪ್ರವಿಶಂತಿ। ತದ್ವಚಃ ವಿಷಯಂ ಪ್ರಯೋಜನಂ ಚ ವದದಪಿ। ನ ವಚೋ ನ ಶಾಸ್ತ್ರಂ। ಕುತಃ ನ ವಚ ಇತಿ ಹೇತೋಃ ವಿಷಯಸ್ಯ ಹರೇಃ ಪರಮಸ್ಯ ಪರಮಪುರುಷಾರ್ಥಸ್ಯ ಚ

**ಅವಚನಾತ್ । ವಸ್ತುತಃ ವಿಷಯಾದಿಮತ ಏವ ಶಾಸ್ತ್ರತ್ವಾತ್ ಅಸ್ಯ ತದಭಾವಾತ್ । ಯದ್ಯೇವಂ ವಾಸ್ತವೀ ಸ್ಥಿತಿಃ । ತಥಾಪಿ ಯೇ ಕೇಚಿತ್ತದಪಿ ತೀರ್ಥಂ ಶಾಸ್ತ್ರಮಿತ್ಯುಶಂತಿ ಜಾನಂತಿ । ತ ಏವ ಪರಮಪುರುಷಾರ್ಥಪ್ರಾಪ್ತಯೇ ತದುಶಂತಿ ಇಚ್ಛಂತಿ ಶ್ರೋತವ್ಯಾದಿತಯಾ । ಯಚ್ಚ ಅಪರೇ ತತ್ ಚಿತ್ರಪದಂ ವಿಚಿತ್ರವಿಷಯಜನ್ಯಂ ಸುಖಮುಶಂತಿ ಇಚ್ಛಂತಿ । ತ ಏವ ತತ್ಪ್ರಾಪ್ತಯೇ ಸಾಧನಭೂತಂ । ಚಿತ್ರಪದಂ ಯಚ್ಛುಬಂತತಯಾ ವಾ ಕದಾಪ್ಯಶ್ರುತಾರ್ಥಾಭಿಧಾಯಕತಯಾ ವಾ ಶಬ್ದಾರ್ಥಾಲಂಕಾರಾಲಂಕೃತತಯಾ ವಾ ಚಿತ್ರಾಣಿ ಮಹಾಜನಮನೋರಂಜನಾನಿ ಪದಾನಿ ಯಸ್ಮಿಂಸ್ತಾದೃಶಂ ಶಾಸ್ತ್ರಂ । ಉಶಂತಿ ಇಚ್ಛಂತಿ ಶ್ರೋತವ್ಯಾದಿತಯಾ । ತದೇವಂ ದ್ವಿವಿಧೈಃ ಮನಃಶುದ್ಧಿರಹಿತೈಃ ತತ ಏವ ಧ್ವಾಂಕ್ಷಾದಿಪದಬೋಧಿತೈಃ ಅಸದ್ಭಿಃ ಸೇವ್ಯತಯಾ ವಾಯಸಂ ತೀರ್ಥಂ ಉಶಂತಿ ಜ್ಞಾನಿನ ಇತಿ ॥**

❖❖❖

ಶ್ರೀನಾರದರು ಶ್ರೀವ್ಯಾಸರಲ್ಲಿ ಹೇಳಿಕೊಳ್ಳುತ್ತಾರೆ—

ಅಭಾಗವತ ಗ್ರಂಥದಿಂದ ಫಲವಿಲ್ಲ, ಬಲುಕ್ಲೇಶವೆ ಇದೆ ಎಂದು ಬುದ್ಧಿಶಾಲಿಗಳು ಅದನ್ನು ತ್ಯಜಿಸಿದ್ದಾರೆ. ಆದರೂ ಬಹುಸಂಖ್ಯೆಯ ಜನರು ಅದನ್ನೆ ಕಲಿಯುವರು. ಕಲಿಸುವರು. ಏಕೆಂದರೆ ಅದರಿಂದ ಪುರುಷಾರ್ಥವಿದೆ ಎಂದು ಭ್ರಾಂತಿ ಕೆಲವರಿಗೆ. ಕೆಲವರು ಮೋಕ್ಷವೆಂಬ ಪುರುಷಾರ್ಥವನ್ನೆ ಒಪ್ಪದವರು, ವಿಷಯಸುಖವೇ ಪುರುಷಾರ್ಥ ಅದು ಅಭಾಗವತ ಗ್ರಂಥದಿಂದ ಸಿಗುತ್ತಿದೆ. ಅದಿದ್ದರೆ ಸಾಕೆಂದು ತಿಳಿದು ತಾವೇ ತಮ್ಮನ್ನು ಪಂಡಿತರೆಂದು ತಿಳಿದು ಕಲಿಯುತ್ತಾರೆ, ಕಲಿಸುತ್ತಾರೆ. ವಸ್ತುತಃ ಜಗತ್ಪಾವನವಾದ ಹರಿ ಮಹಿಮೆಯನ್ನು ಒಂದು ಕಡೆಯಾದರೂ ಹೇಳದಿರುವ ಗ್ರಂಥವು ಅಲಂಕಾರಾದಿಗಳಿಂದ ಕೂಡಿದ್ದರೂ ಅದು ಶಾಸ್ತ್ರವಲ್ಲ. ಹಂಸರಿಗೆ ಶುದ್ಧ ಮನಸ್ಕರಿಗೆ ಶ್ರವಣಾದಿ ರೂಪ ಸ್ನಾನಕ್ಕೆ ಯೋಗ್ಯವಲ್ಲ.

ಏಕೆಂದರೆ ಹರಿಮಹಿಮೆಯನ್ನು ಹೇಳದಿರುವುದರಿಂದ ಅದಕ್ಕೆ ವಿಷಯವಿಲ್ಲ. ಮೋಕ್ಷಸಾಧನವಾಗದಿರುವುದರಿಂದ ಅದಕ್ಕೆ ಪ್ರಯೋಜನವೂ ಇಲ್ಲ. ವಿಷಯ ಪ್ರಯೋಜನಗಳಿಲ್ಲದ ಗ್ರಂಥ ಹೇಗೆ ಶಾಸ್ತ್ರವೆನಿಸೀತು? ಆದರೂ ಕೆಲವರು ಅದನ್ನು ಶಾಸ್ತ್ರವೆಂದು ಅಂಗೀಕರಿಸುತ್ತಾರೆ. ಪರಮ ಪುರುಷಾರ್ಥ ಪ್ರದವೆಂದೂ ಹೇಳುತ್ತಾರೆ. ವಿಚಿತ್ರ ವ್ಯಾಕರಣಪ್ರಯೋಗ ಶಬ್ದಾಲಂಕಾರ

ಅರ್ಥಾಲಂಕಾರಗಳಿಂದ ಯುಕ್ತವಾಗಿದೆಯಾದ್ದರಿಂದ ಸುಂದರವಾಗಿದೆ ಎಂದು ಕಲಿಯುತ್ತಾರೆ, ಕಲಿಸುತ್ತಾರೆ. ಹೀಗೆ ಅವರು ಸೇವಿಸುವ ಅಭಾಗವತ ಗ್ರಂಥವು ಕಾಗೆಗಳಂತೆ ಅಶುದ್ಧ ಮನಸಿನವರಾದವರಿಗೆ ಮೆಚ್ಚಿಗೆಯಾಗುತ್ತದೆ.

❖❖❖

## –೩೦೭–

### ಮೌನವೆಂಬ ಭಾಗವತಧರ್ಮರಹಸ್ಯ

**ಜರಾಯುಜಂ ಸ್ವೇದಜಮಂಡಜೋದ್ಭಿಜಂ**
**ಚರಾಚರಂ ದೇವರ್ಷಿ ಪಿತೃಭೂತಭೇದಂ ।**
**ದ್ಯೌಃ ಖಂ ಕ್ಷಿತಿಃ ಶೈಲ ಸರಿತ್‌ಸಮುದ್ರ**
**ದ್ವೀಪಗ್ರಹರ್ಕ್ಷೇತ್ಯಭಿಧೇಯ ಏಕಃ ॥**

(ಭಾ.೫.೧೮.೩೨)

ಇದಾನೀಂ ಮೌನರೂಪಂ ಭಾಗವತಧರ್ಮಮಾಹ । ತಚ್ಚ ಮೌನಂ ನಾಮ ಸರ್ವಥಾ ಶಬ್ದಾಪ್ರಯೋಗ ಇತಿ ನಾರ್ಥಃ। ಭಗವತಿ ಶಬ್ದಪ್ರಯೋಗೇಣ ಮಹಾಪುರುಷಾರ್ಥಸತ್ತ್ವೇನ ತತ್ಪರಿತ್ಯಾಗೇ ಪುರುಷಾರ್ಥಹಾನ್ಯಾಪತ್ತೇಃ । ತಥಾಚ ವಕ್ಷ್ಯತೇ। ಕಿಂತು ಸರ್ವಶಬ್ದಾನಾಂ ಭಗವನ್ನಾಮತಯಾ ತೇಷಾಂ ಭಗವತಃ ಅನ್ಯತ್ರ ಅಪ್ರಯೋಗ ಏವೇತಿ ಭಾವೇನ ಸರ್ವಶಬ್ದಾನಾಂ ಭಗವದ್ವಾಚಕತ್ವ ಮಾಹ ॥ **ಜರಾಯುಜಮಿತಿ** ॥ ದೇವರ್ಷಿಪಿತೃಭೂತಭೇದಂ ದೇವಾದಿ-ಪ್ರಭೇದವಾಚಕಶಬ್ದಜಾತಂ। ತತ್ರ ದೇವಪ್ರಭೇದವಾಚಕಾ ಇಂದ್ರಾದಯಃ। ಋಷಿಪ್ರಭೇದವಾಚಕಾ ವಿಶ್ವಾಮಿತ್ರಾದಯಃ। ಪಿತೃಪ್ರಭೇದಾ ಅರ್ಯ-ಮಾದಯಃ। ಚರಪ್ರಭೇದಾ ಜರಾಯುಜಾದಯಃ। ಅಚರಪ್ರಭೇದಾ ಉದ್ಭಿಜ್ಜಾದಯಃ। ಜರಾಯುಜಾದಿಪ್ರಭೇದಾಃ ಮನುಷ್ಯಪಶ್ವಾದಯಃ। ತತ್ಪ್ರಭೇದಾ ಬ್ರಾಹ್ಮಣಾದಯೋಽಶ್ವಾದಯಶ್ಚ। ತತ್ಪ್ರಭೇದಾಃ ಯತ್ಯಾದಯಃ। ಉದ್ಭಿಜ್ಜಪ್ರಭೇದಾಸ್ತರುಗುಲ್ಮಾದಯಃ। ತತ್ಪ್ರಭೇದಾ ಅಶ್ವತ್ಥಾದಯ ಇತ್ಯಾದಿ ಸರ್ವಶಬ್ದಾನಾಮೇಕ ಏವ ಭಗವಾನಭಿಧೇಯಃ। ಅನ್ಯತ್ರ ಶಬ್ದಾ ನ ಸಂತ್ಯೇವೇತಿ ॥

❖❖❖

ಹಿರಣ್ಮಯಖಂಡದಲ್ಲಿ ಅರ್ಯಮನಿಂದ ಆರಾಧಿತನಾಗುವ ಕೂರ್ಮ ಮೂರ್ತಿಯ ಸ್ತುತಿ—

ಶ್ರೀಹರಿ, ನೀನು ಜಗದಂತರ್ಯಾಮಿ. ಆದರಿಂದಲೆ ಎಲ್ಲ ಜೀವಜಡಗಳ ನಾಮಗಳೂ ಮುಖ್ಯವಾಗಿ ನಿನ್ನ ನಾಮಗಳು. ಇಂದ್ರಾದಿ ದೇವನಾಮಗಳು, ವಿಶ್ವಾಮಿತ್ರಾದಿ ಋಷಿನಾಮಗಳು, ಅರ್ಯಮಾದಿ ಪಿತೃನಾಮಗಳು ಆಕಾಶಾದಿ ಭೂತನಾಮಗಳು, ಮನುಷ್ಯಾದಿ ಜರಾಯುಜ ವಾಚಕಗಳು ಪಕ್ಷ್ಯಾದಿ ಅಂಡಜವಾಚಕಗಳು ವೃಕ್ಷಾದಿ ಉದ್ಭಿಜ್ಜವಾಚಕಗಳು ಹೀಗೆ ನಾನಾ ಪ್ರಕಾರ ಚರಅಚರ ಜೀವಿಗಳ ನಾಮಗಳು, ಸ್ವರ್ಗ ಅಂತರಿಕ್ಷ ಭೂಮಿ ಪರ್ವತ ನದಿ ಸಮುದ್ರದ್ವೀಪ ಗ್ರಹ ನಕ್ಷತ್ರಗಳನ್ನು ಹೇಳುವ ಶಬ್ದಗಳು ಇವೆಲ್ಲವುಗಳನ್ನು ಹೇಳುವ ಶಬ್ದಗಳಿಂದ ಮುಖ್ಯವಾಗಿ ಕರೆಸಿಕೊಳ್ಳುವವನು ಅವೆಲ್ಲವುಗಳ ಅಂತರ್ಯಾಮಿಯಾದ ನೀನು ಒಬ್ಬನೆ ಹೊರತು ಅವು ಯಾವುವೂ ಮುಖ್ಯ ವಾಚ್ಯಗಳಲ್ಲ.

ಇದನ್ನು ತಿಳಿದಿರುವ ಜ್ಞಾನಿಗಳು ಎಲ್ಲ ಶಬ್ದಗಳಿಂದಲೂ ನಿನ್ನನ್ನೇ ಕರೆಯುತ್ತಾರೆ. ಅದೇ ಮುಖ್ಯ ವ್ಯವಹಾರ. ಅವರು ಈ ಮುಖ್ಯ ವ್ಯವಹಾರ ವನ್ನೇ ಮಾಡುತ್ತಾರೆ. ಅಜ್ಞರು ತಿಳಿಯದೆ ಅಮುಖ್ಯವ್ಯವಹಾರ ಮಾಡಿದರೂ ಜ್ಞಾನಿಗಳು ಹಾಗೆ ಮಾಡದೆ ಮೌನವಾಗಿರುತ್ತಾರೆ. ಇದು 'ಮೌನ'ವೆಂಬ ಭಾಗವತಧರ್ಮ. 'ಮೌನ'ವೆಂದರೆ ಸರ್ವಥಾ ಶಬ್ದವನ್ನು ಉಚ್ಚರಿಸದಿರುವು ದಲ್ಲ. ಭಗವಂತನ ವಿಷಯದಲ್ಲಿ ಶಬ್ದವನ್ನು ಉಚ್ಚರಿಸಲೇಬೇಕು. ಉಚ್ಚರಿಸಿದರೇ ಮಹಾಪುರುಷಾರ್ಥ ಲಾಭ. ಮೌನವ್ರತವೆಂದು ಅದನ್ನೂ ಮಾಡದಿದ್ದರೆ ಮಹಾಪುರುಷಾರ್ಥದಿಂದ ಮುಮುಕ್ಷು ವಂಚಿತನಾಗುವನು.

❖❖❖

## –೩೦೮–

**ಯಾವ ನಾಮವೂ ಹರಿಯನಲ್ಲದೆ ಅನ್ಯರನ್ನು ಹೇಳದು**

ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ
ಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।
ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್
ಮಾಯಾಮಯೇ ವಾಸನಯಾ ಶಯಾನಃ ॥

ಅಸ್ತ್ವೇವಂ ಸರ್ವನಾಮಾ ಭಗವಾನ್ ಕಿಂ ತತ ಇತ್ಯತಃ ತತೋಽನ್ಯತ್ರ ತನ್ನಾಮ್ನಾಮಪ್ರಯೋಗರೂಪಂ ಮೌನಮಾಪಾದ್ಯಂ ಮುಮುಕ್ಷುಭಿಃ ಸರ್ವಥಾ ಇತಿ ಭಾವೇನ ತನ್ನಾಮ್ನಾಂ ತತೋಽನ್ಯತ್ರ ಪ್ರಯೋಕ್ತ್ರೂನ್ ಧಿಕ್ಕರೋತಿ ॥ ಶಬ್ದಸ್ಯ ಹೀತಿ ॥ ಹಿ ಯಸ್ಮಾತ್ । ಅಜ್ಞಾನಪ್ರಚುರೇ ದೇಹೇ । ವಿದ್ಯಮಾನಶ್ಚಿಂತನಸ್ವಭಾವಃ ಪುರುಷಃ । ಅನ್ಯತ್ರಾಪಗತಪ್ರವೃತ್ತಿನಿಮಿತ್ತೈಃ । ಯಸ್ಯ ಮುಖ್ಯತಯಾ ವಾಚಕೈರಿಂದ್ರಾದಿನಾಮಭಿಃ ಇಂದ್ರಾದೀನ್ ಧ್ಯಾಯತಿ ಇಂದ್ರಾಯ ಸ್ವಾಹೇತ್ಯಾದಿಪೂರ್ವಕಂ ತದಾರಾಧನಂ ಕರೋತಿ । ಏವಂ ತತ್ರ ಇಂದ್ರಾದಿದೇವತಾವಿಷಯೇ ಪುರುಷಾರ್ಥವಾಸನಯಾ ಪರಿಭ್ರಮನ್ನಪಿ । ತೇಭ್ಯಃ ಪುರುಷಾರ್ಥಾನ್ನ ಪ್ರಾಪ್ನೋತಿ । ಕುತ ಇತ್ಯತಃ ತತ್ರ ಇಂದ್ರಾದಿಷು ಅಪಾರ್ಥೈರಿತಿ ಹೇತುಗರ್ಭವಿಶೇಷಣಂ । ಸ್ವಯಮೇವ ಪರಮೈಶ್ವರ್ಯಮಲಭಮಾನಃ ಕಥಮನ್ಯಸ್ಮೈ ದದ್ಯಾದಿತಿ । ತತೋ ಭಗವನ್ನಾಮಾನ್ಯಪಹೃತ್ಯ ಅನ್ಯತ್ರ ಪ್ರಯೋಗೇಽಪಿ ಸ್ವಪ್ರಯೋಜನಾಲಾಭೇನ ತಥಾ ಕುರ್ವಾಣಾಃ ಅಚತುರಾಃ ಇತ್ಯನ್ಯತ್ರ ಶಬ್ದಾಃ ನ ಪ್ರಯೋಕ್ತವ್ಯಾಃ ಪ್ರೇಕ್ಷಾವದ್ಭಿರಿತಿ ಭಾವಃ । ತತ್ರಾಪ್ರಯೋಗೇ ಕುತ್ರ ಪ್ರಯೋಗಃ ಕರ್ತವ್ಯಃ । ಯದ್ವಾಚಕಾಸ್ತೇ ಶಬ್ದಾಃ ತತ್ರೈವೇತ್ಯಾ ಶಯೇನಾಹ ॥ ಏಷ ಇತಿ ॥ ಏಷ ಭಗವಾನೇವ । ಶಬ್ದಸ್ಯ ಬ್ರಹ್ಮಣಃ ಅಶೇಷಶಬ್ದರಾಶೇರಪಿ । ಪಂಥಾಃ ಪ್ರಯೋಗಾಯ ಯೋಗ್ಯಃ । ತಸ್ಯೈವ ತದ್ವಾಚಕತ್ವಾದಿತಿ ಹಿಶಬ್ದೇನಾಹೇತಿ । ತತಃ ತಸ್ಯಾರಾಧನೇನೈವ ಪುರುಷಾರ್ಥ ಸಿದ್ಧ್ಯ ಕಿಮನ್ಯತ್ರ ಪ್ರಯೋಗಪ್ರಯಾಸೇನೇತಿ । ಅತ ಏವ ಪುರುಷಾರ್ಥ ಪ್ರದಾನೋಪಯೋಗಿ ಪರಮೈಶ್ವರ್ಯಾದಿಕಮಸ್ತೀತಿ ಜ್ಞಾಪಯಿತುಂ ತತ್ರೇಂದ್ರಾದೌ ಅಪಾರ್ಥೈರ್ಯನ್ನಾಮಭಿರಿತಿ ಭಗವತಿ ಲಬ್ಧಪ್ರವೃತ್ತಿ ನಿಮಿತ್ತತ್ವಂ ಶಬ್ದಾನಾಮಸೂಚೀತಿ ॥

❖❖❖

ಸರ್ವಶಬ್ದ ಮುಖ್ಯಪ್ರತಿಪಾದ್ಯನು ಶ್ರೀಹರಿಯೆ ಎಂದು ತಿಳಿಯದವರನ್ನು ಶುಕಮುನಿ ನಿಂದಿಸುತ್ತಾರೆ—

'ಶಬ್ದ ಬ್ರಹ್ಮ' ವೇದಾದಿ ರೂಪ ಅಶೇಷ ಶಬ್ದರಾಶಿ ಇದಕ್ಕೆ 'ಪಂಥಾಃ' ಪ್ರಯೋಗಯೋಗ್ಯನು 'ಏಷಃ' ಭಗವಂತನೆ. ಅಂದರೆ ಇಂದ್ರಾದಿ ಶಬ್ದ ಪ್ರಯೋಗಗಳಿಗೆ ಮುಖ್ಯಯೋಗ್ಯನು ಭಗವಂತನೆ ಹೊರತು ಇಂದ್ರಾದಿಗಳಲ್ಲ. 'ಇಂದ್ರ' ಶಬ್ದದ ಮುಖ್ಯಾರ್ಥ. ಪರಮೈಶ್ವರ್ಯಶಾಲಿ. ಸರ್ವೇಶ್ವರನು ಭಗವಂತನೆ, ಇಂದ್ರನು ಸರ್ವೇಶ್ವರನಲ್ಲ. ಭಗವಂತನಾಜ್ಞೆಯಂತೆ ಸ್ವರ್ಗಾದಿ

ಸರ್ವಲೋಕವನ್ನು ಆಳುತ್ತಾನಷ್ಟೆ. ಹೀಗೆ ಎಲ್ಲ ಶಬ್ದಗಳಿಂದ ಮುಖ್ಯವಾಗಿ ಕರೆಸಿಕೊಳ್ಳುವವನು ಭಗವಂತನೆ. 'ಇಂದ್ರಾಯ ಸ್ವಾಹಾ' ಎಂದು ಹವಿಸ್ಸನ್ನು ಅರ್ಪಿಸಿ ಇಂದ್ರನಾಮದಿಂದ ಭಗವಂತನನ್ನೇ ಆರಾಧಿಸಬೇಕು. ಅವನೇ ಪುರುಷಾರ್ಥ ನೀಡಬಲ್ಲ ಎಂದಮೇಲೆ ದೇವೇಂದ್ರನನ್ನು 'ಇಂದ್ರ' ಶಬ್ದದಿಂದ ಏಕೆ ಆರಾಧಿಸಬೇಕು? ಅದು ಕೇವಲ ಶ್ರಮ. ಸರ್ವೇಶ್ವರ ಎಂಬರ್ಥದ 'ಇಂದ್ರ'ಶಬ್ದದಿಂದ ಸರ್ವೇಶ್ವರನಲ್ಲದ ದೇವೇಂದ್ರನನ್ನು 'ಧ್ಯಾಯತಿ' ಆರಾಧಿಸಿದರೆ ಅದು, ಶಬ್ದವು ಅಪಾರ್ಥವಾಗುವುದರಿಂದ ಶಬ್ದಕ್ಕೆ ಮಾಡಿದ ಅಪಚಾರವಾಗುವುದು. ಆದರೂ ದೇವೇಂದ್ರ ಮುಂತಾದವರು ಪುರುಷಾರ್ಥ ಪ್ರದರೆನ್ನುವ 'ವಾಸನಾ'ದಿಂದ ಭ್ರಾಂತಿಯಿಂದ ಅಜ್ಞಾನಿಗಳು, 'ಮಾಯಾಮಯ'ವಾದ ಹೆಚ್ಚಾಗಿ ಭ್ರಾಂತಿಯಿಂದಲೇ ತುಂಬಿದ ಜಡಶರೀರದಲ್ಲಿ 'ಶಯಾನ'ರು ವಾಸ ಮಾಡುವ 'ಧೀ' ಜೀವರು ಇಂದ್ರಾದಿ ದೇವತೆಗಳ ಆರಾಧನೆಯಲ್ಲಿಯೇ ವ್ಯರ್ಥಪರಿಭ್ರಮಣ ಮಾಡುತ್ತಾರೆ. ಮೋಕ್ಷವನ್ನು ಹೊಂದಲಾರರು. 'ಮೋಕ್ಷ ದಸ್ತು ಜನಾರ್ದನಃ' ಮೋಕ್ಷ ನೀಡುವವನು ಹರಿಯೆ ಹೊರತು ಇನ್ನಾರೂ ಅಲ್ಲ. ಅದರಿಂದ ಅನ್ಯರು ಮೋಕ್ಷವನ್ನು ಕೊಡಲಾರರು.

❖❖❖

–೩೦೯–

## ಎಲ್ಲ ನಾಮವೂ ಹರಿನಾಮವೇ ಆಗಿರುತ್ತದೆ ಎಂಬುದು ಸಂಪ್ರದಾಯ

ಯಥಾ ಹಿರಣ್ಯಂ ಬಹುಧಾ ಸಮೀಯತೇ
ನೃಭಿಃ ಕ್ರಿಯಾಭಿರ್ವ್ಯವಹಾರ ವರ್ತ್ಮಸು ।
ಏವಂ ವಚೋಭಿರ್ಭಗವಾನಧೋಕ್ಷಜೋ
ವ್ಯಾಖ್ಯಾಯತೇ ಲೌಕಿಕ ವೈದಿಕೈರ್ಜನೈಃ ॥

(ಭಾ.೧೨.೪.೩೧)

ಏವಂ ಸರ್ವಶಬ್ದಾನಾಂ ಭಗವನ್ನಾಮತ್ವಾತ್ ತತ್ರೈವ ತಾನ್ಯಯುಜ್ಯ ತಮಾರಾಧ್ಯ ಪುರುಷಾರ್ಥಃ ಸಂಪಾದನೀಯ ಇತ್ಯುಕ್ತಂ। ತತ್ರ ಪೂರ್ವಾಚಾರೋಽಪ್ಯಸ್ತೀತಿಭಾವೇನ ಏಕಸ್ಯೈವ ವಿಚಿತ್ರವಿರುದ್ಧಾನೇಕ ಶಬ್ದವಾಚ್ಯತ್ವಂ ಕಥಮಿತ್ಯತೋ ಬುದ್ಧ್ಯಾರೋಹಾಯ ತಥಾವಿಧದೃಷ್ಟಾಂತ

**ಪ್ರದರ್ಶನಪೂರ್ವಕಂ ದರ್ಶಯತಿ ॥ ಯಥಾ ಹಿರಣ್ಯಂ ಬಹುಧೇತಿ । ಯಥಾ ಸುವರ್ಣಮೇಕಮೇವ । ನೃಭಿಃ ಕರ್ತೃಭಿಃ । ಕ್ರಿಯಾಭಿಸ್ತಾಲ್ವಾದಿವ್ಯಾಪಾರೈಃ ಕರಣೈಃ । ನಿಷ್ಪಾದಿತಾ ಯೇ ಬಹುಧಾ ವ್ಯವಹಾರಾಃ ಕಟಕಂ ಕುಂಡಲಂ ರುಚಕಮಿತ್ಯೇವಮಾದಯೋ ವ್ಯವಹಾರಾಃ ತದ್ರೂಪೇಷು ಮಾರ್ಗೇಷು ವಿಷಯೀಭವಂತಿ ತೈಃ ಶಬ್ದೈಃ ಪ್ರತಿಪಾದ್ಯತ ಇತಿ ಯಾವತ್ । ತಥಾ ಸರ್ವಶಬ್ದಾನಾಂ ಭಗವನ್ನಾಮತ್ವವೇದಿಭಿಃ ಜನೈಃ । ಹೇ ಪಿತರ್ಮಾತರಿತ್ಯಾದಿಭಿರ್ಭೋಕ್ತೃವಿಷಯೈಃ । ಅನ್ನಂ ಪಾನೀಯಮಿತ್ಯಾದಿಭಿರ್ಭೋಗ್ಯವಿಷಯೈಃ । ಪರ್ಣಂ ಕಮಂಡಲುರಿತ್ಯಾದಿಭಿಃ ಕರಣವಿಷಯೈಃ ಲೌಕಿಕೈಃ । ಹೇ ಇಂದ್ರ ಚಂದ್ರೇತ್ಯಾದಿಭಿರ್ದೇವತಾವಿಷಯೈಃ । ಲಾಜಾಜ್ಯಾದಿಭಿ ರ್ಹೋಮ್ಯವಿಷಯೈಃ । ಸುಕ್ಸ್ರುವ ಇತ್ಯಾದಿಭಿಃ ಕರಣವಿಷಯೈಃ ವೈದಿಕೈಶ್ಚ । ಕಿಂಬಹುನಾ ಸರ್ವೈರಪಿ ದ್ವಿವಿಧೈರ್ವಿವಿಧೈರ್ವಿರುದ್ಧೈರಪಿ ವಚೋಭಿರ್ಭಗವಾನೇಕ ಏವ ಪ್ರತಿಪಾದ್ಯತೇ । ಅತಃ ಪೂರ್ವಾಚಾರಸದ್ಭಾವಾದ್ಭವದ್ಭಿರಪಿ ತಥಾಚರಣೀಯಮಿತಿ ಭಾವಃ ॥**

❖❖❖

ಶುಕಮುನಿ ಪರೀಕ್ಷಿತನಿಗೆ, ಭಗವಂತನಿಗೆ ಸರ್ವಶಬ್ದ ಪ್ರತಿಪಾದ್ಯತ್ವವನ್ನು ಒಪ್ಪುವುದು ಲೌಕಿಕ ವೈದಿಕ ಸಂಪ್ರದಾಯಸಿದ್ಧವೇ ಆಗಿದೆ ಎನ್ನುತ್ತಾರೆ.

'ಬಂಗಾರ ಒಂದೇ ಆದರೂ ಜನರು ವ್ಯವಹಾರದಲ್ಲಿ ಕಟಕ ಕುಂಡಲ ಹಾರ ಎಂದು ಮುಂತಾಗಿ ನಾನಾ ರೀತಿಯಿಂದ ಬಂಗಾರವನ್ನು ಕರೆಯುತ್ತಾರೆ. ಹಾಗೇ ಒಬ್ಬನೇ ಪರಮಾತ್ಮನ ವಿಷಯದಲ್ಲಿ ಜ್ಞಾನಿಗಳಾದ ಲೌಕಿಕರೂ ವೈದಿಕರೂ ಅನೇಕ ರೀತಿ ಶಬ್ದವ್ಯವಹಾರ ಮಾಡುತ್ತಾರೆ. ಪಿತಾ ಮಾತಾ ಇತ್ಯಾದಿಯಾಗಿ ಭೋಜನ ಕರ್ತೃಗಳನ್ನೂ, ಅನ್ನ ಜಲ ಇತ್ಯಾದಿಯಾಗಿ ಭೋಜ್ಯವಸ್ತುಗಳನ್ನೂ, ಎಲೆ ತಂಬಿಗೆ ಇತ್ಯಾದಿ ಭೋಜನೋಪಕರಣಗಳನ್ನೂ ಲೌಕಿಕರು, ಮತ್ತು ಇಂದ್ರಾದಿ ನಾಮಗಳಿಂದ ದೇವತೆಗಳನ್ನು, ಲಾಜ ಆಜ್ಯಾದಿಗಳೆಂದು ಆಹುತಿಗಳನ್ನು ಸ್ರುಕ್ಸ್ರುವ ಇತ್ಯಾದಿಯಾಗಿ ಯಾಗೋಪಕರಣಗಳನ್ನು ವೈದಿಕರು, ಹೀಗೆ ಬಲ್ಲವರು ಎಲ್ಲರೂ ನಾನಾ ಶಬ್ದಗಳಿಂದ ಕರೆಯುತ್ತ ಒಬ್ಬನೇ ಭಗವಂತನನ್ನು ಮುಖ್ಯವಾಗಿ ಹೇಳುತ್ತಾರೆ.

❖❖❖

–೩೧೦–

## ಎಲ್ಲ ನಾಮ ಹರಿನಾಮವೇ ಹೇಗೆ?

ಯಥಾ ಹಿರಣ್ಯಂ ಸ್ವಕೃತಂ ಪುರಸ್ತಾತ್
ಪಶ್ಚಾಚ್ಚ ಸರ್ವಸ್ಯ ಹಿರಣ್ಮಯಸ್ಯ
ತದೇವ ಮಧ್ಯೇ ವ್ಯವಹಾರ್ಯಮಾಣಂ
ನಾನಾಪದೇಶೈರಹಮಸ್ಯ ತದ್ವತ್ ॥

(ಭಾ.೧೧.೨೮.೨೦)

ನನು ಜಗತಃ ಸೃಷ್ಟೇಃ ಪ್ರಾಕ್ ಸಂಹಾರಾನಂತರಂ ಚ ತಾದೃಶಾನಾಂ ವ್ಯವಹಾರವಿಶೇಷಾಣಾಮಭಾವೇನ ಮಧ್ಯ ಏವ ತಾದೃಶಾ ವ್ಯವಹಾರಾ ಭವಂತೀತ್ಯೇತತ್ಕಥಮಿತಿ ಚೇದೇವಂ ವದತಾ ಹಿರಣ್ಯಸ್ಯ ನಾನಾಪದೇಶೈಃ ಮಧ್ಯ ಏವ ವ್ಯವಹಾರ್ಯಮಾಣತಾ ಅಂಗೀಕ್ರಿಯತೇ ನ ವಾ। ನೇತಿ ವದನ್ ಶ್ಲಾಘನೀಯಪ್ರಜ್ಞೋ ದೇವಾನಾಂಪ್ರಿಯಃ। ಆದ್ಯೇ ಉತ್ತರಮಾಹ ॥ **ಯಥಾ ಹಿರಣ್ಯಂ ಸ್ವಕೃತಮಿತಿ** ॥ ಸರ್ವಸ್ಯ ಹಿರಣ್ಮಯಸ್ಯ ಪುರಸ್ತಾತ್ಪಶ್ಚಾಚ್ಚ ನಾನಾವ್ಯಪದೇಶೈರವ್ಯವಹಾರ್ಯಮಾಣಮಪಿ ಹಿರಣ್ಯಂ ಯಥಾ ಮಧ್ಯೇ ಏವ ನಾನಾವ್ಯಪದೇಶೈರ್ವ್ಯವಹಾರ್ಯಮಾಣಂ ಭವತಿ। ತದ್ವದೇವ ಅಹಮಪ್ಯಸ್ಮೀತಿ ಕಾತ್ರ ಕಥಂತಾ। ಭಗವದ್ವಚನಮೇತತ್।

ನನು ಯುಜ್ಯತೇ ತತ್ತತ್ರ ಹಿರಣ್ಯಂ ನ ಹಿರಣ್ಯತಯಾ ತಚ್ಛಬ್ದೈರ್ವ್ಯವಹಾರ್ಯಮಾಣಮಂಗೀಕ್ರಿಯತೇ ಕಿನ್ನಾಮ ಕುಂಡಲಾದಿ-ಭಾವೇನ। ಪ್ರಾಗನಂತರಂ ಚ ಸೃಷ್ಟೇಃ ಕುಂಡಲಾದಿಭಾವಮನಾ ಪನ್ನತಯಾ ತಥಾ ಅವ್ಯವಹಾರ್ಯಮಾಣಮಪಿ ಮಧ್ಯ ಏವ ಕುಂಡಲಾದಿ ಭಾವಮಾಪನ್ನಂ ತದ್ವೈವ ತಥಾ ವ್ಯವಹಾರ್ಯಮಾಣಂ ಭವಿತುಂ ಯುಕ್ತಮೇವೇತ್ಯತೋಽಪ್ಯಾಹ ॥ **ಯಥೇತಿ** ॥ ಯಥಾ ಹಿರಣ್ಯಂ। ಸರ್ವಸ್ಯ ಹಿರಣ್ಮಯಸ್ಯ। ಪ್ರಾಗನಂತರಂ ಚ ಸುಷ್ಠು ಹಿರಣ್ಮಯಕುಂಡಲಾದಿಭಾವೇನ ಅಕೃತಂ ಅಪರಿಣತಂ ಇತಿ ಹೇತೋಃ ನಾನಾಪದೇಶೈರವ್ಯವಹಾರ್ಯ ಮಾಣಮಪಿ ಮಧ್ಯ ಏವ ಸುಷ್ಠು ಕುಂಡಲಾದಿಭಾವೇನ ಕೃತಂ ಪರಿಣತಮಿತಿ ತೇನ ರೂಪೇಣ ನಾನಾಪದೇಶೈರ್ವ್ಯವಹಾರ್ಯಮಾಣಂ ಭವತಿ। ತದ್ವತ್ ತಥೈವ ಅಹಮಪಿ। ಮಾಂ ವಿನಾ ಭ್ರೂಭಂಗಮಪಿ ಕರ್ತುಮಶಕ್ತಂ ಇದಂ ಜಗತ್ ಪ್ರವೃತ್ತ್ಯಾದೌ ಮಾಮೇವಾಪೇಕ್ಷತ ಇತಿ ಮತ್ಪ್ರಧಾನಕತಯಾ ಮನ್ಮಯ ಮಿತ್ಯುಚ್ಯತೇ।

**ಯಥಾಹುಃ**— ''ಮನ್ಮಯಾ ಮಾಮುಪಾಶ್ರಿತಾ'' ಇತ್ಯಾದಿ। ತತಃ ಸರ್ವಸ್ಯ ಮನ್ಮಯಸ್ಯ ಜಗತಃ ಪುರಸ್ತಾತ್ಪಶ್ಚಾಚ್ಚ ಸುಷ್ಠು ಸುರನರತಿರ್ಯಗಾದಿ-ನಾಮಕರೂಪೈರಕೃತಮಾತ್ಮಾನಂ ತೈಃ ರೂಪವಿಶೇಷೈ ರನಭಿವ್ಯಕ್ತೀಕೃತ್ಯ ಸ್ಥಿತ ಇತಿ ಹೇತೋಃ ಸುರನರತಿರ್ಯಗಾದಿಭಿರ್ನಾನಾ ಪದೇಶೈರವ್ಯವಹಾರ್ಯ-ಮಾಣೋಽಪಿ ಮಧ್ಯೇ ಸುಕೃತಃ ಸುರನರತಿರ್ಯ ಗಾದಿಕಂ ಸೃಷ್ಟ್ವಾ ತತ್ತತ್ಸಮಾನಾಕಾರತಯಾ ತತ್ಪ್ರವೃತ್ತಯೇ ಪ್ರವಿಶ್ಯ ಆತ್ಮಾನಂ ರೂಪವಿಶೇಷೈ-ರ್ಬಹುಧಾ ವ್ಯಕ್ತೀಕೃತ್ಯ ಸ್ಥಿತಃ ತತ ಏವ ಹೇತೋರೇತೈರೇವ ರೂಪವಿಶೇಷೈ-ರ್ನಾನಾಪದೇಶೈ ರ್ವ್ಯವಹಾರ್ಯಮಾಣೋಽಸ್ಮೀತಿ ಭಗವದ್ವಚನ ಮಿತಿ ಸಮಃ ಸಮಾಧಿರಿತಿ।

ನನು ಹಿರಣ್ಯದೃಷ್ಟಾಂತಃ ಕಥಮಿತಿ ಚೇತ್ ಏವಂ ವದನ್ ಪ್ರಷ್ಟವ್ಯೋ ಜಾಯತೇ। ಕಿಮುಪಾದಾನೋಪಾದೇಯಭಾವಮಾಪನ್ನೋ ದೃಷ್ಟಾಂತ ಏವ ನೋಪಾದೇಯ ಇತಿ ತವಾಭಿಪ್ರಾಯಃ। ಕಿಂವಾ ಅಯಮೇವೇತಿ। ಯದ್ವಾ ಕಥಂ ದಾರ್ಷ್ಟಾಂತಿಕಂ ಯೋಜನೀಯಮಿತಿ। ನಾದ್ಯಃ। ಊರ್ಣನಾಭ್ಯಾದೇರ್ಬಹುಲಂ ಗ್ರಹಣದರ್ಶನಾತ್। **ಯಥಾಹುಃ**—

''ಯಥಾತ್ಮಮಾಯಾಯೋಗೇನ ನಾನಾಶಕ್ತ್ಯುಪಬೃಂಹಿತಃ ॥
ವಿಲುಂಪನ್ವಿಸೃಜನ್ಗೃಹ್ಣನ್ಬಿಭ್ರದಾತ್ಮಾನ ಮಾತ್ಮನಾ ॥
ಕ್ರೀಡಸ್ಯಮೋಘಸಂಕಲ್ಪ ಊರ್ಣನಾಭಿರ್ಯಥೋರ್ಣುತೇ ।'' ಇತಿ ॥

ದ್ವಿತೀಯೇ ವಿನಾ ವಿದ್ವೇಷಂ ಸುವರ್ಣೇ ಹೇತ್ವಂತರಸ್ಯ ಉಪಪಾದಯಿತು-ಮಶಕ್ಯತ್ವಾತ್। ನಾಪಿ ತೃತೀಯಃ। ಯೋಜನಾಪ್ರಕಾರಸ್ಯ ಪ್ರದರ್ಶಿತತ್ವಾದಿತಿ।

ನನು ಮಧ್ಯೇ ಸುರನರತಿರ್ಯಗಾದಿರಿತ್ಯೇವ ವ್ಯವಹಾರೋ ನ ತು ಭಗವಾನಿತಿ ತತಸ್ತೈಃ, ಶಬ್ದೈರೇವ ವ್ಯವಹಾರ್ಯಮಾಣೋ ಭಗವಾನಿತಿ ನಿಶ್ಚಯಃ ಕಥಮಿತಿ ಚೇತ್। ಏವಂವದನ್ನಾನಾವ್ಯಪದೇಶೈರ್ವ್ಯ-ವಹಾರ್ಯಮಾಣಂ ಸುವರ್ಣಮೇವೇತ್ಯಂಗೀಕರೋತಿ ನ ವಾ। ನೇತಿವದನ್ನನುಭವವಿರುದ್ಧವಾದೀತ್ಯುಪೇಕ್ಷ್ಯಃ ಪ್ರೇಕ್ಷಾವತಾಮಿತಿ। ಆದ್ಯೇ ಸಮಾಧಿಮಾಹ॥ **ಯಥೇತಿ**॥ ಯಥಾ ಮಧ್ಯೇ ನಾನಾವ್ಯಪದೇಶೈರೇವ ವ್ಯವಹಾರ್ಯಮಾಣಮಪಿ ವಸ್ತು ತದೇವ ಹಿರಣ್ಯಮೇವ। ತದ್ವತ್ ತಥೈವ ನಾನಾವ್ಯಪದೇಶೈರೇವ ವ್ಯವಹಾರ್ಯಮಾಣಂ ಯದ್ವಸ್ತ್ವಹಮೇವ ತದಸ್ಮೀತಿ। ನನು ಸುಷ್ಠು ರಥಶಂಖಾದಿಸಮಾನಾಕೃತಿತಯಾ ಅಕೃತಮಿತಿಹೇತೋಃ ಸರ್ವಸ್ಯ ಹಿರಣ್ಮಯಸ್ಯ ರಥಾದೇಃ ಪುರಸ್ತಾತ್ಪಶ್ಚಾಚ್ಚ ಹಿರಣ್ಯಮಿತಿ ಸರ್ವಸ್ಯಾಪಿ ಲೋಕಸ್ಯ

ವ್ಯವಹಾರಾಯ ಸ್ಫುಟಂ ಶಕ್ಯಂ ಭವತಿ । ಮಧ್ಯೇ ತು ಸುಕೃತಮಿತಿ ನ ಸ್ಫುಟತಯಾ ಹಿರಣ್ಯಮಿತಿ ಸರ್ವಸ್ಯಾಪಿ ವ್ಯವಹರ್ತುಂ ಶಕ್ಯಮಿತಿ ಹೇತೋರೇವ ನಾನಾಶಬ್ದೈಃ ''ರಥೋ ಹಿರಣ್ಮಯಃ ಶಂಖೋ ಹಿರಣ್ಮಯಃ'' ಇತ್ಯೇವಮಾದಿಭಿರೇವ ವ್ಯವಹ್ರಿಯತೇ ಅತಃ ತಸ್ಯ ಅನ್ಯಥಾಪ್ಯುಪಪನ್ನತಯಾ ನ ತದನ್ಯಥಾನುಪಪತ್ತ್ಯಾ ಹಿರಣ್ಯೇತರಂ ಭವತಿ। ಕಿಂತು ತದೇವ ಹಿರಣ್ಯಮೇವೇತಿ ಯುಕ್ತಮೇವೇತಿ ಚೇತ್। ಅತ್ರಾಪಿ ಇದಮೇವೋತ್ತರಂ॥ **ಯಥೇತಿ॥** ಯಥಾ ಹಿರಣ್ಯಂ ಸ್ವಕೃತಮಿತಿ ಸರ್ವಸ್ಯ ಹಿರಣ್ಮಯಸ್ಯ ಪುರಸ್ತಾತ್ ಪಶ್ಚಾಚ್ಚ ಸರ್ವಸ್ಯಾಪಿ ಲೋಕಸ್ಯ ಹಿರಣ್ಮಯಮಿತಿ ಸ್ಫುಟಂ ವ್ಯವಹರ್ತುಂ ಶಕ್ಯಂ ನ ಭವತಿ। ಕಿಂತು ಸ್ಫುಟತರವಿವೇಕಿನಾಮೇವ । ನ ಚ ತಾವತ್ಯೈವ ನಾನಾಶಬ್ದೈಃ ವ್ಯವಹಾರಮಾತ್ರೇಣ ತದ್ವಸ್ತು ನ ಹಿರಣ್ಯಂ ಭವತಿ । ಕಿಂತು ತದೇವ ಹಿರಣ್ಯಮೇವ ಭವತಿ । ಯಥಾ ತದ್ವತ್ ತಥಾ ಅಹಮಸ್ಯ ಜಗತಃ ಪುರಸ್ತಾತ್ಪಶ್ಚಾಚ ಸ್ವಕೃತ ಇತಿ ನ ಸರ್ವಸ್ಯಾಪಿ ಲೌಕಿಕಸ್ಯ ಸ್ಫುಟಂ ಭಗವಾನಿತಿ ವ್ಯವಹರ್ತುಂ ಶಕ್ಯಃ । ಮಧ್ಯೇತು ಸುಕೃತ ಇತಿ ನ ಸರ್ವಸ್ಯಾಪಿ ವಿವಿಚ್ಯ ಸ್ಫುಟಂ ವ್ಯವಹರ್ತುಂ ಶಕ್ಯಃ। ಕಿಂತು ಸುರನರತಿರ್ಯಗಾದಿದೇಹೇಷು ಸ್ಥಿತ್ವಾ ತತ್ತತ್ಪ್ರವರ್ತಕತಯಾ ತೈಸ್ತೈಃ ಶಬ್ದೈರ್ವಾಚ್ಯೋ ಭಗವಾನೇವ। ತೇ ತು ಪ್ರತಿಮಾಮಾತ್ರಮಿತಿ ಸ್ಫುಟತರವಿವೇಕಿನಾಮೇವ। ತತಸ್ತಥಾ ವ್ಯವಹರ್ತುಮಶಕ್ತಾನಾಂ ನಾನಾವ್ಯವಹಾರಮಾತ್ರೇಣ ತದ್ವ್ಯವಹಾರವಿಷಯೀಭೂತಂ ವಸ್ತ್ವಹಂ ಭಗವಾನ್ನೇತಿ ವಕ್ತುಂ ಯುಕ್ತಂ । ಕಿಂತ್ವಹಮೇವೇತಿ ಸಮಂ ಸಮಾಧಾನಮಿತಿ । ತದೇವಂ ಪೂರ್ವಾಚಾರಸದ್ಭಾವೇನ ಭಗವತ್ಯೇವ ಶಬ್ದಪ್ರಯೋಗಃ ಕರ್ತವ್ಯೋ ನಾನ್ಯತ್ರೇತಿ ಸಿದ್ಧಮಿತಿ। ಅನೇನ ಭಗವನ್ನಾಮ್ನಾಂ ಸರ್ವಶಬ್ದಾನಾಂ ಅನ್ಯತ್ರಾಪ್ರಯೋಗರೂಪಂ ಮೌನಮವಶ್ಯಂ ಸಂಪಾದ್ಯಮಿತಿ ಸೂಚಿತಂ ಭವತಿ। ಅನೇನೈವ ಚ ವೇದಾನಾಂ ಭಗವನ್ನಾಮತ್ವವೇದನರೂಪಂ ಸ್ವಾಧ್ಯಾಯಾಪರಪರ್ಯಾಯಂ ವೇದಾಧ್ಯಯನಮಪಿ ಭಾಗವತಧರ್ಮೇಷು ಪರಿಗಣಿತಮವಶ್ಯಂ ಸಂಪಾದ್ಯಮಿತಿ ಸೂಚಿತಮಿತಿ ಜ್ಞಾತವ್ಯಂ ॥

❖❖❖

ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ—

ಒಂದು ಬಂಗಾರದ ಗಟ್ಟಿಯಿಂದಾಗಬಹುದಾದ ಎಲ್ಲ ಒಡವೆಗಳು ಸಿದ್ಧವಾಗುವ ಮೊದಲೂ ಬಂಗಾರವೆ ಆ ಒಡವೆಗಳನ್ನೆಲ್ಲ ಕರಗಿಸಿ ಗಟ್ಟಿ ಮಾಡಿದ ಬಳಿಕವೂ, ಬಂಗಾರವೆ ಒಡವೆಗಳ ರೂಪದಿಂದ ಇರುವ ಮಧ್ಯಕಾಲದಲ್ಲಿಯೂ

ಅದು ಬಂಗಾರವೇ. ಹಾಗೇ ಪರಮಾತ್ಮನು ಸೃಷ್ಟಿಕಾಲದಲ್ಲಿ ದೇವಮಾನವಾದಿಗಳನ್ನು ಸೃಜಿಸುವ ಮೊದಲೂ, ಲಯಕಾಲ ಬಂದಾಗ ಲಯ ಮಾಡಿದ ಬಳಿಕವೂ, ಮಧ್ಯದಲ್ಲಿ ಅಂತರ್ಯಾಮಿಯಾಗಿರುವ ಸೃಷ್ಟಿಕಾಲದಲ್ಲಿಯೂ ಪರಮಾತ್ಮನೇ ಆಗಿರುತ್ತಾನೆ.

ಒಡವೆಗಳು ಸಿದ್ಧವಾಗುವ ಮೊದಲು ಮತ್ತು ಅವು ಕರಗಿದ ಬಳಿಕ, ಬಂಗಾರವು ಒಡವೆಗಳಾಗಿ ಕರೆಸಿಕೊಳ್ಳುವುದಿಲ್ಲ. ಮಧ್ಯಕಾಲದಲ್ಲಿ ಅವು ಒಡವೆಗಳಾಗಿರುವಾಗ ಮಾತ್ರ ಒಡವೆಗಳಾಗಿ ಕರೆಸಿಕೊಳ್ಳುತ್ತದೆ.

ಯದ್ಯಪಿ ಒಡವೆಗಳು ಒಡವೆಗಳಾಗಿ ಕರೆಸಿಕೊಳ್ಳುವಾಗ 'ಬಂಗಾರ'ವೆಂದು ಕರೆಸಿಕೊಳ್ಳುವುದಿಲ್ಲ. 'ಕಟಕ' 'ಮುಕುಟ' ಎಂದು ಮುಂತಾಗಿಯೆ ಕರೆಸಿಕೊಳ್ಳುತ್ತದೆ. ಆದರೂ ಒಡವೆಗಳು ವಾಸ್ತವದಲ್ಲಿ ಬಂಗಾರವೆ. ಹಾಗೇ ಸೃಷ್ಟಿಕಾಲದಲ್ಲಿ ಪರಮಾತ್ಮನು ದೇವಮಾನವಾದಿ ನಾಮಗಳಿಂದ ಕರೆಸಿಕೊಳ್ಳುತ್ತಾನೆ. ಪರಮಾತ್ಮನೆಂದು ಅಜ್ಞರಿಂದ ಕರೆಸಿಕೊಳ್ಳುವುದಿಲ್ಲ. ಆದರೂ ವಾಸ್ತವದಲ್ಲಿ ದೇವಮಾನವಾದಿಗಳನ್ನು ನಾನು ಸೃಜಿಸುವಾಗ ಅವೇ ನಾಮರೂಪಗಳಿಂದ ನಾವೇ ವ್ಯಕ್ತನಾಗಿ ಅವರೊಳಗೆ ಪ್ರವರ್ತಕನಾಗಿ ಪ್ರವೇಶಿಸಿ ಇರುತ್ತೇನೆ. ಇಲ್ಲದಿದ್ದರೆ ಅವರು ಸ್ವತಃ ಪ್ರವೃತ್ತಿ ಮಾಡಲಾರರು.

'ಮನ್ಮಯಾ ಮಾಮುಪಾಶ್ರಿತಾಃ' ಅವರು ನನ್ನ ಅಧೀನರು. ನನ್ನನ್ನೇ ಆಶ್ರಯಿಸಿದವರು. ಅವರಿಗೆ ಅಂತರ್ಯಾಮಿಯಾಗಿ ಅವರ ನಾಮಗಳಿಂದ ಮುಖ್ಯವಾಗಿ ನಾನೇ ಕರೆಸಿಕೊಳ್ಳುತ್ತೇನೆ. ಈ ನನ್ನ ರೂಪಗಳೇ ಬೇರೆ, ಆ ದೇವಮಾನವಾದಿಗಳೇ ಬೇರೆ. ಇಬ್ಬರಿಗೂ ಸಾದೃಶ್ಯ ಮಾತ್ರವಿರುತ್ತದೆ.

ಈ ಅಭಿಪ್ರಾಯದಿಂದಲೇ ಪರಮಾತ್ಮ ಮತ್ತು ಅವನ ರೂಪಗಳಿಗೆ ಬಂಗಾರ ಮತ್ತು ಒಡವೆಗಳ ದೃಷ್ಟಾಂತ ಉಕ್ತವಾಗಿದೆ.

ಇಂಥ ವಿವೇಕವು ಸ್ಫುಟವಾಗಿಲ್ಲದ ಅಜ್ಞ ಲೌಕಿಕರಿಗೆ, ದೇವಮಾನವಾದಿ ಸದೃಶನಾಮರೂಪಿಯಾದ ಪರಮಾತ್ಮನನ್ನು ಸ್ಪಷ್ಟವಾಗಿ ಪರಮಾತ್ಮನೆಂದು ವ್ಯವಹಾರ ಮಾಡಲು ಸಾಮರ್ಥ್ಯವಿಲ್ಲ. ಜ್ಞಾನಿಗಳಿಗೆ ಸ್ಫುಟವಾದ ವಿವೇಕವೆ ಇರುವುದರಿಂದ ಅವರು ಹಾಗೆ ವ್ಯವಹಾರ ಮಾಡಬಲ್ಲರು.

ಹಿರಣ್ಮಯವಾದ ಸ್ವರ್ಣರಥ ಸ್ವರ್ಣಶಂಖಗಳ ನಿರ್ಮಾಣದಲ್ಲಿ ಬಂಗಾರಕ್ಕೇ

ಹೆಚ್ಚಿನ ಮಹತ್ವ. ಬಂಗಾರಕ್ಕೆ ರಥಶಂಖಗಳ ಆಕಾರ ಕೊಡುತ್ತಾರೆ. ಆಕಾರವನ್ನು ಕೊಡುವ ಮುನ್ನ ಆ ಆಕಾರದಲ್ಲಿ ಬಂಗಾರವು 'ಸ್ವಕೃತ' ಅಂದರೆ 'ಸು ಅಕೃತ' ವಾಗಿರುತ್ತದೆ. ಆಗ ಬಂಗಾರವನ್ನೇ ಬಂಗಾರವೆಂದು ಲೌಕಿಕರು ವ್ಯವಹರಿಸ ಬಲ್ಲರು. 'ಸು-ಕೃತ'ವಾಗಿರುವಾಗ ಮಾತ್ರ ಬಂಗಾರ ಎಂದು ಸ್ಫುಟವಾಗಿ ವ್ಯವಹಾರ ಮಾಡಲಾರರು. ಕೇವಲ 'ಬಂಗಾರದ ರಥ' 'ಬಂಗಾರದ ಶಂಖ' ಎಂದು ಮಾತ್ರ ವ್ಯವಹಾರ ಮಾಡಬಲ್ಲರು. 'ಬಂಗಾರ'ವೆಂದು ವ್ಯವಹಾರವು ಲೌಕಿಕರಲ್ಲಿಲ್ಲದಿದ್ದ ಮಾತ್ರಕ್ಕೆ ಅದು ಬಂಗಾರವಲ್ಲವೆಂದಾಗುವುದಿಲ್ಲ. ಸ್ಫುಟ ವಿವೇಕಉಳ್ಳವರು ಆಗಲೂ ಕೂಡ ಹಿರಣ್ಮಯವನ್ನು ಬಂಗಾರವೆಂದು ವ್ಯವಹರಿಸ ಬಲ್ಲರು.

ಹಾಗೇ ದೇವಮಾನವಾದಿ ಸಮಾನ ನಾಮರೂಪ ಉಳ್ಳ ಭಗವದ್ರೂಪ ಗಳನ್ನು ಭಗವಂತನೆಂದು ಸ್ಫುಟವಿವೇಕ ಉಳ್ಳ ಜ್ಞಾನಿಗಳು ವ್ಯವಹರಿಸುವುದರಿಂದ ಭಗವಂತನು ಭಗವಂತನೆ, ಭಗವಂತನಲ್ಲವೆಂದಾಗುವುದಿಲ್ಲ.

ಹೀಗೆ ಜ್ಞಾನಿಗಳ ಶಬ್ದವ್ಯವಹಾರದಲ್ಲಿ ಭಗವಂತನು ವಿಷಯನಾಗುವು ದರಿಂದ ಭಗವಂತನೇ ಶಬ್ದಗಳಿಗೆ ಮುಖ್ಯಪ್ರತಿಪಾದ್ಯ. ಅವನ ವಿಷಯದಲ್ಲಿಯೇ ಎಲ್ಲ ಶಬ್ದಗಳನ್ನು ಪ್ರಯೋಗ ಮಾಡಬೇಕು.

ಹೀಗೆ ಎಲ್ಲ ಶಬ್ದಗಳನ್ನೂ ಪರಮಾತ್ಮ ವಿಷಯದಲ್ಲಿಯೇ ಪ್ರಯೋಗಿಸು ವುದು 'ಸ್ವಾಧ್ಯಾಯ'. ಬೇರೆ ವಿಷಯದಲ್ಲಿ ಪ್ರಯೋಗಿಸದಿರುವುದು 'ಮೌನ' ಎಂಬ ಭಾಗವತಧರ್ಮ, ಎರಡೂ ಪೂರ್ವಿಕರ ಆಚಾರದಿಂದ ಸಿದ್ಧವಾಗುವುದು.

ಇದುವೇ ಮೌನವೆಂಬ ಭಾಗವತಧರ್ಮವೂ ಆಗಿದೆ ಮತ್ತು ವೇದ ವೆಲ್ಲವೂ ಹರಿನಾಮಗಳೆಂದು ಅನುಸಂಧಾನ ಮಾಡುವ 'ಸ್ವಾಧ್ಯಾಯ' ವೆನಿಸಿರುವ ವೇದಾಧ್ಯಯನವೆಂಬ ಭಾಗವತಧರ್ಮವೂ ಆಗಿದೆ ಎಂದು ತಿಳಿದು ಅವಶ್ಯ ಅನುಷ್ಠಾನ ಮಾಡಬೇಕು.

'ಸ್ವಾಧ್ಯಾಯಃ ಸಮದೃಕ್ಸೇವಾ' ಎಂದು ಸ್ವಾಧ್ಯಾಯವನ್ನೂ, 'ಮೌನಮಾತ್ಮವಿಮರ್ಶನಂ' ಎಂದು ಮೌನವನ್ನೂ ಭಾಗವತಧರ್ಮಗಳೆಂದು ಭಾಗವತದಲ್ಲಿ ನಾರದರು ಧರ್ಮರಾಜನಿಗೆ ಉಪದೇಶ ಮಾಡುತ್ತಾರೆ. (ಭಾ.೭.೧೨.೯).

ಬಂಗಾರದ ದೃಷ್ಟಾಂತವನ್ನು ಕೊಟ್ಟ ಮಾತ್ರಕ್ಕೆ ಒಡವೆಗಳಿಗೆ ಬಂಗಾರದಂತೆ, ದೇವಮಾನವಾದಿ ಪ್ರಪಂಚಕ್ಕೆ ಭಗವಂತನು ಉಪಾದಾನ ಕಾರಣ ಎಂದು ತಿಳಿಯುವ ಪ್ರಸಂಗವಿಲ್ಲ. ಜೇಡರಹುಳು ಮುಂತಾದ ನಿಮಿತ್ತ ಕಾರಣ ದೃಷ್ಟಾಂತಗಳೂ ಕೂಡ ಉಪನಿಷತ್ತಿನಲ್ಲಿ ಬಹಳ ಕಂಡಿವೆ. ಭಾಗವತ ದಲ್ಲಿಯೂ ಇದು ಸ್ಪಷ್ಟವಿದೆ—

ಯಥಾತ್ಮಮಾಯಾಯೋಗೇನ ನಾನಾ ಶಕ್ತ್ಯುಪಬೃಂಹಿತಃ ।
ವಿಲುಂಪನ್ ವಿಸೃಜನ್ ಗೃಹ್ಣನ್ ಬಿಭ್ರದಾತ್ಮಾನಮಾತ್ಮನಾ ।
ಕ್ರೀಡಸ್ಯಮೋಘ ಸಂಕಲ್ಪ ಊರ್ಣನಾಭಿರ್ಯಥೋರ್ಣುತೇ ॥

(ಭಾ.೨.೯.೨೬,೨೭)

ಬ್ರಹ್ಮದೇವರು ಶ್ರೀಹರಿಯಲ್ಲಿ ಹೇಳಿಕೊಳ್ಳುತ್ತಾರೆ—

'ಸರ್ವಶಕ್ತನಾದ ನೀನು ನಿನ್ನಿಚ್ಛೆಯಂತೇ ಅವತಾರ ಮಾಡಿ, ಜೇಡರಹುಳು ಸ್ವೇಚ್ಛೆಯಿಂದ ದಾರವನ್ನು ನಿರ್ಮಿಸಿ ಆಟವಾಡಿ ನುಂಗುವಂತೆ ನೀನೂ ಕೂಡ ನಿನ್ನ ಅಧೀನವಾದ ಪ್ರಕೃತಿಯಿಂದ ಜಗತ್ತನ್ನು ನಿರ್ಮಿಸಿ ಪಾಲಿಸಿ ಲಯಗೈದು ಕ್ರೀಡಿಸುವಿ. ಅದರ ವೈಖರಿಯನ್ನು ನಾನು ಅರಿಯಬೇಕು ನನ್ನ ಈ ಬಯಕೆಯನ್ನು ಈಡೇರಿಸು' ಎಂದು.

❖❖❖

—೩೧೧—

**ಬೇಕಾದರೆ ಹರಿನಾಮವನ್ನು ಎರವಲು**
**ಪಡೆದೇ ಅನ್ಯರನ್ನು ಅನ್ಯವಸ್ತುಗಳನ್ನು ಹೇಳಬೇಕು**

**ಅತಃ ಕವಿರ್ನಾಮಸು ಯಾವದರ್ಥಃ**
**ಸ್ಯಾದಪ್ರಮತ್ತೋಽವ್ಯವಸಾಯಬುದ್ಧಿಃ ।**
**ಸಿದ್ಧೇಽನ್ಯಥಾರ್ಥೇ ನ ಯತೇತ ತತ್ತತ್**
**ಪರಿಶ್ರಮಂ ತತ್ರ ಸಮೀಕ್ಷಮಾಣಃ ॥** (ಭಾ.೨.೨.೩)

**ನನು ಏವಂವಿಧೇ ಮೌನೇ ಅನುಷ್ಠೀಯಮಾನೇ ಶರೀರಪೋಷಣಂ ಕಥಂ ಸ್ಯಾದಿತ್ಯತ ಆಹ ॥ ಅತಃ ಕವಿರಿತಿ ॥ ಯತಃ ಉಕ್ತರೀತ್ಯಾ ಅಶೇಷೋಽಪಿ ಶಬ್ದಃ**

ಭಗವನ್ನಾಮ। ತಸ್ಯ ಚ ದೇವಾದೌ ಭಗವತೋಽನ್ಯತ್ರ ಅಪ್ರಯೋಗಶ್ಚ। ಪ್ರಯೋಗೇಽಪಿ ಫಲಾದರ್ಶನೇನ ಅಕರ್ತವ್ಯತಯಾ ನಿಶ್ಚಿತಃ। ಯತಶ್ಚ ಮಹಾಪುರುಷಾರ್ಥಹೇತುತಯಾ ಭಗವತ್ಯೇವ ಪ್ರಯೋಗಃ ಕರ್ತವ್ಯತಯಾ ನಿಶ್ಚಿತಃ। ಅತಃ ಅಸ್ಮಾತ್ಕಾರಣಾತ್। ತತ್ರ ಭಗವತೋಽನ್ಯತ್ರ ತತ್ತಚ್ಛಬ್ದವಿಶೇಷ ಪ್ರಯೋಕ್ತೃಣಾಂ ಕ್ಲೇಶವಿಶೇಷಂ ಸಮೀಕ್ಷಮಾಣೋಽನುಸಂದಧಾನಃ ಅವ್ಯವಸಾಯಬುದ್ಧಿಃ ಅನಿಶ್ಚಿತಬುದ್ಧಿಃ ಕವಿಃ ಮುಮುಕ್ಷುಃ ಅಪ್ರಮತ್ತಃ ಪ್ರಮಾದರಹಿತಃ ಸನ್ ನಾಮಸು ಭಗವನ್ನಾಮ್ನಾಮನ್ಯತ್ರ ಪ್ರಯೋಗೇ ಯಾವದರ್ಥಃ ಯಾವಾನ್ ಶರೀರಧಾರಣಪೋಷಣೋಪಯೋಗಿತಯೈವ ಪರಿಮಿತಃ ಅರ್ಥಃ ಯಸ್ಯ ತಾದೃಶಃ ಸ್ಯಾತ್।

**ಇದಮುಕ್ತಂ ಭವತಿ—** ಯದ್ವಸ್ತು ಯಸ್ಯ ಭವತಿ ತತ್ತಸ್ಮೈ ದೇಯಂ ಕುಶಲೇನೇತಿ ಹಿ ಲೋಕತ ಏವ ಸಿದ್ಧಂ। ಸರ್ವಶಬ್ದಾಶ್ಚ ಭಗವತ ಏವೇತಿ 'ನಾಮಾನೀ''ತಿ ಪ್ರತಿಪಾದಿತಂ। ತತೋ ಲೋಕರೀತಿಮನುರುಂಧಾನೈಸ್ತತ್ರೈವ ತೇಷಾಂ ಪ್ರಯೋಗಃ ಕರ್ತುಮುಚಿತಃ। ಯದಾ ಚೈವಂ ತದಾ ಕಿಂ ಪುನಸ್ತೇನ ಸತಿ ಮಹಾಪುರುಷಾರ್ಥಲಾಭೇ। ತಥಾ ಚೋಕ್ತಮೇವ। ಸತ್ಯಪ್ಯೇವಂ ಪರಿತ್ಯಜ್ಯ ಪರಮಾರ್ಥಂ ಅಪರಮಾರ್ಥೇ ಪ್ರಯುಂಜಾನಸ್ಯ ತೇನ ಫಲಾಭಾವಸ್ಯ ಪ್ರಾಗುದಿತತಯಾ ಕೇವಲಂ ಗಂಗಾಶಬ್ದಂ ಅಂತ್ಯಜವೀಥ್ಯಾಃ ಜಲೇ ಪ್ರಯುಂಜಾನಸ್ಯೇವ ಪ್ರತ್ಯವಾಯ ಏವ ಫಲತಯಾ ದೃಶ್ಯತೇ। ಏವಂ ಮಹಾಫಲವಿಘಾತಕತಯಾ ಪ್ರತ್ಯವಾಯಾಪಾದಕತಯಾ ಚ ಅಕರ್ತವ್ಯೇ ಸತಿ ಅನ್ಯತ್ರ ಪ್ರಯೋಗೇ। ಯಸ್ತು ಭಗವಾನೇವ ರಾಜಾದಿಪದಾಭಿಧೇಯಃ ಸ ಚ ಅನ್ನಂ ಮೇ ದೇಹಿ ವಸ್ತ್ರಂ ಮೇ ದೇಹಿ ಇತ್ಯನುಕ್ತಾವಪಿ ಸರ್ಜನಸಂಹಾರಾವಿವ ಪಾಲನಮಪ್ಯಪ್ರಾರ್ಥಿತ ಏವ ಕರೋತೀತಿ ನಿಶ್ಚಿತಬುದ್ಧಿಃ ಸಃ ಅನ್ಯತ್ರ ತಥಾ ನ ಪ್ರಯುಂಕ್ತ ಏವ। ಯಸ್ತ್ವೇವಮವ್ಯವಸಿತಬುದ್ಧಿರ್ಮುಮುಕ್ಷುಃ ತೇನ ಚಾಪಲ್ಯೇನ ಪ್ರಯೋಗೇ ಕರ್ತವ್ಯೇ ಚ ಇದಮಿತಿಕರ್ತವ್ಯತಾ ಯತ್ಪ್ರಮಾದಾಭಾವ ಇತಿ। ಪ್ರಮಾದಶ್ಚ ಭಗವತಃ ಸರ್ವಶಬ್ದವಾಚ್ಯತ್ವ ವಿಸ್ಮರಣಂ। ತತೋ ಭಗವತಃ ಸರ್ವಶಬ್ದಾಭಿ ಧೇಯತ್ವಾನುಸಂಧಾನಪೂರ್ವಕಂ ವಿಶೇಷತಃ ಅಶ್ವಂ ಗಜಂ ರಥಂ ಛತ್ರಚಾಮರಾದೀಂಶ್ಚ ತತ್ತತ್ಫಲಕಾನ್ಭೃತ್ಯಾನ್ ತತ್ಪೋಷಣಾಯ ರಾಜ್ಯಂ ತದ್ರಕ್ಷಣಾಯ ಶೂರಾಂಶ್ಚ ಇತ್ಯಾದಿಪ್ರಯೋಗೇ ತದಲಾಭೇ ನಿಷ್ಠುರಭಾಷಣಾವ ಜ್ಞಾನಾದಿನಾ, ಕ್ವಚಿಲ್ಲಾಭೇ ತು ತದ್ರಕ್ಷಣಾದಿನಾ ಚ ಸುಬಹುತರಶ್ರಮ ಏವೇತಿ ಬಾಧಕಾನುಸಂಧಾನಪೂರ್ವಕಂ ಚ ಯಾವಾನ್ ಶರೀರಪೋಷಣಮಾತ್ರೋಪ

**ಯೋಗೀ ಅರ್ಥೋ ವಿಷಯೋಽಸ್ತಿ ತಾವತ್ಯೇವ ಅಲ್ಪ ಏವ ಶಬ್ದಃ ಪ್ರಯೋಕ್ತವ್ಯ ಇತಿ। ಇದಂ ಚ ಅಕರ್ತವ್ಯಕರಣಂ ಅತಿಸಂಕಟೇ ಪ್ರಾಪ್ತೇ। ತದಭಾವೇ ತು ಸರ್ವಥಾ ಅನ್ಯತ್ರಶಬ್ದಪ್ರಯೋಗೋ ನ ಕಾರ್ಯ ಏವೇತ್ಯಾಹ॥ ಅನ್ಯಥೇತಿ। ಅನ್ಯಥಾ ವಿನಾ ಶಬ್ದಪ್ರಯೋಗಂ। ಅರ್ಥೇ ಸ್ವಶರೀರಪೋಷಣರೂಪೇ ಪ್ರಯೋಜನೇ ಸಿದ್ಧೇ। ನ ಯತೇತ ತತಃ ತತ್ಸಾಧನೇ ಶಬ್ದಪ್ರಯೋಗಂ ನ ಕುರ್ಯಾದಿತಿ॥**

❖❖❖

**ಶುಕಮುನಿ ಹೇಳುತ್ತಾರೆ—**

**ಎಲ್ಲ ಶಬ್ದಗಳೂ ಹರಿನಾಮಗಳೇ ಆಗಿರುವುದರಿಂದ ಇತರ ದೇವತೆಗಳಲ್ಲಿ ಅದನ್ನು ಪ್ರಯೋಗಿಸಲಾಗದು. ಪ್ರಯೋಗಿಸಿದರೂ ಆ ಶಬ್ದಗಳು ಹೇಳುವ ಗುಣಗಳು ಅವರಲ್ಲಿಲ್ಲದ್ದರಿಂದ ಅವರು ಫಲ ಕೊಡಲಾರರು. ಮೋಕ್ಷರೂಪ ಮುಖ್ಯ ಫಲ ಬೇಕಿದ್ದರೆ ಹರಿಯಲ್ಲಿಯೇ ಎಲ್ಲ ಶಬ್ದಗಳ ಪ್ರಯೋಗ ಮಾಡಬೇಕೆಂದು ನಿಶ್ಚಿತವಾಗಿದೆ.**

**ಅನ್ಯದೇವತೆಗಳಲ್ಲಿ ಇಂದ್ರಾದಿ ಶಬ್ದಪ್ರಯೋಗ ಮಾಡಿ ಬೇಡುವವರ ಕ್ಲೇಶಗಳನ್ನು ಕಂಡೂ ಕೂಡ ಇನ್ನೂ ನಿಶ್ಚಿತವಾಗಿ ಈ ಧರ್ಮವನ್ನು ಅನುಷ್ಠಾನ ಮಾಡಲಾಗದವನು ಮುಮುಕ್ಷುವಾಗಿದ್ದರೆ ಎಷ್ಟು ಅನ್ಯತ್ರಪ್ರಯೋಗ ಮಾಡುವುದರಿಂದ ಮಾತ್ರ ಶರೀರಧಾರಣೆ ಪೋಷಣೆ ಸಾಧ್ಯವಾದೀತೋ ಅಷ್ಟು ಮಾತ್ರ ಅನ್ಯತ್ರಪ್ರಯೋಗ ಮಾಡುತ್ತಿರ ಬೇಕು.**

ಇದರ ತಾತ್ಪರ್ಯ ಇಷ್ಟು—ಯಾವ ವಸ್ತು ಯಾರಿಗೇ ಸೇರಬೇಕೋ ಅದನ್ನು ಅವರಿಗೇ ಕೊಡಬೇಕು. ಹಾಗೆ ಮಾಡುವವನೇ ಬುದ್ಧಿವಂತನೆಂಬುದು ಲೋಕದಲ್ಲಿ ಕಂಡಿದೆ.

ನಾಮಾನಿ ಸರ್ವಾಣಿ ಯಮಾವಿಶಂತಿ
ತಂ ವೈವಿಷ್ಣುಂ ಪರಮಮುದಾಹರಂತಿ ॥

ಎಂದು ಶ್ರುತಿ ಇರುವುದರಿಂದ ಎಲ್ಲ ಶಬ್ದಗಳೂ ಹರಿಗೇ ಸೇರಬೇಕಾಗಿರುತ್ತದೆ. ಹೀಗಾಗಿ ಹರಿಯಲ್ಲೇ ಎಲ್ಲ ಶಬ್ದಪ್ರಯೋಗ ಮಾಡಬೇಕು. ಅದರಿಂದ ಮಹಾಪುರುಷಾರ್ಥವೂ ಲಭಿಸುತ್ತದೆ. ಇಷ್ಟು ಹೇಳಿದರೂ ಅದಕ್ಕೆ ಕಿವಿಗೊಡದೆ

ಹರಿನಾಮವನ್ನು ಅನ್ಯತ್ರಪ್ರಯೋಗಿಸಿದರೆ, 'ಗಂಗಾ' ಶಬ್ದವನ್ನು ಅಂತ್ಯಜರ ಕೇರಿಯ ಬೀದಿ ನೀರಿನಲ್ಲಿ ಪ್ರಯೋಗಿಸಿದಂತಾಗುವುದರಿಂದ ಪುಣ್ಯದ ಬದಲು ಪಾಪವೇ ಬರುತ್ತದೆ.

ಹರಿಯೇ ರಾಜ. ಅನ್ನಬಟ್ಟೆಗಳನ್ನು ಕೊಡೆಂದು ಅವನಲ್ಲಿ ಬೇಡದಿದ್ದರೂ ಕೊಡುತ್ತಾನೆ. ಸೃಷ್ಟಿಸಂಹಾರಗಳಂತೆ ಪಾಲನೆಯನ್ನೂ ಬೇಡದೆಯೇ ಮಾಡುತ್ತಾನೆ ಎಂದು ನಿಶ್ಚಿತಬುದ್ಧಿ ಉಳ್ಳವನು ಅನ್ಯದೇವತೆಗಳಲ್ಲಿ ಹರಿನಾಮವನ್ನು ಪ್ರಯೋಗಿಸುವುದೇ ಇಲ್ಲ.

ಯದ್ಯಪಿ 'ಮೌನ'ವೆಂಬ ಭಾಗವತ ಧರ್ಮಾಚರಣ ಕಟ್ಟುನಿಟ್ಟಾಗಿ ಮಾಡಿದರೆ ಅನ್ಯದೇವತೆಗಳನ್ನು ಮಾತ್ರವಲ್ಲದೆ ತಂದೆ ತಾಯಿ ಮುಂತಾದ ಬಂಧುಗಳನ್ನೂ 'ಅಪ್ಪ' 'ಅಮ್ಮ' ಎಂದು ಕರೆದು ಅವರ ಸಹಾಯದಿಂದ ಶರೀರ ಪೋಷಣೆ ಮಾಡಿಕೊಳ್ಳುವುದೇ ಅಶಕ್ಯವಾದೀತು. ಸೈದ್ಧಾಂತಿಕವಾಗಿ ಈ ಧರ್ಮಾಚರಣೆ ಸರಿಯಾದರೂ ಅದು ಅವ್ಯವಹಾರ್ಯ. ಪ್ರಾಯೋಗಿಕವಾಗಿ ಏನೂ ಸರಿಯಾಗದು. ಆದರೂ ಮಗು ಬೇಡದಿದ್ದರೂ ಪೋಷಕರು ಅದರ ಪಾಲನೆ ಮಾಡುವಂತೆ ಜಗತ್ತಿಗೆ ತಂದೆ ತಾಯಿ ಎಲ್ಲವೂ ಆಗಿರುವ ಭಗವಂತ ಧರ್ಮಾತ್ಮರಾದ ಮಕ್ಕಳ ಪೋಷಣೆ ಮಾಡದಿರಲಾರ. ಇಂಥ ವಿಶ್ವಾಸ ಮುಮುಕ್ಷುವಿಗೆ ಅವಶ್ಯಬೇಕು. 'ಮೌನ' ಧರ್ಮವನ್ನು ವ್ಯವಹಾರದಲ್ಲಿಯೇ ಆಚರಣೆಗೆ ತರಬೇಕು. ಅದು ಅಶಕ್ಯವೇನಲ್ಲ.

ಮತ್ತು ಶರೀರ ಪೋಷಣೆ ಅಶಕ್ಯವಾಗದಂತೆ ಈ ಧರ್ಮನಿಯಮವನ್ನು ಸ್ವಲ್ಪವಾಗಿ ಎಷ್ಟು ಆವಶ್ಯಕವೋ ಅಷ್ಟು ಸಡಿಲಿಸಲೂ ಅವಕಾಶವಿರುವಾಗ ಏಕೆ ಚಿಂತೆ? ಹೀಗೆ ಆವಶ್ಯಕ ಪ್ರಸಂಗಗಳಲ್ಲಿ ಹರಿಗಿಂತ ಅನ್ಯತ್ರ ಶಬ್ದಪ್ರಯೋಗ ಮಾಡುವಾಗ ಪ್ರಮಾದವಿರಬಾರದು. ಅಂದರೆ, ಹರಿಯೇ ಸರ್ವಶಬ್ದಗಳಿಗೆ ಪರಮ ಮುಖ್ಯವಾಚ್ಯನೇ ಆದರೂ ಬೇರೆ ಉಪಾಯವಿಲ್ಲದೆ ನಾವು ಆ ಹರಿನಾಮವನ್ನು ಅನ್ಯತ್ರ ಸಮಾಕರ್ಷ ಮಾಡಿ ಎರವಲು ಪಡೆದು ಅಮುಖ್ಯವಾಗಿ ವ್ಯವಹರಿಸುತ್ತಿದ್ದೇವೆ ಎನ್ನುವುದನ್ನು ಮರೆಯಬಾರದು. ಮರೆಯುವ ಪ್ರಮಾದಮಾಡಬಾರದು. ಇಂದ್ರಾದಿ ಶಬ್ದಗಳು ಹೇಳುವ ಸರ್ವೇಶ್ವರತ್ವಾದಿ ಗುಣಧರ್ಮಗಳು ಪೂರ್ಣವಾಗಿ ಸ್ವತಂತ್ರವಾಗಿ ಹರಿಯಲ್ಲೇ

ಇರುತ್ತವೆ. ಅವನೇ 'ಪರಮ ಮುಖ್ಯಾರ್ಥ.' ಇಂದ್ರಾದಿ ಅನ್ಯ ದೇವತೆಗಳಲ್ಲಿ ಆ ಗುಣಧರ್ಮಗಳು ಬಹಳ ಕಡಿಮೆ ಇರುತ್ತವೆ. ಅದೂ ಸ್ವತಂತ್ರವಾಗಿ ಅಲ್ಲ, ಹರಿಯ ಅನುಗ್ರಹದಿಂದ ಅವರಿಗೆ ಲಭಿಸಿರುತ್ತವೆ ಅವರು ಕೇವಲ 'ಮುಖ್ಯಾರ್ಥ' ಎನ್ನುವ ಪ್ರಜ್ಞೆ ಮುಮುಕ್ಷುಗಳಿಗೆ ಇಂದ್ರಾದಿಶಬ್ದಗಳನ್ನು ಇಂದ್ರಾದಿಗಳ ವಿಷಯದಲ್ಲಿ ಪ್ರಯೋಗಿಸುವಾಗ ಅವಶ್ಯಬೇಕು.

ಈ ಪ್ರಜ್ಞೆ ಇಲ್ಲದೆ 'ಇಂದ್ರಾಯ ಸ್ವಾಹಾ' ಎಂದು ಮುಂತಾಗಿ ಇಂದ್ರಾದಿಗಳನ್ನು ಆರಾಧಿಸಿ ಅವರಿಂದ ಅಗತ್ಯಕ್ಕಿಂತ ಹೆಚ್ಚಿಗೆ ಸಂಪತ್ತನ್ನು ಬೇಡಲು ತೊಡಗಿದರೆ ಅವರು ಕೊಡುತ್ತಾರೆ. ಆಗ ಅದರಿಂದ ಬದುಕಿನಲ್ಲಿ ಶ್ರಮವೇ ಅಧಿಕವಾಗುವುದು. ಅಶ್ವ ಗಜ ರಥ ಛತ್ರ ಚಾಮರಾದಿಗಳನ್ನು ಪಡೆದರೆ ಅಷ್ಟೇ ಸಾಲದು ಅವುಗಳನ್ನು ರಕ್ಷಣೆ ಮಾಡುವ ಭೃತ್ಯವರ್ಗವನ್ನೂ ಕೇಳಬೇಕು. ಆ ಭೃತ್ಯವರ್ಗದ ರಕ್ಷಣೆಗಾಗಿ ರಾಜ್ಯವನ್ನು ಅದರ ರಕ್ಷಣೆಗಾಗಿ ಸೈನ್ಯ ಬೊಕ್ಕಸ ಮುಂತಾದುವನ್ನು ಸಂಪಾದಿಸಬೇಕು. ಇಲ್ಲದಿದ್ದರೆ ಭೃತ್ಯವರ್ಗದವರು ಪ್ರಭು ವನ್ನು ಬೈಯುತ್ತಾರೆ. ತಿರಸ್ಕರಿಸುತ್ತಾರೆ. ಹೀಗೆ ಬಯಸಿದ್ದು ಸಿಗುವುದಿಲ್ಲ. ಸಿಕ್ಕರೂ ಕಡಿಮೆ. ಅದನ್ನು ರಕ್ಷಿಸಿಕೊಳ್ಳುವಲ್ಲಿ ಶ್ರಮ ಹೆಚ್ಚು. ಅದರಿಂದ ಹೆಚ್ಚು ಬಯಸ ಬಾರದು.

ವಿಧಿ ಇಲ್ಲದಾಗ ಶರೀರ ಪೋಷಣೆಗೆ ಸಾಲುವಷ್ಟೇ ಬಯಸಬೇಕು. ಅದನ್ನು ಈ ಅನ್ಯದೇವತೆಗಳು ಕೂಡ ಸ್ವತಂತ್ರವಾಗಿ ಕೊಡುತ್ತಿಲ್ಲ. ಹರಿಯಾಜ್ಞೆಯಂತೆ ಕೊಡುತ್ತಾರೆ ಎನ್ನುವ ಅರಿವು ಬೇಕು.

❖❖❖

–೩೧೨–

**ವ್ಯವಹಾರಕ್ಕಾಗಿಯೂ ಎರವಲು ಪಡೆದ ಹರಿನಾಮಗಳು**
**ದೇಹಾಭಿಮಾನವಿಲ್ಲದ ಯೋಗಿಗೆ ಬೇಕಿಲ್ಲ**

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈಃ**
**ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಂ ?**
**ಸತ್ಯಂಜಲೌ ಕಿಂ ಪುರುಪರ್ಣಪಾತ್ರ್ಯಾ-**
**ರ್ದಿಗ್‌ವಸ್ತ್ರಲಾಭೇ ಸತಿ ಕಿಂ ದುಕೂಲೈಃ ॥** (ಭಾ.೨.೨.೪)

**ಪಕ್ವಯೋಗಿನ ಏವ ದಶಾಭೇದೇನ ದ್ವಿವಿಧಾಃ। ವಿದೇಹಿನಃ ಕಿಂಚಿದ್ದೇಹಾಭಿಮಾನವಂತ ಇತಿ। ತತ್ರ ಆದ್ಯಾನಾಂ ತಾವದನ್ಯಥಾಸಿದ್ಧಿಪ್ರಕಾರಂ ದರ್ಶಯತಿ॥ ಸತ್ಸ್ವಿತಿ॥ ಅತಃ ಅನ್ಯತ್ರಪ್ರಯೋಗೋ ನ ಕರ್ತವ್ಯ ಏವೇತಿ ಭಾವಃ॥**

❖❖❖

ಶುಕಮುನಿ ಹೇಳುತ್ತಾರೆ—

ಪಕ್ವಯೋಗಿಗಳು ಮೊದಲನೆ ಅವಸ್ಥೆ ಎರಡನೆ ಅವಸ್ಥೆಯವರೆಂದು ಎರಡು ಬಗೆ. ಎರಡನೆ ಅವಸ್ಥೆಯವರಿಗೆ ತಾವು ಶರೀರಧಾರಿಗಳೆನ್ನುವ ಪ್ರಜ್ಞೆ ಸ್ವಲ್ಪ ಮಾತ್ರ ಇರುತ್ತದೆ. ಮೊದಲ ಅವಸ್ಥೆಯವರಿಗೆ ಅದೂ ಇರುವುದಿಲ್ಲ. ಅವಧೂತರು ಅತಿ ಪಕ್ವಯೋಗಿಗಳು ಇವರು. ಇವರಿಗೆ ಬೇಕಾದುದು ಎಲ್ಲವೂ ಪರಮಾತ್ಮನ ದಯೆಯಿಂದ ಸಿದ್ಧವೆ ಇದೆ. ಅದಕ್ಕಿಂತ ಹೆಚ್ಚಿನದನ್ನು ಪಡೆಯಬೇಕೆಂದು ಹರಿನಾಮವನ್ನು ವ್ಯವಹಾರಕ್ಕಾಗಿಯೂ ಎರವಲು ಪಡೆದು ಅನ್ಯದೇವತೆಗಳಲ್ಲಿ ಪ್ರಯೋಗಿಸುವುದಿಲ್ಲ. ಪ್ರಯೋಗಿಸುವ ಪ್ರಸಂಗವೆ ಅವರಿಗೆ ಬರುವುದಿಲ್ಲ ಈ ಬಗೆಯ ಯೋಗಿಗಳ ರೀತಿಗಳನ್ನು ಮೊದಲಿಗೆ ಶುಕಮುನಿ ಇಲ್ಲಿ ಹೇಳುತ್ತಾರೆ—

**'ನೆಲದ ಮೇಲೇ ಮಲಗುವ ಅಭ್ಯಾಸವಿರುವುದರಿಂದ ಹಾಸಿಗೆ ಸಂಪಾದನೆಯ ಶ್ರಮವಿರುವುದಿಲ್ಲ. ತನ್ನದೇ ಆದ ತೋಳನ್ನು ದಿಂಬು ಮಾಡಿಕೊಳ್ಳುವ ಅಭ್ಯಾಸವಿರುವುದರಿಂದ ದಿಂಬಿಗಾಗಿಯೂ ಇವರು ಶ್ರಮ ಪಡುವುದಿಲ್ಲ. ಬೊಗಸೆಯಿಂದಲೆ ಉಣಲು ಶಕ್ಯವಿರುವಾಗ ದೊಡ್ಡ ಊಟದೆಲೆ ದೊನ್ನೆಗಳು ಏಕೆ? ದಿಗಂಬರವಾಗೇ ಇರಲು ಶಕ್ಯವಿರುವಾಗ ಪಟ್ಟೆ ಪೀತಾಂಬರ ವನ್ನೇಕೆ ಅರಸಿ ಹೋಗಬೇಕು?' ಎನ್ನುತ್ತಾರೆ, ಸ್ವಲ್ಪವೂ ತಾವು ಶರೀರಧಾರಿ ಗಳಾಗಿದ್ದೇವೆ ಎನ್ನುವ ಪ್ರಜ್ಞೆ ಇಲ್ಲದವರು ಅತಿಪಕ್ವಯೋಗಿಗಳು, ಅವಧೂತರು' ಎಂದು.**

❖❖❖

—೩೧೩—

## ಸ್ವಲ್ಪ ದೇಹಾಭಿಮಾನ ಉಳ್ಳಯೋಗಿಯ ಯೋಗಕ್ಷೇಮಗಳನ್ನು ಹರಿಯೆ ನೋಡಿಕೊಳ್ಳುತ್ತಾನೆ

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೋ ವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**

ಇರುತ್ತವೆ. ಅವನೇ 'ಪರಮ ಮುಖ್ಯಾರ್ಥ.' ಇಂದ್ರಾದಿ ಅನ್ಯ ದೇವತೆಗಳಲ್ಲಿ ಆ ಗುಣಧರ್ಮಗಳು ಬಹಳ ಕಡಿಮೆ ಇರುತ್ತವೆ. ಅದೂ ಸ್ವತಂತ್ರವಾಗಿ ಅಲ್ಲ, ಹರಿಯ ಅನುಗ್ರಹದಿಂದ ಅವರಿಗೆ ಲಭಿಸಿರುತ್ತವೆ ಅವರು ಕೇವಲ 'ಮುಖ್ಯಾರ್ಥ' ಎನ್ನುವ ಪ್ರಜ್ಞೆ ಮುಮುಕ್ಷುಗಳಿಗೆ ಇಂದ್ರಾದಿಶಬ್ದಗಳನ್ನು ಇಂದ್ರಾದಿಗಳ ವಿಷಯದಲ್ಲಿ ಪ್ರಯೋಗಿಸುವಾಗ ಅವಶ್ಯಬೇಕು.

ಈ ಪ್ರಜ್ಞೆ ಇಲ್ಲದೆ 'ಇಂದ್ರಾಯ ಸ್ವಾಹಾ' ಎಂದು ಮುಂತಾಗಿ ಇಂದ್ರಾದಿಗಳನ್ನು ಆರಾಧಿಸಿ ಅವರಿಂದ ಅಗತ್ಯಕ್ಕಿಂತ ಹೆಚ್ಚಿಗೆ ಸಂಪತ್ತನ್ನು ಬೇಡಲು ತೊಡಗಿದರೆ ಅವರು ಕೊಡುತ್ತಾರೆ. ಆಗ ಅದರಿಂದ ಬದುಕಿನಲ್ಲಿ ಶ್ರಮವೇ ಅಧಿಕವಾಗುವುದು. ಅಶ್ವ ಗಜ ರಥ ಛತ್ರ ಚಾಮರಾದಿಗಳನ್ನು ಪಡೆದರೆ ಅಷ್ಟೇ ಸಾಲದು ಅವುಗಳನ್ನು ರಕ್ಷಣೆ ಮಾಡುವ ಭೃತ್ಯವರ್ಗವನ್ನೂ ಕೇಳಬೇಕು. ಆ ಭೃತ್ಯವರ್ಗದ ರಕ್ಷಣೆಗಾಗಿ ರಾಜ್ಯವನ್ನು ಅದರ ರಕ್ಷಣೆಗಾಗಿ ಸೈನ್ಯ ಬೊಕ್ಕಸ ಮುಂತಾದುವನ್ನು ಸಂಪಾದಿಸಬೇಕು. ಇಲ್ಲದಿದ್ದರೆ ಭೃತ್ಯವರ್ಗದವರು ಪ್ರಭುವನ್ನು ಬೈಯುತ್ತಾರೆ. ತಿರಸ್ಕರಿಸುತ್ತಾರೆ. ಹೀಗೆ ಬಯಸಿದ್ದು ಸಿಗುವುದಿಲ್ಲ. ಸಿಕ್ಕರೂ ಕಡಿಮೆ. ಅದನ್ನು ರಕ್ಷಿಸಿಕೊಳ್ಳುವಲ್ಲಿ ಶ್ರಮ ಹೆಚ್ಚು. ಅದರಿಂದ ಹೆಚ್ಚು ಬಯಸಬಾರದು.

ವಿಧಿ ಇಲ್ಲದಾಗ ಶರೀರ ಪೋಷಣೆಗೆ ಸಾಲುವಷ್ಟೇ ಬಯಸಬೇಕು. ಅದನ್ನು ಈ ಅನ್ಯದೇವತೆಗಳು ಕೂಡ ಸ್ವತಂತ್ರವಾಗಿ ಕೊಡುತ್ತಿಲ್ಲ. ಹರಿಯಾಜ್ಞೆಯಂತೆ ಕೊಡುತ್ತಾರೆ ಎನ್ನುವ ಅರಿವು ಬೇಕು.

❖❖❖

–೩೧೨–

## ವ್ಯವಹಾರಕ್ಕಾಗಿಯೂ ಎರವಲು ಪಡೆದ ಹರಿನಾಮಗಳು ದೇಹಾಭಿಮಾನವಿಲ್ಲದ ಯೋಗಿಗೆ ಬೇಕಿಲ್ಲ

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈಃ**
**ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಂ ?**
**ಸತ್ಯಂಜಲೌ ಕಿಂ ಪುರುಪರ್ಣಪಾತ್ರ್ಯಾ-**
**ದಿಗ್ವಸ್ತ್ರಲಾಭೇ ಸತಿ ಕಿಂ ದುಕೂಲೈಃ ॥** (ಭಾ.೨.೨.೪)

**ಪಕ್ವಯೋಗಿನ ಏವ ದಶಾಭೇದೇನ ದ್ವಿವಿಧಾಃ। ವಿದೇಹಿನಃ ಕಿಂಚಿದ್ದೇಹಾಭಿಮಾನವಂತ ಇತಿ। ತತ್ರ ಆದ್ಯಾನಾಂ ತಾವದನ್ಯಥಾಸಿದ್ಧಿಪ್ರಕಾರಂ ದರ್ಶಯತಿ ॥ ಸತ್ಯಾಮಿತಿ ॥ ಅತಃ ಅನ್ಯತ್ರಪ್ರಯೋಗೋ ನ ಕರ್ತವ್ಯ ಏವೇತಿ ಭಾವಃ ॥**

❖❖❖

ಶುಕಮುನಿ ಹೇಳುತ್ತಾರೆ—

ಪಕ್ವಯೋಗಿಗಳು ಮೊದಲನೆ ಅವಸ್ಥೆ ಎರಡನೆ ಅವಸ್ಥೆಯವರೆಂದು ಎರಡು ಬಗೆ. ಎರಡನೆ ಅವಸ್ಥೆಯವರಿಗೆ ತಾವು ಶರೀರಧಾರಿಗಳೆನ್ನುವ ಪ್ರಜ್ಞೆ ಸ್ವಲ್ಪ ಮಾತ್ರ ಇರುತ್ತದೆ. ಮೊದಲ ಅವಸ್ಥೆಯವರಿಗೆ ಅದೂ ಇರುವುದಿಲ್ಲ. ಅವಧೂತರು ಅತಿ ಪಕ್ವಯೋಗಿಗಳು ಇವರು. ಇವರಿಗೆ ಬೇಕಾದುದು ಎಲ್ಲವೂ ಪರಮಾತ್ಮನ ದಯೆಯಿಂದ ಸಿದ್ಧವೆ ಇದೆ. ಅದಕ್ಕಿಂತ ಹೆಚ್ಚಿನದನ್ನು ಪಡೆಯಬೇಕೆಂದು ಹರಿನಾಮವನ್ನು ವ್ಯವಹಾರಕ್ಕಾಗಿಯೂ ಎರವಲು ಪಡೆದು ಅನ್ಯದೇವತೆಗಳಲ್ಲಿ ಪ್ರಯೋಗಿಸುವುದಿಲ್ಲ. ಪ್ರಯೋಗಿಸುವ ಪ್ರಸಂಗವೆ ಅವರಿಗೆ ಬರುವುದಿಲ್ಲ ಈ ಬಗೆಯ ಯೋಗಿಗಳ ರೀತಿಗಳನ್ನು ಮೊದಲಿಗೆ ಶುಕಮುನಿ ಇಲ್ಲಿ ಹೇಳುತ್ತಾರೆ—

**'ನೆಲದ ಮೇಲೇ ಮಲಗುವ ಅಭ್ಯಾಸವಿರುವುದರಿಂದ ಹಾಸಿಗೆ ಸಂಪಾದನೆಯ ಶ್ರಮವಿರುವುದಿಲ್ಲ. ತನ್ನದೇ ಆದ ತೋಳನ್ನು ದಿಂಬು ಮಾಡಿಕೊಳ್ಳುವ ಅಭ್ಯಾಸವಿರುವುದರಿಂದ ದಿಂಬಿಗಾಗಿಯೂ ಇವರು ಶ್ರಮ ಪಡುವುದಿಲ್ಲ. ಬೊಗಸೆಯಿಂದಲೆ ಉಣಲು ಶಕ್ಯವಿರುವಾಗ ದೊಡ್ಡ ಊಟದೆಲೆ ದೊನ್ನೆಗಳು ಏಕೆ? ದಿಗಂಬರವಾಗೇ ಇರಲು ಶಕ್ಯವಿರುವಾಗ ಪಟ್ಟೆ ಪೀತಾಂಬರ ವನ್ನೇಕೆ ಅರಸಿ ಹೋಗಬೇಕು?' ಎನ್ನುತ್ತಾರೆ, ಸ್ವಲ್ಪವೂ ತಾವು ಶರೀರಧಾರಿ ಗಳಾಗಿದ್ದೇವೆ ಎನ್ನುವ ಪ್ರಜ್ಞೆ ಇಲ್ಲದವರು ಅತಿಪಕ್ವಯೋಗಿಗಳು, ಅವಧೂತರು' ಎಂದು.**

❖❖❖

–೩೧೩–

## ಸ್ವಲ್ಪ ದೇಹಾಭಿಮಾನ ಉಳ್ಳಯೋಗಿಯ ಯೋಗಕ್ಷೇಮಗಳನ್ನು ಹರಿಯೆ ನೋಡಿಕೊಳ್ಳುತ್ತಾನೆ

**ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೋ ವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**

**ರುದ್ಧಾ ಗುಹಾಃ ಕಿಮವಧೂತಸುಹೃನ್ನ ಕೃಷ್ಣಃ**
**ಕಸ್ಮಾದ್ ಭಜಂತಿ ಕವಯೋ ಧನದುರ್ಮದಾಂಧಾನ್ ॥**(ಭಾ.೨.೨.೫)

**ದ್ವಿತೀಯಾನಾಮಪಿ ಅನ್ಯಥಾಸಿದ್ಧಿಪ್ರಕಾರಂ ಪ್ರಕಟಯತಿ ॥ ಚೀರಾಣೀತಿ ॥ ತಾದೃಶೈರಪಿ ಭಗವದ್ಭಕ್ತೈರಾದರೇಣ ದತ್ತಮನ್ನಾದಿ ಗ್ರಾಹ್ಯಮೇವೇತಿ ಸೂಚನಾಯ ಧನದುರ್ಮದೇನಾಂಧಾನಿತ್ಯುಕ್ತಂ । ಯಥಾಹುಃ—**

**''ಸಾಧೂನಾಂ ಸಮಚಿತ್ತಾನಾಂ ಮುಕುಂದಚರಣೈಷಿಣಾಂ ।**
**ಉಪೇಕ್ಷ್ಯೈಃ ಕಿಂ ಧನಸ್ತಂಭೈರಸದ್ಭಿರಸದಾಶ್ರಯೈಃ ॥**
**ದರಿದ್ರಸ್ಯೈವ ಯುಜ್ಯಂತೇ ಸಾಧವಃ ಸಮದರ್ಶಿನಃ ।**
**ಸದ್ಭಿಃ ಕ್ಷಿಣೋತಿ ತತ್ತರ್ಷಂ ತತ ಆರಾದ್ಧಿ ಸಿದ್ಧ್ಯತಿ ।'' ಇತಿ ।**

**ಅಥವಾ ಅನ್ಯತ್ರ ಭಗವನ್ನಾಮ್ನಾಂ ಪ್ರಯೋಗೋ ನೈವ ಕರ್ತವ್ಯ ಇತ್ಯುಕ್ತೇ ಕೈರೇವಮಾಚರಿತಮಿತ್ಯತೋ ಬಹುಭಿರ್ಯೋಗಿಭಿರೇವಮನ್ಯತ್ರಶಬ್ದ-ಪ್ರಯೋಗೋ ನ ಕೃತೋ ಭವದ್ಭಿರಪಿ ಯಥಾಶಕ್ತಿ ವಾಙ್‌ನಿಯಮನರೂಪಂ ಮೌನಂ ಕಾರ್ಯಂ। ಇಂದ್ರಿಯ ತರ್ಪಣಾರ್ಥಂ ಯಥಾಕಾಮಂ ನ ವ್ಯವಹರ್ತವ್ಯಂ । ಕಾಲತೋಽಭ್ಯಾಸೇ ಸತಿ ಕ್ರಮೇಣ ಈದೃಶೀ ದಶಾಪಿ ಲಭ್ಯತೇ ಇತ್ಯಾಶಯೇನ ತದಾಚಾರಂ ದರ್ಶಯತಿ ॥ ಸತ್ಯಾಮಿತ್ಯಾದಿನಾ ॥**

❖❖❖

ಶರೀರಪ್ರಜ್ಞೆ ಸ್ವಲ್ಪವಾಗಿ ಇರುವ ಯೋಗಿಗಳ ಬಗ್ಗೆ ಶುಕಮುನಿಗಳು ಹೇಳುತ್ತಾರೆ—

ಉಡಲು ಬಟ್ಟೆಯೂ ಬೇಡವೆನ್ನುವಷ್ಟು ವೈರಾಗ್ಯಶಾಲಿಗಳಲ್ಲದಿದ್ದರೂ ತಾವು ಕೂಡ ಎಲ್ಲರಂತೆ ಶರೀರಧಾರಿಗಳೇ ಎನ್ನುವ ಪ್ರಜ್ಞೆ ಸ್ವಲ್ಪ ಇರುವ ಅವಸ್ಥೆಯ ಪಕ್ವಯೋಗಿಗಳಿಗೂ ಗೃಹಸ್ಥರು ಊರ ಬಾಗಿಲಲ್ಲಿ ಸನ್ಯಾಸಿಗಳಿಗಾಗಿ ಇರಿಸಿದ ಹಳೆಬಟ್ಟೆಗಳಿಲ್ಲವೆ? ಉಣಬೇಕೆಂದರೆ ಪರರನ್ನು ಪೋಷಿಸಲೆಂದೇ ಬದುಕಿರುವ ಮರಗಿಡಗಳು ಹಣ್ಣುಗಡ್ಡೆಗಳನ್ನು ಭಿಕ್ಷೆಯಾಗಿ ಕೊಡುವುದಿಲ್ಲವೆ? ಕುಡಿವ ನೀರನ್ನು ಕೊಡುವ ನದಿಗಳು ಒಣಗಿಹೋಗಿರುವವೆ? ಮಳೆ ಗಾಳಿಗಳಿಂದ ರಕ್ಷಿಸಲು ಸಿದ್ಧವಿರುವ ಗುಹೆಗಳು ಬಂಡೆಗಳಿಂದ ಮುಖಮುಚ್ಚಿಕೊಂಡಿವೆಯೆ? ಎಲ್ಲ ದೇಹಾಭಿಮಾನವನ್ನು ಬಿಟ್ಟು ಎಲ್ಲ ಶಬ್ದಗಳು ಹೇಳುವ ಗುಣಧರ್ಮಗಳನ್ನು ಪೂರ್ಣವಾಗಿ ಅನಂತವಾಗಿ ಸ್ವತಂತ್ರವಾಗಿ ಹೊಂದಿರುವವನು ಶ್ರೀಹರಿ ಎಂದು ತಿಳಿದ ಮಹಾನುಭಾವರಾದ ಅವಧೂತರಿಗೆ ರಕ್ಷಕನಾಗಿ ಬೆಂಗಾವಲಿಗೆ

**ಅವನಿಲ್ಲವೇನು? ಏಕೆ ಚಿಂತೆ ಭಕ್ತರಿಗೆ? ಧನಸಂಪತ್ತಿನಿಂದ ಮದವೇರಿ, ಕುರುಡಾಗಿರುವ ಶ್ರೀಮಂತರನ್ನು ಜ್ಞಾನಿಗಳು ಏಕೆ ಸೇವಿಸುವರು?**

ಒಳ್ಳೆಯ ಭಗವದ್‌ಭಕ್ತರಾದ ಶ್ರೀಮಂತ ಗೃಹಸ್ಥರಿಂದ ಅನ್ನ ಬಟ್ಟೆಗಳ ಭಿಕ್ಷೆಗಳನ್ನು ಎಲ್ಲ ಯೋಗಿಗಳೂ ಸ್ವೀಕರಿಸಬಹುದು. ಅಭಕ್ತರಿಂದ ಸ್ವೀಕರಿಸ ಬಾರದು.

ನಾರದರು ನಳಕೂಬರ ಮಣಿಗ್ರೀವರಿಗೆ ಹೇಳುತ್ತಾರೆ—

ಸಾಧೂನಾಂ ಸಮಚಿತ್ತಾನಾಂ ಮುಕುಂದ ಚರಣೈಷಿಣಾಂ ।
ಉಪೇಕ್ಷ್ಯೈಃ ಕಿಂ ಧನಸ್ತಂಭೈರಸದ್ಭಿರಸದಾಶ್ರಯೈಃ ?(ಭಾ.೧೦.೧೧.೧೮)

'ಕೇವಲ ಮುಕುಂದನ ಚರಣವನ್ನು ಬಯಸಿ ಹೊನ್ನು ಮಣ್ಣುಗಳನ್ನು ಸಮವಾಗಿ ಕಾಣುವ ಸಾಧುಗಳು ದುರ್ಜನರನ್ನು ಉಪೇಕ್ಷೆ ಮಾಡಬೇಕು. ಧನದಿಂದ ಗರ್ವಿತರಾಗುವ ದುಷ್ಟರಿಗೆ ಆಶ್ರಯ ನೀಡುವ ಅಂಥ ದುರ್ಜನರಿಂದ ಏನು ಪ್ರಯೋಜನ ಲಾಭವಾದೀತು?'

ದರಿದ್ರಸ್ಯೈವ ಯುಜ್ಯಂತೇ ಸಾಧವಃ ಸಮದರ್ಶಿನಃ ।
ಸದ್ಭಿಃ ಕ್ಷಿಣೋತಿ ತತ್ತರ್ಷಂ ತತ ಆರಾದ್ಧಿ ಸಿದ್ಧ್ಯತಿ ॥ (ಭಾ.೧೦.೧೧.೧೭)

'ದರಿದ್ರನಿಗೇ ಅಹಂಕಾರವಿರುವುದಿಲ್ಲ, ವಿನೀತನಾಗಿರುತ್ತಾನೆ, ಅವನಿಗೆ ಸಾಧು ಜನರ ಸಂಗ ದೊರಕುವುದು, ಸರ್ವತ್ರ ನಿರ್ದೋಷನಾದ ಹರಿಯನ್ನು ಕಾಣುವ ಆ ಸಾಧುಗಳ ಉಪದೇಶದಿಂದ ಅವನು ವಿಷಯಾಸಕ್ತಿಯನ್ನು ದೂರಮಾಡಿಕೊಳ್ಳುತ್ತಾನೆ, ವೈರಾಗ್ಯಶಾಲಿಯಾಗಿ ಬೇಗನೆ ಅಪರೋಕ್ಷ ಪಡೆದು ಮುಕ್ತನಾಗುತ್ತಾನೆ.'

ಸರ್ವಶಬ್ದವಾಚ್ಯನು ಹರಿಯೇ ಎಂದು ತಿಳಿದು ಅದನ್ನು ಆಚರಣೆಗೆ ತಂದವರು, ಯಾರಲ್ಲಿಯೂ ಧನ ಸಂಪತ್ತನ್ನು ಬೇಡದೇ ಇರುವ ಯೋಗಿಗಳು, ಎರಡು ಬಗೆಯಿಂದ ಇರುವರೆಂದು ಶುಕಮುನಿ ಹೇಳುತ್ತಿದ್ದಾರೆ.

ಇಂದ್ರಿಯಗಳನ್ನು ತೃಪ್ತಿಪಡಿಸಲು ಹೋಗಿ ಹರಿನಾಮಗಳನ್ನು ಅನ್ಯತ್ರ ವ್ಯರ್ಥವಾಗಿ ಪ್ರಯೋಗಿಸಬಾರದು. ಎಲ್ಲ ಬಿಟ್ಟು ದರಿದ್ರರಾಗಿ ಇದನ್ನು ಅಭ್ಯಾಸ ಮಾಡುತ್ತಿದ್ದರೆ ನೀವೂ ಇಂಥ ಯೋಗಿಗಳೇ ಆಗುವಿರಿ ಎಂದು ನಾರದರು ಹೇಳುತ್ತಿದ್ದಾರೆ.

❖❖❖

# ೨೧. ಬಿಂಬೋಪದೇಶ ಪ್ರಕರಣ

## ಪ್ರಕರಣ ಸಾರಾಂಶ

ಎಲ್ಲ ದುಃಖಗಳಿಗೆ ಕಾರಣ ಮನಸ್ಸಿನ ಅಶುದ್ಧಿ. ಉದ್ವೇಗವು ಮನದ ಅಶುದ್ಧಿ. ಬಿಂಬೋಪಾಸನೆಯಲ್ಲಿ ಮನಸ್ಸನ್ನು ಬಿಂಬನಲ್ಲಿ ಇಡುವುದರಿಂದ ಅಶುದ್ಧಿ ತೊಲಗುವುದು, ಶುದ್ಧವಾದ ಮನಸ್ಸಿನಲ್ಲಿ ಮುಂದೆ ದುಃಖವಾಗದು. ವೇದಾಧ್ಯಯನ ಜ್ಞಾನಗಳಿಂದ ಮನಸಿಗೆ ಸ್ವಲ್ಪ ಶುದ್ಧಿ ಉಂಟಾಗಬಹುದು. ಅದರಿಂದ ಪೂರ್ತಿ ದುಃಖ ನಿವೃತ್ತಿ ಶಕ್ಯವಿಲ್ಲ. ಬಿಂಬಧ್ಯಾನದಿಂದ ಪೂರ್ತಿ ಮನಃಶುದ್ಧಿ ಲಭ್ಯ. ಅಷ್ಟು ಮನಃಶುದ್ಧಿಯು ವೇದಾಧ್ಯಯನ ವೇದಾರ್ಥ ಪ್ರಾಣಾಯಾಮ ಪರೋಪಕಾರ ತೀರ್ಥಸ್ನಾನ ವ್ರತ ದಾನ ಜಪಗಳಿಂದಲೂ ಸಿಗ ಲಾರದು. ಧ್ಯಾನಕ್ಕೆ ಒಲಿದ ಶ್ರೀಹರಿ ಹೃದಯದಲ್ಲಿ ಸ್ಥಿರವಾಗಿ ನಿಂತರೆ ಪೂರ್ತಿಶುದ್ಧಿ.

ಬಿಂಬೋಪಾಸನೆಯಿಂದ ನೇರವಾಗಿ ದುಃಖ ನಿವೃತ್ತಿಯಾಗುವು ದಿಲ್ಲ. ಜ್ಞಾನಭಕ್ತಿ ವೈರಾಗ್ಯಗಳು ಹುಟ್ಟಬೇಕು. ಅವು ಒಮ್ಮೆಲೆ ಪೂರ್ತಿಯಾಗಿ ಹುಟ್ಟುವುದಿಲ್ಲ. ಕ್ರಮೇಣ ಸ್ವಲ್ಪಸ್ವಲ್ಪವಾಗಿಯೇ ಹುಟ್ಟುತ್ತವೆ. ಆದರೆ ಭೋಜನದಿಂದ ಪ್ರತಿಯೊಂದು ತುತ್ತಿನಲ್ಲಿಯು ತುಷ್ಟಿಪುಷ್ಟಿ ಹಸಿವಿನ ನಿವೃತ್ತಿಗಳು ಮೂರೂ ಜೊತೆಯಾಗಿಯೇ ಹುಟ್ಟುವಂತೆ ಬಿಂಬಧ್ಯಾನದಿಂದಲೂ ಜ್ಞಾನ ಭಕ್ತಿ ವಿರಕ್ತಿಗಳು ಸ್ವಲ್ಪಸ್ವಲ್ಪವಾಗಿಯೇ ಆದರೂ ಜೊತೆಗೇ ಹುಟ್ಟುತ್ತವೆ.

ಈ ಜ್ಞಾನ ಭಕ್ತಿ ವಿರಕ್ತಿಗಳು ವಸ್ತುತಃ ಹಿಂದೆ ಇಲ್ಲದಿದ್ದುದು ಹೊಸದಾಗಿ ಹುಟ್ಟುವುದಲ್ಲ. ಜೀವಸ್ವರೂಪದಲ್ಲಿ ಸುಪ್ತವಾಗಿ ಅವ್ಯಕ್ತವಾಗಿ ಇದ್ದವುಗಳೇ ಧ್ಯಾನದಿಂದ ವ್ಯಕ್ತವಾಗುತ್ತವೆ.

ಪರಮಾತ್ಮನ ರೂಪಗಳಲ್ಲಿ ಭೇದವಿಲ್ಲದಿರುವುದರಿಂದ ಹೊರಗೆ ಸೃಷ್ಟಿಸ್ಥಿತಿಲಯಕಾರಣವಾದ ರೂಪವೆ ಜೀವರೊಳಗೂ ಅವರ ಶರೀರದೊಳಗೂ ಜಾಗರಸ್ವಪ್ನಸುಷುಪ್ತಿರೂಪವಾದ ಅವಸ್ಥಾ ತ್ರಯಪ್ರೇರಕವಾಗಿರುತ್ತದೆ. ತಾನು ಅವಸ್ಥಾತ್ರಯ ರಹಿತವಾಗಿರು

ತ್ತದೆ. ಅವಸ್ಥಾತ್ರಯಕಾಲಗಳಲ್ಲಿ ಅದು ಭೋಗ ಮಾಡುತ್ತಿದ್ದರೂ ಅದು ಕೇವಲ ಲೀಲೆ. ಸ್ವತಃ ನಿರ್ಲಿಪ್ತ, ಸರ್ವೋತ್ತಮ,

ಬಿಂಬರೂಪಕ್ಕೇ ಪ್ರತ್ಯಕ್ ಎಂದು ಇನ್ನೊಂದು ಹೆಸರು. ಜೀವಸ್ವರೂಪದಲ್ಲಿ ಒಳಗೆ ಸರ್ವದಾ ಅನಾದಿ ಅನಂತಕಾಲಗಳಲ್ಲಿ ಎಂದೂ ಯಾವ ಕಾರಣದಿಂದಲೂ ಆ ಸ್ಥಾನವನ್ನು ಬಿಟ್ಟು ದೂರ ಹೋಗದೆ ಒಳಗೇ ಇರುವ ವಸ್ತು ಎಂಬುದು 'ಪ್ರತ್ಯಕ್' ಶಬ್ದದ ಮುಖ್ಯಾರ್ಥ. ಅಂಥ ವಸ್ತು ಜೀವಾಂತರ್ಗತ ಬಿಂಬರೂಪವೆ. ಅವನು ಹೊರಗೆ ನಡೆದರೆ ಜೀವಸ್ವರೂಪ ಅಸ್ತಿತ್ವದಲ್ಲಿರುವುದಿಲ್ಲ. ಜೀವನ ಶರೀರ ಇಂದ್ರಿಯ ಮನಸುಗಳಲ್ಲಿ ಇರುವ ತನ್ನ ಸ್ವರೂಪ ಭೂತ ಶರೀರ ಇಂದ್ರಿಯ ಮನಸುಗಳಿಂದ ಬಿಂಬನೇ ವಿಷಯ ಗಳನ್ನು ಭೋಗಿಸುವವನು. ಆದರೂ ಸದಾ ಆನಂದಮಯನೆ ಆಗಿರುತ್ತಾನೆ. ಇಂಥ 'ಪ್ರತ್ಯಕ್' ನಾಮಕ ಬಿಂಬನ ಸನ್ನಿಧಾನ ಉಳ್ಳವನಾದ್ದರಿಂದ ಜೀವನೂ 'ಪ್ರತ್ಯಕ್' ಎಂದು ಪ್ರಸಿದ್ಧನಾಗಿ ದ್ದಾನೆ.

'ಬಿಂಬನೆಲ್ಲಿರುತ್ತಾನೆ?' ಎಂಬ ರಹೂಗಣ ರಾಜನ ಪ್ರಶ್ನೆಗೆ. ಜಡಭರತನು ಈಗ ಜೀವನೊಳಗೇ ಸದಾ ಇರುತ್ತಾನೆ ಎಂದು ಉತ್ತರ ನೀಡಿದಂತಾಯಿತು. ಬಿಂಬೋಪಾಸನ ಮಾಡದ ಬ್ರಾಹ್ಮಣನಿಗಿಂತ ಬಿಂಬೋಪಾಸನ ಮಾಡುವ ಚಂಡಾಲನೆ ಬಹಳ ಶ್ರೇಷ್ಠ.

ಆತ್ಮಸಮರ್ಪಣದಿಂದ ಬಿಂಬನ ಅನುಗ್ರಹವನ್ನು ಸಂಪಾದಿಸ ಬೇಕೆಂಬುದೇ ವೇದಾದಿ ಸಮಸ್ತ ಶಾಸ್ತ್ರಗಳ ಮುಖ್ಯತಾತ್ಪರ್ಯ. ವೇದಾದಿಗಳು ಹಾಗೆ ಹೇಳುವುದರಿಂದಲೆ ಅವು ಸಾರ್ಥಕ ವೆನಿಸುವುವು.

❖❖❖

## –೩೧೪–

## ಬಿಂಬೋಪಾಸನೆಯ ಫಲ ಪೂರ್ತಿಯಾಗಿ ಸರ್ವ ದುಃಖನಿವೃತ್ತಿ

ಮನ್ಯೇಽಕುತಶ್ಚಿದ್‌ಭಯಮಚ್ಯುತಸ್ಯ
ಪಾದಾಂಬುಜೋಪಾಸನಮತ್ರ ನಿತ್ಯಂ ।
ಉದ್ವಿಗ್ನಬುದ್ಧೇರಸದಾತ್ಮಭಾವಾತ್
ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥

(ಭಾ.೧೧.೨.೩೩)

ಶ್ರೀಗೋಪಾಲಕೃಷ್ಣಾಯ ನಮಃ ॥ ಕಾನಿ ಚ ಬಿಂಬೋಪಾಸನಲಬ್ಧಯೇ ಸಾಧನಾನಿ ಮಯಾನುಷ್ಠೇಯಾನಿ ಇತಿ ದ್ವಾದಶೀಂ ಶಂಕಾಂ ಪರಾಕೃತ್ಯ ಅಧುನಾ ತಚ್ಚ ರೂಪಂ ಕೀದೃಶಂ, ಕ್ವ ಚಾಸ್ತಿ, ತದುಪಾಸನಮಪಿ ಕೀದೃಶಮಿತಿ, **ನವಮಾದಿಶಂಕಾತ್ರಯಂ** ಪರಿಹರಿಷ್ಯನ್ ಬಿಂಬರೂಪೋಪದೇಶಂ ಕೃತ್ವಾ, ಬಿಂಬೋಪಾಸನಂ ವಕ್ತುಂ, ತಥಾ ತತ್ರ ಆದರಜನನಾಯ ತಸ್ಯಾಪೇಕ್ಷಿತಾಖಿಲಫಲ ಹೇತುತಾಮಾದೌ ದರ್ಶಯತಿ ॥ **ಮನ್ಯ ಇತಿ** ॥ ಅಸತಿ ಅಮಂಗಲೇ ದೇಹಾದೌ ಆತ್ಮೇತಿ ಆತ್ಮನ ಇತಿ ಚ ಭಾವಾತ್ ಅಹಂಮಮೇತ್ಯಭಿಮಾನಾತ್ ತನ್ಮೂಲಕಾತ್ ಸಂಸಾರಾತ್ । ಉದ್ವಿಗ್ನಬುದ್ಧೇಃ ದುಃಖಿತಸ್ಯ ಪುಂಸಃ ಅಧಿಕಾರಿಣಃ । ನಿತ್ಯಮಚ್ಯುತಸ್ಯ ಹರೇಃ । ಪಾದಾಂಬುಜೋಪಾಸನಮೇವ । ಕುತಶ್ಚಿದಪಿ ಭಯಂ ಯಸ್ಮಾನ್ನ ಭವತಿ । ಸರ್ವಾತ್ಮನಾ ಸಂಸಾರದುಃಖನಿವರ್ತಕಮಿತಿ ಮನ್ಯೇ ಜಾನಾಮೀತಿ । ನ ಕೇವಲಮಿದಂ ಮಮಾನುಭವೇನೈವ ಸಿದ್ಧಮಿತಿ ಮಂತವ್ಯಂ । ಕಿಂ ತ್ವತ್ರ ಭಾಗವತಶಾಸ್ತ್ರೇಽಪಿ ತಥೈವ ನಿಯತಮಿತ್ಯಾಶಯೇನಾಹ ॥ **ಯತ್ರೇತಿ** ॥ ಯಸ್ಮಿನ್ನುಪಾಸನೇ ಅನುಷ್ಠೀಯಮಾನೇ ಸತಿ । ಭೀಃ ಸಂಸಾರದುಃಖಂ । ವಿಶ್ವಾತ್ಮನಾ ಸರ್ವಾತ್ಮನಾ ಕಿಂಚಿದಪ್ಯವಿಹಾಯ । ನಿವರ್ತತ ಇತಿ ಅತ್ರ ಶಾಸ್ತ್ರೇ ನಿತ್ಯಂ ನಿಯತಮಿತಿ । ಸರ್ವಾತ್ಮನಾ ಭಯನಿವೃತ್ತಿರುಪಾಸನೇನ ಭವತೀತ್ಯೇತದನುಭವಾ ರೂಢಂ ಕರ್ತುಂ ಸಂಸಾರಾದಿತಿ ವಕ್ತವ್ಯೇ ಅಸದಾತ್ಮಭಾವಾದಿತಿ ತನ್ಮೂಲವಾಚಕ ಪದೇನ ತದ್ಗ್ರಹಣಂ । ತಸ್ಯ ಚೋಪಾಸನೇನ ವಿರೋಧಸ್ತು ಸ್ಫುಟತರ ಇತಿ ಮೂಲಸ್ಯೈವ ವಿಚ್ಛೇದೇ ಸರ್ವಾತ್ಮನಾ ನಿವೃತ್ತಿಃ ಸುಲಭೈವೇತಿ । ತಥಾ ಚ ವಿಂಬೋಪಾಸನಾಪ್ರಕರಣೇ ಸ್ಪಷ್ಟೀಭವಿಷ್ಯತಿ । ಸರ್ವಾತ್ಮನಾ ದುಃಖನಿವೃತ್ತಿಹೇತು ತಯಾ ಇದಮುಪಾಸನಮತ್ಯುಪಾದೇಯಂ ಮುಮುಕ್ಷುಭಿ ರಿತಿ ಭಾವಃ ॥

❖❖❖

**ವಿದೇಹರಾಜನಿಗೆ ಕವಿ ಮಹಾಮುನಿಗಳ ಉಪದೇಶ—**

**ಈ ಸಂಸಾರದಲ್ಲಿ ತನ್ನದಲ್ಲದ್ದನ್ನು ತನ್ನದೆಂದುಕೊಂಡು ಅದನ್ನು ದಕ್ಕಿಸಿ ಕೊಳ್ಳಲಾಗದೆ ಮನದಲ್ಲಿ ಉದ್ವೇಗಗೊಳ್ಳುವವನಿಗೆ ಶ್ರೀಹರಿಯ ಪಾದಕಮಲ ಭಜನೆಯೊಂದೇ ಎಲ್ಲಿಯೂ ಭಯವಿಲ್ಲದಂತೆ ಮಾಡುವ ಉಪಾಯವೆಂದು ನಾನು ಅನುಭವದಿಂದ ತಿಳಿದಿದ್ದೇನೆ. ಎಲ್ಲ ಭಯಗಳೂ ಸಮೂಲವಾಗಿ ನಾಶವಾಗುವುದು ಕೇವಲ ಹರಿ ಭಕ್ತನಿಗೇ'.**

ಇಲ್ಲಿ ಬಿಂಬೋಪಾಸನದಲ್ಲಿ ಆದರ ಉಂಟಾಗಲು ಮೊದಲಿಗೆ ಫಲವನ್ನು ಹೇಳುತ್ತಿದ್ದಾರೆ. ಸಂಸಾರಭಯ ಪರಿಹಾರವು ಬಿಂಬೋಪಾಸನೆಯ ಫಲ ಎನ್ನುತ್ತಿದ್ದಾರೆ.

ಇಲ್ಲಿ 'ಉದ್ವಿಗ್ನಬುದ್ಧಿ' ಎನ್ನುವುದರ ಅಭಿಪ್ರಾಯ ಇದು—' ಉಪಾಸನಾ ಮಾತ್ರದಿಂದ ಸಂಸಾರ ದುಃಖವು ಪೂರ್ತಿಯಾಗಿ ನಿವೃತ್ತವಾಗುವುದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಹೇಳುತ್ತಾರೆ. ಎಲ್ಲ ದುಃಖಗಳಿಗೆ ಕಾರಣವು ಮನಸಿನ ಅಶುದ್ಧಿ. ಉದ್ವೇಗವೇ ಅಶುದ್ಧಿ. ಉದ್ವೇಗದಿಂದಲೇ ದುಃಖವಾಗು ವುದು. ಹೀಗಾಗಿ ಮನಸ್ಸನ್ನು ಬಿಂಬನಲ್ಲಿ ಇಟ್ಟರೆ ಅಶುದ್ಧಿಯು ಇರುವುದಿಲ್ಲ. ಮನಸ್ಸಿನ ಅಶುದ್ಧಿ ತೊಲಗಿತೆಂದರೆ ಶುದ್ಧವಾದ ಮನಸಿನಲ್ಲಿ ದುಃಖ ಉಂಟಾಗುವುದಿಲ್ಲ.

ಯದ್ಯಪಿ ವೇದಾಧ್ಯಯನಾದಿ ಜ್ಞಾನದಿಂದಲೂ ಮನಸಿಗೆ ಸ್ವಲ್ಪ ಮನಃಶುದ್ಧಿ ಉಂಟಾಗಬಹುದು. ಆದರೆ ಆ ಸ್ವಲ್ಪ ಶುದ್ಧಿಯಿಂದ ಪೂರ್ತಿ ದುಃಖನಿವೃತ್ತಿಯಾಗದು. ಅದಕ್ಕೆ ಧ್ಯಾನರೂಪ ಉಪಾಸನೆ ಮಾಡಬೇಕು. ಅದರಿಂದ ಪೂರ್ತಿಶುದ್ಧಿ, ಪೂರ್ತಿಶುದ್ಧಿಯಿಂದ ಪೂರ್ತಿ ದುಃಖನಿವೃತ್ತಿ. ಈ ಅಭಿಪ್ರಾಯದಿಂದ ಅಚ್ಯುತನ ಪಾದಕಮಲದ ಭಜನೆಯನ್ನು ಅಂದರೆ ಧ್ಯಾನರೂಪ ಉಪಾಸನೆಯನ್ನೇ ಮಾಡಬೇಕೆಂದಿದ್ದಾರೆ.

ಇದನ್ನು ಸ್ಪಷ್ಟವಾಗಿ ಭಾಗವತವೇ ಮುಂದೆ 'ವಿದ್ಯಾತಪಃ ಪ್ರಾಣನಿರೋಧ ಮೈತ್ರೀ' ಎಂದು ಮುಂತಾಗಿ ಹೇಳುತ್ತದೆ.

❖❖❖

## ಬಿಂಬೋಪಾಸನೆಯಿಂದ ಪೂರ್ತಿ ಮನಃಶುದ್ಧಿ

ವಿದ್ಯಾತಪಃಪ್ರಾಣನಿರೋಧ ಮೈತ್ರೀ-
ತೀರ್ಥಾಭಿಷೇಕವ್ರತದಾನಜಾಪ್ಯೈಃ ।
ನಾತ್ಯಂತಶುದ್ಧಿಂ ಲಭತೇಽಂತರಾತ್ಮಾ
ಯಥಾ ಹೃದಿಸ್ಥೇ ಭಗವತ್ಯನಂತೇ ॥

(ಭಾ.೧೨.೩.೪೮)

ನನೂಪಾಸನಮಾತ್ರೇಣ ಕಥಂ ಸರ್ವಾತ್ಮನಾ ದುಃಖನಿವೃತ್ತಿಃ ಇತ್ಯತಃ ಸರ್ವಸ್ಯಾಪಿ ದುಃಖಸ್ಯ ಮೂಲಂ ಮನ ಏವಾಶುದ್ಧಂ। ಅಶುದ್ಧಿಶ್ಚ ಮನಸ ಉದ್ವೇಗ ಏವ। ತಯೈವಾಶುದ್ಧಯಾ ದುಃಖಂ ಭವತೀತಿ ಮನೋಽಪಿ ದುಃಖಪ್ರದಂ ಭವತೀತಿ। ಯದಾ ತು ತನ್ಮನೋ ಭಗವತಿ ನಿವೇಶಿತಂ, ತದಾ ಕುತೋಽಶುದ್ಧಿರ್ಮನಸಃ, ಯದಾ ಚಾಶುದ್ಧಂ ಮನೋ ನಾಸ್ತಿ, ಕುತಸ್ತದಾ ದುಃಖಂ। ಅತ ಏವೈತತ್ ಸೂಚಯಿತುಂ ದುಃಖಿತಸ್ಯೇತಿ ವಕ್ತವ್ಯೇ ಉದ್ವಿಗ್ನಮನಸ ಇತಿ ತತ್ಕಾರಣವಾಚಕಪದೇನೈವ ತತ್ತದ್ಗ್ರಹಣಂ ಪ್ರಾಕ್ಕೃತಮಿತಿ। ನನು ಯದಿ ಮನಃಶುದ್ಧಿದ್ವಾರಾ ಭಗವದುಪಾಸನಂ ದುಃಖನಿವರ್ತಕಂ, ತರ್ಹಿ ವಿದ್ಯಾದಿನಾಪಿ ಮನಃಶುದ್ಧಿಸಂಭವೇನ ಪದಾಂಬುಜೋಪಾಸನೇನ ಅಕುತಶ್ಚಿದ್ಭಯಂ ಮನ್ಯ ಇತಿ ಕಥಮಿತ್ಯತಃ ಸತ್ಯಂ। ವಿದ್ಯಾದಿನಾಪಿ ಮನಃಶುದ್ಧಿಃ ಭವತೀತಿ। ತಥಾಪಿ ತಯಾ ಕಿಯತ ಏವ ದುಃಖಸ್ಯ ನಿವೃತ್ತಿರ್ಭವೇತ್।ಸರ್ವಾತ್ಮನಾ ನಿವೃತ್ತಿಸ್ತು ಅತ್ಯಂತಶುದ್ಧ್ಯೈವ। ಸಾಧನಾನುರೂಪತ್ವಾತ್ ಸಾಧ್ಯಸ್ಯ, ಸಾ ಚಾತ್ಯಂತಿಕೀ ಮನಃಶುದ್ಧಿರುಪಾಸನೇನೈವೇತಿ ಪಾದಾಂಬುಜೋಪಾಸನಮೇವ ಅಕುತಶ್ಚಿ-ದ್ಭಯಂ ಮನ್ಯ ಇತಿ ಸಾಧೂಕ್ತಮಿತಿ ಭಾವೇನಾಹ। ವಿದ್ಯೇತಿ। ವಿದ್ಯಾ ವೇದಾಧ್ಯಯನಂ। ಪ್ರಾಣನಿರೋಧೋ ವಾಯುಜಯಃ। ಮೈತ್ರೀ ಪರೋಪಕಾರಃ। ಅಭಿಷೇಕಃ ಸ್ನಾನಂ। ಅಂತರಾತ್ಮಾ ಮನಃ। ಅನಂತೇ ಭಗವತಿ ಹೃದಿ ಸ್ಥಿತೇ ಸತಿ। ಯಥಾ ಯಾದೃಶೀ ಶುದ್ಧಿರ್ಭವತಿ। ತಾದೃಶೀಂ ಅತ್ಯಂತಶುದ್ಧಿಂ ವಿದ್ಯಾದಿಭಿರ್ನ ಲಭತ ಇತಿ ॥

❖❖❖

ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—

ವೇದಾಧ್ಯಯನ ವೇದಾರ್ಥವಿಚಾರ ಪ್ರಾಣಾಯಾಮ ಪರೋಪಕಾರ ತೀರ್ಥಸ್ನಾನ ವ್ರತ ದಾನ ಜಪಗಳಿಂದ ಬರುವ ಜ್ಞಾನದಿಂದ ಮನಸು ಶುದ್ಧಿಪಡೆಯುವುದು ನಿಜವೆ. ಆದರೆ ಭಗವಾನ್ ಅನಂತನು ಹೃದಯದಲ್ಲಿ ಧ್ಯಾನಕ್ಕೆ ಒಲಿದು ಬಂದು ನಿಂತಾಗ ಎಷ್ಟು ಶುದ್ಧಿಯೋ ಅಷ್ಟು ಶುದ್ಧಿಯನ್ನು ವೇದಾಧ್ಯಯನಾದಿಗಳಿಂದ ಮನಸು ಪಡೆಯಲಾರದು'.

❖❖❖

–೩೧೬–

## ಬಿಂಬೋಪಾಸನೆಯಿಂದಲೇ ಭಯಪರಿಹಾರ

ತಾವದ್ ಭಯಂ ದ್ರವಿಣ ದೇಹ ಸುಹೃನ್ನಿಮಿತ್ತಂ
ಶೋಕಃ ಸ್ಪೃಹಾ ಪರಿಭವೋ ವಿಪುಲಶ್ಚ ಲೋಭಃ ।
ತಾವನ್ಮಮೇತ್ಯಸದವಗ್ರಹ ಆರ್ತಿಮೂಲಂ
ಯಾವನ್ನ ತೇಽಂಘ್ರಿಮಭಯಂ ಪ್ರವೃಣೀತ ಲೋಕಃ ॥

(ಭಾ.೩.೧೦.೬)

ಕಿಂಚ ನ ವಯಂ ಯಸ್ಮಿನ್ ದಿನೇ ಉಪಾಸನಮಾರಭ್ಯತೇ ತಸ್ಮಿನ್ನೇವ ದಿನೇ ಸರ್ವಾತ್ಮನಾ ದುಃಖನಿವೃತ್ತಿರ್ಭವತೀತಿ ವದಾಮಃ । ಕಿಂತು ನಿತ್ಯಂ ಉಪಾಸನಂ ಕುರ್ವತೋಽಭ್ಯಾಸಪಾಟವೇನ ತತ್ರೈವ ಮನಃಪ್ರಣಿಧಾನೇನ ಆತ್ಯಂತಿಕ-ಶುದ್ಧಿಲಾಭೇ ಸತಿ ತದಾ ತು ಭವತ್ಯೇವ ಆತ್ಯಂತಿಕೀ ಕ್ಲೇಶನಿವೃತ್ತಿಃ ತತಃ ಪೂರ್ವಂ ತು ಉಪಾಸನೇನ ಅನುಷ್ಠೀಯಮಾನೇನ ಅದ್ಯೈಕಂ ದುಃಖಂ ಗತಂ ಶ್ವೋಽಪರಮಿತ್ಯೇವಂ ಕ್ರಮೇಣ ದುಃಖನ್ಯೂನತೈವ । ಯಥಾ ಅನುಪಾಸಕಾನಾಂ ದಿನೇ ದಿನೇ ದುಃಖವೃದ್ಧಿರ್ನ ತು ತಥಾ ಉಪಾಸಕಾನಾಂ ಇತ್ಯೇತದೇವ ಅನುಭವಸಿದ್ಧಮಿತಿ ಕಾತ್ರ ಕಥಂತಾ ಇತ್ಯಾಶಯೇನಾಹ ॥ **ತಾವದಿತಿ** ॥ ಲೋಕೋಽಯಂ ಸರ್ವಥಾಪಿ ನ ವಿದ್ಯತೇ ಭಯಂ ಯಸ್ಮಾತ್ತಾದೃಶಂ ತವ ಪಾದಂ ಯಾವನ್ನ ಪ್ರವೃಣೀತ ಭಕ್ತಿಪೂರ್ವಕಂ ನೋಪಾಸೀತ । ತಾವದೇವೇದಂ ಮಮೇತ್ಯೇವಂರೂಪೋ ಅಮಂಗಲೋ ಅಭಿಮಾನಃ ಸರ್ವಸ್ಯಾಪಿ ದುಃಖಸ್ಯ ಕಾರಣಭೂತಃ । ಯಾವದೇವಾಭಿಮಾನಃ ತಾವದೇವ ದ್ರವಿಣಾದಿನಾಶಾದಿ ನಿಮಿತ್ತಂ ಭಯಂ, ತನ್ನಿಮಿತ್ತಃ ಶೋಕಾದಿಶ್ಚ ಭವತಿ । ಯಾವದುಪಾಸನಮೇವ ವಿಪುಲಂ ಭಯಂ, ವಿಪುಲಃ ಶೋಕಾದಿಃ, ಅಸ್ಮಿನ್ ಪ್ರಾರಬ್ಧೇ ತು

**ಕ್ರಮಾನ್ನ್ಯೂನತೇತಿ। ಪರಿಪಾಕೇ ತು ಸರ್ವಥಾ ದುಃಖನಿವೃತ್ತಿರಿತ್ಯತ ಏವ ಏತತ್ಸೂಚಯಿತುಂ ವಿಪುಲ ಇತ್ಯುಕ್ತಂ ॥**

❖❖❖

ಬ್ರಹ್ಮದೇವರು ಹರಿಸ್ತುತಿಗೈಯುತ್ತಾರೆ—

**ಈ ಜನರು ಎಲ್ಲಿಯವರೆಗೆ ಸರ್ವಭಯವನ್ನು ದೂರೀಕರಿಸುವ ನಿನ್ನ ಪಾದವನ್ನು ಭಕ್ತಿಯಿಂದ ಉಪಾಸನ ಮಾಡುವುದಿಲ್ಲವೋ ಅಲ್ಲಿಯವರೆಗೆ 'ಇದು ನನ್ನದೆ'ನ್ನುವ ಅಮಂಗಳಕರವಾದ ದುರಭಿಮಾನವು ಇರುವುದು. ಈ ದುರಭಿಮಾನವೆ ಎಲ್ಲ ದುಃಖಕ್ಕೆ ಕಾರಣ. ಆ ದುಃಖಗಳಾವುವೆಂದರೆ, ಧನಸಂಪತ್ತು ಶರೀರ ಬಂಧುಮಿತ್ರರು ಇರುವಾಗ ಇವು ಎಲ್ಲಿ ಕಳೆದುಹೋಗುವುದೋ ಎಂದು ಭಯ, ಕಳೆದುಹೋದಾಗ ಶೋಕ. ಇನ್ನೂ ಪುನಃ ಪಡೆಯುವಾಸೆ. ಪಡೆಯಲಾಗದಿದ್ದಾಗ ಸೋಲಿನ ದುಃಖ, ಪಡೆದಾಗ ಇನ್ನೂ ಬೇಕೆನ್ನುವ ಮಹಾಲೋಭ. ಇತ್ಯಾದಿ.**

ಯದ್ಯಪಿ ಬಿಂಬೋಪಾಸನೆಯನ್ನು ಪ್ರಾರಂಭಿಸಿದಂದೇ ಪೂರ್ತಿ ದುಃಖ ನಿವೃತ್ತಿಯಾಗುವುದಿಲ್ಲ. ಆದರೂ ನಿತ್ಯ ಉಪಾಸನೆ ಮಾಡಲು ಪ್ರಾರಂಭಿಸ ಬೇಕು. ಆಗ ಅಭ್ಯಾಸಬಲದಿಂದ ಬಿಂಬನಲ್ಲಿಯೇ ಮನಸು ಸ್ಥಿರವಾಗಿ ನಿಲ್ಲುವುದು. ಪೂರ್ತಿ ಮನಃಶುದ್ಧಿ ಲಭಿಸುವುದು. ಪೂರ್ತಿ ದುಃಖನಿವೃತ್ತಿಯು ಅವಶ್ಯ ಆಗುವುದು. ಹಾಗಾಗುವ ಮೊದಲು ಉಪಾಸಕನಿಗೆ ಇಂದು ಒಂದು ದುಃಖ ಹೋಯಿತು. ನಾಳೆ ಇನ್ನೊಂದು ಎಂದು ಕ್ರಮವಾಗಿ ದುಃಖ ಕಡಿಮೆ ಕಡಿಮೆಯಾಗುತ್ತ ಹೋಗುವುದು. ಆದರೆ ಉಪಾಸನೆಯನ್ನು ಮಾಡದವರಿಗೆ ದಿನದಿನಕ್ಕೂ ದುಃಖ ಹೆಚ್ಚುವುದು, ಉಪಾಸಕರಿಗೆ ಹಾಗಾಗುವುದಿಲ್ಲ, ಇದು ಎಲ್ಲರ ಅನುಭವಕ್ಕೆ ಬರುತ್ತದೆ.

❖❖❖

—೩೧೭—

### ಬಿಂಬೋಪಾಸನೆಯಿಂದ ಜ್ಞಾನಭಕ್ತಿವಿರಕ್ತಿ

ಭಕ್ತಿಃ ಪರೇ ಸ್ವೇಽನುಭವೋ ವಿರಕ್ತಿ-
ರನ್ಯತ್ರ ಚೈಷ ತ್ರಿಕ ಏಕಕಾಲಃ ।

**ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು-**
**ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಂ ॥**

(ಭಾ.೧೧.೨.೪೨)

**ಉಪಾಸನಯಾ ದುಃಖನಿವೃತ್ತಿರ್ಭವಂತ್ಯಪಿ ನ ಸಾಕ್ಷಾತ್ ಕಿಂ ನಾಮ ಭಕ್ತಿವಿರಕ್ತಿಜ್ಞಾನದ್ವಾರೈವ । ತದಪಿ ನೈಕದೈವ ಯಾವದ್ಭಾವಿ ತಾವದ್ಭವತಿ । ಕಿಂತು ಕ್ರಮಾದೇವೇತಿ । ತದನುಸಾರೇಣ ದುಃಖನಿವೃತ್ತಿರಪಿ ಕ್ರಮಾದೇವ ಭವತೀತಿ ಭಾವೇನ ಭಕ್ತ್ಯಾದಿಕಂ ಚ ತ್ರಯಂ ಭವತ್ ನ ಕಾಲಭೇದೇನ ಭವತಿ ಕಿಂತ್ವೇಕದೈವ ಉಪಾಸನಾಬಲೇನ ಅಭಿವ್ಯಜ್ಯತ ಇತ್ಯೇತದ್ಬುದ್ಧ್ಯಾರೋಹಾಯ ದೃಷ್ಟಾಂತ ಪೂರ್ವಕಂ ಉಪಾಸನೇನ ಭವತ್‌ಫಲಂ ಚಾಹ ॥ ಭಕ್ತಿರಿತಿ ॥ ಪ್ರಪದ್ಯಮಾನಸ್ಯ ಭಗವದುಪಾಸನಾಂ ಕುರ್ವತಃ ಅಧಿಕಾರಿಣಃ । ಸ್ವೇ ಸ್ವಬಿಂಬರೂಪೇ । ಪರೇ ಪರಮಾತ್ಮನಿ । ಭಕ್ತಿಃ । ಅನುಭವೋ ಜ್ಞಾನಂ ಚ । ತಥಾ ಅನ್ಯತ್ರ ದೇಹಾದೌ ವಿರಕ್ತಿಃ । ಇತ್ಯೇಷ ತ್ರಿಕಃ ತ್ರಿತ್ವಸಂಖ್ಯಾಂ ಪ್ರಾಪ್ತಃ । ಏಕಕಾಲಃ ಏಕಃ ಕಾಲಃ ಅಧಿ ಕರಣಂ ಯಸ್ಯೋತ್ಪತ್ತೇಃ ಸ ಏಕದೈವೋತ್ಪದ್ಯತೇ । ಕಥಂ । ಅಶ್ನತಃ ಭುಂಜಾನಸ್ಯ । ಅನುಘಾಸಂ ಪ್ರತಿಕವಲಂ ಕ್ಷುಧೋಽಪಾಯಃ । ಪುಷ್ಟಿಃ ಉದರಪೂರ್ತಿಲಕ್ಷಣಾ । ತುಷ್ಟಿಃ ಅಲಂ ಬುದ್ಧಿಶ್ಚ ಇತ್ಯೇತ್‌ತ್ರಯಂ ಯಥಾ ಭವತಿ ತಥೇತಿ ॥**

❖❖❖

**ಕವಿಮುನಿ ವಿದೇಹರಾಜನಿಗೆ ಹೇಳುತ್ತಾರೆ—**

**ಬಿಂಬೋಪಾಸನೆಯನ್ನು ನಿತ್ಯ ಮಾಡುವವನಿಗೆ ಬಿಂಬನಲ್ಲಿ ಭಕ್ತಿ, ತನ್ನಲ್ಲಿ ಅವನ ದಾಸನೆನ್ನುವ ಜ್ಞಾನ, ಅನ್ಯತ್ರ ವಿರಕ್ತಿ. ಇವು ಮೂರು ಏಕಕಾಲದಲ್ಲಿ ಉಂಟಾಗುವುವು. ಇದಕ್ಕೆ ದೃಷ್ಟಾಂತ ಉಣ್ಣುವವನಿಗೆ ಒಂದೊಂದು ತುತ್ತಿಗೂ ಉದರಪೂರ್ತಿಯಾಗುವ ತೃಪ್ತಿ, ಶರೀರಕ್ಕೆ ಪುಷ್ಟಿ, ಹಸಿವು ನಿವೃತ್ತಿ. ಇವು ಮೂರು ಏಕಕಾಲದಲ್ಲಿ ಉಂಟಾಗುವಂತೆ, ಎಂದು.**

ಯಾವನ್ನ ತೇಽಂಘ್ರಿಯುಗಲಂ ಪ್ರವೃಣೀತ ಲೋಕಃ ॥ (ಭಾ.೩.೧೦.೬) ಎಂಬಂತೆ ಬಿಂಬೋಪಾಸನೆಯಿಂದಲೇ ಸಕಲ ದುಃಖ ವಿನಾಶವಾಗುವುದು ನಿಜ. ಆದರೆ ಉಪಾಸನೆಯು ದುಃಖನಿವೃತ್ತಿಗೆ ನೇರವಾಗಿ ಕಾರಣವಾಗುವುದಿಲ್ಲ. ಜ್ಞಾನ ಭಕ್ತಿ ವೈರಾಗ್ಯಗಳು ಉಪಾಸನೆಯಿಂದ ಹುಟ್ಟಬೇಕು. ಆಗ ಅವುಗಳಿಂದ ದುಃಖನಿವೃತ್ತಿಯಾಗುವುದು. ಮತ್ತು ಅವು ಮೂರೂ ಕೂಡ ಒಮ್ಮೆಲೇ ಹುಟ್ಟಿ,

ಹುಟ್ಟಿದೊಡನೇ ಒಮ್ಮೆಗೇ ಎಲ್ಲ ದುಃಖನಿವೃತ್ತಿ ಮಾಡುವುದಿಲ್ಲ. ಕ್ರಮೇಣ ಸ್ವಲ್ಪಸ್ವಲ್ಪವಾಗಿ ಹುಟ್ಟುತ್ತವೆ. ಅದಕ್ಕನುಗುಣವಾಗಿ ಸ್ವಲ್ಪಸ್ವಲ್ಪ ದುಃಖವನ್ನೆ ಕಳೆದು ಕೊನೆಯಲ್ಲಿ ಪೂರ್ತಿಯಾಗಿ ಹುಟ್ಟಿ ಪೂರ್ತಿ ದುಃಖ ನಿವೃತ್ತಿ ಮಾಡುತ್ತವೆ. ಆದರೆ ಮೂರೂ ಕೂಡ ಜೊತೆಯಾಗಿಯೇ ಒಮ್ಮೆಲೇ ಹುಟ್ಟುತ್ತವೆ—'ತ್ರಿಕಃ ಏಕಕಾಲಃ'. ಭೋಜನದಿಂದ ಏಕಕಾಲದಲ್ಲಿ ಉಂಟಾಗುವ ತೃಪ್ತಿ, ಪುಷ್ಟಿ ಹಸಿವಿನ ನಿವೃತ್ತಿಗಳು ಇದಕ್ಕೆ ಉದಾಹರಣೆ.

ಆದರೆ ಒಂದು ವಿಶೇಷವಿದೆ. ಮೂರೂ ಕೂಡ ಜೀವಸ್ವರೂಪದಲ್ಲಿಯೇ ಸುಪ್ತವಾಗಿ ಇರುವವುಗಳೇ ಆದ್ದರಿಂದ ಉಪಾಸನೆ ಹೆಚ್ಚಿದಂತೆಲ್ಲ ಕ್ರಮೇಣ ಹೆಚ್ಚುಹೆಚ್ಚಾಗಿ 'ವ್ಯಕ್ತ'ವಾಗುತ್ತವೆ ಹೊರತು ಇಲ್ಲದೇ ಇದ್ದವುಗಳು ಹೊಸದಾಗಿ 'ಹುಟ್ಟು'ವುದಿಲ್ಲ.

❖❖❖

–೩೧೮–

**ನಿರಂತರ ಉಪಾಸನೆ ಬೇಕು**

**ಇತ್ಯಚ್ಯುತಾಂಘ್ರಿಂ ಭಜತೋಽನುವೃತ್ತ್ಯಾ**
**ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।**
**ಭವಂತಿ ವೈ ಭಾಗವತಸ್ಯ ರಾಜನ್**
**ತತಃ ಪರಾಂ ಶಾಂತಿಮುಪೈತಿ ಸಾಕ್ಷಾತ್ ॥**

(ಭಾ.೧೧.೨.೪೩)

ಇತಿ ಇತ್ಥಂಭೂತಯಾ ಪ್ರತ್ಯುಪಾಸನಂ ಭಕ್ತ್ಯಾದಿತ್ರಯಮುತ್ಪಾದಯಂತ್ಯಾ ಅನುವೃತ್ತ್ಯಾ ಉಪಾಸನಯಾ । ಅಚ್ಯುತಾಂಘ್ರಿಂ ಭಜತೋಽಪಿ ಯಸ್ಯ ಭಾಗವತಸ್ಯ ಪುಂಸಃ । ಭಕ್ತಿಃ ವಿರಕ್ತಿಃ ಭಗವತ್ಪ್ರಬೋಧಶ್ಚ ಇತ್ಯೇತೇ ಯಾವಂತಃ ಕೃಪ್ತಾಃ ತಾವಂತೋ ಯದಾ ಭವಂತಿ । ಸ ವೈ ಸ ಏವ । ತತಃ ತದನಂತರಮೇವ । ಪರಾಂ ಶಾಂತಿಂ ಆತ್ಯಂತಿಕೀಂ ದುಃಖನಿವೃತ್ತಿಂ । ಸಾಕ್ಷಾದ್ದ್ವಾರಾಂತರಂ ಸ್ವನಿಷ್ಠಮನಪೇಕ್ಷ್ಯೈವ । ಉಪೈತಿ ಪ್ರಾಪ್ನೋತಿ । ಇದಮುದಿತಂ ಭವತಿ— ಯಥಾ ಬುಭುಕ್ಷೋರಶ್ನತಶ್ಚ ಏಕಸ್ಮಿನ್ ಕವಲೇ ಗೃಹೀತೇ ಕ್ಷುದಪಾಯಃ ಪುಷ್ಟಿಸ್ತುಷ್ಟಿಶ್ಚೇತಿ ತ್ರಿಕಂ ಏಕದೈವ ಭವತಿ । ನ ಚ ತಾವತಾತ್ಯಂತಕ್ಷು

**ನ್ನಿವೃತ್ತ್ಯಾದಿರ್ಭವತೀತಿ ಸಃ ಕವಲಾಂತರಂ ಗೃಹ್ಣಾತಿ ತತ್ರಾಪ್ಯೇವಮೇವೇತಿ ಕೢಪ್ತಕವಲಂ ಗೃಹ್ಣಾತ್ಯೇವ। ತದನಂತರಂ ತು ಆತ್ಯಂತಿಕಂ ಕ್ಷುನ್ನಿವೃತ್ತ್ಯಾದಿ ರ್ಭವತ್ಯೇವ। ತಥಾ ಉಪಾಸನಮಪಿ ಪ್ರತಿವ್ಯಕ್ತಿ ವಿರಕ್ತ್ಯನುಭವ ಭಕ್ತಿತ್ರಿಕಮಭಿವ್ಯಕ್ತಂ ಕುರ್ವತ್ ಕ್ರಮೇಣ ದುಃಖನಿವೃತ್ತಿಂ ಕುರ್ವತ್ ಸ್ವಕಾಷ್ಠಾಂ ಪ್ರಾಪ್ತಂ ಸತ್ ಕೢಪ್ತಂ ಭಕ್ತ್ಯಾದಿತ್ರಿಕಮುತ್ಪಾದ್ಯ ಆತ್ಯಂತಿಕೀಂ ದುಃಖನಿವೃತ್ತಿಂ ಸ್ವಸಮಾನಾಧಿಕರಣದ್ವಾರಾಂತರಮನಪೇಕ್ಷ್ಯೈವ ಕರೋತೀತಿ ॥**

❖❖❖

**ಕವಿಮಹಾಮುನಿ ವಿದೇಹರಾಜನಿಗೆ ಉಪದೇಶಿಸುತ್ತಾರೆ—**

**ಅನುವೃತ್ತಿಯಿಂದ ಅಂದರೆ ಭಕ್ತಿಜ್ಞಾನವಿರಕ್ತಿಜನಕವಾದ ನಿರಂತರ ಉಪಾಸನೆಯಿಂದ ಪುನಃಪುನಃ ಹರಿಪಾದ ಭಜನೆ ಮಾಡುವ ಭಾಗವತನಿಗೆ ದೃಢವಾದ ಭಕ್ತಿ ವಿರಕ್ತಿ ಜ್ಞಾನಗಳುಂಟಾಗುತ್ತವೆ. ಬಳಿಕ ಅವನು ಆ ಭಕ್ತಿವಿರಕ್ತಿ ಜ್ಞಾನಗಳಿಂದ ನೇರವಾಗಿಯೆ ಪೂರ್ತಿದುಃಖನಿವೃತ್ತಿಯನ್ನು ಹೊಂದುತ್ತಾನೆ.**

ಭೋಜನದಲ್ಲಿ ಪ್ರತಿಯೊಂದು ತುತ್ತಿನಿಂದಲೂ ತುಷ್ಟಿ ಪುಷ್ಟಿ ಹಸಿವಿನ ನಿವೃತ್ತಿಗಳು ಆಗುತ್ತಲೇ ಇರುತ್ತವೆ. ಆದರೂ ಪೂರ್ತಿ ಪುಷ್ಟಿ ಮುಂತಾದವು ಮೊದಲಿಗೇ ಲಭಿಸುವುದಿಲ್ಲ. ಮೊದಲಿನ ತುತ್ತಿಗೆ ಸ್ವಲ್ಪ ಲಭಿಸುತ್ತದೆ. ಸಾಕಾಗಲಿಲ್ಲ ಎಂದು ಇನ್ನೊಂದು ತುತ್ತು ಉಣ್ಣುತ್ತಾನೆ. ಅದೂ ಸಾಕಾಗಲಿಲ್ಲ ಎಂದು ಮತ್ತೊಂದು ತುತ್ತು ಉಣ್ಣುತ್ತಾನೆ. ಕೊನೆಯ ತುತ್ತಿನಿಂದ ಪೂರ್ತಿ ತೃಪ್ತ್ಯಾದಿಗಳುಂಟಾಗುತ್ತವೆ. ಹಾಗೇ ಉಪಾಸನೆಯೂ ಕೂಡ ಪ್ರತಿಯೊಂದೂ ಭಕ್ತ್ಯಾದಿಗಳನ್ನುಂಟುಮಾಡುತ್ತದೆ. ಆದರೂ ಸಾಲದೆಂದು ಮತ್ತೂ ಮತ್ತೂ ಉಪಾಸನೆ ಮಾಡಿದರೆ ಮಾತ್ರ ಕೊನೆಯಲ್ಲಿ ದೃಢವಾದ ಭಕ್ತ್ಯಾದಿಗಳನ್ನು ಉಂಟುಮಾಡಿ ನೇರವಾಗಿ ಪೂರ್ಣ ದುಃಖನಿವೃತ್ತಿಯನ್ನುಂಟು ಮಾಡುತ್ತದೆ.

❖❖❖

—೩೧೯—

**ನಿರಂತರೋಪಾಸನೆಯಿಂದ ಫಲ ಪಡೆದವರುಂಟು**

**ವಿಚಕ್ಷಣಾ ಯಚ್ಚರಣೋಪಸಾದನಾತ್**
**ಸಂಗಂ ವ್ಯುದಸ್ಯೋಭಯತೋಽಂತರಾತ್ಮನಃ ।**

**ವಿದಂತಿ ಹಿ ಬ್ರಹ್ಮಗತಿಂ ಗತಕ್ಲಮಾ**
**ಸ್ತಸ್ಮೈ ಸುಭದ್ರಶ್ರವಸೇ ನಮೋನಮಃ ॥**

(ಭಾ.೨.೪.೧೬)

**ಏವಂ ಭಗವದುಪಾಸನೇನ ಭಕ್ತ್ಯಾದಿದ್ವಾರಾ ಆತ್ಯಂತಿಕಕ್ಲೇಶನಿವೃತ್ತಿಂ ಪ್ರಾಪ್ತಾಃ ಸಂತಿ ಚೇತ್ ವಯಂ ತದುಪಾಸನಂ ಕುರ್ಮ ಇತ್ಯತಃ ಸಂತಿ ತಾದೃಶಾ ಅಪಿ ಕುಶಲಾ ಇತ್ಯನುಶಯೇನಾಹ ॥ ವಿಚಕ್ಷಣಾ ಇತಿ ॥ ವಿಚಕ್ಷಣಾಃ ಅಧ್ಯಾತ್ಮವಿಚಾರಚತುರಾಃ । ಕರ್ತವ್ಯಾಕರ್ತವ್ಯವಿದೋ ವಾ । ಯಸ್ಯ ಚರಣೋಪಸಾದನಾತ್ ಅಂತರಾತ್ಮನೋ ಮನಸಃ ಉಭಯತಃ ಐಹಿಕಾಮುಷ್ಮಿಕವಿಷಯೇಷು । ಸಂಗಂ ಸ್ನೇಹಂ ವ್ಯುದಸ್ಯ ಪರಿಹೃತ್ಯ । ವೈರಾಗ್ಯಂ ಪ್ರಾಪ್ಯ ಇತಿ ಯಾವತ್ । ಬ್ರಹ್ಮಣೋ ಹರೇಃ ಗತಿಂ ಜ್ಞಾನಂ ತದ್ವಿಶೇಷಭೂತಾಂ ಚ ಭಕ್ತಿಂ ವಿಂದಂತಿ । ತದ್ದ್ವಾರಾ ಗತಾಃ ಅಶೇಷತೋ ಅಪಗತಾಃ ಕ್ಲಮಾಃ ಕ್ಲೇಶಾ ಯೇಭ್ಯಸ್ತೇ ತಾದೃಶಾ ಭವಂತಿ । ಅಥವಾ ಸಂಗಂ ವ್ಯುದಸ್ಯೇತಿ ಭಕ್ತ್ಯಾದಿತ್ರಯಸ್ಯಾಪಿ ಉಪಲಕ್ಷಣಂ । ಪ್ರಾಪ್ಯ ಬ್ರಹ್ಮ ವಿಂದಂತಿ ಚೇತಿ ಯೋಜ್ಯಂ । ತಸ್ಮೈ ತಾದೃಶಾಯ ನಮೋ ನಮ ಇತಿ । ಉಪಾಸನಯಾ ಉಪಾಸಕಾನಾಂ ಪೂರ್ವೇಷಾಂ ಫಲಪ್ರಾಪ್ತಿದರ್ಶನಾತ್ ಅಧುನಾತನೈಃ ಅವಶ್ಯಮುಪಾಸನಾ ಕಾರ್ಯಾ ಇತಿ ಭಾವಃ ॥**

❖❖❖

**ಶುಕಮುನಿ ಪರೀಕ್ಷಿತನಿಗೆ ಹೇಳಲು ಪ್ರಾರಂಭಿಸುತ್ತಿದ್ದಾರೆ—**

**ಬಿಂಬವನ್ನು ಅರಿತು ಕರ್ತವ್ಯ ಅಕರ್ತವ್ಯ ವಿವೇಕವನ್ನು ಹೊಂದಿದ ಭಕ್ತರು ಯಾವ ಶ್ರೀಹರಿಯ ಉಪಾಸನೆಯಿಂದ ಐಹಿಕ ಆಮುಷ್ಮಿಕ ವಿಷಯಗಳಲ್ಲಿ ಆಸಕ್ತಿಯನ್ನು ತೊರೆದು ವೈರಾಗ್ಯ ಹೊಂದಿ 'ಬ್ರಹ್ಮಗತಿ'ಯನ್ನು ಹರಿಯ ಜ್ಞಾನಭಕ್ತಿಗಳನ್ನು ಸಂಪಾದಿಸುವರೋ ಪೂರ್ಣದುಃಖ ನಿವೃತ್ತಿ ಹೊಂದುವರೊ ಅಂಥ ಪರಮಮಂಗಳ ಮಹಿಮನಾದ ಹರಿಗೆ ನಮೋ ನಮಃ.**

ಬಿಂಬೋಪಾಸನೆಯಿಂದ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸಿ ಭಕ್ತಿಯಿಂದ ಸಕಲ ದುಃಖ ನಿವೃತ್ತಿ ಮಾಡಿಕೊಂಡವರು ಇದ್ದಾರೆ. ಅದರಿಂದ ನಾವೂ ಬಿಂಬೋಪಾಸನ ಮಾಡಿದರೆ ಮುಕ್ತಿ ಭಾಗಿಗಳಾಗಬಹುದು ಎಂದು ಶುಕಮುನಿ ಹೇಳುತ್ತಿದ್ದಾರೆ.

ಆ ಬಿಂಬನು ಯಾರೆಂಬುದನ್ನು ಪಿಪ್ಪಲಾಯನ ಮುನಿ ವಿದೇಹರಾಜನಿಗೆ ಹೇಳುತ್ತಾರೆ–ಮುಂದಿನ ಶ್ಲೋಕದಲ್ಲಿ.

❖❖❖

–೩೨೦–

**ಬಿಂಬಸ್ವರೂಪ ನಿರೂಪಣ**

**ಸ್ಥಿತ್ಯುದ್ಭವ ಪ್ರಲಯಹೇತುರಹೇತುರಸ್ಯ**
**ಯಃ ಸ್ವಪ್ನಜಾಗರಸುಷುಪ್ತಿಷು ಸನ್‌ಬಹಿಶ್ಚ ।**
**ದೇಹೇಂದ್ರಿಯಾಸುಹೃದಯಾನಿ ಚರಂತಿ ಯೇನ**
**ಸಂಜೀವಿತಾನಿ ತದವೈಹಿ ಪರಂ ನರೇಂದ್ರ ॥**

(ಭಾ.೧೧.೩.೩೬)

ಏವಮಾದರಜನನಾಯ ಬಿಂಬೋಪಾಸನಾಂ ಪ್ರಶಸ್ಯ ಬಿಂಬರೂಪ ಮುಪದಿಶತಿ ॥ **ಸ್ಥಿತೀತಿ** ॥ ಬ್ರಹ್ಮವಿದಾಮಗ್ರೇಸರೇಣ ಜನಕೇನ ಸ್ವಯಂ ಬಿಂಬರೂಪಂ ವಿಜಾನತಾಪಿ ಲೋಕೋಪಕಾರಾಯ ಯೋಗೇಶ್ವರಾನ್ ಪ್ರತಿ ಪೃಷ್ಟಂ । **ಯಥಾಹುಃ**—

''ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮಾತ್ಮನಃ ।
ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ ।'' ಇತಿ ॥

ಏವಂ ಪೃಷ್ಟವತೇ ರಾಜ್ಞೇ ಬಿಂಬರೂಪಮುಚ್ಯತೇ । ಹೇ ನರೇಂದ್ರ । ಯಃ ಅಸ್ಯ ಜಗತಃ ಸ್ಥಿತ್ಯಾದಿಹೇತುಃ । ಸ್ವಯಂ, ನ ವಿದ್ಯತೇ ಹೇತುರ್ಯಸ್ಯ ಇತಿ ಅಹೇತುಃ । ಯಶ್ಚ ಸ್ವಪ್ನಾದಿಷು ಸನ್ನಪಿ ತತ್ಕೃತಲೇಪಾಭಾವಾತ್ ಬಹಿರೇವ । **ಅಥವಾ** ಅವಸ್ಥಾತ್ರಯಾವಸ್ಥಿತತ್ವವದವಸ್ಥಾಂತರ ಸ್ಥಿತತ್ವಮಪ್ಯಸ್ತೀತ್ಯಾಹ ॥ **ಬಹಿರಿತಿ** ॥ ಬಹಿರ್ಮುಕ್ತೌ ಪ್ರಲಯೇ ಸನ್ನಿತಿ । ಹೃದಯಂ ಮನಃ ಯೇನ ಚ ದೇಹಾದೀನಿ ಸಂಜೀವಿತಾನಿ ಉದ್ಬೋಧಿತಾನ್ಯೇವ । ಚರಂತಿ ಸ್ವಸ್ವವ್ಯಾಪಾರಕ್ಷಮಾಣಿ ಭವಂತಿ । ತದೇವ ಬ್ರಹ್ಮ ನಾರಾಯಣಾದಿಪದತಾತ್ಪರ್ಯ ವಿಷಯಭೂತಂ ಪರಂ ವಸ್ತು ವಿದ್ಧೀತಿ ಯೋಜನಾ ।

**ಇದಮುದಿತಂ ಭವತಿ**— ಕ್ವಚಿನ್ನಾರಾಯಣನಾಮ್ನೋ ಭಗವದ್ರೂಪಸ್ಯ ಉಪಾಸ್ಯತಾ ''ನಾರಾಯಣಂ ಮಹಾಜ್ಞೇಯಮಿ''ತ್ಯಾದೌ । ಕುತ್ರಚಿದ್ಬ್ರಹ್ಮ-

**ಪದಾಭಿಧೇಯಸ್ಯ "ಬ್ರಹ್ಮವಿದಾಪ್ನೋತಿ ಪರಮಿ"ತ್ಯಾದೌ। ಅನ್ಯತ್ರ ತು ಪರಮಾತ್ಮಾಭಿಧಾನಸ್ಯ "ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತ" ಇತ್ಯಾದೌ। ಏವಮನೇಕಾಭಿಧಾನಂ ಏಕಮೇವ ರೂಪಮನಂತರೂಪಸ್ಯಾಪಿ ಭಗವತೋ ಬಿಂಬಸಂಜ್ಞಂ ವರ್ತತೇ ಇತಿ ಸಿದ್ಧಂ। ತಚ್ಚ ಕೀದೃಶಮಿತ್ಯಭಿ-ಪ್ರಾಯೇಣ ಪೃಷ್ಟೇ ಯೋ ಜಗಜ್ಜನ್ಮಾದಿಕಾರಣತಯಾ ಸರ್ವಶಾಸ್ತ್ರಪ್ರತಿಪಾದ್ಯಃ ಭಗವಾನನಂತ ರೂಪೇಷ್ವಪಿ ಏತ್ಯೈರೇವ ರೂಪವಿಶೇಷ್ಯೈಃ ಮುಕ್ತಿಂ ದದಾಮೀತಿ ಸತ್ಯಸಂಕಲ್ಪಾನುಸಾರೇಣ ಸರ್ವೇಷು ಜೀವೇಷು ಸ್ಥಿತಃ ಅನಾದ್ಯನಂತಕಾಲೇಷ್ವಪಿ ಜಾಗ್ರದಾದಿತ್ರಿವಿಧಕಾಲೀನಭೋಗವಿಶೇಷಂ ಕುರ್ವಾಣೋಽಪಿ ಸ್ವಾತಂತ್ರ್ಯೇಣ ನಿತ್ಯಾಲಿಪ್ತೋ ವಿಜಯತೇತರಾಮಿತ್ಯುತ್ತರಂ ವೈ ದತ್ತಮಿತಿ। ಅನೇನ ಶಂಕಾತ್ರಯೇ ಕೀದೃಶಂ ತದ್ರೂಪಮಿತಿ ಶಂಕಾ ಪರಿಹೃತೇತಿ ಜ್ಞೇಯಂ ॥**

❖❖❖

**ಪಿಪ್ಪಲಾಯನ ಮುನಿ ವಿದೇಹರಾಜನಿಗೆ ಹೇಳುತ್ತಾರೆ—**

**ರಾಜನೆ, ಯಾರು ಈ ಜಗತ್ತಿಗೆ ಸ್ಥಿತಿ ಉತ್ಪತ್ತಿ ಲಯ ಕಾರಣನಾಗಿದ್ದು ತನಗೆ ಕಾರಣವಿಲ್ಲದವನಾಗಿರುವನೋ ಅವನೇ ಜೀವರಿಗೆ ಸ್ವಪ್ನ ಜಾಗರ ಸುಪ್ತಿ ರೂಪ ಅವಸ್ಥಾತ್ರಯ ನಿಯಾಮಕನಾಗಿದ್ದು ತಾನು ಅವಸ್ಥಾತ್ರಯ ರಹಿತನಾಗಿದ್ದು ದೇಹ ಇಂದ್ರಿಯ ಪ್ರಾಣ ಮನಗಳಿಗೆ ನಿಯಾಮಕನಾಗಿರುತ್ತಾನೆ. ಅವನೆ ಸರ್ವೋತ್ತಮ ಬಿಂಬನೆಂದು ತಿಳಿ.**

ವಿದೇಹರಾಜನು ಬಿಂಬನಾರೆಂದು ಕೇಳಿದ್ದ—

ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮೇಷ್ಠಿನಃ
ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ ॥

(ಭಾ.೧೧.೩.೩೪)

ಪರಬ್ರಹ್ಮ ಪರಮಾತ್ಮನಾದ ನಾರಾಯಣನ ಮಹಿಮೆಯನ್ನು ಅವನು ಬ್ರಹ್ಮಾದಿ ಜೀವರಿಗಿಂತ ಹೇಗೆ ಉತ್ತಮ, ಹೇಗೆ ಬಿಂಬನೆಂಬುದನ್ನು ನೀವು ನಮಗೆ ಉಪದೇಶಿಸಬೇಕು. ನೀವು ಉತ್ತಮ ಬ್ರಹ್ಮಜ್ಞಾನಿಗಳು ಎಂದು ಕೇಳಿಕೊಂಡಿದ್ದ.

'ನಾರಾಯಣಂ ಮಹಾಜ್ಞೇಯಂ' ಎಂದು ಕೆಲವೆಡೆ 'ನಾರಾಯಣನು ಎಲ್ಲರ ಹೃದಯದಲ್ಲಿ ಬಿಂಬನಾಗಿ ಉಪಾಸ್ಯನೆಂದಿದೆ.

'ಬ್ರಹ್ಮವಿದಾಪ್ನೋತಿ ಪರಂ' ಎಂದು 'ಬ್ರಹ್ಮ'ನು ಉಪಾಸ್ಯನೆಂದಿದೆ.

'ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।

ಎಂದು ಕೆಲವೆಡೆ 'ಪರಮಾತ್ಮ' ಉಪಾಸ್ಯನೆಂದಿದೆ.

ಇದರಿಂದ ಅನಂತರೂಪನಾದ ಭಗವಂತನ ಒಂದು ರೂಪವೆ ಬಿಂಬ, ಅವನಿಗೆ 'ನಾರಾಯಣ-ಬ್ರಹ್ಮ- ಪರಮಾತ್ಮ' ಎಂದು ಅನೇಕ ನಾಮಗಳು ಎನ್ನುವುದು ಸಿದ್ಧವಿದೆ. ಆ ಬಿಂಬನು ಹೇಗಿರುವನೆಂದರೆ ಅವನು ಜಗಜ್ಜನ್ಮಾದಿ ಕಾರಣನೆಂದು ಸರ್ವ ಸಚ್ಛಾಸ್ತ್ರಗಳಲ್ಲಿ ಪ್ರತಿಪಾದ್ಯ. ಬಿಂಬರೂಪದಿಂದ ಸುಜೀವಿಗಳೆಲ್ಲರಿಗೂ ಮುಕ್ತಿ ನೀಡುವ ಸತ್ಯಸಂಕಲ್ಪನಾಗಿರುತ್ತಾನೆ. ಜಾಗರಾದಿ ಅವಸ್ಥಾತ್ರಯ ಕಾಲಗಳಲ್ಲಿ ಭೋಗ ಮಾಡುತ್ತಿದ್ದರೂ ಸ್ವತಂತ್ರನಾದ್ದರಿಂದ ನಿತ್ಯ ನಿರ್ಲಿಪ್ತನಾಗಿ ಸರ್ವೋತ್ತಮನಾಗಿ ಮೆರೆಯುತ್ತಾನೆ ಎಂದು ಪಿಪ್ಪಲಾಯನ ಮುನಿ ಹೇಳುತ್ತಾರೆ.

❖❖❖

–೩೨೧–

**ಜೀವಾಕಾರನಾಗಿ ಜೀವಸ್ವರೂಪದಲ್ಲಿ ವ್ಯಾಪಿಸಿರುವವನು ಬಿಂಬ**

**ಜ್ಞಾನಂ ವಿಶುದ್ಧಂ ಪರಮಾರ್ಥಮೇಕಂ**
**ಅನಂತರಂ ನ ಬಹಿರ್ಬ್ರಹ್ಮ ಸತ್ಯಂ ।**
**ಪ್ರತ್ಯಕ್ ಪ್ರಶಾಂತಂ ಭಗವಚ್ಛಬ್ದವಾಚ್ಯಂ**
**ಯದ್ವಾಸುದೇವಂ ಕವಯೋ ವದಂತಿ ॥**

(ಭಾ.೫.೧೨.೧೧)

**ಕ್ವ ಚಾಸ್ತೀತಿ ದಶಮೀಂ ಶಂಕಾಂ ಪರಿಹರ್ತುಮಾಹ ॥ ಜ್ಞಾನಮಿತಿ । ಅವಧೂತೇನ ಮಮ ಶಿಬಿಕಾಭರ್ತೃತ್ವಂ ಮಾರ್ಗಗಂತೃತ್ವಾದಿಕಂ ಚ ನಾಸ್ತಿ । ಕಿಂತು ಮದಂತರ್ಗತಸ್ಯ ಹರೇರೇವ ಇತ್ಯಾಶಯೇನ ''ತ್ವಯೋದಿತಂ ವ್ಯಕ್ತಮವಿಪ್ರಲಬ್ಧಂ ಭರ್ತುಃ ಸ ಮೇ ಸ್ಯಾದ್ಯದಿ ವೀರ ಭಾರಃ । ಗಂತುರ್ಯದಿ ಸ್ಯಾದಧಿಗಮ್ಯಮಧ್ವಾ'' (೫।೧೦।೧೦) ಇತ್ಯಾದಿನಾ ''ಅಹೋ ಕಷ್ಟಂ ಭ್ರಾತರ್ವ್ಯಕ್ತಮುರುಪರಿಶ್ರಾಂತೋ ದೀರ್ಘಮಧ್ವಾನಮೇಕ ಏವೋಹಿತವಾನ್ ಸುಚಿರ' (೫।೧೦।೬) ಮಿತ್ಯಾದ್ಯುಪಹಾಸಪೂರ್ವಕಂ ರಾಜ್ಞೋಕ್ತಸ್ಯ ಉತ್ತರೇ ದತ್ತೇ ಸತಿ ರಾಜ್ಞಾ ವಿಶೇಷಜ್ಞೇ ಗುರೌ ಲಬ್ಧೇ ಸತಿ ವಿಶೇಷೋ ವಿಜ್ಞೇಯ ಏವೇತಿ**

ಮನ್ವಾನೇನ ವಿಶೇಷವಿವಿತ್ಸಯಾ ''ಭರ್ತುಃ ಸ ಮೇ ಸ್ಯಾದ್ಯದಿ ವೀರ ಭಾರಃ'' ಇತ್ಯಾದಿನಾ ತ್ವಯೋದಿತೇ ಮಮ ಶಿಬಿಕಾಭರ್ತೃತ್ವಂ ಗಂತೃತ್ವಾದಿಕಂ ಚ ನಾಸ್ತೀತ್ಯಾದಿರೂಪೇ ಅರ್ಥೇ ಮೇ ಮನೋ ಭ್ರಮತಿ ಯತೋ ಹರಿರ್ಜೀವೇ ಸ್ಥಿತಶ್ಚೇತ್ತಸ್ಯ ಹೃದ್ಯೇವ ವರ್ತತೇ । ''ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತೀ' ತಿ ಶ್ರುತೇಃ । ಬಹಿರೇವ ಚೇತ್ ಮಹಾನ್ ಸಂತೋಷಃ । ಉಭಯಥಾಪಿ ಹರೇಃ ಶಿಬಿಕಾಭರ್ತೃತ್ವಾದ್ಯಯೋಗ ಇತ್ಯಭಿಪ್ರಾಯೇಣ ''ನ ಹ್ಯಂಜಸಾ ತತ್ವವಿಮರ್ಶನಾಯ ಭವಾನಮುಷ್ಮಿನ್ ಭ್ರಮತೇ ಮನೋ ಮೇ'' ಇತ್ಯನೇನ ಪ್ರಶ್ನೇ ಕೃತೇ ಸತಿ ಉತ್ತರಮುಕ್ತಮವಧೂತೇನೇದಂ । ಯತ್ಪರಮಾರ್ಥಂ ಸರ್ವೋತ್ತಮಂ ಏಕಂ ವಿಶುದ್ಧಜ್ಞಾನರೂಪಂ ಸತ್ಯಂ ನಿತ್ಯಂ ಪ್ರಶಾಂತಂ ಬ್ರಹ್ಮ ಬ್ರಹ್ಮಪದವಾಚ್ಯಂ । ತಥಾ ಭಗವಚ್ಛಬ್ದವಾಚ್ಯಂ ವಾಸುದೇವಪದಾಭಿಧೇಯಂ ಚ ವಸ್ತು ಕವಯಃ ವದಂತಿ ತದ್ವಸ್ತು, ಬಹಿರ್ಜೀವಸ್ಯ ರೂಪಾದಿತಿ ನ ಮಂತವ್ಯಂ । ನಾಪಿ ಅಂತಃ ಜೀವಹೃದಯಾಂತರೇವ ಸ್ಥಿತ್ವಾ ವಿಷಯಭೋಗಂ ಕುರ್ವದಿತ್ಯುಕ್ತಂ— **ಅನಂತರಮಿತಿ ।** ಕಥಮವಸ್ಥಾನಂ ಬಿಂಬಸ್ಯೇತಿ ತೇನ ವಿಶೇಷತೋ ವಿವಿತ್ಸಿತಮರ್ಥಂ ರಹಸ್ಯತಯಾ ಅವಕ್ತವ್ಯಮಪಿ ಶಿಷ್ಯೇ ಕರುಣಯಾ ದರ್ಶಯತಿ ॥ **ಪ್ರತ್ಯಗಿತಿ** ॥ ಜೀವಬಿಂಬಮಿತಿ ।

**ಇದಮುದಿತಂ ಭವತಿ**— ಪ್ರತ್ಯಕ್‌ಶಬ್ದೋ ಜೀವಪರಃ ಪ್ರಸಿದ್ಧಃ । ತತ್ಸುತಃ ಪ್ರತ್ಯಗಿತಿ ಸರ್ವದಾ ಅನಾದ್ಯನಂತಕಾಲೇಷ್ವಪಿ ಕದಾಚಿದಪಿ ಕುತಶ್ಚಿತ್ ಕಾರಣಾದಪಿ ಯನ್ನ ಬಹಿರ್ನಿಃಸರತಿ ತದುಚ್ಯತೇ । ಅಂತರೇವ ಸ್ಥಿತಂ ವಸ್ತು ಪ್ರತ್ಯಕ್‌ಪದಾಭಿಧೇಯಮಿತಿ ಯಾವತ್ । ತಾದೃಶಂ ಚ ತದ್ಬಿಂಬರೂಪಮೇವ ತಸ್ಯ ಚ ವಿಯೋಗೇ ಜೀವಸ್ವರೂಪಸ್ಯ ಅನವಸ್ಥಾನಾಪತ್ತೇಃ । ತಚ್ಚ ಜೀವಸ್ಯ ಶಿರಸಿ ಶಿರಃ, ಮುಖೇ ಮುಖಮಿತ್ಯಾದಿಕ್ರಮೇಣ ಸಮಾನಾಕೃತಿತಯಾ ಸರ್ವತ್ರ ವಿದ್ಯಮಾನಂ ಸತ್ ಜೀವಾವಯವೇಂದ್ರಿಯಾದ್ಯಂತಃ ಸ್ಥಿತೈಃ ಸ್ವರೂಪಭೂತೈಃ ಸ್ವಾವಯವಾದಿಭಿ ರ್ಭೋಗಾನ್ ಅನುಭವತಿ । ತತಸ್ತತ್ಸನ್ನಿಧಾನಾತ್ ಪ್ರತ್ಯಗಿತಿ ಪ್ರಸಿದ್ಧೋ ಜೀವಃ । ಯಥಾ ಆತ್ಮನಃ ಜೀವಸ್ಯ ಸನ್ನಿಧಾನಾತ್ ದೇಹೋಽಪಿ ಆತ್ಮೇತಿ ವ್ಯವಹ್ರಿಯತೇ । ಜೀವಾಂತರೇವ ವ್ಯಾಪ್ಯ ವಿದ್ಯಮಾನತಯಾ ಪ್ರತ್ಯಕ್ಪದಬೋಧ್ಯೇ ಜೀವಬಿಂಬರೂಪೇ ಪರಮಾತ್ಮನ್ಯೇವ ಶಿಬಿಕಾಭರ್ತೃತ್ವಾದಿಕಂ ಸುಯೋಗಮಿತಿ ಸ್ವಪ್ರಯುಕ್ತವಾಕ್ಯಾಭಿಪ್ರಾಯೋದ್ಘಾಟನೇನ ರಾಜ್ಞೋ ಬಿಂಬಾವಸ್ಥಾನಂ ಕಥಮಿತಿ ವಿವಿತ್ಸಿತಾರ್ಥಸ್ಯ ಲಾಭ ಇತಿ । ಅತ್ರಾನಂತರಂ ನ ಬಹಿಶ್ಚ ಕಿಂತು ಪ್ರತ್ಯಕ್ ಜೀವಸ್ವರೂಪಸ್ಯ ಅಂತರೇವ ವ್ಯಾಪ್ಯ ವಿದ್ಯಮಾನಮಿತ್ಯೇವಾಲಂ ತಾವತ್ಯೈವ

ವಿವಿತ್ಸಿತಾರ್ಥಲಾಭಸಂಭವಾತ್ । ತಥಾಪೀದೃಶಸ್ಯ ಸರ್ವದಾ ಜಾಗ್ರದಾದ್ಯ-ವಸ್ಥಾವಸ್ಥಿತಭೋಗಭೋಕ್ತುಃ ಮುಕ್ತಿದಾನಸಾಮರ್ಥ್ಯಂ ಕಥಮಿತಿ ಶಂಕಾಪರಿಹಾರಾಯ ''ಜ್ಞಾನಂ ವಿಶುದ್ಧಂ'' ಇತ್ಯಾದ್ಯಭಿಹಿತಮಿತಿ । ಪರಬ್ರಹ್ಮಣಃ ಮುಕ್ತಿದಾತುರೇವ ಜೀವೇ ಕೃಪಯೈವ ಅತ್ರಾವಸ್ಥಾನಂ ನ ಜೀವತೌಲ್ಯೇನೇತಿ ತತ್ಪರಿಹಾರಃ । ಅನೇನ ಕ್ವ ಚಾಸ್ತೀತಿ ದಶಮೀ ಶಂಕಾ ಪರಿಹೃತಾ ಭವತಿ । ತತ್ಪ್ರಕಾರಸ್ಯ ಸ್ಫುಟಂ ಪ್ರದರ್ಶಿತತ್ವಾದಿತಿ ॥

❖❖❖

ಜಡಭರತನು ರಹೂಗಣ ರಾಜನಿಗೆ ಉಪದೇಶಿಸುತ್ತಾನೆ.

ಬಿಂಬನು 'ಜ್ಞಾನ' ಸರ್ವಜ್ಞ. 'ವಿಶುದ್ಧ' ಅಪ್ರಾಕೃತ, ಸರ್ವದೋಷ ರಹಿತ. 'ಪರಮ ಅರ್ಥ' ಸರ್ವೋತ್ತಮ ವಸ್ತು. 'ಏಕ' ಸ್ವಗತಭೇದ ರಹಿತ. 'ಸತ್ಯ' ಕಾಲ ದೇಶ ಪರಿಮಿತಿ ಇಲ್ಲದವನು, ನಿತ್ಯ. 'ಬ್ರಹ್ಮ' ಗುಣಪೂರ್ಣ 'ಪ್ರಶಾಂತ' ಆನಂದಮಯ 'ಭಗವತ್' ಶಬ್ದದಿಂದ ವಾಚ್ಯ. 'ವಾಸುದೇವ'ನೆಂದು ಜ್ಞಾನಿಗಳು ವರ್ಣಿಸುವರು.

'ಅನಂತರ' 'ನ ಬಹಿಃ' ಒಳಗೇ ಇರುವವನಲ್ಲ. ಹೊರಗೇ ಇರುವವನೂ ಅಲ್ಲ. 'ಪ್ರತ್ಯಕ್' ಜೀವರ ಸ್ವರೂಪದಲ್ಲಿ ಸದಾ ವ್ಯಾಪಿಸಿ ಇದ್ದು, ಜೀವನು ಕರ್ಮಬದ್ಧ ನಾಗಿ ಉಣುವ ವಿಷಯಗಳನ್ನು ಈಶನು ತಾನು ಸ್ವತಂತ್ರನಾಗಿ ನಿರ್ಲಿಪ್ತನಾಗಿ ಅನುಭವಿಸುತ್ತಾನೆ.

ಬಿಂಬನ ಈ ಸ್ವರೂಪ ಬಲು ರಹಸ್ಯವಾದರೂ ಗುರು ಅವಧೂತನು ಶಿಷ್ಯನಾದ ರಹೂಗಣರಾಜನಿಗೆ ಕರುಣೆಯಿಂದ ಹೇಳುತ್ತಿದ್ದಾನೆ.

'ಪ್ರತ್ಯಕ್' ಎಂದರೆ ಜೀವನೆಂದು ಪ್ರಸಿದ್ಧಿ ಇದೆ. ಆದರೆ ಬಿಂಬನಾಗಿ ಆಧಾರವಾಗಿರುವವನೆಂದು ಮುಖ್ಯ ಅರ್ಥ. ಏಕೆಂದರೆ, 'ಸರ್ವದಾ ಅನಾದಿ ಅನಂತಕಾಲಗಳಲ್ಲಿಯೂ ಎಂದೂ ಯಾವ ಕಾರಣದಿಂದಲೂ ಹೊರಗೆ ಹೋಗದೆ ಒಳಗೇ ಇರುವ ವಸ್ತು' ಎಂದು ಪ್ರತ್ಯಕ್‌ಶಬ್ದದ ಅರ್ಥ. ಅಂಥ ವಸ್ತುವು ಜೀವನ ಬಿಂಬನೆ. ಏಕೆಂದರೆ ಅವನು ಹೊರಗೆ ನಡೆದನೆಂದರೆ ಜೀವನ ಸ್ವರೂಪವೆ ಉಳಿಯುವುದಿಲ್ಲ.

ಜೀವನ ತಲೆಯಲ್ಲಿ ಬಿಂಬನ ತಲೆ ಇರುತ್ತದೆ. ಮುಖದಲ್ಲಿ ಮುಖ

ಇತ್ಯಾದಿಯಾಗಿ ಕ್ರಮವಾಗಿ ಜೀವನ ಸರ್ವಾವಯವದಲ್ಲಿಯೂ ಬಿಂಬನ ಅವಯವಗಳು ಇರುತ್ತವೆ. ಬಿಂಬನಿಗೆ ಸಮಾನಾಕಾರನಾಗಿ ಜೀವನಿರುತ್ತಾನೆ.

ಜೀವನ ಶರೀರ ಇಂದ್ರಿಯ ಮನಸುಗಳಲ್ಲಿರುವ ತನ್ನ ಸ್ವರೂಪಭೂತ ಶರೀರ ಇಂದ್ರಿಯ ಮನಸುಗಳಿಂದ ಬಿಂಬನು ವಿಷಯಗಳನ್ನು ಅನುಭವಿಸುತ್ತಾನೆ. ಆದರೆ, ಆನಂದಮಯನೇ ಆಗಿರುತ್ತಾನೆ.

ಇಂಥ 'ಪ್ರತ್ಯಕ್' ಬಿಂಬನ ಸನ್ನಿಧಾನ ಉಳ್ಳವನಾದ್ದರಿಂದ ಜೀವನು ಪ್ರತ್ಯಕ್ ಎಂದು ಪ್ರಸಿದ್ಧನಾಗಿದ್ದಾನೆ. 'ಆತ್ಮ' ಎಂದರೆ ಜೀವನೆ ಮುಖ್ಯ ಅರ್ಥವಾದರೂ ಈ 'ಆತ್ಮ' ಶರೀರದಲ್ಲಿರುವುದರಿಂದ ಶರೀರವೂ ಆತ್ಮ ಎಂದು ಕರೆಸಿಕೊಳ್ಳುವಂತೆಯೆ ಇದು.

ಹೀಗೆ 'ಪ್ರತ್ಯಕ್' ಎನಿಸಿ ಜೀವನಲ್ಲಿ ವ್ಯಾಪಿಸಿರುವ ಜೀವಬಿಂಬನಾದ ಪರಮಾತ್ಮನೇ ಪ್ರಕೃತ ರಹೂಗಣ ರಾಜನ ಪಲ್ಲಕ್ಕಿಯನ್ನು ಹೊರುತ್ತಿದ್ದಾನೆ. ಅವಧೂತನಲ್ಲ. ಹೀಗೆ ಅವಧೂತನು ಹೇಳಿದ ಮಾತಿನಿಂದ ರಾಜನು ಬಿಂಬನೆಲ್ಲಿದ್ದಾನೆ ಎಂಬುದನ್ನು ತಿಳಿದಂತಾಯಿತು.

'ಅಯ್ಯೊ ಅಣ್ಣ, ನಿಶ್ಚಯವಾಗಿಯೂ ಈ ಭಾರದ ಪಲ್ಲಕ್ಕಿಯನ್ನು ಹೊತ್ತು ನಿನಗೆ ತುಂಬ ಶ್ರಮವಾಗಿದೆ. ಬಲು ಹೊತ್ತು ಹೊತ್ತು ಬಲುದೂರ ನಡೆದಿರುವೆ!' ಎಂದು ವ್ಯಂಗ್ಯವಾಗಿ ರಾಜ ನುಡಿದಾಗ ಅವಧೂತ ನುಡಿದ—'ನಾನು ಪಲ್ಲಕ್ಕಿ ಹೊರುತ್ತಿಲ್ಲ. ಹೊತ್ತು ದಾರಿ ತುಳಿಯುತ್ತಲೂ ಇಲ್ಲ. ಎಲ್ಲ ಮಾಡುತ್ತಿರುವುದು ನನ್ನ ಬಿಂಬಮೂರ್ತಿ ಹರಿ!' ಎಂದು.

ರಾಜನಿಗೇನೂ ಅರ್ಥವಾಗಲಿಲ್ಲ 'ನಿನ್ನ ಬಿಂಬನು ಅಂಗುಷ್ಠಪ್ರಮಾಣನಾಗಿ ಹೃದಯದೊಳಗೇ ಇರುವನೆ? ಹಾಗಿದ್ದರೆ ಅವನು ಪಲ್ಲಕ್ಕಿ ಹೊರುತ್ತಿಲ್ಲ. ಹೊರಗೇ ಇರುವನೆಂದರೆ ಇನ್ನೂ ಸಂತೋಷ, ಅವನು ಹೊರುತ್ತಿಲ್ಲ ಎನ್ನುವುದು ಸ್ಪಷ್ಟ! ಇದರ ರಹಸ್ಯವೇನು ಹೇಳು'. ಇದು ರಾಜನ ಪ್ರಶ್ನೆ. ಇಂಥ ಬಿಂಬೋಪದೇಶಕ ಗುರು ಸಿಕ್ಕಿರುವಾಗ ಅವನಿಂದ ಈ ಪರಮ ರಹಸ್ಯವನ್ನು ತಿಳಿಯದಿರಬಾರದು ಎಂದು ಬಲು ಆದರದಿಂದ ಪ್ರಶ್ನೆ ಮಾಡುತ್ತಾನೆ.

ಅವಧೂತನು 'ನ ಅಂತರಂ ನ ಬಹಿಃ' ಒಳಗೇ ಒಂದುಕಡೆ ಇರುವವನೂ

ಅಲ್ಲ ಹೊರಗೇ ಎಲ್ಲೋ ಇರುವವನೂ ಅಲ್ಲ. ಒಳಗೆ ಜೀವಸ್ವರೂಪವನ್ನೆ ವ್ಯಾಪಿಸಿ ಸದಾ ನೆಲೆಸಿರು ತ್ತಾನೆ. ಅವನು ಬಿಂಬ' ಎನ್ನುತ್ತಾನೆ.

ಅವಸ್ಥಾತ್ರಯದಲ್ಲಿಯೂ ಜೀವನು ಉಣ್ಣುವುದನ್ನು ಬಿಂಬನೂ ಉಣ್ಣುತ್ತಾನೆ ಎಂದರೆ ಅವನು ಕೂಡ ಜೀವನಂತೆ ಬದ್ಧನೆ, ಜೀವನಿಗೆ ಹೇಗೆ ಮೋಕ್ಷ ಕೊಡಬಲ್ಲ? ಎಂದು ರಾಜ ಪ್ರಶ್ನೆ ಮಾಡಬಹುದೆಂದು 'ಜ್ಞಾನಂ ವಿಶುದ್ಧಂ' ಸರ್ವಜ್ಞನಾಗಿದ್ದಾನೆ. ಪ್ರಕೃತಿ ಸಂಬಂಧ ರಹಿತನಾಗಿದ್ದಾನೆ' ಎಂದು ಅವನ ಮಹಿಮೆಯನ್ನು ಹೇಳುವ ಮೂಲಕ ಅವನು ನಿತ್ಯಮುಕ್ತ, ಜೀವನಿಗೆ ಮೋಕ್ಷ ನೀಡಬಲ್ಲ, ಕೇವಲ ದಯೆಯಿಂದ ಜೀವನ ಮೋಕ್ಷಸಾಧನೆ ಮಾಡಿಸುತ್ತಾನೆ ಎನ್ನುತ್ತ ಅವನೆಲ್ಲಿದ್ದಾನೆ ಎಂದು ತಿಳಿಸುತ್ತಾನೆ, ಅವಧೂತ.

ಜೀವನೊಂದಿಗೇ ಶರೀರದಲ್ಲಿದ್ದರೂ ಈಶನು ಜೀವನಿಗೆ ಸಮನಲ್ಲ ಎನ್ನಲು 'ಪರಮಾರ್ಥ ಏಕ' ಎಂದು ಮುಂತಾಗಿಯೂ ಬಿಂಬನನ್ನು ವರ್ಣಿಸುತ್ತಾನೆ.

❖❖❖

–೩೨–

**ಗುರೂಪದೇಶದಿಂದಲೆ ಬಿಂಬಸ್ವರೂಪ ಜ್ಞಾನ ಲಭ್ಯ**

**ರಹೂಗಣೈತತ್ ತಪಸಾ ನ ಯಾತಿ**
**ನ ವಿದ್ಯಯಾ ನಿರ್ವಸನಾದ್ ಗೃಹಾದ್ವಾ ।**
**ನ ಛಂದಸಾ ನೋತ ಜಲಾಗ್ನಿ ಸೂರ್ಯೈರ್**
**ವಿನಾ ಮಹತ್ಪಾದರಜೋಽಭಿಷೇಕಂ ॥**

(ಭಾ.೫.೧೨.೧೨)

**ಏವಂ ಬಿಂಬರೂಪಸ್ಯ ಸ್ಥಿತಿಪ್ರಕಾರಮಭಿಧಾಯ ಏತತ್ ಮಯಾ ಅಭಿಹಿತಬಿಂಬಸ್ಯೈವಂ ಅವಸ್ಥಾನವೇದನಂ ತಪಆದಿನಾ ಕೇನಾಪಿ ಸಾಧನೇನ ನ ಲಭ್ಯಂ ಕಿಂತು ಬಿಂಬಜ್ಞಾನಿನಾಂ ಮಹತಾಂ ಸೇವಯಾ ಲಬ್ಧೇನ ತತ್ಪ್ರಸಾದೇನೈವ । ಸುದುರ್ಲಭತ್ವಾತ್ ಏತನ್ನ ಕ್ವಾಪಿ ಪ್ರಕಾಶ್ಯಂ। ತವ ತು ಜನ್ಮಾಂತರಾರ್ಜಿತ ಪುಣ್ಯವಶೇನ ಮಮ ಸಮಾಗಮಃ ತೇನ ಅಹಂ ತ್ವಯಿ ಕರುಣಯೈವ ಉಕ್ತವಾನ್ ಇತ್ಯಭಿಪ್ರೇತ್ಯಾಹ ॥ ರಹೂಗಣೇತಿ ॥ ಏತತ್ ಏವಂ ಮಯಾ ಕಥಿತಪ್ರಕಾರೇಣ ಬಿಂಬಾವಸ್ಥಾನವೇದನಂ ನ ಯಾತಿ ನ ಲಭ್ಯತೇ । ಛಂದಸಾ ವೇದಾಧ್ಯಯನೇನ ।**

ಜಲಾಗ್ನಿಸೂರ್ಯೈಃ ಭಾಗೀರಥ್ಯಾದಿನಿಷೇವಣೇನ ಅಗ್ನಿಹೋತ್ರಾದಿನಾ ಸೂರ್ಯ ಸೇವಯಾ ಚ। ಗೃಹಾತ್ ನಿರ್ವಸನಾತ್ ವನವಾಸಾತ್ ಸನ್ಯಾಸಾದ್ವಾ ॥

❖❖❖

ಜಡಭರತನು ರಹೂಗಣ ರಾಜನಿಗೆ ಹೇಳುತ್ತಾನೆ—

ಈ ಬಿಂಬನು ಹೇಗೆ ಜೀವರೊಳಗೆ ನಿಯಾಮಕನಾಗಿ ನೆಲೆಸಿರುವನೆಂಬುದನ್ನು ಕಾಯಕ್ಲೇಶರೂಪವಾದ ತಪಸಿನಿಂದ ತಿಳಿಯಲಾಗದು. ಗುರುಗಳ ಅನುಗ್ರಹವಿಲ್ಲದೆ ಪೌರುಷೇಯ ಅಪೌರುಷೇಯ ಗ್ರಂಥಗಳಿಂದಾಗಲಿ ಸನ್ಯಾಸಾಶ್ರಮದಿಂದಾಗಲಿ, ಗೃಹಸ್ಥಾಶ್ರಮದಿಂದಲಾಗಲಿ, ಜಲ–ಅಗ್ನಿ ಸೂರ್ಯ ತೀರ್ಥಯಾತ್ರೆ, ಅಗ್ನಿಹೋತ್ರ ಸೂರ್ಯನಮಸ್ಕಾರಗಳಿಂದಾಗಲಿ ತಿಳಿಯಲಾಗದು. ಬಿಂಬೋಪದೇಶಕ ಗುರುಗಳ ಪಾದಧೂಳಿಯ ಅಭಿಷೇಕವಾಗಬೇಕು. ಅದೊಂದಿಲ್ಲದಿದ್ದರೆ ಯಾವುದರಿಂದಲೂ ಜ್ಞಾನ ಬಾರದು.

ರಾಜನೆ, ಬಿಂಬಜ್ಞಾನ ಬಲು ದುರ್ಲಭ. ಯಾರೆಂದರವರಿಗೆ ನೀಡುವಂಥದ್ದಲ್ಲ. ಏಸುಜನುಮಗಳ ಪುಣ್ಯದಿಂದಲೊ ನಿನಗೆ ನನ್ನ ದರ್ಶನವಾಗಿದೆ. ಅದರಿಂದ ಕರುಣೆಯಿಂದಲೆ ನಾನೂ ನಿನಗೆ ಉಪದೇಶಿಸಿದ್ದೇನೆ.

❖❖❖

–೩೨೩–

## ಬಿಂಬನು ಪೂರ್ಣಾನಂದನಾದ್ದರಿಂದ ಮೋಕ್ಷ ನೀಡುವನು

ತ್ವಂ ಪ್ರತ್ಯಗಾತ್ಮನಿ ಸದಾ ಭಗವತ್ಯನಂತೇ
ಆನಂದಮಾತ್ರ ಉಪಪನ್ನಸಮಸ್ತಶಕ್ತೌ ।
ಭಕ್ತಿಂ ವಿಧಾಯ ಪರಮಾಂ ಶನಕೈರವಿದ್ಯಾ-
ಗ್ರಂಥಿಂ ವಿಭೇತ್ಸ್ಯಸಿ ಮಮಾಹಮಿತಿ ಪ್ರರೂಢಾಂ ॥

(ಭಾ.೪.೧೧.೬೦)

ಬಿಂಬಜ್ಞಾನಮೇವ ಸಂಸಾರಾತ್ ಮೋಚಕಂ ತೇನ ವಿನಾ ಮುಕ್ತಿಃ ಸರ್ವಥಾ ನ ಭವತಿ ತತಃ ತದವಶ್ಯಂ ಗುರುಸೇವಾದಿನಾ ಸಂಪಾದ್ಯಂ ತಚ್ಚ ಭಕ್ತಿದ್ವಾರಾ ಮೋಚಕಂ ಇತ್ಯಾಶಯೇನಾಹ ॥ ತ್ವಮಿತಿ ॥ ಏವಮನಾದ್ಯನಂತಕಾಲೇಷು

ಜೀವಾಂತರೇವ ತದನುರೂಪಾಣ್ಯೇವ ಕರ್ಮಾಣಿ ಕುರ್ವತಃ ತದ್ಭೋಗ್ಯ ಭೋಗಾನೇವ ಭುಂಜತಃ ಕಥಂ ಸಂಸಾರಮೋಚಕತ್ವಮಿತಿ ಶಂಕಾನಿರಾಸಾಯ ಉಕ್ತಂ। ಪ್ರತ್ಯಕ್ ಜೀವಾಂತರೇವ ಅವಸ್ಥಿತರೂಪೇಣ ತದನುರೂಪತಯೈವ ಆತ್ಮನಿ ಆದಾನಭೋಗಾದಿ ಕರ್ತರ್ಯಪಿ। ಆನಂದಮಾತ್ರೇ ಸಾರಸುಖಾನುಭವ ಸ್ವರೂಪೇ। ಉಪಪನ್ನಾಃ ಯುಕ್ತಾಃ ಸಮಸ್ತಾಃ ಶಕ್ತಯಃ ಯಸ್ಮಿನ್ ತಸ್ಮಿನ್ನಿತಿ। ಶನಕೈರನಾಯಾಸೇನ ವಿಭೇತ್ಸ್ಯಸಿ ಭೇದಯಸಿ ॥ ೩೨೩ ॥

❖❖❖

ಸ್ವಾಯಂಭುವಮನು ಮೊಮ್ಮಗನಾದ ಧ್ರುವನಿಗೆ ಉಪದೇಶ ಮಾಡುತ್ತಾನೆ—

ಬಿಂಬಜ್ಞಾನವೇ ಸಂಸಾರದಿಂದ ಬಿಡುಗಡೆ ನೀಡುತ್ತ ಮೋಕ್ಷಕ್ಕೆ ಸಾಧನವಾಗುವುದು. ಬಿಂಬಜ್ಞಾನವಿಲ್ಲದೆ ಮುಕ್ತಿ ಇಲ್ಲ. ಆದರಿಂದ ತಪ್ಪದೆ ಅದನ್ನು ಸಂಪಾದಿಸಬೇಕು. ಅದು ಭಕ್ತಿದ್ವಾರಾ ಮುಕ್ತಿಗೆ ಕಾರಣ.

ಇಲ್ಲಿ ಒಂದು ಪ್ರಶ್ನೆ ಬರಬಹುದು. ಬಿಂಬನು ಜೀವನಂತೆ ಆಕಾರ ಉಳ್ಳವನು. ಜೀವನಲ್ಲಿಯೇ ಅನಾದಿ ಅನಂತಕಾಲದವರೆಗೂ ಇರುತ್ತಾನೆ. ಅವನಿಂದ ಅವನಿಗೆ ಯೋಗ್ಯವಾದ ಕರ್ಮ ಮಾಡಿಸುತ್ತ ಅವನ ಭೋಗ್ಯವಾದ ಭೋಗಗಳನ್ನು ಭೋಗಿಸುವ ಬಿಂಬನು ಅವನಿಗೆ ಹೇಗೆ ಮೋಕ್ಷದಾತನಾಗುವನೆಂದು? ಇದಕ್ಕೆ ಸಮಾಧಾನ—

ಬಿಂಬನು ಜೀವಾಕಾರ, ಜೀವನೊಂದಿಗೇ ಇರುವವನು, ಆ ಒಂದು ರೂಪದಲ್ಲಿ ಜೀವಭೋಗ್ಯ ಭೋಗವನ್ನನುಭವಿಸುವವನಾಗಿ 'ಪ್ರತ್ಯಕ್' ಜೀವನೊಳಗೇ ಇದ್ದರೂ 'ಆತ್ಮ'ನಾಗಿದ್ದಾನೆ. ಆದಾನಕರ್ತ, ಅಂದರೆ ಜೀವನನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ಸ್ವಾಮಿ, ನಿಯಾಮಕ, ಅವನಿಗೆ ಭೋಗಗಳನ್ನು ನೀಡುವವನು 'ಆನಂದಮಾತ್ರ' ಪೂರ್ಣಾನಂದ, ಸರ್ವಶಕ್ತನಾಗಿರುವನು. ಆದರಿಂದ ಜೀವನೊಂದಿಗೇ ಇದ್ದರೂ ಜೀವನಂತೆ ಕರ್ಮಲೇಪ ಇಲ್ಲದವನು. ಅಂಥ ಬಿಂಬನಲ್ಲಿ, ಸದಾ ಭಕ್ತಿ ಮಾಡಬೇಕು. ಭಕ್ತಿಯಿಂದ ಕ್ರಮೇಣ ಅಜ್ಞಾನ ಜನ್ಯವಾದ 'ನಾನು ನನ್ನದೆಂ'ಬ ದುರಭಿಮಾನದ ದೃಢ ಬಂಧನವನ್ನು ಕಿತ್ತೊಗೆಯಬೇಕು, ಮುಕ್ತನಾಗಬೇಕು.

❖❖❖

# ೨೨. ಬಿಂಬೋಪಾಸನ (ಆತ್ಮಸಮರ್ಪಣ) ಪ್ರಕರಣ

## ಪ್ರಕರಣ ಸಾರಾಂಶ

ಬಿಂಬರೂಪದ ಉಪಾಸನೆಯೇ ಆತ್ಮಸಮರ್ಪಣೆ, ಬಾಹ್ಯರೂಪೋ ಪಾಸನೆಯೆ ದಾಸ್ಯ. ಇವೆರಡೂ ಭಾಗವತಧರ್ಮಗಳೆ,

ಆತ್ಮಸಮರ್ಪಣೆಯು ನಾಲ್ಕು ಬಗೆ. ಆತ್ಮಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕ ಪ್ರೀತಿಯೆ ಭಕ್ತಿ ಎಂದು ನ್ಯಾಯಸುಧೆಯಲ್ಲಿ ಹೇಳಿದಂತೆ ಜೀವಸ್ವರೂಪ, ಜೀವಸಂಬಂಧಿ ಯಾದ ಧನಕನಕಾದಿ ದ್ರವ್ಯ, ಜ್ಞಾನಾದಿಗುಣ, ಶ್ರವಣಾದಿಕರ್ಮ– ಹೀಗೆ ನಾಲ್ಕನ್ನು ಸಮರ್ಪಣೆ ಮಾಡುವುದು ನಾಲ್ಕು ಬಗೆ ಆತ್ಮ ಸಮರ್ಪಣೆಯಾಗುವುದು. ಕುಚೇಲನಂತೆ ಹಿಡಿ ಅವಲಕ್ಕಿಯನ್ನೂ ಕೂಡ ಅರ್ಪಿಸಬೇಕು. ಕಾಯೇನ ವಾಚಾ ಮನಸೇಂದ್ರಿಯೈರ್ವಾ' ಎನ್ನುತ್ತ ಕ್ರಿಯಾ ಸಮರ್ಪಣೆ ಮಾಡಬೇಕು. ಜ್ಞಾನಭಕ್ತ್ಯಾದಿಗುಣ ವನ್ನೂ ಅರ್ಪಿಸಬೇಕು. ಬೇರೆ ಎಲ್ಲ ಭಾಗವತಧರ್ಮಾನುಷ್ಠಾನಗಳ ಫಲರೂಪವಾಗಿದ್ದು ಎಲ್ಲಕ್ಕಿಂತ ಶ್ರೇಷ್ಠವಾಗಿರುವ ಭಾಗವತ ಧರ್ಮ ಇದು. ಆತ್ಮಸಮರ್ಪಣೆ.

ಅನ್ಯದೇವತಾ ಪೂಜೆಗಳನ್ನು ಕೂಡ ಅವರ ಅಂತರ್ಯಾಮಿಗೇ ಸಮರ್ಪಿಸಬೇಕು. ಆಗ ಆ ದೇವತೆಗಳಿಗೂ ಪೂಜೆ ಸಲ್ಲುವುದು. ಏಕೆಂದರೆ ಅನ್ಯದೇವತೆಗಳನ್ನು ಅಂಗದೇವತೆಗಳೆಂದೇ ಪೂಜಿಸ ಬೇಕುತಾನೆ? ಹರಿಪೂಜೆಯಲ್ಲಿ ಅಧಿಷ್ಠಾನವಾಗಿರುವುದೇ ಅವರಿಗೆ ಪೂಜೆ. ಬೇರೆ ಪೂಜೆ ಇಲ್ಲ.

❖❖❖

### ೩.೨೪

**ಬಹಿರ್ದಾಸ್ಯವೂ ಆತ್ಮಸಮರ್ಪಣೆಯೆ**

**ಯಸ್ಮಾತ್ ಪ್ರಿಯಾಪ್ರಿಯ ವಿಯೋಗ ಸುಯೋಗ ಜನ್ಮ-**
**ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ ।**

**ದುಃಖೌಷಧಂ ತದಪಿ ದುಃಖಮತದ್ಧಿಯಾಹಂ**
**ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಂ ॥**

(ಭಾ.೭.೯.೧೭)

ಶ್ರೀರಂಗನಾಥಾಯ ನಮಃ ॥ ಏವಂ ಬಿಂಬಂ ಉಪದಿಶ್ಯ ತದುಪಾಸನಾಪ್ರಕಾರಂ ದರ್ಶಯತಿ। ಅತ್ರ ತದೀಯೋऽಹಮಿತ್ಯನುಸಂಧಾನ ರೂಪಂ ದಾಸ್ಯಂ ದ್ವಿವಿಧಂ। ಬಹಿರಂತಶ್ಚೇತಿ। ತತ್ರ ಬಿಂಬಾತಿರಿಕ್ತಭಗವದ್ರೂಪ ವಿಶೇಷವಿಷಯಕಮಾದ್ಯಂ। ದ್ವಿತೀಯಂ ತು ಬಿಂಬವಿಷಯಕಂ। ತತ್ತ್ವನು ಸಂಧಾನವಿಶೇಷಾತ್ಮಕತಯಾ ವಾ ಸಾಕ್ಷಾನ್ಮುಕ್ತಿಸಾಧನತಯಾ ವಾ ಬಾಹ್ಯಾದ್ವೈಶೇಷ್ಯ ಜ್ಞಾಪನಾಯ ಕುರುಪಾಂಡವನ್ಯಾಯೇನ ತತಃ ಪೃಥಕ್ಕೃತ್ಯ ಪರಿಗಣಿತಮಿತ್ಯ ದೋಷಃ। ಏತದಪಿ ದ್ವಿವಿಧಂ। ಆತ್ಮನೋ ಜೀವಸ್ಯ ಸಮರ್ಪಣಂ। ಆತ್ಮನಃ ಆತ್ಮೀಯಸ್ಯ ಸಮರ್ಪಣಂ ಚೇತಿ। ಸ್ವಶಬ್ದಪರ್ಯಾಯಾತ್ಮಶಬ್ದಸ್ಯೋ ಭಯಬೋಧಕತ್ವಾತ್। ದ್ವಿತೀಯಮಪಿ ತ್ರಿವಿಧಂ। ಇಷ್ಟದ್ರವ್ಯ ಸಮರ್ಪಣಂ। ಕ್ರಿಯಾಸಮರ್ಪಣಂ। ಗುಣಸಮರ್ಪಣಂ ಚೇತಿ। ಏವಂ ಚತುರ್ವಿಧಮಪ್ಯಾತ್ಮ ಸಮರ್ಪಣಂ ಬಿಂಬೋಪಾಸನಮಿತಿ ಗೀಯತೇ। ಏವಂ ದ್ವಿವಿಧೇ ದಾಸ್ಯೇ ಆದ್ಯಸ್ಯ ದ್ವಿತೀಯೇ ಬಿಂಬೋಪಾಸನರೂಪೇ ಸ್ನಾನಸ್ಯ ಭೋಜನೇ ಇವೋಪಕಾರಕತಯಾಂ ಗತ್ವಮಭಿಪ್ರೇತ್ಯಾದಾವಾದ್ಯಂ ದರ್ಶಯತಿ ॥ ಯಸ್ಮಾದಿತಿ ॥ ಯಸ್ಮಾತ್ಕಾರಣಾ ದಹಂ ಸುರನರತಿರ್ಯಗಾದಿಷು ಸಕಲಯೋನಿಷು। ಪ್ರಿಯವಿಯೋಗಾ ಪ್ರಿಯಸುಯೋಗಾಭ್ಯಾಂ ಉತ್ಪನ್ನೇನ ಶೋಕಾಗ್ನಿನಾ। ದಹ್ಯಮಾನಃ ಸನ್। ತದ್ ದುಃಖನಿವೃತ್ತಯೇ। ಅತದ್ ದುಃಖೌಷಧಾದನ್ಯದೇವ ದುಃಖೌಷಧಮಿತಿ ಬುದ್ಧ್ಯಾ। ಭ್ರಮಾಮಿ। ಯದ್ಯತ್ಕರ್ಮ ಕರೋಮೀತಿ ಯಾವತ್। ತದಪಿ ತತ್ಸರ್ವಮಪಿ। ದುಃಖಂ ದುಃಖಪ್ರದಮೇವ ಜಾತಮಿತಿ। ಪುನಃ ಪುನರೇವ ಭ್ರಮಾಮಿ। ಏವಂ ಭ್ರಮಮಾಣಸ್ಯ ಮುಖ್ಯತೋ ದುಃಖನಿವೃತ್ತಿಸಾಧನತಯಾ ತವ ಸಕಲದಾಸ್ಯೈಃ ನಿರ್ಣೀತಂ ಯೋಗಂ ಮುಖ್ಯತೋ ಭಕ್ತ್ಯುಪಾಯಭೂತಂ ತವ ಯದ್ದಾಸ್ಯಂ ಅಂತರ್ದಾಸ್ಯಂ ತಸ್ಯ ಯೋಗಂ ಅಂಗಭೂತಂ ಬಾಹ್ಯದಾಸ್ಯಂ ವದ। ದುಃಖನಿವೃತ್ತಿಸಾಧನಂ ಅಂತರ್ದಾಸ್ಯಮೇವ ತದೇವ ವದ। ತತ್ರಾಧಿ ಕಾರಸಿದ್ಧಯೇ ಬಾಹ್ಯಮಪಿ ದೇಹೀತಿ। ಅನೇನ ಬಹಿರ್ದಾಸತ್ವರೂಪಂ ದಾಸ್ಯಂ ದರ್ಶಿತಂ ಭವತಿ ॥

❖❖❖

'ನಾನು ನನ್ನದೆಲ್ಲವೂ ಅವನ ಅಧೀನ' ಎನ್ನುವ ಅನುಸಂಧಾನ ರೂಪವಾದ

# ೨೨. ಬಿಂಬೋಪಾಸನ (ಆತ್ಮಸಮರ್ಪಣ) ಪ್ರಕರಣ

## ಪ್ರಕರಣ ಸಾರಾಂಶ

ಬಿಂಬರೂಪದ ಉಪಾಸನೆಯೇ ಆತ್ಮಸಮರ್ಪಣೆ, ಬಾಹ್ಯರೂಪೋಪಾಸನೆಯೆ ದಾಸ್ಯ. ಇವೆರಡೂ ಭಾಗವತಧರ್ಮಗಳೆ,

ಆತ್ಮಸಮರ್ಪಣೆಯು ನಾಲ್ಕು ಬಗೆ. ಆತ್ಮಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕ ಪ್ರೀತಿಯೆ ಭಕ್ತಿ ಎಂದು ನ್ಯಾಯಸುಧೆಯಲ್ಲಿ ಹೇಳಿದಂತೆ ಜೀವಸ್ವರೂಪ, ಜೀವಸಂಬಂಧಿಯಾದ ಧನಕನಕಾದಿ ದ್ರವ್ಯ, ಜ್ಞಾನಾದಿಗುಣ, ಶ್ರವಣಾದಿಕರ್ಮ–ಹೀಗೆ ನಾಲ್ಕನ್ನು ಸಮರ್ಪಣೆ ಮಾಡುವುದು ನಾಲ್ಕು ಬಗೆ ಆತ್ಮಸಮರ್ಪಣೆಯಾಗುವುದು. ಕುಚೇಲನಂತೆ ಹಿಡಿ ಅವಲಕ್ಕಿಯನ್ನೂ ಕೂಡ ಅರ್ಪಿಸಬೇಕು. ಕಾಯೇನ ವಾಚಾ ಮನಸೇಂದ್ರಿಯೈರ್ವಾ' ಎನ್ನುತ್ತ ಕ್ರಿಯಾ ಸಮರ್ಪಣೆ ಮಾಡಬೇಕು. ಜ್ಞಾನಭಕ್ತ್ಯಾದಿಗುಣವನ್ನೂ ಅರ್ಪಿಸಬೇಕು. ಬೇರೆ ಎಲ್ಲ ಭಾಗವತಧರ್ಮಾನುಷ್ಠಾನಗಳ ಫಲರೂಪವಾಗಿದ್ದು ಎಲ್ಲಕ್ಕಿಂತ ಶ್ರೇಷ್ಠವಾಗಿರುವ ಭಾಗವತ ಧರ್ಮ ಇದು. ಆತ್ಮಸಮರ್ಪಣೆ.

ಅನ್ಯದೇವತಾ ಪೂಜೆಗಳನ್ನು ಕೂಡ ಅವರ ಅಂತರ್ಯಾಮಿಗೇ ಸಮರ್ಪಿಸಬೇಕು. ಆಗ ಆ ದೇವತೆಗಳಿಗೂ ಪೂಜೆ ಸಲ್ಲುವುದು. ಏಕೆಂದರೆ ಅನ್ಯದೇವತೆಗಳನ್ನು ಅಂಗದೇವತೆಗಳೆಂದೇ ಪೂಜಿಸಬೇಕುತಾನೆ? ಹರಿಪೂಜೆಯಲ್ಲಿ ಅಧಿಷ್ಠಾನವಾಗಿರುವುದೇ ಅವರಿಗೆ ಪೂಜೆ. ಬೇರೆ ಪೂಜೆ ಇಲ್ಲ.

❖❖❖

### ೩.೨೪

**ಬಹಿರ್ದಾಸ್ಯವೂ ಆತ್ಮಸಮರ್ಪಣೆಯೆ**

**ಯಸ್ಮಾತ್ ಪ್ರಿಯಾಪ್ರಿಯ ವಿಯೋಗ ಸುಯೋಗ ಜನ್ಮ-**
**ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ ।**

**ದುಃಖೌಷಧಂ ತದಪಿ ದುಃಖಮತದ್ಧಿಯಾಹಂ**
**ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಂ ॥**

(ಭಾ.೭.೯.೧೭)

ಶ್ರೀರಂಗನಾಥಾಯ ನಮಃ ॥ ಏವಂ ಬಿಂಬಂ ಉಪದಿಶ್ಯ ತದುಪಾಸನಾಪ್ರಕಾರಂ ದರ್ಶಯತಿ । ಅತ್ರ ತದೀಯೋऽಹಮಿತ್ಯನುಸಂಧಾನ ರೂಪಂ ದಾಸ್ಯಂ ದ್ವಿವಿಧಂ । ಬಹಿರಂತಶ್ಚೇತಿ । ತತ್ರ ಬಿಂಬಾತಿರಿಕ್ತಭಗವದ್ರೂಪ ವಿಶೇಷವಿಷಯಕಮಾದ್ಯಂ । ದ್ವಿತೀಯಂ ತು ಬಿಂಬವಿಷಯಕಂ । ತತ್ತ್ವನು ಸಂಧಾನವಿಶೇಷಾತ್ಮಕತಯಾ ವಾ ಸಾಕ್ಷಾನ್ಮುಕ್ತಿಸಾಧನತಯಾ ವಾ ಬಾಹ್ಯಾದ್ವೈಶೇಷ್ಯ ಜ್ಞಾಪನಾಯ ಕುರುಪಾಂಡವನ್ಯಾಯೇನ ತತಃ ಪೃಥಕ್ಕೃತ್ಯ ಪರಿಗಣಿತಮಿತ್ಯ ದೋಷಃ । ಏತದಪಿ ದ್ವಿವಿಧಂ । ಆತ್ಮನೋ ಜೀವಸ್ಯ ಸಮರ್ಪಣಂ । ಆತ್ಮನಃ ಆತ್ಮೀಯಸ್ಯ ಸಮರ್ಪಣಂ ಚೇತಿ । ಸ್ವಶಬ್ದಪರ್ಯಾಯಾತ್ಮಶಬ್ದಸ್ಯೋ ಭಯಬೋಧಕತ್ವಾತ್ । ದ್ವಿತೀಯಮಪಿ ತ್ರಿವಿಧಂ । ಇಷ್ಟದ್ರವ್ಯ ಸಮರ್ಪಣಂ । ಕ್ರಿಯಾಸಮರ್ಪಣಂ । ಗುಣಸಮರ್ಪಣಂ ಚೇತಿ । ಏವಂ ಚತುರ್ವಿಧಮಪ್ಯಾತ್ಮ ಸಮರ್ಪಣಂ ಬಿಂಬೋಪಾಸನಮಿತಿ ಗೀಯತೇ । ಏವಂ ದ್ವಿವಿಧೇ ದಾಸ್ಯೇ ಆದ್ಯಸ್ಯ ದ್ವಿತೀಯೇ ಬಿಂಬೋಪಾಸನರೂಪೇ ಸ್ನಾನಸ್ಯ ಭೋಜನೇ ಇವೋಪಕಾರಕತಯಾಂ ಗತ್ವಮಭಿಪ್ರೇತ್ಯಾದಾವಾದ್ಯಂ ದರ್ಶಯತಿ ॥ ಯಸ್ಮಾದಿತಿ ॥ ಯಸ್ಮಾತ್ಕಾರಣಾ ದಹಂ ಸುರನರತಿರ್ಯಗಾದಿಷು ಸಕಲಯೋನಿಷು । ಪ್ರಿಯವಿಯೋಗಾ ಪ್ರಿಯಸುಯೋಗಾಭ್ಯಾಂ ಉತ್ಪನ್ನೇನ ಶೋಕಾಗ್ನಿನಾ । ದಹ್ಯಮಾನಃ ಸನ್ । ತದ್ ದುಃಖನಿವೃತ್ತಯೇ । ಅತದ್ ದುಃಖೌಷಧಾದನ್ಯದೇವ ದುಃಖೌಷಧಮಿತಿ ಬುದ್ಧ್ವಾ । ಭ್ರಮಾಮಿ । ಯದ್ಯತ್ಕರ್ಮ ಕರೋಮೀತಿ ಯಾವತ್ । ತದಪಿ ತತ್ಸರ್ವಮಪಿ । ದುಃಖಂ ದುಃಖಪ್ರದಮೇವ ಜಾತಮಿತಿ । ಪುನಃ ಪುನರೇವ ಭ್ರಮಾಮಿ । ಏವಂ ಭ್ರಮಮಾಣಸ್ಯ ಮುಖ್ಯತೋ ದುಃಖನಿವೃತ್ತಿಸಾಧನತಯಾ ತವ ಸಕಲದಾಸ್ಯೈಃ ನಿರ್ಣೀತಂ ಯೋಗಂ ಮುಖ್ಯತೋ ಭಕ್ತ್ಯುಪಾಯಭೂತಂ ತವ ಯದ್ದಾಸ್ಯಂ ಅಂತರ್ದಾಸ್ಯಂ ತಸ್ಯ ಯೋಗಂ ಅಂಗಭೂತಂ ಬಾಹ್ಯದಾಸ್ಯಂ ವದ । ದುಃಖನಿವೃತ್ತಿಸಾಧನಂ ಅಂತರ್ದಾಸ್ಯಮೇವ ತದೇವ ವದ । ತತ್ರಾಧಿ ಕಾರಸಿದ್ಧಯೇ ಬಾಹ್ಯಮಪಿ ದೇಹೀತಿ । ಅನೇನ ಬಹಿರ್ದಾಸತ್ವರೂಪಂ ದಾಸ್ಯಂ ದರ್ಶಿತಂ ಭವತಿ ॥

❖❖❖

'ನಾನು ನನ್ನದೆಲ್ಲವೂ ಅವನ ಅಧೀನ' ಎನ್ನುವ ಅನುಸಂಧಾನ ರೂಪವಾದ

ದಾಸ್ಯವು ಆತ್ಮಸರ್ಪಣವೆ. ಆತ್ಮನಿವೇದನವೆ. ಆತ್ಮನಿಗೆ ಅಂದರೆ 'ಪರಮಾತ್ಮ'ನಿಗೆ ತನ್ನನ್ನೂ ತನ್ನದೆಲ್ಲವನ್ನೂ ಅರ್ಪಿಸಿಕೊಳ್ಳುವುದು. ಆದರೆ ಬಿಂಬನಿಗೆ ಅರ್ಪಿಸಿಕೊಳ್ಳುವುದರಲ್ಲಿ, ಅನುಸಂಧಾನ ವಿಶೇಷವಿದೆ, 'ನಾನು ಮುಕ್ತ ನಾದಾಗಲೂ ಅಂತರ್ಯಾಮಿಯಾಗಿರುವ ಬಿಂಬನಾಗಿರುವ ಈ ಹರಿಗೆ ಅಧೀನನೇ' ಎನ್ನುವ ಅನುಸಂಧಾನ. ಈ ವಿಶೇಷ ಅನುಸಂಧಾನವು ನೇರವಾಗಿ ಮೋಕ್ಷಕ್ಕೆ ಸಾಧನ.

ರಾಮಕೃಷ್ಣ ನರಸಿಂಹಾದಿ ಬಾಹ್ಯರೂಪಗಳಿಗೆ 'ನಾನು ಅಧೀನ' ಎನ್ನುವ ದಾಸ್ಯದ ಅನುಸಂಧಾನಕ್ಕಿಂತ ಬೇರೆಯಾಗಿ 'ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ' ಎಂದು 'ಆತ್ಮನಿವೇದನ' ಶಬ್ದದಿಂದ ಕರೆಯುವುದು ಈ ವಿಶೇಷವನ್ನು ತಿಳಿಸುವುದಕ್ಕಾಗಿ. ಪಾಂಡವರು ಕೂಡ 'ಕೌರವರೆ' ಕುರುವಂಶದವರೆ, ಆದರೆ 'ಪಾಂಡುಪುತ್ರ'ರೆನ್ನುವ ವಿಶೇಷವನ್ನು ತಿಳಿಸುವುದಕ್ಕಾಗಿ. 'ಸಂತಾನ ಬೀಜಂ ಕುರು ಪಾಂಡವಾನಾಂ' ಎಂದು 'ಕುರು' 'ಪಾಂಡವ'ರನ್ನು ಬೇರೆಬೇರೆ ಶಬ್ದದಿಂದ ಕರೆಯುತ್ತಾರೆ. ಈ 'ಕುರುಪಾಂಡವ' ನ್ಯಾಯಾನುಸಾರ, ಬಿಂಬೋಪಾಸನವನ್ನು ಸಾಮಾನ್ಯ ಆತ್ಮಸಮರ್ಪಣಕ್ಕಿಂತ ಬೇರೆಯಾಗಿ ಕರೆಯುತ್ತಾರೆ. ಅದು ಆತ್ಮಸಮರ್ಪಣವೆ.

ಆತ್ಮಸಮರ್ಪಣವು ಎರಡು ವಿಧ. ಆತ್ಮನ ಜೀವನ ಸಮರ್ಪಣೆ ಮತ್ತು ಆತ್ಮೀಯ ವಸ್ತುವಿನ ಸಮರ್ಪಣೆ ಎಂದು. ಆತ್ಮೀಯ ವಸ್ತುವು ದ್ರವ್ಯಗುಣ ಕರ್ಮಗಳೆಂದು ಮೂರು ಬಗೆ ಇರುವುದರಿಂದ ಆತ್ಮೀಯಸಮರ್ಪಣವು ಮೂರು ವಿಧ. ಹೀಗೆ ಎರಡು ಬಗೆಯಾದ ಆತ್ಮಸಮರ್ಪಣದಲ್ಲಿ ಮೊದಲನೆಯ ದಾದ ಬಾಹ್ಯರೂಪದಾಸ್ಯವು ಎರಡನೆಯದಾದ ಬಿಂಬೋಪಾಸನಕ್ಕೆ ಸಹಕಾರಿ ಯಾಗಿದೆ. ಭೋಜನಕ್ಕೆ ಮುಂಚಿತದಾಗಿ ಮಾಡುವ ಸ್ನಾನವು ಭೋಜನಕ್ಕೆ ಸಹಕಾರಿಯಾಗುವಂತೆ, ಸ್ನಾನ ಮಾಡಿ ಭೋಜನ ಮಾಡಿದರೇ ಭೋಜನವು ಯಜ್ಞವೆನಿಸಿ ಫಲಪ್ರದವಾಗುವುದು. ಹಾಗೇ ಬಾಹ್ಯಭಗವದ್ರೂಪಗಳ ದಾಸ್ಯವನ್ನು ಅನುಸಂಧಾನ ಮಾಡಿ, ಬಿಂಬರೂಪ ದಾಸ್ಯದ ಅನುಸಂಧಾನ ಮಾಡಿದರೇ ಬಿಂಬಾನುಸಂಧಾನವು ಮುಕ್ತಿಫಲಪ್ರದವಾಗುವುದು.

ಬಹಿರ್ದಾಸ್ಯವನ್ನು ಭಾಗವತವು ಪ್ರಹ್ಲಾದನವಚನದಿಂದ ತಿಳಿಸುತ್ತಿದೆ—

❖❖❖

**ಪ್ರಹ್ಲಾದನು ಶ್ರೀಲಕ್ಷ್ಮೀನೃಸಿಂಹನಲ್ಲಿ ಕೇಳಿಕೊಳ್ಳುತ್ತಾನೆ—**

**ಶ್ರೀಹರಿ, ನಾನು ಎಲ್ಲ ಯೋನಿಗಳಲ್ಲಿ ಹುಟ್ಟಿದಾಗಲೂ ಪ್ರಿಯಜನರ ವಿಯೋಗ ಅಪ್ರಿಯರ ಸುಯೋಗ, ಬೇಕಾದವರು ದೂರವಾಗುವುದು ಬೇಡವಾದವರು ಬಂದೊದಗುವುದು. ಇವುಗಳಿಂದ ಉಂಟಾಗುವ ಶೋಕಾಗ್ನಿಯಿಂದ ಬೆಂದು, ದುಃಖನಿವಾರಕವನ್ನು ತಿಳಿಯದೆ ದುಃಖಹೇತುವನ್ನು ದುಃಖ ನಿವಾರಕವೆಂದು ಭ್ರಮಿಸುತ್ತೇನೆ. ಅದು ದುಃಖಹೇತುವೆ ಆಗಿರುತ್ತದೆ. ಪೂರ್ಣಗುಣನಾದ ಶ್ರೀನೃಸಿಂಹನೆ, ಮುಖ್ಯವಾಗಿ ಎಲ್ಲ ದುಃಖ ನಿವಾರಕವಾದ ಔಷಧವು, ನಿನ್ನ ಪರಮಭಕ್ತಿಗೆ ಉಪಾಯವಾಗಿರುವ ದಾಸ್ಯ, ಅಂತರ್ದಾಸ್ಯ. ಮೊದಲಿಗೆ, ಅದಕ್ಕೆ ಅಂಗವಾದ ಸಹಕಾರಿಯಾದ ಬಾಹ್ಯದಾಸ್ಯವನ್ನು ಉಪದೇಶಿಸು.**

ಸಕಲ ದುಃಖ ನಿವಾರಕವು ನಿನ್ನ ಅಂತರ್ದಾಸ್ಯವೆ. ಅದನ್ನು ಅನುಷ್ಠಾನ ಮಾಡುವ ಯೋಗ್ಯತೆ ಪ್ರಾಪ್ತವಾಗುವುದಕ್ಕೆ ನಿನ್ನ ಬಹಿರ್ದಾಸ್ಯವನ್ನು ನನಗೆ ಉಪದೇಶಿಸು.

ಪ್ರಹ್ಲಾದನು ಅಂತರ್ದಾಸ್ಯವನ್ನು ಅನುಷ್ಠಾನ ಮಾಡಿದವನೆ, ಇನ್ನೂ ಮಾಡಿಸು, ಬೇರೆ ಮುಮುಕ್ಷುಗಳಿಂದಲೂ ಮಾಡಿಸು ಎನ್ನುತ್ತಾನೆ.

❖❖❖

**–೩೨೫–**

**ಬಿಂಬನಿಗೆ ಪ್ರತಿದಿನ ಆತ್ಮಸಮರ್ಪಣವೇ ಬಿಂಬೋಪಾಸನೆ**

**ಧರ್ಮಾರ್ಥಕಾಮ ಇತಿ ಯೋ ವಿಹಿತಸ್ತ್ರಿವರ್ಗ**
**ಈಕ್ಷಾ ತ್ರಯೀ ನಯದಮೌ ವಿವಿಧಾ ಚ ವಾರ್ತಾ ।**
**ಮನ್ಯೇ ತದೇತದಖಿಲಂ ನಿಗಮಸ್ಯ ಸತ್ಯಂ**
**ಸ್ವಾತ್ಮಾರ್ಪಣಂ ಸ್ವಸುಹೃದಃ ಪರಮಸ್ಯ ಪುಂಸಃ ॥**

(ಭಾ.೭.೬.೩೨)

**ಏವಮಂತರ್ದಾಸ್ಯಾಪರಪರ್ಯಾಯಬಿಂಬೋಪಾಸನಾಂಗಭೂತಂ ಬಹಿರ್ದಾಸ್ಯಂ ಪ್ರದರ್ಶ್ಯ ಅಧುನಾ ಬಿಂಬೋಪಾಸನಾಂ ದರ್ಶಯತಿ ॥**

ಧರ್ಮಾರ್ಥಕಾಮ ಇತೀತಿ ॥ ಸತ್ಯಶಬ್ದಃ ಆವರ್ತನೀಯಃ। ಯತೋ ನಿಖಿಲಸ್ಯಾಪಿ ನಿಗಮಸ್ಯ ಶಬ್ದರಾಶೇಃ। ಸ್ವಸ್ಯ ಜೀವಸ್ಯ ಸುಹೃದೋಽನಿಮಿತ್ತೋಪ ಕಾರಕಸ್ಯ। ಪರಮಪುರುಷಸ್ಯ। ತಸ್ಮೈ। ಸ್ವಸ್ಯಾತ್ಮಾ ಸ್ವರೂಪಂ। ತಥಾತ್ಮೀಯಂ ಚ ತಯೋರರ್ಪಣಂ। ಸತ್ಯಂ ಮುಖ್ಯತಸ್ತಾತ್ಪರ್ಯಪ್ರತಿಪಾದ್ಯಂ। ಅತೋ ಯದ್ಯದ್ಧರ್ಮಾದಿಪ್ರತಿಪಾದಕಂ ಶಬ್ದಜಾತಂ ತದೇತದಖಿಲಮಪಿ। ಸತ್ಯಂ ಸತ್ ನಿರ್ದುಷ್ಟಂ ಸ್ವಾತ್ಮಾರ್ಪಣಲಕ್ಷಣಂ ಪ್ರಮೇಯಂ ಯಾಪಯತೀತಿ ಸತ್ಯಂ। ತಾದೃಶಂ ಚೇತ್ಸತ್ಯಂ ಸಾರ್ಥಕಂ ಮನ್ಯೇ ನೋ ಚೇನ್ನ ತೇನ ಶಬ್ದಜಾತೇನ ಪ್ರಯೋಜನಂ। ಇದಮುದಿತಂ ಭವತಿ--- ವೇದಾದಿಶಬ್ದನಿವಹಸ್ತಾವ ದ್ಭಗವತ್ಪ್ರೀತಿಜನನದ್ವಾರಾ ಜೀವಪ್ರಯೋಜನಾಯ ಪ್ರವೃತ್ತಃ ತಾದೃಶಮೇವ ಜೀವಾಯ ಜ್ಞಾಪಯನ್ ಕೃತಕೃತ್ಯೋ ಭವೇತ್। ಯೇನೈವ ಭಗವತ್ ಪ್ರೀತಿರ್ಭವೇತ್। ಭಗವತ್ಪ್ರೀತಿಃ ಭಗವತೇ ಸ್ವಾತ್ಮಾರ್ಪಣೇನ ಯಾದೃಶೀ ಭವತಿ। ನ ತಾದೃಶ್ಯನ್ಯತಃ ಅತಸ್ತದೇವ ಜೀವಪ್ರಯೋಜನಂ ಸಾಧಯತೋ ವೇದಾದಿಶಬ್ದನಿವಹಸ್ಯ ಮುಖ್ಯತಸ್ತಾತ್ಪರ್ಯತಃ ಪ್ರತಿಪಾದ್ಯಂ। ತಚ್ಚ ಯದಿ ಸೋಽಪಿ ಯಂ ಪ್ರತಿ ನ ಪ್ರತಿಪಾದಯೇತ್ತದಾ ತಂ ಪ್ರತಿ ಕಥಂ ಸಾರ್ಥಕಂ ಸ್ಯಾತ್ ಇತಿ। ಅತ್ರ ಮುಖ್ಯತೋ ಭಗವತ್ಪ್ರೀತಿಸಾಧನಂ ಜೀವಸ್ವರೂಪಾರ್ಪಣಮೇವೇತಿ ಪ್ರತಿಪಾದ್ಯತೇ। ತದೇವ ಹಿ ಬಿಂಬೋಪಾಸನಂ ನಾಮ। ಕದಾಚಿದರ್ಪಣಂ ಸಮರ್ಪಣಮಿತ್ಯುಚ್ಯತೇ। ಪ್ರತಿದಿನಂ ಘಟಿಕಾದಿಕಾಲನಿಯಮಪೂರ್ವಕಂ ಅವಿಚ್ಛಿನ್ನಮಾತ್ಮಸಮರ್ಪಣಮೇವ ಬಿಂಬೋಪಾಸನಂ। ಅತ ಏವ ಸರ್ವೇಷು ಭಾಗವತಧರ್ಮೇಷು ಫಲತೋ ವರಿಷ್ಠತಾಸೂಚನಾಯ ಸರ್ವಸ್ಯಾಪಿ ಭಾಗವತಧರ್ಮಸ್ಯ ಫಲರೂಪತಯಾ ಅಂತೇ ನಿವೇಶನಮಿತಿ ಜ್ಞೇಯಂ ॥

❖❖❖

ಪ್ರಹ್ಲಾದನು ಅಸುರ ಬಾಲಕರಿಗೆ ಉಪದೇಶಿಸುತ್ತಾನೆ—

ಧರ್ಮ ಅರ್ಥ ಕಾಮ ಎಂದು ವಿಹಿತವಾಗಿರುವ ತ್ರಿವರ್ಗ ಅದರ ಜ್ಞಾನ ವೇದವಿದ್ಯೆ ನೀತಿಶಾಸ್ತ್ರ ದಂಡಶಾಸ್ತ್ರ ನಾನಾ ಬಗೆಯ ಕೃಷಿ ಮುಂತಾದವುಗಳ ಶಾಸ್ತ್ರವೆಲ್ಲವೂ 'ಸತ್ಯ' ನಿರ್ದೋಷವಾದ ಆತ್ಮ ಆತ್ಮೀಯ ವಸ್ತುಸಮರ್ಪಣರೂಪ ಬಿಂಬೋಪಾಸನೆಯನ್ನೇ ವಿಧಿಸುತ್ತವೆ. ಶ್ರೀಹರಿಪ್ರೀತಿಗಾಗಿ ಸಂಕಲ್ಪಿಸಿ ಎಲ್ಲವನ್ನೂ ಮಾಡಿ ಸಮರ್ಪಿಸಿದಾಗಲೆ ಅವು ಸಫಲವಾಗುವುವು. ಇಲ್ಲದಿದ್ದರೆ ಆ ಶಾಸ್ತ್ರಶಬ್ದ ಗಳಿಂದಲೂ ಆ ಧರ್ಮಾದಿ ಆಚರಣೆಗಳಿಂದಲೂ ಏನೂ ಪ್ರಯೋಜನವಾಗ ಲಾರದು ಎಂದು.

ಪ್ರಹ್ಲಾದನು ಬಿಂಬೋಪಾಸನವೆಂದರೇನೆಂದು ಇಲ್ಲಿ ಹೇಳಿದಂತಾಯಿತು—

ವೇದಾದಿಗಳೆಲ್ಲವೂ ಭಗವತ್‌ಪ್ರೀತಿ ಜನಕವಾದ ಸಮರ್ಪಣೆಯನ್ನು ಜೀವರಿಗೆ ಉಪದೇಶಿಸಿದಾಗಲೆ ಅವು ಜೀವರಿಗೆ ಭಗವದನುಗ್ರಹಪ್ರಾಪ್ತಿ ಕಾರಣವಾಗಿ ಸಫಲವೆನಿಸುವುವು. ಭಗವತ್‌ಪ್ರೀತಿ ಸಂಪಾದನೆ ಹೇಗೆ ಎಂದು ತಿಳಿಸುವುದರಲ್ಲಿ ಸಕಲ ಶಾಸ್ತ್ರಗಳ ಮುಖ್ಯ ತಾತ್ಪರ್ಯವಿರುತ್ತದೆ. ಅದನ್ನೆ ಮಾಡದಿದ್ದರೆ ಅವು ಹೇಗೆ ಸಫಲವಾಗುವುವು?

ಜೀವನು ತನ್ನನ್ನೂ ತನ್ನದೆಲ್ಲವನ್ನೂ ಭಗವಂತನಿಗೆ ಅರ್ಪಿಸಬೇಕು. ಆತ್ಮ ಆತ್ಮೀಯ ಸಮಸ್ತ ವಸ್ತುಭ್ಯೋಽನೇಕ ಗುಣಾಧಿಕ ಪ್ರೀತಿಯಿಂದ ಆತ್ಮಸ್ವರೂಪ ಮತ್ತು ಆತ್ಮೀಯ ದ್ರವ್ಯ ಗುಣ ಕರ್ಮಗಳನ್ನು ನಾಲ್ಕನ್ನೂ ಸಮರ್ಪಿಸಬೇಕು. ಇವು ಮುಂದೆ ನಾಲ್ಕು ಶ್ಲೋಕಗಳಲ್ಲಿವೆ. ಅದರಿಂದಲೇ ಅವನು ಪ್ರೀತನಾಗುವನು ಈ ಅರ್ಪಣೆಯನ್ನು ಒಮ್ಮೆ ಮಾಡಿದರೆ ಅದು 'ಸಮರ್ಪಣ' ಎನಿಸುತ್ತದೆ. ಪ್ರತಿದಿನ ಘಳಿಗೆ ಮುಹೂರ್ತ ಪರ್ಯಂತ ನಿರಂತರ ಸಮರ್ಪಿಸಿದರೆ ಅದೇ 'ಬಿಂಬೋಪಾಸನ'ವೆನಿಸುತ್ತದೆ.

ಫಲದ ದೃಷ್ಟಿಯಿಂದ ಆತ್ಮಸಮರ್ಪಣರೂಪವಾದ ಈ ಬಿಂಬೋಪಾಸನೆಯೇ ಭಾಗವತ ಧರ್ಮಗಳಲ್ಲೆಲ್ಲ ಸರ್ವೋತ್ತಮವಾಗಿದೆ ಎಂದು ಸೂಚನೆಗಾಗಿ ಭಾಗವತಧರ್ಮಾನುಷ್ಠಾನದ ಫಲರೂಪವಾಗಿ ಕೊನೆಯಲ್ಲಿ ಈ ಬಿಂಬೋಪಾಸನೆ ಉಕ್ತವಾಗಿದೆ—

> 'ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂಗತೇಃ ।
> ಸೇವೇಜ್ಯಾವನತಿಃ ಸಖ್ಯಂ ದಾಸ್ಯಮಾತ್ಮಸಮರ್ಪಣಂ
> ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ
> ತ್ರಿಂಶಲ್ಲಕ್ಷಣ ಸಂಯುಕ್ತಃ ಸರ್ವಾತ್ಮಾ ಯೇನ ತುಷ್ಯತಿ ॥
> (ಭಾ.೭.೧೨.೧೦,೧೧,೧೨)

ಎಂದು ಸಪ್ತಮಸ್ಕಂಧದಲ್ಲಿ ನಾರದರು ಧರ್ಮರಾಜನಿಗೆ ಹೇಳಿದ ಮೂವತ್ತು ಧರ್ಮಗಳಲ್ಲಿ ಕೊನೆಯದಾಗಿ 'ಆತ್ಮಸಮರ್ಪಣ'ವನ್ನೇ ಹೇಳಿದ್ದಾರೆ. ಅದೇ ಬಿಂಬೋಪಾಸನೆ. ಅದೇ ಮೂವತ್ತನೆ ಭಾಗವತಧರ್ಮ.

-೩೨೬-

## ಬಿಂಬೋಪಾಸನೆಗೆ ಸಮವಾದ ಉಪಾಸನೆ ಬೇರೆ ಇಲ್ಲ

ವಿಪ್ರಾದ್ ದ್ವಿಷಡ್ಗುಣ ಯುತಾದರವಿಂದನಾಭ-
ಪಾದಾರವಿಂದ ವಿಮುಖಾಚ್ಛ್ವಪಚಂ ವರಿಷ್ಠಂ ।
ಮನ್ಯೇ ತದರ್ಪಿತಮನೋವಚನಾತ್ಮ ಗೇಹ-
ಪ್ರಾಣಃ ಪುನಾತಿ ಸಕಲಂ ನ ತು ಭೂರಿಮಾನಃ ॥

(ಭಾ.೭.೯.೧೦)

ಭಗವತ್ಪ್ರೀತಿಜನಕೇಷ್ವಾತ್ಮಸಮರ್ಪಣಸಮಂ ಕಿಂಚಿದಪಿ ನಾಸ್ತೀತ್ಯೇತ-ದ್ಬುದ್ಧ್ಯಾರೋಹಾಯ ದೃಷ್ಟಾಂತೇನ ಬೋಧಯತಿ ॥ ವಿಪ್ರಾದಿತಿ ॥ ದ್ವಿಷಡ್ಗುಣಾಶ್ಚ—

''ಜ್ಞಾನಂ ಚ ಸತ್ಯಂ ಚ ದಮಃ ಶಮಶ್ಚ
ಅಮಾತ್ಸರ್ಯಂ ಹ್ರೀಸ್ತಿತಿಕ್ಷಾಽನಸೂಯಾ ।
ದಾನಂ ಚ ಯಜ್ಞಶ್ಚ ತಪಃ ಶ್ರುತಂ ಚ
ಮಹಾವ್ರತಾ ದ್ವಾದಶ ಬ್ರಾಹ್ಮಣಸ್ಯ''॥

ಇತ್ಯುದಿತಾಃ ತೈರ್ಯುಕ್ತಾದ್ವಿಪ್ರಾತ್ । ಶ್ವಪಚಂ ಚಾಂಡಾಲೇಷು ನೀಚತಮಂ। ವರಿಷ್ಠಂ ಅತ್ಯುತ್ತಮಂ ಮನ್ಯೇ। ನನ್ವಿದಮಸಂಬದ್ಧಂ। ದ್ವಿಷಡ್ಗುಣಯುತಾದರವಿಂದನಾಭಪಾದಾರವಿಂದವಿಮುಖಾಚ್ಚೇತಿ । ಶಮಪದೋಕ್ತಭಗವನ್ನಿಷ್ಠತ್ವಸ್ಯಾಪಿ ಸತ್ತ್ವಾದಿತ್ಯತಸ್ತಸ್ಯ ತತ್ರ ಸತ್ವೇಽಪಿ ವಿಮುಖತ್ವಂ ಯುಜ್ಯತ ಏವ। ಅತ್ರ ಪಾದಾರವಿಂದರತತ್ವಸ್ಯ ಈದೃಗ್ರೂಪತ್ವಾತ್। ತಸ್ಯ ಚ ತಸ್ಮಿನ್ನಸತ್ವಾತ್। ಅತೋ ನ ವಿರುದ್ಧ ವಿಶೇಷಣದ್ವಯಮಿತ್ಯಭಿಪ್ರಾಯೇಣ ತನ್ನಿರ್ವಚನಪೂರ್ವಕಂ ಶ್ವಪಚಂ ಸ್ತೌತಿ, ನಿಂದತಿ ಚ ವಿಪ್ರಂ॥ ತದಿತಿ॥ ತಸ್ಮಿನ್ಭಗವತಿ ಸಮರ್ಪಿತಾಃ ಮನೋವಾಗ್ದೇಹಪ್ರಾಣಾ ಯೇನ ತಾದೃಶಃ ಶ್ವಪಚಃ। ಸಕಲಂ ದೃಷ್ಟಿಗೋಚರಂ ಪದಾರ್ಥಸಾರ್ಥಂ। ಪುನಾತಿ ಯದಾ। ತದಾ ಸ್ವೀಯಂ ಮನಆದಿಕಂ ಪುನಾತೀತಿ ಕಿಮು ವಕ್ತವ್ಯಂ। ಈದೃಶಂ ಚ ಹರಿರತತ್ವಂ ತಾದೃಶೇಽಪಿ ವಿಪ್ರೇ ನಾಸ್ತ್ಯೇವೇತಿ ಪಾದಾರವಿಂದವಿಮುಖತಾ ಪ್ರಾಪ್ತೈವೇತಿ ಭಾವೇನಾಹ॥ ಭೂರಿಮಾನ ಇತಿ॥ ಭೂರಿಮಾನೋಽಹಂಮಮೇತ್ಯಭಿಮಾನವಾನಿತಿ। ಅನೇನಾತ್ಮಸಮರ್ಪಣಂ ತತ್ರ ನಾಸ್ತಿ ಇತಿ ಸೂಚಿತಂ। ತಯೋರತಿವಿರೋಧಾತ್। ಈದೃಶೋ ವಿಪ್ರಸ್ತು ಸಕಲಂ ನ ಪುನಾತಿ ಇತಿ ಪ್ರಾಗ್ವದ್ಯೋಜನೀಯಂ।

**ಇದಮುದಿತಂ ಭವತಿ— ಸಮುಚಿತಕುಲಜತ್ವಾದಿಸಕಲಸಾಧನ ಸಂಪನ್ನೋಽ-ಪ್ಯೇತದ್ವಿರಹಮಾತ್ರೇಣ ಸಕಲಮಪಿ ಸಾಧನಜಾತಂ ವ್ಯರ್ಥೀಕರೋತಿ, ಸಕಲಸಾಧನ ವಿರಹಿತೋಽಪ್ಯೇತನ್ಮಾತ್ರೇಣ ಸಕಲಂ ದುರ್ಜನ್ಮಾದಿಕಮಪಿ ಸಾರ್ಥಕಂ ಕರೋತೀತಿ ಚ ನಿಂದಾಸ್ತುತಿಭ್ಯಾಂ ನೀಚತ್ವಮಹತ್ತ್ವೇ ಕಥ್ಯೇತೇ। ಭಗವತೋಽನ್ಯತ್ರ ಮಹತ್ತ್ವಂ ನಾಮ ಭಗವತಃ ಪ್ರೀತಿವಿಶೇಷಪಾತ್ರತ್ವಮೇವ। ತದಭಾವ ಏವ ನೀಚತ್ವಂ। ಸಕಲಸಾಧನಸಹಿತೇಽಪಿ ಪ್ರೀತ್ಯಭಾವಕಥನೇನ ತದ್ರಹಿತೇಽಪಿ ಪ್ರೀತಿವಿಶೇಷಕಥನೇನ ಚ ಆತ್ಮಾರ್ಪಣಮೇವ ವಿಶೇಷತೋ ಭಗವತ್ಪ್ರೀತಿಸಾಧನಮಿತಿ ಜ್ಞಾಯತ ಇತಿ। ಅತಃ ಇದಮೇವ ವೇದಾದಿತಾತ್ಪರ್ಯ ವಿಷಯಭೂತ ಮಿತ್ಯೇತದ್ಬೋಧಕತಯೈವ ವೇದಾದಿಕಂ ಸಾರ್ಥಕಮಿತಿ। ಅನೇನ ಪೂರ್ವಶ್ಲೋಕೋಽಪಿ ವಿವೃತೋ ಭವತಿ ॥**

❖❖❖

ಪ್ರಹ್ಲಾದನು ಶ್ರೀನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—

ಬ್ರಾಹ್ಮಣನು ಪರಾಪರತತ್ವ ಜ್ಞಾನ ಸತ್ಯ ದಮ ಶಮ ಅಮಾತ್ಸರ್ಯ ಅಕಾರ್ಯ ಮಾಡುವುದರಲ್ಲಿ ಲಜ್ಜೆ ದ್ವಂದ್ವ ಸಹಿಷ್ಣುತೆ ದೋಷವಿಲ್ಲದಿರುವುದು ದಾನ ಯಜ್ಞ ತಪಸು ಅಧ್ಯಯನ ಈ ಎಲ್ಲ ಹನ್ನೆರಡೂ ಗುಣಗಳನ್ನು ಸಂಪಾದಿಸಿದರೂ, ಭಗವಂತನಲ್ಲಿ ಆತ ಸರ್ವೇಶ್ವರನೆಂದು ಜ್ಞಾನವಿದ್ದರೂ ಸ್ವಾತ್ಮಾತ್ಮೀಯ ಸಮಸ್ತವಸ್ತುವಿಗಿಂತ ಅಧಿಕ ಪ್ರೀತಿಯಿಂದ ಸ್ವಾತ್ಮಾರ್ಪಣ ಮಾಡಿಕೊಳ್ಳುವ ಬಿಂಬೋಪಾಸನವಿಲ್ಲದಿದ್ದರೆ, 'ಭೂರಿಮಾನ' ನಾನು ನನ್ನದೆಂಬ ದುರಭಿಮಾನವೇ ಇದ್ದರೆ, ಆ ಎಲ್ಲ ಹನ್ನೆರಡು ಗುಣಗಳೂ ವ್ಯರ್ಥ. ಪರಮಾತ್ಮನ ಪಾದಾರವಿಂದದಿಂದ ವಿಮುಖನಾಗಿರುವ ಅಂಥ ಬ್ರಾಹ್ಮಣನಿಗಿಂತಲೂ ಪರಮಾತ್ಮನ ಪಾದಾರವಿಂದದಲ್ಲಿಯೇ ತನ್ನ ಮನಸ್ಸು ಮಾತು ಶರೀರ ಮನ ಪ್ರಾಣಗಳೆಲ್ಲವನ್ನೂ ಪ್ರೀತಿಯಿಂದ ಅರ್ಪಿಸಿರುವ 'ಶ್ವಪಚ' ಅಂತ್ಯಜರಲ್ಲಿಯೂ ಕೀಳಾಗಿರುವ ಹೊಲೆಯನನ್ನು ಉತ್ತಮನೆಂದು ನಾನು ತಿಳಿಯುತ್ತೇನೆ. ಅವನು ತಾನು ಕಾಣುವ ಎಲ್ಲ ಪದಾರ್ಥಗಳನ್ನು ಪವಿತ್ರಗೊಳಿಸುವನು. ಅಂದಮೇಲೆ ತನ್ನ ಶರೀರ ಮನಸು ಮುಂತಾದುವನ್ನು ಪವಿತ್ರಗೊಳಿಸಿಕೊಂಡಿರುತ್ತಾನೆ ಎಂದು ಬೇರೆ ಹೇಳಬೇಕಾಗಿಲ್ಲ.

ಆದರಿಂದ ಭಗವಂತನು ನಮ್ಮಲ್ಲಿ ಪ್ರೀತಿ ಮಾಡಬೇಕೆಂದರೆ ನಾವು ಅವನಲ್ಲಿ

ಪ್ರೀತಿ ಮಾಡಬೇಕು. ಪ್ರೀತಿಯಿಂದ ಆತ್ಮಸಮರ್ಪಣ ಮಾಡಬೇಕು. ಆತ್ಮಸಮರ್ಪಣಕ್ಕೆ ಸರಿಯಾದ ಭಗವತ್‌ಪ್ರೀತಿ ಸಾಧನ ಇನ್ನೊಂದಿಲ್ಲ ಎಂದು ಪ್ರಹ್ಲಾದನು ಹೇಳುತ್ತಿದ್ದಾನೆ.

ತಪೋವಿದ್ಯಾದಿಗುಣಗಳಿದ್ದೂ ಆತ್ಮಸಮರ್ಪಣವಿಲ್ಲದಿದ್ದರೆ, ಸತ್ಕುಲ ಪ್ರಸೂತನಾಗಿರುವುದು ನಿರರ್ಥಕವೆನಿಸುವುದು. ಆತ್ಮಸಮರ್ಪಣ ಒಂದಿದ್ದರೆ ಹೀನಕುಲಜನಾದರೂ ಅವನ ಜನ್ಮ ಸಾರ್ಥಕವಾಗುವುದು. ಅಂತಹ ಆತ್ಮಸಮರ್ಪಣ ಮಾಡುವವನೇ ದೊಡ್ಡವನು, ಉತ್ತಮನು. ಮಾಡದವನು ನೀಚನು. ಹೀಗೆ ಸಾಧನವೆಲ್ಲವಿದ್ದರೂ ಆತ್ಮಸರ್ಪಣವಿಲ್ಲದಿದ್ದರೆ ಹರಿಯ ಅನುಗ್ರಹವಿಲ್ಲ. ಸಾಧನವಿಲ್ಲದಿದ್ದರೂ ಆತ್ಮಸರ್ಪಣವಿದ್ದರೆ ಹರಿಯ ಅನುಗ್ರಹ ವಾಗುವುದರಿಂದ ಆತ್ಮಸಮರ್ಪಣವೇ ಹರಿಯ ಅನುಗ್ರಹಕ್ಕೆ ಮುಖ್ಯಸಾಧನ. ಆತ್ಮಸಮರ್ಪಣದಿಂದ ಹರಿಯ ಅನುಗ್ರಹ ಸಂಪಾದಿಸಬೇಕೆಂಬುದೇ ವೇದಾದಿ ಶಾಸ್ತ್ರಗಳ ಮುಖ್ಯ ತಾತ್ಪರ್ಯ. ಹಾಗೆ ಹೇಳುವುದರಿಂದಲೆ ವೇದಾದಿಗಳೆಲ್ಲವೂ ಸಾರ್ಥಕವಾಗಿವೆ. ಇದು ಆತ್ಮಸಮರ್ಪಣರೂಪ ಬಿಂಬೋಪಾಸನೆ.

ಉದ್ಯೋಗಪರ್ವ ಸನತ್ಸುಜಾತೀಯದಲ್ಲಿ ಹೇಳಿದ ಈ ಜ್ಞಾನಾದಿ ದ್ವಾದಶ ಗುಣಗಳಲ್ಲಿ 'ಶಮ'ವೂ ಸೇರಿದೆ— 'ಜ್ಞಾನಂ ಚ ಸತ್ಯಂ ಚ ದಮಃ ಶಮಶ್ಚ' ಎಂದು. 'ಶಮ' ಎಂದರೆ ಭಗವಂತನಲ್ಲಿ ನಿಷ್ಠೆ ಉಳ್ಳವನು, ಭಗವಂತನಿಗೆ 'ವಿಮುಖ' ಹೇಗಾಗಲು ಸಾಧ್ಯ? ನಿಜ. ಆದರೆ 'ನಿಷ್ಠೆ' ಕೇವಲ ಆಸಕ್ತಿ ಇದೆ. ಹೊರತು, ತನ್ನ ಸರ್ವಸ್ವವನ್ನು ಸಮರ್ಪಿಸುವ ಅದಮ್ಯವಾಗಿ ಹರಿಯುವ ಪ್ರೇಮಪ್ರವಾಹವಿಲ್ಲ! 'ಭೂರಿಮಾನ' ನಾನು ನನ್ನದೆಂಬ ಮಹಾದುರಭಿಮಾನ ವಿದೆ! ಎಂದರೆ ಅವನು ಭಗವಂತನಿಗೆ ವಿಮುಖನೆ ತಾನೆ?

❖❖❖

–೩೨೭–

**ಆತ್ಮೀಯ ದ್ರವ್ಯಸಮರ್ಪಣರೂಪ ಬಿಂಬೋಪಾಸನೆ**

**ಕಿಂಚಿತ್ ಕರೋತ್ಯುರ್ವಪಿ ಯತ್‌ಸ್ವದತ್ತಂ**
**ಸುಹೃತ್‌ಕೃತಂ ಫಲ್ಗ್ವಪಿ ಭೂರಿಕಾರಿ ।**

**ಮಯೋಪನೀತಂ ಪೃಥುಕೈಕಮುಷ್ಟಿಂ**
**ಪ್ರತ್ಯಗ್ರಹೀತ್ ಪ್ರೀತಿಯುತೋ ಮಹಾತ್ಮಾ ॥**

(ಭಾ.೧೦.೧೦೧.೩೪)

**ಏವಂ ಚತುರ್ವಿಧೇಷ್ವಾತ್ಮಸಮರ್ಪಣೇಷ್ವಾದ್ಯಂ ಪ್ರದರ್ಶ್ಯ ದ್ವಿತೀಯೇಽಪ್ಯಾದ್ಯಂ ಪ್ರದರ್ಶಯತಿ ॥ ಕಿಂಚಿದಿತಿ ॥ ಉರ್ವಪಿ ಭೂರ್ಯಪಿ । ಸ್ವದತ್ತಂ ಸು ಸಮ್ಯಕ್ ಆತ್ಮೋದ್ದೇಶೇನಾದತ್ತಮನರ್ಪಿತಂ ವಸ್ತು । ಕಿಂಚಿದೇವ ಕರೋತಿ । ಫಲ್ಗ್ವಪಿ ವಸ್ತು । ಸುಹೃದ್ಭಿರಾತ್ಮಸಮರ್ಪಣಕಾರಿತಯಾ ಸ್ವಪ್ರಿಯೈಃ ಕೃತಮರ್ಪಿತಂ ಭೂರ್ಯೇವ ಕರೋತೀತಿ ಭೂರಿಕಾರೀತಿ ಹೇತೋಃ । ಮಹಾತ್ಮಾ ಭಕ್ತೇಷು ದಯಾವಾನಿತಿ ಜ್ಞಾಯತೇ । ಕುತ ಏವಂ ತ್ವಯಾ ಜ್ಞಾತಮಿತ್ಯತೋಽನೇನೇತ್ಯಾಹ ॥ ಮಯೇತಿ ॥ ಮಯಾ ಗೃಹಾತ್ ಆಗಮನಸಮಯೇ ದಾರಿದ್ರ್ಯದೋಷೇಣ ಕಿಯದೇವ ಪೃಥುಕಂ ತದರ್ಥಮಾನೀತಂ । ತಸ್ಮಿನ್ನಪ್ಯೇಕಮುಷ್ಟಿಪರಿಮಿತಮೇವ । ಪ್ರೀತಿಯುತಃ ಸನ್ । ಪ್ರತ್ಯಗ್ರಹೀತ್ ಯತಸ್ತೇನೇತಿ । ಅತೋ ಮುಮುಕ್ಷುಣಾ ದ್ರವ್ಯಂ ಭಗವತೇ ಸಂತತಂ ಸಮರ್ಪಣೀಯಮಿತಿ ಭಾವಃ ॥**

❖❖❖

**ಸುದಾಮನು ಶ್ರೀಕೃಷ್ಣನ ಔದಾರ್ಯವನ್ನು ಕೊಂಡಾಡುತ್ತಾನೆ.**

**'ಉರು' ಬೆಟ್ಟದಷ್ಟು ಇದ್ದರೂ 'ಸು–ಅದತ್ತ' ಕೇವಲ ಪ್ರೀತಿಯ ಉದ್ದೇಶದಿಂದ ಕೊಟ್ಟರದಿದ್ದರೆ ಅದನ್ನು ಶ್ರೀಕೃಷ್ಣ 'ಕಿಂಚಿತ್ ಕರೋತಿ' ಅಲ್ಪವೆಂದೇ ಪರಿಗಣಿಸುತ್ತಾನೆ. 'ಫಲ್ಗು' ಅಲ್ಪವಿದ್ದರೂ 'ಸುಹೃತ್ ಕೃತ' ಆತ್ಮಸಮರ್ಪಣೆಯ ಭಾವದಿಂದ ಪ್ರಿಯರಾದವರು ಕೊಟ್ಟಿದ್ದರೆ 'ಭೂರಿಕಾರಿ' ಬಹಳ ಆಯಿತೆಂದು ಸ್ವೀಕರಿಸುತ್ತಾನೆ ಮಹಾತ್ಮನಾದ ಶ್ರೀಕೃಷ್ಣ. ನಾನು ಕೊಟ್ಟಿದ್ದು ಸ್ವಲ್ಪವೆ ಅವಲಕ್ಕಿ. ಅದರಲ್ಲಿಯೂ ಮುಷ್ಟಿ ಅವಲಕ್ಕಿಯನ್ನೆ ಅವನು ಪ್ರೀತಿಯಿಂದ ಸ್ವೀಕರಿಸಿದ್ದಾನೆ.**

ಆದರಿಂದ ಭಕ್ತನು ತನ್ನ ವಸ್ತು ದೊಡ್ಡದಿರಲಿ ಸಣ್ಣದಿರಲಿ ಎಲ್ಲವನ್ನೂ ಭಕ್ತಿಯಿಂದ ಭಗವಂತನಿಗೆ ಸಮರ್ಪಿಸಬೇಕು. ಇದು ಆತ್ಮೀಯ ದ್ರವ್ಯ ಸಮರ್ಪಣರೂಪವಾದ ಬಿಂಬೋಪಾಸನೆ.

❖❖❖

## –೩೨೮–

## ಆತ್ಮೀಯ ಕ್ರಿಯಾ ಸಮರ್ಪಣರೂಪ ಬಿಂಬೋಪಾಸನೆ

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾನುಸೃತಃ ಸ್ವಭಾವಂ ।
ಕರೋತಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯೇತ್ ತತ್ ॥ (ಭಾ.೧೧.೨.೩೬)

ದ್ವಿತೀಯಮಪಿ ನಿರ್ದಿಶತಿ ॥ **ಕಾಯೇನೇತಿ** ॥ ಸ್ವಭಾವಂ ನಿಜಾಂ ಸ್ಥಿತಿಮನುಸೃತ್ಯ ಪ್ರವರ್ತಮಾನಃ । ಅಥವಾ ಸ್ವಾಖ್ಯೋ ಭಾವಃ ಸ್ವಭಾವೋ ಭಗವಾನ್ ತಮನುಸೃತ್ಯ ಪ್ರವರ್ತಮಾನಃ । ಬಿಂಬರೂಪೇಣ ಹರಿಣಾ ವಿಷ್ಟಿಗೃಹೀತ ಇವ ಪ್ರವರ್ತ್ಯಮಾನ ಇತಿ ಯಾವತ್ । ತಾದೃಶೋಽಯಂ ಪುರುಷಃ ಕಾಯಾದಿನಾ ಮನಃಪರ್ಯಂತೇನ ಯತ್ಕರೋತಿ । ತತ್ಸನ್ನಿವೇದಯೇತ್ ಸಮರ್ಪಯೇತ್ । ಕಿಂ ತನ್ನಿವೇದನಾಪರಪರ್ಯಾಯಂ ಸಮರ್ಪಣಮಿತ್ಯತ ಇದಮೇವ ಸಮರ್ಪಣಂ ನಾಮ । ಯತ್ಕ್ರಿಯಮಾಣೇ ಕರ್ಮಣಿ ಭಗವದುದ್ದೇಶ್ಯಕತ್ವಾನುಸಂಧಾನಮಿತ್ಯನುಶಯೇನಾಹ ॥ **ಪರಸ್ಮೈ ನಾರಾಯಣಾಯೇತೀತಿ** ॥ ಏತದೇವ ಸಮರ್ಪಣಮಿತಿ । ನ ಕೇವಲಮಿದಾನೀಂತನಕ್ರಿಯೈವ ಭಗವತಿ ಸಮರ್ಪಣೀಯಾ । ಕಿಂ ನಾಮ ಕ್ರಿಯಮಾಣೇವ ಭೂತಪೂರ್ವಾ, ಕರಿಷ್ಯಮಾಣಾ ಚ, ಯಸ್ಮಿಂಜನ್ಮನಿ ಸಮರ್ಪಣಶಕ್ತಿಂ ದದಾತಿ ಭಗವಾಂಸ್ತಸ್ಮಿನ್ನೇವ ಜನ್ಮನಿ ತ್ರಿವಿಧಾಪಿ ಕ್ರಿಯಾ ಸಮರ್ಪಿತಾ ಚೇತ್ ಪೂರ್ವಜನ್ಮಸು ಸ್ಮರಣವಿರಹಿತಾಪಿ ಕ್ರಿಯಾ ಸರ್ವಾಪಿ ಸಾರ್ಥಕಾ ಭವತಿ । ತಥಾ ಅಸ್ಮಿನ್ನಪಿ ವಾರ್ಧಕಾದೌ ರೋಗಾದ್ಯುಪದ್ರವದಶಾಯಾಂ ತತ್ತತ್ಕಾಲೇಷು ಕ್ರಿಯಮಾಣಾಯಾಂ ಕ್ರಿಯಾಯಾಂ ಸಮರ್ಪಣಶಕ್ತಿರ್ಮಾಭೂದಿತಿ ತಾನೇಷ್ಯಾನ್ ರೋಗಾದಿಕಾಂಸ್ತತ್ಕಾಲೀನ ಕ್ರಿಯಾಶ್ಚ ತಥಾ ಮರಣಾನಂತರಕ್ರಿಯಮಾಣ ಶವದಾಹಾದಿಕ್ರಿಯಾಂ ಸಮರ್ಪಯೇದಿತಿ ಸೂಚಯಿತುಂ ಯದ್ಯತ್ಕೃತಂ ಕರಿಷ್ಯಮಾಣಂ ಚ ತತ್ಸಕಲಮಿತ್ಯಾಹೇತಿ । ಯದ್ಯಪ್ಯೇತೇನ ಭಾಗವತಧರ್ಮತ್ವಂ ನ ಭವಿಷ್ಯತಿ ವಿನಾ ತತ್ಕಾಲಸಮರ್ಪಣಂ । ತಥಾಪಿ ತದಾ ತಾದೃಶಾಧಿಕಾರನಿಶ್ಚಯಾಭಾವೇನ ಅಭಾಗವತಧರ್ಮತೋ ವೈಲಕ್ಷಣ್ಯಾಯೇದಮಿತ್ಯದೋಷಃ । ನಿಶ್ಚಿತಾಧಿಕಾರಿಣಾಮಪಿ ತತ್ಸಮರ್ಪಣಂ ಭಗವತ್ಪ್ರೀತಿ ವಿಶೇಷಾರ್ಥಂ ಲೋಕಶಿಕ್ಷಣಾರ್ಥಂ ವೇತಿ ॥

❖❖❖

**ಕವಿಮಹಾಮುನಿ ವಿದೇಹರಾಜನಿಗೆ ಉಪದೇಶಿಸುತ್ತಾರೆ—**

**ಕಾಯ ವಾಕ್ ಮನಸು ಇಂದ್ರಿಯ ಬುದ್ಧಿಯಿಂದ ತಾನಾಗಿ ಸ್ವಭಾವದಿಂದ ಸ್ವತಂತ್ರ ಹರಿಪ್ರೇರಣೆಯಿಂದ ಏನೇನು ಕ್ರಿಯೆಯನ್ನು ಭಕ್ತನು ಮಾಡುವನೋ ಅದೆಲ್ಲವನ್ನೂ 'ಪರ'ಸರ್ವೋತ್ತಮನಾದ ನಾರಾಯಣನಿಗೆ ಅರ್ಪಿತವೆನ್ನುತ್ತ ಬಿಂಬನಿಗೆ ಸಮರ್ಪಿಸಬೇಕು. ಇದು ಆತ್ಮೀಯಕ್ರಿಯಾ ಸಮರ್ಪಣರೂಪ ಬಿಂಬೋಪಾಸನೆ.**

ಈ ಜನ್ಮದಲ್ಲಿ ಮಾಡಿದ ಪುಣ್ಯಕರ್ಮಗಳನ್ನು ಮಾತ್ರವಲ್ಲ ಹಿಂದಿನ ಬಹುಜನ್ಮಗಳಲ್ಲಿ ಮಾಡಿದ ಮುಂದೆ ಬಹುಜನ್ಮಗಳಲ್ಲಿ ಮಾಡಬಹುದಾದ ಎಲ್ಲ ಕರ್ಮಗಳನ್ನೂ ಸಮರ್ಪಣ ಮಾಡಬೇಕು. ಸಮರ್ಪಣ ಮಾಡುವ ಬುದ್ಧಿಯನ್ನೂ ಶಕ್ತಿಯನ್ನೂ ದಯೆಯಿಂದ ಈ ಜನ್ಮದಲ್ಲಿ ಅನುಗ್ರಹಿಸಿದಾಗ ಈ ಜನ್ಮದಲ್ಲಿಯೇ ಅವೆಲ್ಲವನ್ನೂ ಸಮರ್ಪಿಸಿದರೆ ಹಿಂದಿನ ಮುಂದಿನ ಜನ್ಮಗಳಲ್ಲಿ ಅಂಥ ಬುದ್ಧಿಶಕ್ತಿಗಳಿಲ್ಲದೆ ಮಾಡಿದ ಎಲ್ಲ ಕರ್ಮವೂ ಈಗ ಅರ್ಪಿತವಾಗಿ ಸಾರ್ಥಕವಾಗುವುದು. ಈ ಜನ್ಮದಲ್ಲಿಯೆ ಮುಂದೆ ವೃದ್ಧಾಪ್ಯದಲ್ಲಿ ರೋಗಾದಿಗಳಿಂದ ನರಳುವ ಸಮಯದಲ್ಲಿ ಆಯಾಕಾಲದಲ್ಲಿ ಮಾಡುವ ಕರ್ಮಗಳನ್ನು ಸಮರ್ಪಿಸುವ ಶಕ್ತಿ ಇಲ್ಲದೆ ಹೋಗುವ ಪ್ರಸಂಗವಿರುವುದರಿಂದ ಈಗಲೆ ಶಕ್ತಿ ಇರುವಾಗಲೇ ಮುಂದೆ ಮಾಡುವ ಎಲ್ಲ ಕರ್ಮಗಳನ್ನೂ ರೋಗಾದಿ ವೇದನೆಗಳ ಅನುಭವಗಳನ್ನೂ ಸತ್ತಮೇಲಾಗುವ ಶವದಾಹಾದಿಗಳನ್ನೂ ತಪಸ್ಸೆಂದು ಎಲ್ಲವನ್ನೂ ಸಮರ್ಪಿಸಬೇಕು. ತನ್ನ ಮರಣಾನಂತರದ ಶವದಾಹಾದಿ ಕರ್ಮಗಳನ್ನು ಮಕ್ಕಳು ಮಾಡುವುದನ್ನೂ ಈಗಲೆ ತಾನು ಸಮರ್ಪಿಸಬೇಕು. ಈ ಅಭಿಪ್ರಾಯದಿಂದ 'ಕರೋತಿ ಯದ್ಯತ್ ಸಕಲಂ' ಏನೇನು ಮಾಡುವನೋ ಅದನ್ನು ಸಮರ್ಪಿಸಬೇಕು ಎನ್ನುತ್ತಾರೆ. ಯದ್ಯಪಿ ತತ್ಕಾಲಸಮರ್ಪಣೆ ಇಲ್ಲದ ಕರ್ಮ ಭಾಗವತಧರ್ಮ ಹೇಗೆ? ಆದರೂ ಅದು ಬೇರೆ ಕಾಲದಲ್ಲಾದರೂ ಸಮರ್ಪಣೆ ಮಾಡಿದ್ದಾಗುವುದರಿಂದ 'ಅ-ಭಾಗವತ ಧರ್ಮ'ವೆಂದಿಗೂ ಆಗದು. ವ್ಯರ್ಥವೆನಿಸದು. ಮುಂದೆಯೂ ನನಗೆ ಸಮರ್ಪಣಶಕ್ತಿ ಇರುತ್ತದೆ ಎಂದು ನಿಶ್ಚಯಉಳ್ಳ ಜ್ಞಾನಿಯೂ ಮುಂದಿನ ಕರ್ಮಗಳನ್ನೂ ಈಗಲೇ ಸಮರ್ಪಿಸಬಹುದು. ಆಗ ವಿಶೇಷ ಹರಿಪ್ರೀತಿ

ಯಾದೀತು. ಲೋಕಕ್ಕೆ ಮಾರ್ಗದರ್ಶನವೂ ಆದೀತು. ಅದೂ ಜ್ಞಾನಿಯ ಕರ್ತವ್ಯವೇ ಆಗಿದೆ.

❖❖❖

—೩೨೯—

## ಆತ್ಮೀಯ ಗುಣಸಮರ್ಪಣರೂಪ ಬಿಂಬೋಪಾಸನೆ

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ
ನ ಶೋಭತೇ ಜ್ಞಾನಮಲಂ ನಿರಂಜನಂ ।
ಕುತಃ ಪುನಃ ಶಶ್ವದಭದ್ರಮೀಶ್ವರೇ
ನ ಚಾರ್ಪಿತಂ ಕರ್ಮ ಯದಪ್ಯಕಾರಣಂ ॥

(ಭಾ.೧.೫.೧೨)

ನನು ಕಿಮನೇನ ಕ್ರಿಯಾಯಾಃ ಸಮರ್ಪಣೇನ ಶ್ರುತ್ಯಾದ್ಯವಿಹಿತಪರಿತ್ಯಾಗ ಪೂರ್ವಕಂ ವಿಹಿತಾನುಷ್ಠಾನೇನೈವ ಫಲಸ್ಯ ಜಾಯಮಾನತ್ವಾದಿತ್ಯತೋ ಯದಾ ಮುಖ್ಯತೋ ಮುಕ್ತಿಸಾಧನತಯಾ ಶ್ರುತ್ಯಾದಿವಿಹಿತಂ ಸರ್ವಪಾಪಪರಿಹಾರ ಕತಯಾ ಪ್ರಮಿತಮಪಿ ಜ್ಞಾನಂ ಬ್ರಹ್ಮವಿದ್ಯಾವಿರಹಿತೋ ಬ್ರಾಹ್ಮಣ ಇವ ನ ಶೋಭಾಂ ವಿಭರ್ತಿ । ಕಿಂ ತದಾ ಯನ್ಮುಖ್ಯತೋ ನ ಮುಕ್ತಿಸಾಧನಂ ಸ್ವಯಮೇವ ಪಾಪಬಹುಲಂ ಚ ತತ್ತಾದೃಶಂ ಕರ್ಮ ಭಗವದರ್ಪಣೇನಾಪಿ ವಿಹೀನಂ ಚೇತ್ ನ ಶೋಭತೇ ಇತಿ ಕಿಂ ವಕ್ತವ್ಯಂ । ಅತೋ ಭಗವದರ್ಪಣಮವಶ್ಯಂ ಕರ್ತವ್ಯಮಿತಿ ಭಾವೇನಾಹ ॥ ನೈಷ್ಕರ್ಮ್ಯಮಪೀತಿ ॥ ಚೋಽವಧಾರಣೇ । ಪುನಃಶಬ್ದೋ ವಾಕ್ಯಾಲಂಕಾರೇ । ಕರ್ಮಾಸಾಧ್ಯತಯಾ ವಾ ದುಷ್ಕರ್ಮರಹಿತತಯಾ ವಾ ನಿಷ್ಕರ್ಮಣೋ ಮುಕ್ತೇಃ ಸಾಧನಂ । ತಥಾ ಶ್ರುತ್ಯಾದಿವಿಹಿತಂ ಅಲಂ ನಿರಂಜನಂ ಸಕಲಪಾಪಪರಿಹಾರಕ ಸ್ವಭಾವಮಪಿ ಜ್ಞಾನಂ । ಅಚ್ಯುತೇ ಹರೌ ಭಾವೇನ ಸಮರ್ಪಣಾಖ್ಯಮನೋವೃತ್ತ್ಯಾ ವಿರಹಿತಂ ಚೇನ್ನೈವ ಶೋಭತೇ ನೋಪಾದೇಯಂ ಭವತಿ । ಯದಾ ತದಾ ಯದಕಾರಣಂ ಮೋಕ್ಷಸಾಧನತಯಾ ಅವಿಹಿತಂ । ಶಶ್ವದಭದ್ರಂ ವೈಶಸಾದಿನಾ ಅಮಂಗಲತರಂ ಅತ ಏವ ಸ್ವಭಾವತಃ ಪಾಪಮಪಿ ತತ್ತಾದೃಶಂ ಕರ್ಮ ಈಶ್ವರೇ ನಾರ್ಪಿತಂ ಚೇತ್ ಕುತಃ ಕಾರಣಾದುಪಾದೇಯಂ ಭವೇದಿತಿ । ಇದಮುದಿತಂ ಭವತಿ— ಪ್ರೇಕ್ಷಾವಾನ್ಹಿ ತದೇವೋಪಾದತ್ತೇ । ಯತ್ಸ್ವಪುರುಷಾರ್ಥಸಾಧನಂ ಭವೇತ್ । ಪುರುಷಾರ್ಥೋ

ಹಿ ದ್ವೇಧಾ । ಅನಿಷ್ಟನಿವೃತ್ತಿರಿಷ್ಟಪ್ರಾಪ್ತಿಶ್ಚೇತಿ । ಸಾಧನಮಪಿ ಪುರುಷಾರ್ಥಸ್ಯೇತಿ ಕರ್ತವ್ಯತಾಸಹಿತಮೇವ ಸಾಧಕಂ ಭವತಿ । ತದತ್ರೇತಿಕರ್ತವ್ಯತಾರೂಪೇಣ ಭಗವದರ್ಪಣೇನ ವಿರಹಿತಂ ಜ್ಞಾನಂ ಸಕಲಪಾಪರೂಪಾನಿಷ್ಟನಿವೃತ್ತಿ ರೂಪಮುಕ್ತಿಪ್ರಾಪ್ತಿಂ ಚ ಅಕುರ್ವತ್ಕಥಮುಪಾದದ್ಯಾತ್ । ತಥಾ ಸತಿ । ಪ್ರೇಕ್ಷಾವತ್ತ್ವಹಾನಿಪ್ರಸಂಗಾತ್ । ತತಸ್ತದ್ಯಥಾ ಅನುಪಾದೇಯಂ ತಥಾ, ಕರ್ಮಾಪೀಶ್ವರಾರ್ಪಣವಿರಹಿತಂ । ಚೇದಿತಿಕರ್ತವ್ಯತಾರಾಹಿತ್ಯೇನ ಪುರುಷಾರ್ಥ ಮಸಾಧಯತ್ಕಥಂ ಪ್ರೇಕ್ಷಾವದ್ಭಿರುಪಾದೇಯಂ ಭವೇದಿತ್ಯುಪಾದೇಯ ತಾಸ್ಥ್ಯೈರ್ಯಾಯ ಕರ್ಮಣಾಮಿತಿಕರ್ತವ್ಯತಾರೂಪತಯಾ ಸಮರ್ಪಣಂ ಕಾರ್ಯಮೇವೇತಿ ॥

❖❖❖

ನಾರದರು ಶ್ರೀವ್ಯಾಸರಲ್ಲಿ ಹೇಳುತ್ತಾರೆ—

ಸಕಲ ಪಾಪ ಪರಿಹಾರಕವೂ ಮುಕ್ತಿಗೆ ಸಾಧನವೂ ಆದ ಶ್ರುತ್ಯಾದಿಗಳಲ್ಲಿ ವರ್ಣಿತವೂ ಆದ ಶಾಸ್ತ್ರಜ್ಞಾನವೂ ಕೂಡ ಭಕ್ತಿಪೂರ್ವಕವಾಗಿ ಹರಿಗೆ ಸಮರ್ಪಿತವಾಗಿಲ್ಲದಿದ್ದರೆ ಶೋಭಿಸುವುದಿಲ್ಲ. ಸ್ವೀಕಾರಕ್ಕೆ ಯೋಗ್ಯವೆನಿಸುವು ದಿಲ್ಲ. ಅಂದಮೇಲೆ ಮುಕ್ತಿಗೆ ಕಾರಣವಾಗದ, ಮತ್ತು ಪಶುಹಿಂಸಾದಿ ದೋಷಗಳಿಂದ ಅಮಂಗಳಕರವಾಗಿದ್ದು ಸ್ವಭಾವತಃ ಪಾಪರೂಪವೂ ಆಗಿರುವ ಕರ್ಮವು ಹರಿಗೆ ಅರ್ಪಿತವೂ ಆಗದಿದ್ದಲ್ಲಿ ಹೇಗೆ ಶೋಭಿಸೀತು?

ಇಲ್ಲಿ 'ಹರಿಗೆ ಅರ್ಪಿತವಾಗದ ಜ್ಞಾನರೂಪ ಗುಣವು ಶೋಭಿಸುವುದಿಲ್ಲ' ಎಂದು ಆತ್ಮೀಯ ಗುಣಸಮರ್ಪಣರೂಪ ಬಿಂಬೋಪಾಸನೆ ಉಕ್ತವಾಗಿದೆ.

ಕರ್ಮವನ್ನು ಹೀಗೇ ಮಾಡಬೇಕೆಂದು ಶಾಸ್ತ್ರ ಹೇಳಿರುತ್ತದೆ. ಶಾಸ್ತ್ರವು ಕರ್ಮವನ್ನು ಹೇಗೆ ಮಾಡಬೇಕೆಂದು ಹೇಳಿರುತ್ತದೋ ಹಾಗೆ ಮಾಡಿದರೇ ಅದು ಫಲಸಾಧಕವಾಗುವುದು. ಭಗವದರ್ಪಣ ಸಹಿತವಾಗಿಯೇ ಕರ್ಮ ಮಾಡಬೇಕೆಂದು ಶಾಸ್ತ್ರವು ಹೇಳಿರುವಾಗ ಭಗವದರ್ಪಣ ರೂಪ ಇತಿ ಕರ್ತವ್ಯತಾ ಇಲ್ಲದೇ ಕರ್ಮವು ಫಲಸಾಧನವಾಗದು. ಅದು ಸ್ವೀಕಾರಕ್ಕೆ ಯೋಗ್ಯವಾಗದು.

ಯದ್ಯಪಿ ಜ್ಞಾನವು ಪಶುಹಿಂಸಾದಿ ದೋಷಯುಕ್ತವಾದ ಕರ್ಮದಂತೆ ಪಾಪಕರವಲ್ಲ, ಪಾಪಪರಿಹಾರಕವೇ ಆಗಿದೆ. ಮುಕ್ತಿಗೆ ಸಾಧನವೂ ಆಗಿದೆ. ಆದರೂ ಅದು ಭಗವದರ್ಪಿತವಾಗಬೇಕು. ಭಗವದರ್ಪಣರೂಪ

ಇತಿಕರ್ತವ್ಯತಾ ಸಹಿತವಾಗಿರಬೇಕು. ಆಗಲೇ ಪಾಪ ಪರಿಹಾರಕವೂ ಮುಕ್ತಿಸಾಧಕವೂ ಆಗುವುದು. ಹೀಗೆ ಸ್ವಭಾವತಃ ಪಾಪ ಪರಿಹಾರಕವೂ ಮಂಗಳಕರವೂ ಆದ ಜ್ಞಾನವೂ ಕೂಡ ಭಗವದರ್ಪಣರೂಪ ಇತಿಕರ್ತವ್ಯತಾ ಇಲ್ಲದಿದ್ದರೆ ಸ್ವೀಕಾರಕ್ಕೆ ಯೋಗ್ಯವಾಗುವುದಿಲ್ಲ. ಬ್ರಹ್ಮವಿದ್ಯಾರಹಿತನಾದ ಬ್ರಾಹ್ಮಣನಂತೇ ಶೋಭಿಸುವುದಿಲ್ಲ ಎಂದಮೇಲೆ ಸ್ವಭಾವತಃ ಪಶು ಹಿಂಸಾದಿ ದೋಷಯುಕ್ತವಾಗಿದ್ದು ಪಾಪಕರ, ಅಮಂಗಳಕರವಾದ ಕರ್ಮವು ಭಗವದರ್ಪಣರೂಪ ಇತಿಕರ್ತವ್ಯತಾ ರಹಿತವಾಗಿದ್ದರೆ ಹೇಗೆ ಸ್ವೀಕಾರಕ್ಕೆ ಯೋಗ್ಯವೆನಿಸೀತು? ಎಂದು ಶ್ಲೋಕದ ಭಾವ.

❖❖❖

–೩೩೦–

**ಕರ್ಮ ಅರ್ಪಿತವಾಗದಿದ್ದರೆ ಫಲವಿಲ್ಲ**

**ತಪಸ್ವಿನೋ ದಾನಪರಾ ಯಶಸ್ವಿನೋ**
**ಮನಸ್ವಿನೋ ಮಂತ್ರವಿದಃ ಸುಮಂಗಲಾಃ ।**
**ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ**
**ತಸ್ಮೈ ಸುಭದ್ರಶ್ರವಸೇ ನಮೋನಮಃ ॥**

(ಭಾ.೨.೪.೧೭)

**ಸ್ಯಾದೇತದ್ಯದಿ ಭಗವದರ್ಪಣಮಪೀತಿಕರ್ತವ್ಯಾತಾಕೋಟಿನಿವಿಷ್ಟಂ ಭವೇತ್ ತದೇವ ಕುತ ಇತ್ಯತೋ ವ್ಯತಿರೇಕೇಣ ತಸ್ಯೇತಿಕರ್ತವ್ಯತಾತ್ವಂ ದ್ರಢಯತಿ ॥ ತಪಸ್ವಿನ ಇತಿ ॥ ಯಶಸ್ವಿನಃ ಯಶಃಪ್ರಯೋಜಕಕರ್ಮ ವಿಶೇಷಾಣಾಂ ಕರ್ತಾರಃ । ಮಂತ್ರವಿದೋ ವೇದಾಧ್ಯಯನಾದಿಕಂ ಕುರ್ವಾಣಾಃ । ಕಿಂ ಬಹುನಾ ಯದ್ಯತ್ಪುರುಷಾರ್ಥಸಾಧನತಯಾ ಶ್ರುತ್ಯಾದಿನಾ ವಿಹಿತಂ ಕರ್ಮ ತಸ್ಯ ಸರ್ವಸ್ಯಾಪಿ ಕರ್ತಾರೋಽಪೀತ್ಯಾಶಯೇನಾಹ ॥ ಸುಮಂಗಲಾ ಇತಿ । ಯದ್ಯಚ್ಛ್ರುತ್ಯಾದಿನಾ ಕರ್ಮಾಂಗಂ ವಿಹಿತಂ ಪ್ರಾಯಶ್ಚಿತ್ತದೀಕ್ಷಾಪ್ರಯಾಜಾದಿಕಂ ತಸ್ಯ ಸರ್ವಸ್ಯ ಸಾಹಿತ್ಯೇನ ಸಾಂಗಂ ಕರ್ಮ ಕುರ್ವಂತೋಽಪಿ । ನೈವ ಕ್ಷೇಮಂ ವಿಂದಂತಿ ಕಿಂ ಪುನರಂಗವಿಕಲಕರ್ಮಕರ್ತಾರ ಇತಿ ಭಾವೇನೋಕ್ತಂ— ಸ್ವಿತಿ । ಸು ಸಮ್ಯಕ್ ಮಂಗಲಾ ಇತಿ । ಯಸ್ಮಿನ್ಭಗವತಿ ಅರ್ಪಣಂ ವಿನಾ । ಕ್ಷೇಮಂ ನ ವಿಂದಂತಿ । ಅತೋಽನೇನ ಕರ್ಮಣಾ ಕ್ಷೇಮಪ್ರಾಪ್ತಯೇ ಪ್ರತಿಕರ್ಮ**

**ಪುನಃಪುನಸ್ತಸ್ಮಿನ್ನೇವ ಸಮರ್ಪಣಂ ಕರ್ತವ್ಯಮಿತಿ ಭಾವೇನೋಕ್ತಂ ತಸ್ಮೈ ನಮೋ ನಮ ಇತಿ ॥**

❖❖❖

**ಶುಕಮುನಿ ಹೇಳುತ್ತಾರೆ—**

**ತಪಸ್ವಿಗಳಾಗಿದ್ದರೂ ದಾನನಿರತರಾಗಿದ್ದರೂ ಕೀರ್ತಿಶಾಲಿಗಳಾಗಿದ್ದರೂ ಮನೋನಿಗ್ರಹ ಹೊಂದಿದ್ದರೂ ವೇದಾಭ್ಯಾಸ ಮಾಡಿದ್ದರೂ ಸದಾಚಾರ ಸಂಪನ್ನರಾಗಿದ್ದರೂ ವಿಹಿತಕರ್ಮ ಮಾಡುವವರಾಗಿದ್ದರೂ ಯಾವ ಭಗವಂತ ನಲ್ಲಿ ತಾವು ಮಾಡಿದ ಕರ್ಮಫಲಗಳನ್ನು ಸಮರ್ಪಿಸದಿದ್ದರೆ ಮೋಕ್ಷಾದಿ ಪುರುಷಾರ್ಥಗಳನ್ನು ಪಡೆಯಲಾಗದೋ ಅಂಥ ಪರಮ ಮಂಗಳ ಕೀರ್ತಿಶಾಲಿಯಾದ ಹರಿಗೆ ನಮಸ್ಕಾರ ನಮಸ್ಕಾರ.**

ಕರ್ಮಗಳನ್ನು ಭಗವದರ್ಪಣ ಮಾಡದಿದ್ದರೆ ಅವು ಪುರುಷಾರ್ಥ ಸಾಧಕವಾಗಲಾರವು ಎಂದು ವ್ಯತಿರೇಕ ಮುಖದಿಂದ ಭಗವದರ್ಪಣವು ಇತಿಕರ್ತವ್ಯತಾ ಕೋಟಿ ನಿವಿಷ್ಟವಾಗಿದೆ ಎಂದು ಇಲ್ಲಿ ಭಾಗವತವು ಸಮರ್ಥಿಸು ತ್ತಿದೆ.

❖❖❖

—೩೩೧—

## ಹರಿಪೂಜೆಯೆ ಅನ್ಯದೇವತಾಪೂಜೆ

**ಯಥಾ ತರೋರ್ಮೂಲನಿಷೇಚನೇನ**
**ತೃಪ್ಯಂತಿ ತತ್‌ಸ್ಕಂಧ ಭುಜೋಪಶಾಖಾಃ ।**
**ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ**
**ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥**

(ಭಾ.೪.೩೧.೧೪)

ನನು ಭಗವದರ್ಪಣಸ್ಯಾಪಿ ಇತಿಕರ್ತವ್ಯತಾಕೋಟಿನಿವಿಷ್ಟತ್ವೇ ಭಗವತೋಽನ್ಯಸ್ಯ ದೇವಾದೇಃ ಪೂಜಾದಿವಿಲೋಪಪ್ರಸಂಗಃ ।ತಸ್ಯ ಭಗವದರ್ಪಣೇ ತತ್ಪೂಜಾತ್ವಾದ್ಯಭಾವಾತ್ । ತದುದ್ದೇಶ್ಯಕಪೂಜಾದೇರೇವ

ತತ್ಪೂಜಾದಿತ್ವಾತ್। ತಥಾ ಚ ಸತಿ ಅಂಗವಿಕಲತಯಾ ಭಗವತ್ಪೂಜಾದೇರಪಿ ವಿಶಿಷ್ಟಫಲಾಧಾಯಕತ್ವಂ ನ ಸ್ಯಾತ್। ಸಾಂಗಸ್ಯೈವ ತಥಾತ್ವಾತ್। ಅಂಗದೇವತಾದಿಪೂಜಾಸಾಹಿತ್ಯೇನೈವ ಚ ಭಗವತ್ಪೂಜಾದೇಃ ಸಾಂಗತ್ವಾತ್। ತಥಾ ಚ ನ ಭಗವದರ್ಪಣಸ್ಯೇತಿಕರ್ತವ್ಯತಾಕೋಟೀ ನಿವೇಶೋ ಯುಕ್ತಃ ಇತ್ಯತ ಆಹ॥ **ಯಥೇತಿ**॥ ತರೋರ್ವೃಕ್ಷಸ್ಯ। ಮೂಲ ಏವ ನಿಷೇಚನೇನ ಕೃತೇನ। ಮೂಲಮಿವ ತಸ್ಯ ವೃಕ್ಷಸ್ಯ ಸ್ಕಂಧಾಃ ಸ್ಥೂಲಶಾಖಾಃ, ಭುಜಾಸ್ತತೋ ನಿಕೃಷ್ಟಾಃ ಶಾಖಾಃ, ಉಪಶಾಖಾಃ ಶಾಖಾಭ್ಯೋಽಪಿ ನಿಕೃಷ್ಟಾಃ ತಾ ಅಪಿ ತೃಪ್ಯಂತ್ಯೇವ। ತೇನ ತತ್ರಾಪಿ ಪಲ್ಲವಪುಷ್ಪಫಲೋದಯದರ್ಶನೇನ ತನ್ನಿಶ್ಚಯಾತ್। ತಥಾ ಚ ಪ್ರಾಣಸ್ಯ ದೇಹಾಂತಃಸಂಚಾರಿಣೋ ವಾಯೋಃ ಉಪಹಾರಾದುಪಸಂಹಾರ ರೂಪಯೋಗಾದೇವ ಇಂದ್ರಿಯಾಣಾಮಪ್ಯುಪಹಾರೋ ವಿಷಯೇಭ್ಯ ಆಕರ್ಷಣರೂಪೋಪಸಂಹಾರೋ ಭವತಿ। ತಥಾಚ್ಯುತಸ್ಯ ಹರೇರಿಜ್ಯಾ ಪೂಜಾದಿಲಕ್ಷಣಾ ಸೇವೈವ ಸರ್ವಸ್ಯಾಂಗದೇವಾದೇರರ್ಹಣಂ ಪೂಜಾ। ನ ಪೃಥಗಸ್ತಿ ತೇಷಾಂ ಪೂಜಾ ನಾಮೇತಿ॥ **ಇದಮುದಿತಂ ಭವತಿ**॥ ಕರ್ತವ್ಯಮೇವ ಸಮರ್ಪಣಂ। ನ ಚ ತತ್ಪೂಜಾಭಾವಃ। ಭಗವತ್ಪೂಜಾಯಾ ಏವ ತತ್ಪೂಜಾತ್ವಾತ್। ಭಗವದುದ್ದೇಶ್ಯಕಪೂಜಾಧಿಷ್ಠಾನತ್ವೈವ ಹಿ ಇತರೇಷಾಂ ಪೂಜಾ ನಾಮ। **ತಥಾ ಚೋಕ್ತಂ ಪುರಸ್ತಾತ್**—

''ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿಃ ಸಂಭಾವಿತವ್ಯಾನೀ'ತಿ।

ಅಂಗಿಪೂಜಾರೂಪಯೈವಾಂಗಪೂಜಯಾ ಅಂಗಾನಾಮಪಿ ತೃಪ್ತೇಸ್ತತಃ ಫಲೋನ್ಮುಖತ್ವಸ್ಯ ಚ ನಿದರ್ಶನೇ ನಿದರ್ಶಿತತ್ವೇನ ಸಾಂಗಾ ಭಗವತ್ಪೂಜೇತಿ। ತತೋ ವಿಶಿಷ್ಟಫಲಸ್ಯಾಪಿ ಉದಯಸಂಭವಾತ್। ನ ಚಾಂಗತ್ವಂ ದೇವಾನಾಂ ತರುನಿದರ್ಶನೇನೋಪಾದಾನತಾಮಾತ್ರೇಣಾವಯವತ್ವಮಿತಿ ಮಂತವ್ಯಂ। ಪ್ರಧಾನೇ ಯತ್ಕ್ರಿಯತೇ ತದಪ್ರಧಾನಸ್ಯಾಪಿ ಭವತಿ ಇತ್ಯಭಿಪ್ರಾಯೇಣೈವ ತಸ್ಯ ಗೃಹೀತತ್ವಾತ್। ಕಿಂ ತು(ಚ) ತದೇಕಾಧೀನಪ್ರವೃತ್ತಿಮತ್ತ್ವಮೇವ ತದಂಗತ್ವಮಿತ್ಯಭಿಪ್ರೇತ್ಯಾವಯವಾವಯವಿಭಾವ ರಹಿತನಿದರ್ಶನಾಂತ ರೋಪಾದಾನಮಿತಿ ಯುಕ್ತ ಏವ ಭಗವದರ್ಪಣಸ್ಯೇತಿಕರ್ತವ್ಯತಾಕೋಟೌ ನಿವೇಶ ಇತಿ। ಏತೇನ ಗುರ್ವಾದಿಪೂಜಾವಂದನಾದಿಕಮಪಿ ವ್ಯಾಖ್ಯಾತಂ ವೇದಿತವ್ಯಂ॥

❖❖❖

ನಾರದರು ಪ್ರಚೇತಸರಿಗೆ ಉಪದೇಶಿಸುತ್ತಾರೆ—

**ಮರದ ಬುಡದಲ್ಲಿ ನೀರೆರೆಯುವುದರಿಂದ ಮರದ ಕೊಂಬೆ ರೆಂಬೆ ಮುಂತಾದವು ಎಲ್ಲವೂ ತೃಪ್ತಿ ಹೊಂದುವುವು. ಪ್ರಾಣನಿಗೆ ಬಾಯಿಯಲ್ಲಿ ಅರ್ಪಿಸುವ ಅನ್ನದಿಂದ ಎಲ್ಲ ಇಂದ್ರಿಯಗಳಿಗೆ ತೃಪ್ತಿಯಾಗುವುದು. ಹಾಗೇ ಅಚ್ಯುತನಿಗೆ ಅರ್ಪಿಸಿದ ಪೂಜೆಯು ಎಲ್ಲ ದೇವತೆಗಳಿಗೂ ಪೂಜೆಯಾಗುವುದು. ಹರಿಗೆ ಅರ್ಪಿಸದ ಪೂಜೆಯನ್ನು ಆ ದೇವತೆಗಳು ಸ್ವೀಕರಿಸುವುದಿಲ್ಲ. ಹರಿಪೂಜೆಯೆ ಅವರಿಗೆ ಅವರ ಪೂಜೆಯೆನಿಸುವುದು.**

ಭಗವದರ್ಪಣವು ಇತಿಕರ್ತವ್ಯತಾ ಕೋಟಿನಿವಿಷ್ಟ, ಅದು ಕರ್ತವ್ಯವೇ ಆಗಿದೆ, ಬಿಡಲಾಗದು ಎಂದರೆ ಅನ್ಯದೇವತೆಗಳಿಗೆ ಪೂಜೆಯೇ ಲೋಪವಾದೀತು. ಏಕೆಂದರೆ ಭಗವಂತನಿಗೆ ಅರ್ಪಿಸಿದರೆ ಅದು ಭಗವಂತನ ಪೂಜೆ ಎಂದಾಗುವುದು. ಅವರ ಪೂಜೆ ಹೇಗಾಗುವುದು? ಅವರನ್ನು ಉದ್ದೇಶಿಸಿ ಪೂಜೆ ಮಾಡಿದರೇ ಅದು ಅವರ ಪೂಜೆ! ಹೀಗಾಗಿ ಅಂಗದೇವತಾಪೂಜೆ ಎಂಬ ಅಂಗದಿಂದ ವಿಕಲವಾದ ಭಗವತ್ಪೂಜೆಯೂ ಫಲಪ್ರದವಾಗದು. ಅಂಗದೇವತಾ ಪೂಜಾ ಸಹಿತವಾದರೇ ಭಗವತ್ಪೂಜೆ ಸಾಂಗವಾಗಿ ಫಲಪ್ರದವಾಗುವುದು. ಅದರಿಂದ ಭಗವದರ್ಪಣವನ್ನು ಇತಿಕರ್ತವ್ಯವೆನ್ನಬಾರದು.

ಈ ಪ್ರಶ್ನೆಗೆ ಸಮಾಧಾನ ಹೀಗೆ— ಭಗವದರ್ಪಣವು ಕರ್ತವ್ಯವೇ ಆಗಿದೆ. ಆಗ ಅಂಗದೇವತಾಪೂಜೆ ಇಲ್ಲವಾಗುವುದು ಎನ್ನಬಾರದು. ಭಗವತ್ಪೂಜೆಯೆ ಅಂಗದೇವತಾಪೂಜೆ. ಏಕೆಂದರೆ ಭಗವತ್ಪೂಜಾಧಿಷ್ಠಾನತ್ವವೇ ಅಂಗದೇವತೆಗಳಿಗೆ ಪೂಜೆ. ಹೊರತು ಅವರಿಗೆ ಅವರ ಉದ್ದೇಶವಾಗಿ ಬೇರೆ ಪೂಜೆ ಇಲ್ಲ. ಬೇರೆ ಪೂಜೆ ಮಾಡಿದರೆ ಅವರು ಅದನ್ನು ಸ್ವೀಕರಿಸುವುದಿಲ್ಲ. ಹಿಂದೆ ೨೫೦ನೇ ಶ್ಲೋಕದಲ್ಲಿ ಹಾಗೇ ಹೇಳಿದೆ.

ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿಃ
ಚರಾಣಿ ಭೂತಾನಿ ಸುತಾ ಧ್ರುವಾಣಿ ।
ಸಂಭಾವಿತವ್ಯಾನಿ ಪದೇಪದೇ ವೋ
ವಿವಿಕ್ತದೃಷ್ಟಿಸ್ತದುತಾರ್ಹಣಂ ಮೇ ॥

'ಭಗವದರ್ಪಣ ಮಾಡಲೇ ಬೇಕು. ಮಾಡಿದರೆ ಅಂಗದೇವತಾಪೂಜೆ ಲೋಪವೇನೂ ಆಗುವುದಿಲ್ಲ. ಭಗವಂತನ ಪೂಜೆಯೆ ಅಂಗದೇವತೆಗಳ ಪೂಜೆ

ಏಕೆಂದರೆ ಅಂಗದೇವತೆಗಳ ಪೂಜೆ ಮಾಡುವಾಗ ಅವರಲ್ಲಿರುವ ಹರಿಯೇ ಆ ಪೂಜೆಯನ್ನು ಸ್ವೀಕರಿಸುವವನು ಅವರು ಆ ಪೂಜೆಗೆ ಅಧಿಷ್ಠಾನ ಮಾತ್ರವಾಗಿರುತ್ತಾರೆ. 'ಎಲ್ಲ ಜೀವರನ್ನೂ ನನ್ನ ಅಧಿಷ್ಠಾನವೆಂದು ತಿಳಿದು ಯಥಾಯೋಗ್ಯವಾಗಿ ಅವರನ್ನು ಗೌರವಿಸಬೇಕು' ಎಂದು ಋಷಭದೇವನು ಪುತ್ರರಿಗೆ ಮೇಲಿನ ಶ್ಲೋಕದಲ್ಲಿ ಉಪದೇಶಿಸುತ್ತಿದ್ದಾನೆ.

ಆದರಿಂದ ಶ್ರೀಹರಿ ಅಂಗಿ, ಇತರ ದೇವತೆಗಳು ಅವನಿಗೆ ಅಂಗಭೂತರು ಹರಿಪೂಜೆ ಮಾಡುವಾಗ ಅಂಗಪೂಜೆ ತಾನಾಗಿ ಆಗುವುದು. ಆಗಲೆ ಅವರು ಫಲಕೊಡುವರು. ಹರಿಪೂಜೆಯೂ ಆಗ ಸಾಂಗವೆನಿಸಿ ಫಲಪ್ರದವಾಗುವುದು.

ಶ್ರೀಹರಿ ಮರದ ಬೇರು, ಇತರ ದೇವತೆಗಳು ಕೊಂಬೆ ರೆಂಬೆಗಳು ಎಂದು ಹೇಳಿದ ಮಾತ್ರಕ್ಕೆ ದೇವತೆಗಳಿಗೆ ಹರಿ ಉಪಾದಾನ ಕಾರಣ ಎಂದರ್ಥವಲ್ಲ. ಮುಖ್ಯನಿಗೆ ಪೂಜೆ ಮಾಡಿದಾಗ ಅಮುಖ್ಯರಿಗೆ ಅದುವೆ ಪೂಜೆ ಎನಿಸುವುದು ಎನ್ನುವಲ್ಲಿ ಮರದ ಕೊಂಬೆಗಳ ದೃಷ್ಟಾಂತವಿದೆ. ಹರಿಯೆ ಸ್ವತಂತ್ರ ಇತರರು ಅಸ್ವತಂತ್ರರೆನ್ನುವಲ್ಲಿ ಪ್ರಾಣ ಇಂದ್ರಿಯಗಳ ದೃಷ್ಟಾಂತ. ಪ್ರಾಣ ಇಂದ್ರಿಯಗಳಿಗೆ ಉಪಾದಾನ ಕಾರಣವಲ್ಲ. ಹೀಗೆ ಉಪಾದಾನಕಾರಣತ್ವವು ವಿವಕ್ಷಿತವಲ್ಲ ಎನ್ನುವುದಕ್ಕೇ ಉಪಾದಾನಕಾರಣತ್ವವಿಲ್ಲದ ಪ್ರಾಣ ಇಂದ್ರಿಯಗಳ ದೃಷ್ಟಾಂತ ನೀಡಲಾಗಿದೆ. ಹೀಗೆ ಭಗವದರ್ಪಣವು ಎಲ್ಲ ಕರ್ಮಗಳಿಗೆ ಇತಿಕರ್ತವ್ಯತಾರೂಪವಾಗಿದೆ. ಆತ್ಮೀಯವಾದ ದ್ರವ್ಯಗುಣಕರ್ಮ ಮೂರನ್ನು ಹರಿಗೆ ಅರ್ಪಿಸಬೇಕು. ಗುರುಹಿರಿಯರಿಗೆ ಮಾಡುವ ಪೂಜೆಗಳು ಸತ್ಕಾರಗಳೆಲ್ಲವೂ ಹರಿಪೂಜೆಯೇ ಆಗಿದೆ ಎಂದು ತಿಳಿಯಬೇಕು. ಹಾಗೇ ಸಮರ್ಪಿಸಬೇಕು. ಅವರಿಗೇ ಪ್ರಧಾನವಾಗಿ ಎಂದೂ ಪೂಜೆ ಮಾಡಬಾರದು.

❖❖❖

# ೨೩. ಭಕ್ತಿಸ್ತುತಿ ಪ್ರಕರಣ

## ಪ್ರಕರಣ ಸಾರಾಂಶ

ಬಂಧಕ ಪ್ರಕೃತಿಯು ಮುಖ್ಯವಾಗಿ ಭಗವದಿಚ್ಛೆಯೆ. ಜಡ ಪ್ರಕೃತಿಯು ಕೇವಲ ನಿಮಿತ್ತ ಮಾತ್ರ. ಅದರಿಂದ ಭಗವಂತನಲ್ಲಿ ಭಕ್ತಿಮಾಡಿದರೆ ಅದಕ್ಕೆ ಒಲಿದು ತನ್ನ ಬಂಧಕ ಇಚ್ಛಾರೂಪ ಪ್ರಕೃತಿಯನ್ನು ದೂರ ಮಾಡುತ್ತಾನೆ. ಭಕ್ತಿ ಉಕ್ಕಿದಾಗ ಹೃದಯ ಕರಗಿ ಅಳುವುದು ನಗುವುದು ಕುಣಿಯುವುದು ಮುಂತಾದವು ಭಕ್ತನಲ್ಲಿ ಕಂಡುಬರಬಹುದು. ಇಂಥ ವಿಲಕ್ಷಣಚರ್ಯೆಯನ್ನು ಅನ್ಯಥಾ ತಿಳಿದು ಹಾಸ್ಯ ಮಾಡಬಾರದು. ಭಕ್ತನು ತಾನು ಪವಿತ್ರನಾಗಿದ್ದು ಲೋಕವನ್ನು ಪಾವನಗೊಳಿಸುತ್ತಾನೆ.

ಆದರೂ ಈ ಅಳುವುದು ನಗುವುದು ಮುಂತಾದವು ಡಾಂಭಿಕ ರಲ್ಲೂ ಕಾಣುವುದರಿಂದ ಗುರುಹಿರಿಯರಿಗೆ ಅನುಮಾನ ಬಂದರೆ ಅವರು ಅವನಿಗೆ ಅನುಗ್ರಹ ಮಾಡದಿರಬಹುದು. ಅದರಿಂದ ಅವುಗಳನ್ನು ಪ್ರಯತ್ನ ದಿಂದ ಭಕ್ತನು ಹತ್ತಿಕ್ಕಿಕೊಳ್ಳುವುದೇ ಒಳ್ಳೆಯದು. ಅಂತು ಭಕ್ತಿಯು ರೋಗಾದಿ ಉಪದ್ರವಗಳಿಂದಾಗಲಿ ನಾಸ್ತಿಕ ವಾದಗಳ ಅಬ್ಬರ ದಿಂದಾಗಲಿ ವಿಚಲಿತವಾಗಬಾರದು.

ಹರಿಯನ್ನು ಒಲಿಸಿಕೊಳ್ಳಲು ಸ್ಥಿರವಾದ ಭಕ್ತಿ ಒಂದಿದ್ದರೆ ಸಾಕು. ಸತ್ಕುಲದಲ್ಲಿ ಜನ್ಮ, ಧನ ಸಂಪತ್ತು ಬುದ್ಧಿ ವೈಭವಾದಿಗಳೂ ಯಾವುವೂ ಬೇಕಾಗಿಲ್ಲ. ತಿರ್ಯಕ್ ಪ್ರಾಣಿಜನ್ಮ ತಳೆದ ಕಪಿಗಳಿಗೂ ಹರಿ ಒಲಿದಿದ್ದಾನೆ. ಅಸುರರನ್ನೂ ಅನುಗ್ರಹಿಸಿ ದ್ದಾನೆ. ಮೊದಲಿಗೆ ದ್ವೇಷಮಾಡಿದ ಅಸುರರು ಅಂತರಂಗದಲ್ಲಿ ಭಕ್ತಿ ಮಾಡುತ್ತ ಕೊನೆಯಲ್ಲಿ ವಿಷ್ಣುಚಕ್ರ ತಮ್ಮಮೇಲೆ ಆಕ್ರಮಣ ಮಾಡುವುದನ್ನೆ ಭಕ್ತಿಯಿಂದ ನೋಡುತ್ತ ದೇಹತ್ಯಾಗ ಮಾಡಿದವ ರುಂಟು.

❖❖❖

## –೩೩೨–

### ಭಕ್ತಿಯ ಲಕ್ಷಣ

**ವಾಗ್ ಗದ್ಗದಾ ದ್ರವತೇ ಯಸ್ಯ ಚಿತ್ತಂ**
**ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।**
**ವಿಲಜ್ಜ ಉದ್ಗಾಯತಿ ನೃತ್ಯತೇ ಚ**
**ಮದ್‌ಭಕ್ತಿಯುಕ್ತೋ ಭುವನಂ ಪುನಾತಿ ॥**

(ಭಾ.೧೧.೧೪.೨೪)

**॥ ಶ್ರೀಲಕ್ಷ್ಮೀವೇಂಕಟೇಶಾಯ ನಮಃ ॥** ಏವಮತೀತಗ್ರಂಥೇನ ತ್ರಿಂಶದ್ವಿಧಾನ್ ಭಾಗವತಧರ್ಮಾನ್ ಪ್ರದರ್ಶ್ಯ ಅಧುನಾ ಈದೃಶಭಾಗವತ ಧರ್ಮಾನ್ ಅನುತಿಷ್ಠತಸ್ತತ್ರ ಶಿರೋಮಣಿಸದೃಶಂ ಬಿಂಬೋಪಾಸನಾ ಪರಪರ್ಯಾಯಂ ಆತ್ಮಸಮರ್ಪಣಂ ಆದರನೈರಂತರ್ಯಾಭ್ಯಾಂ ಕುರ್ವತೋ ಭಾಗವತಪ್ರಧಾನಸ್ಯ ಭಕ್ತಿರತುಲಾ ಭವತಿ । ತತ್ಕಾರ್ಯಾಣಿ ಚೈತಾನಿ । ತಾನಿ ಚ ದೃಷ್ಟ್ವಾ ತೇಷಾಂ ಭಾಗವತಪ್ರಧಾನಾನಾಂ ಲೋಕವಿಲಕ್ಷಣಾಂ ಚರ್ಯಾಂ ದೃಷ್ಟ್ವಾ ಮುಮುಕ್ಷುಭಿಃ ಅನ್ಯಥಾಮತಿಃ ಸರ್ವಥಾ ನ ಕರ್ತವ್ಯಾ । ತಯಾ ಚ ಭಕ್ತ್ಯಾ ಗುಣನಿವೃತ್ತಿರೂಪಂ ಮಾಯಾತರಣಂ ಭವತೀತ್ಯಾದಿಕಂ ವಕ್ತುಮುತ್ತರೋ ಗ್ರಂಥಸಂದರ್ಭಃ । ಯಥಾಹುಃ—

''ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ಭಕ್ತ್ಯಾ ತದುತ್ಥಯಾ ।
ನಾರಾಯಣಪರೋ ಮಾಯಾಮಂಜ ಸ್ತರತಿ ದುಸ್ತರಾಂ'' ಇತಿ ॥

ದ್ವಿವಿಧಾ ಮಾಯಾ । ಏಕಾ ಭಗವತ್ಸ್ವರೂಪಭೂತಾ ತದಿಚ್ಛಾರೂಪಾ । ಅಪರಾ ಭಗವತೋ ಭಿನ್ನಾ ಭಗವದಧೀನಾ ಗುಣತ್ರಯರೂಪಾ ಅವಿದ್ಯಾಪ್ರಕೃತಿವಾಸನಾದಿಪದಾಭಿಧೇಯಾ । ತತ್ರಾದ್ಯಾ ಜಗದುತ್ಪತ್ತ್ಯಾದೌ ನಿಮಿತ್ತಭೂತಾ । ದ್ವಿತೀಯೋಪಾದಾನಭೂತಾ । ತತ್ರ ಆದ್ಯೈವ ದ್ವಿತೀಯಾಂ ನಿಮಿತ್ತೀಕೃತ್ಯ ಮುಖ್ಯತೋ ಜೀವಾನಾಂ ಬಂಧಿಕಾ । ತತ್ರಾದ್ಯಾಯಾಸ್ತರಣಂ ಅನುಗ್ರಹೋನ್ಮುಖೀಕರಣಮೇವ ಭಕ್ತ್ಯಾ । ದ್ವಿತೀಯಾಯಾಸ್ತು ಪರಿತ್ಯಾಗ ಏವೇತಿ । ತತ್ರಾದಾವೇವ ತ್ರಿಂಶದ್ವಿಧಭಾಗವತ ಧರ್ಮಾನುಷ್ಠಾನೇನ ಭಕ್ತಿಸಂಪಾದನೇ ಕೋ ವಿಶೇಷೋ ಭಕ್ತೇರಿತ್ಯತೋಽನಿಷ್ಟಪರಿಹಾರೇಷ್ಟ-ಪ್ರಾಪ್ತ್ಯೋರಪ್ಯಂತರಂಗಸಾಧನಭೂತಾ ಸೈವ । ತತೋಽವಶ್ಯಂ ಸಂಪಾದ್ಯಾ ಇತಿ ಭಾವೇನ ತಾಂ ಸ್ತೋತುಂ ಇದಂ ಪ್ರಕರಣಂ । ತತ್ರಾದೌ ಭಕ್ತೇಃ

**ಸಕಲಪಾಪಪರಿಹಾರಕತ್ವರೂಪಂ ಮಾಹಾತ್ಮ್ಯಂ ದರ್ಶಯತಿ । ವಾಗ್ಗದ್ಗದೇತಿ ॥ ಯಸ್ಯ ವಾಗ್ಗದ್ಗದಾ ಭವತಿ । ಯಸ್ಯ ಚಿತ್ತಂ ದ್ರವತೇ । ಯಶ್ಚ ಕ್ವಚಿದ್ರುದತಿ । ಕುತ್ರಚಿಚ್ಚ ಹಸತಿ । ಕದಾಚಿದ್ವಿಲಜ್ಜ ಉದ್ಗಾಯತಿ । ಕ್ವಾಪಿ ವಿಲಜ್ಜಃ ಸನ್ನೃತ್ಯತಿ ಚ । ಸ ಏವೈತೈರ್ಭಕ್ತಿಕಾರ್ಯೈರ್ಮದ್ಭಕ್ತಿಯುಕ್ತ ಇತಿ ಜ್ಞೇಯಂ । ಸ ತಾದೃಶ ಏವ ಭುವನಮಪಿ ಸಂಭಾಷಣಾದಿನಾ ಪುನಾತಿ ಪವಿತ್ರೀಕರೋತಿ । ಕಿಮು ಸ್ವಯಂ ಇತಿ । ಯಥಾಹುಃ—**

**'ಸಾಧೂನಾಂ ದರ್ಶನಂ ಸ್ಪರ್ಶಃ ಕೀರ್ತನಂ ಸ್ಮರಣಂ ತಥಾ ।**
**ತೀರ್ಥಾನಾಮಿವ ಪುಣ್ಯಾನಾಂ ಸರ್ವಮೇವ ಹಿ ಪಾವನಂ' ಇತಿ ॥**

❖❖❖

**ಶ್ರೀಕೃಷ್ಣನು ಉದ್ಧವನಿಗೆ ಹೇಳುತ್ತಾನೆ—**

**ಭಗವಂತನ ಸ್ಮರಣೆಯಿಂದ ಯಾರ ಕಂಠವು ಬಿಗಿದು ಬರುವುದೋ ಯಾರ ಚಿತ್ತ ಕರಗುವುದೋ ಯಾರು ಕೆಲವೊಮ್ಮೆ ಜೋರಾಗಿ ಕಣ್ಣೀರಿಡುವನೋ ನಗುವನೋ ಲಜ್ಜೆಬಿಟ್ಟು ಗಟ್ಟಿಯಾಗಿ ಸ್ತೋತ್ರ ಮಾಡುತ್ತ ಕುಣಿಯುವರೋ ಇಂಥ ಭಕ್ತನು ಲೋಕವನ್ನು ಪಾವನಗೊಳಿಸುವನು.**

ಭಾಗವತ ತಾತ್ಪರ್ಯ (೧೧.೧೪.೨೪)ದಲ್ಲಿ ಭಕ್ತಿಯ ಬಗ್ಗೆ ಹೀಗೆ ಹೇಳಿದ್ದಾರೆ— ಭಕ್ತನ ಮನಸ್ಸು ಭಗವಂತನ ಕಡೆಗೆ ಪ್ರೀತಿಯಿಂದ ಧಾವಿಸುವುದು, ಅವನನ್ನು ಹೋಗಿ ಸೇರಿ ಸ್ಥಿರವಾಗಿ ಅಲ್ಲಿಯೇ ನೆಲೆಸುವುದು, ಪ್ರಸನ್ನನಾಗುವುದು, ಇವು ಭಕ್ತಿಯ ಲಕ್ಷಣಗಳು. ಸ್ಥಿರತೆಯು ಮುಖ್ಯಲಕ್ಷಣ. ಆನಂದಬಾಷ್ಪ ರೋಮಾಂಚಾದಿಗಳು ಡಾಂಬಿಕರಲ್ಲಿಯೂ ಚಂಚಲ ಭಕ್ತಿ ಉಳ್ಳವರಲ್ಲಿಯೂ ಕಂಡುಬರುತ್ತದೆ. ಅದರಿಂದ ಭಕ್ತನ ಭಕ್ತಿಯ ಬಗ್ಗೆ ಗುರುಹಿರಿಯರಿಗೆ ಅನುಮಾನ ಬಂದರೆ ಅವರು ಈತನಿಗೆ ಅನುಗ್ರಹ ಮಾಡದಿರುವ ಸಂಭವವಿದೆ. ಹೀಗಾಗಿ ಭಯದಿಂದ ಭಕ್ತನು ಅವುಗಳನ್ನು ಪ್ರಯತ್ನದಿಂದ ಹತ್ತಿಕ್ಕಿಕೊಳ್ಳಬೇಕು. ಲಜ್ಜೆಯಿಂದಲ್ಲ. ಗುರುಹಿರಿಯರ ಅನುಗ್ರಹ ಪಡೆದು ಭಕ್ತನು ರೋಗಾದಿ ಉಪದ್ರವಗಳಿಂದಾಗಲಿ ಜನರ ನಾಸ್ತಿಕ ವಾದಗಳ ಅಬ್ಬರದಿಂದಾಗಲಿ ರಾಜಕೀಯ ಪ್ರಭಾವದಿಂದಾಗಲಿ ವಿಚಲಿತವಾಗದಂಥ ಸ್ಥಿರವಾದ ಭಕ್ತಿಯನ್ನು ಸಂಪಾದಿಸಬೇಕು. ಆಗ ಭಕ್ತ ಹರಿಗೆ ಪ್ರಿಯನೆನಿಸುತ್ತಾನೆ. ಅಲ್ಪಭಕ್ತಿಯನ್ನೇ ಬಹಳ ಪ್ರದರ್ಶನ ಮಾಡಿ ಫಲವಿಲ್ಲ' ಎಂದು.

ಮೂವತ್ತು ಭಾಗವತಧರ್ಮಗಳನ್ನು ಅನುಷ್ಠಾನ ಮಾಡುತ್ತ ಆತ್ಮಸಮರ್ಪಣರೂಪ ಬಿಂಬೋಪಾಸನವನ್ನು ನಿರಂತರ ಬಿಡದೆ ಮಾಡುವವನಿಗೆ ನಿಜವಾದ ಭಕ್ತಿ ಹುಟ್ಟುತ್ತದೆ. ಅದು ಲೋಕವನ್ನೆ ಪಾವನ ಮಾಡುತ್ತದೆ. ಕೆಲವು ಲೋಕವಿಲಕ್ಷಣ ಚರ್ಯೆಗಳು ಭಕ್ತನಲ್ಲಿ ಕಂಡುಬರುವುದನ್ನು ನೋಡಿ ಮುಮುಕ್ಷುಗಳು ಅನ್ಯಥಾ ತಿಳಿಯಬಾರದು. ಭಕ್ತಿಯಿಂದ ತ್ರಿಗುಣನಿವೃತ್ತಿ, 'ಮಾಯಾತರಣ'ವಾಗುವುದು. ಇದು ಭಾಗವತದಲ್ಲಿ ಪ್ರಬುದ್ಧಮುನಿಗಳ ಉಪದೇಶದ ಕೊನೆಯಲ್ಲಿ ಕಂಡುಬರುತ್ತದೆ—

ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ ಭಕ್ತ್ಯಾತದುತ್ಥಯಾ ।
ನಾರಾಯಣಪರೋ ಮಾಯಾಮಂಜಸ್ತರತಿ ದುಸ್ತರಾಂ ॥

'ಹೀಗೆ ಭಾಗವತಧರ್ಮಗಳನ್ನು ಗುರುಗಳಿಂದ ಕೇಳಿ ತಿಳಿದು ಅದರಿಂದ ಉಕ್ಕುವ ಭಕ್ತಿಯಿಂದ ಭಕ್ತನು ನಾರಾಯಣನ ಆರಾಧನ ಮಾಡಿದರೆ ದುಸ್ತರವಾದ ತ್ರಿಗುಣಾತ್ಮಕ ಬಂಧಕ ಪ್ರಕೃತಿಯಿಂದ 'ಮಾಯೆ'ಯಿಂದ ಬಿಡುಗಡೆ ಹೊಂದುವನು' ಎಂದು.

'ಮಾಯೆ' ಎಂದರೆ ಬಂಧಕಪ್ರಕೃತಿ ಎರಡು ಬಗೆ. ಒಂದು, ಭಗವಂತನ ಸ್ವರೂಪಭೂತವಾದ ಇಚ್ಛೆ, 'ಈತನನ್ನು ಸಂಸಾರಬಂಧನದಲ್ಲಿರಿಸುತ್ತೇನೆ' ಎಂದು ಭಗವಂತನ ಇಚ್ಛೆ ಅನಾದಿಯಿಂದಲೂ ಇರುವುದರಿಂದ ಜೀವನಿಗೆ ಸಂಸಾರಬಂಧನ ಅನಾದಿ. ಭಗವಂತನ ಈ ಇಚ್ಛೆಗೆ 'ಪ್ರಕೃತಿ' ಎಂದೂ 'ವಾಸನಾ' ಎಂದೂ ಹೆಸರಿದೆ. ಇದು ಜಗತ್ತಿನ ಉತ್ಪತ್ತಿಗೆ ನಿಮಿತ್ತಕಾರಣ ಹೊರತು ಉಪಾದಾನ ಕಾರಣವಲ್ಲ. ಇದು ಒಂದು ಮಾಯೆ. ಇನ್ನೊಂದು ಮಾಯೆ ತ್ರಿಗುಣಾತ್ಮಕವಾದ ಜಡಪ್ರಕೃತಿ. ಈ ಪ್ರಕೃತಿಯನ್ನು ನಿಮಿತ್ತ ಮಾಡಿಕೊಂಡು ಭಗವದಿಚ್ಛೆ ಜೀವರನ್ನು ಸಂಸಾರದಲ್ಲಿ ಬಂಧಿಸುತ್ತದೆ. ಅದೇ ಮುಖ್ಯವಾಗಿ ಬಂಧಕ. ಪ್ರಕೃತಿ ಕೇವಲ ನಿಮಿತ್ತ. ಮುಖ್ಯಬಂಧಕವಾದ ಭಗವದಿಚ್ಛಾರೂಪ ಮಾಯೆಯನ್ನು ತರಣ ಮಾಡಬೇಕಾದರೆ, ದಾಟಬೇಕಾದರೆ ಬಂಧನದಿಂದ ಬಿಡುಗಡೆ ಹೊಂದಬೇಕಾದರೆ ಭಗವಂತನನ್ನು ಒಲಿಸಿಕೊಳ್ಳಬೇಕು, ಅನುಗ್ರಹೋನ್ಮುಖನನ್ನಾಗಿ ಮಾಡಬೇಕು. ಅದು ಭಕ್ತಿಯಿಂದಲೇ ಸಾಧ್ಯ. ಜಡಪ್ರಕೃತಿ ರೂಪ ಮಾಯೆಯ ತರಣವೆಂದರೆ ಅದರ ಪರಿತ್ಯಾಗವೆ. ಇದೂ

ಭಕ್ತಿಯಿಂದಲೇ ಸಾಧ್ಯ. ಈ ಭಕ್ತಿಯ ಮಹಾತ್ಮ್ಯವನ್ನು ಭಾಗವತವು ಹೊಗಳುತ್ತದೆ—'ಮದ್‌ಭಕ್ತಿಯುಕ್ತೋ ಭುವನಂ ಪುನಾತಿ' ನನ್ನ ಭಕ್ತಿ ಉಳ್ಳವನು ತನ್ನೊಡನೆ ಮಾತಾಡುವವನನ್ನು ತನ್ನ ಮಾತಿನಿಂದ ನಡತೆಯಿಂದ ಪವಿತ್ರೀಕರಿಸುವನು, ಇನ್ನು ತಾನು ಪವಿತ್ರನಾಗಿರುವನೆಂದು ಬೇರೇನು ಹೇಳಬೇಕು ಎಂದು. ಭಾಗವತದಲ್ಲಿ ನೃಗರಾಜ ಭಕ್ತರ ಸಂಗದಿಂದ ಶ್ರೀಕೃಷ್ಣನ ದರ್ಶನ ಪಡೆದು ನರಕದಿಂದ ಮುಕ್ತನಾದನೆಂದು ಶುಕಮುನಿ ಹೇಳುತ್ತಾರೆ—

ಸಾಧೂನಾಂ ದರ್ಶನಂ ಸ್ಪರ್ಶಃ ಕೀರ್ತನಂ ಸ್ಮರಣಂ ತಥಾ ।
ತೀರ್ಥಾನಾಮಿವ ಪುಣ್ಯಾನಾಂ ಸರ್ವಮೇವ ಹಿ ಪಾವನಂ ॥

(ಭಾ.೧೦.೮೯.೫೯)

'ಸಜ್ಜನರ ದರ್ಶನ ಸ್ಪರ್ಶ ನಾಮೋಚ್ಚಾರಣ ಸ್ಮರಣಗಳೆಲ್ಲವೂ ಗಂಗಾದಿ ಪುಣ್ಯತೀರ್ಥದರ್ಶನಾದಿಗಳಂತೆ ಪಾವನವಾಗಿವೆ' ಎಂದು.

❖❖❖

—೩೩೩—

**ಭಕ್ತಿಸಂಪಾದನೆಯಿಂದಲೆ ಧನ್ಯತೆ**

**ತಸ್ಮಿನ್ ಭವಂತಾವಖಿಲಾತ್ಮ ಯೋನೌ**
**ನಾರಾಯಣೇ ಕಾರಣಮರ್ತ್ಯಮೂರ್ತೌ ।**
**ಭಾವಂ ವ್ಯಧತ್ತಾಂ ನಿತರಾಂ ಮಹಾತ್ಮನ್**
**ಕಿಂ ವಾಽವಶಿಷ್ಟಂ ಯುವಯೋಃ ಸುಕೃತ್ಯಂ ॥**

(ಭಾ.೧೦.೪೪.೩೪)

**ಸಕಲ ಪ್ರಾಪ್ತವ್ಯ ಪ್ರಾಪಕತಯಾ ಕೃತಕೃತ್ಯತಾಪ್ರದತ್ವ ರೂಪಂ ಮಹಿಮಾಂತರಮಾಹ ॥ ತಸ್ಮಿನ್ನಿತಿ ॥ ಮಹಾತ್ಮನ್ ಮಹಾತ್ಮನಿ । ತಸ್ಮಿನ್ನತೋ ಭಾವಂ ಭಕ್ತಿಂ ವ್ಯಧತ್ತಾಂ ಕೃತವಂತೌ । ಅತೋ ಯುವಯೋಃ । ಸುಕೃತ್ಯಂ ಶೋಭನಂ ಕರ್ತವ್ಯಂ ಕರ್ಮ । ಕಿಂ ವಾಽವಶಿಷ್ಟಮಸ್ತಿ ನ ಕಿಮಪಿ । ಸರ್ವಸ್ಯಾಪಿ ಭಕ್ತ್ಯರ್ಥತ್ವಾತ್ತಸ್ಯಾಶ್ಚ ಸಂಪಾದಿತತಯಾ ಸರ್ವಾಪೇಕ್ಷಿತಸ್ಯ ಸಿದ್ಧತ್ವಾದಿತಿ ಭಾವಃ ॥**

❖❖❖

ಉದ್ಧವನು ನಂದಯಶೋದೆಯರಿಗೆ ಹೇಳುತ್ತಾನೆ—

ಎಲ್ಲ ಜೀವಜಡ ಪ್ರಪಂಚಕ್ಕೆ ಸ್ವಾಮಿಯೂ ನಿಮಿತ್ತಕಾರಣನೂ ಆದ ಭೂಭಾರಹರಣಕ್ಕಾಗಿ ಮಾನವರೂಪದಿಂದ ಅವತರಿಸಿರುವ ಬ್ರಹ್ಮದೇವನಿಗೂ ಪ್ರಭುವಾದ ಆ ನಾರಾಯಣನಲ್ಲಿ ನೀವು ಚೆನ್ನಾಗಿ ಭಕ್ತಿಯನ್ನು ಮಾಡಿರುವಿರಿ. ಎಲ್ಲ ಸಾಧನಗಳೂ ಭಕ್ತಿಗಾಗಿ ವಿಹಿತವಾಗಿವೆ. ಅಂಥ ಭಕ್ತಿ ನಿಮಗೆ ದೊರಕಿದೆ. ಭಕ್ತಿ ಒಂದಿದ್ದರೆ ಎಲ್ಲ ಅಭೀಷ್ಟಸಿದ್ಧವಾದಂತೆಯೆ ಅದರಿಂದ 'ನೀವು ಇನ್ನೂ ಸಾಧಿಸಬೇಕಾದುದೇನು ಉಳಿದಿದೆ? ಏನೂ ಇಲ್ಲ' ಎಂದು.

ಇಲ್ಲಿ 'ಭಕ್ತನನ್ನು ಅವನು ಹೊಂದಬೇಕಾದುದೆಲ್ಲ ಹೊಂದುವಂತೆ ಮಾಡಿ ಅವನನ್ನು ಕೃತಕೃತ್ಯನೆನಿಸುವಂತೆ ಮಾಡುವುದು ಭಕ್ತಿಯ ಮಾಹಾತ್ಮ್ಯವೆಂದು 'ಕಿಂ ವಾವಶಿಷ್ಟಂ' ಇನ್ನೇನು ಮಾಡುವುದು ಉಳಿದಿದೆ' ಎನ್ನುವ ಮಾತಿನಿಂದ ಸ್ಪಷ್ಟಪಡಿಸುತ್ತಿದೆ ಭಾಗವತ.

❖❖❖

–೩೩೪–

**ಭಕ್ತಿಗೇ ಹರಿಮೆಚ್ಚುವನು**

ಮನ್ಯೇ ಧನಾಭಿಜನರೂಪತಪಃಶ್ರುತೌಜ-
ಸ್ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ ।
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ
ಭಕ್ತ್ಯಾತುತೋಷ ಭಗವಾನ್ ನನು ಯೂಥಪಾಯ ॥

(ಭಾ.೭.೯.೯)

ಸರ್ವತೋಽತಿಶಯೇನ ಭಗವತ್ಪ್ರೀತಿಹೇತುತ್ವರೂಪಂ ಮಹಿಮಾಂತರಮಾಹ ॥ ಮನ್ಯ ಇತಿ ॥ ಧನಾದಯೋ ಬುದ್ಧಿಪರ್ಯಂತಾ ಉಪಾಯಾಸ್ತೇ। ಪರಮಪುರುಷಸ್ಯ ಹರೇಃ ಆರಾಧನಾಯ ಪ್ರೀತಯೇ। ತಾಂ ಜನಯಿತುಂ ಸಮರ್ಥಾ ನ ಭವಂತಿ। ಇತಿ ಮನ್ಯೇ ನಿಶ್ಚಿನೋಮಿ। ಕುತಃ। ಹಿರ್ಹೇತೌ। ಯಸ್ಮಾದ್ಭಗವಾನ್ಯೂಥಪಾಯ ಗಜೇಂದ್ರಾಯ। ಭಕ್ತ್ಯೈವ ತುತೋಷ ಸಂತುಷ್ಟೋ ಬಭೂವ। ನನು ಪುರಾಣಾದಿನಾ ನಿಶ್ಚಿತಮೇತದಿತಿ। ತಸ್ಮಾದಿತಿ ಯೋಜನಾ। ಇದಮುದಿತಂ ಭವತಿ—ಭಗವಾನ್ ಚಕ್ರೇಣ ನಕ್ರವದನಂ

ವಿದಾರ್ಯ ಗಜೇಂದ್ರಂ ಮೋಚಯಾಮಾಸ ಇತಿ ತಾವತ್ ಪುರಾಣಾದೌ ಪ್ರಸಿದ್ಧಂ। ನ ಚ ತನ್ಮೋಚನಂ ವಿನಾ ತಸ್ಮಿನ್ಪರಮಾಂ ಪ್ರೀತಿಂ ಘಟತೇ। ನ ಚ ತತ್ಪ್ರೀತೌ ಸಾಧನಾನಿ ಧನಾದೀನಿ ಪ್ರಸಿದ್ಧಾನಿ ಸಂಭಾವಿತಾನಿ ಭವಂತಿ। ತತೋ ಭಕ್ತಿರೇವ ತತ್ರ ತೋಷಹೇತುತಯಾ ನಿಶ್ಚಿತೇತಿ ನ ಧನಾದಿಕಂ ಭಗವದಾರಾಧನಾಯ ಭವತೀತಿ ॥

❖❖❖

ಪ್ರಹ್ಲಾದನು ನರಸಿಂಹನನ್ನು ಸ್ತುತಿಸುತ್ತಾನೆ—

ಧನಸಂಪತ್ತು ಸತ್ಕುಲದಲ್ಲಿ ಜನಿಸುವುದು ಒಳ್ಳೆಯ ರೂಪ, ತಪಸ್ಸು ವೇದಾಧ್ಯಯನ ಸಹನಶಕ್ತಿ ಕಾಂತಿ ಮಹಿಮೆ ಬಲ ಪರಾಕ್ರಮ ಬುದ್ಧಿ ಈ ಯಾವ ಸಾಧನೆಯೂ ಪರಮಪುರುಷನಾದ ಹರಿಯ ಪ್ರೀತಿ ಸಂಪಾದನೆಗೆ ಉಪಯುಕ್ತವಾಗದೆಂದು ನಾನು ತಿಳಿದಿದ್ದೇನೆ. ಏಕೆಂದರೆ ಅವನು ಗಜರಾಜನ ಭಕ್ತಿಗೇ ಒಲಿದುದು ಪುರಾಣ ಪ್ರಸಿದ್ಧವಿದೆ.

ಭಗವಂತ ಚಕ್ರದಿಂದ ಮೊಸಳೆಯ ಬಾಯಿಯನ್ನು ಕತ್ತರಿಸಿ ಗಜೇಂದ್ರನನ್ನು ಉಳಿಸಿದ್ದು ಪುರಾಣದಲ್ಲಿ ಉಕ್ತವಾಗಿದೆ. ಗಜೇಂದ್ರನಲ್ಲಿ ಧನ ಸಂಪತ್ತು ಮುಂತಾದುದು ಏನೂ ಇರಲಿಲ್ಲ ಎಂದಮೇಲೆ ಅವನ ಭಕ್ತಿಗೇ ಹರಿ ಮೆಚ್ಚಿದನೆಂದು ನಿಶ್ಚಿತವಾಯಿತು ತಾನೆ? ಇದು ಭಕ್ತಿಯ ಮಾಹಾತ್ಮ್ಯ.

❖❖❖

–೩೩೫–

## ಭಕ್ತಿಯೆ ಎಲ್ಲಕ್ಕಿಂತ ಹೆಚ್ಚಿನ ಗುಣ

ನ ಜನ್ಮ ನೂನಂ ಮಹತೋ ನ ಸೌಭಗಂ
ನ ವಾಂಗ ಬುದ್ಧಿರ್ನಾಕೃತಿಸ್ತೋಷಹೇತುಃ ।
ತಿರ್ಯಗ್ ವಿಸೃಷ್ಟಾನಪಿ ನೋ ವನೌಕಸ-
ಶ್ಚಕಾರ ಸಖ್ಯೇ ಬತ ಲಕ್ಷ್ಮಣಾಗ್ರಜಃ ॥

(ಭಾ.೫.೧೯.೭)

ಏತದೇವಮೇವ ನ ಚಾತ್ರ ಸಂದೇಹಃ ಕರ್ತವ್ಯ ಇತಿ ಭಾವೇನ

**ಆರ್ಷ್ಟಿಷೇಣಂ ಪ್ರತ್ಯುಕ್ತಂ ಹನುಮತೋ ವಚನಮೇವ ದರ್ಶಯತಿ ॥ ನ ಜನ್ಮೇತಿ ॥ ಹೇ ಅಂಗ, ಮಹತೋ ಗುಣಗ್ರಾಹಿಣಾಂ ವರಿಷ್ಠಸ್ಯ ರಾಮಸ್ಯ । ಜನ್ಮ ವರಿಷ್ಠಂ ನ ತೋಷಹೇತುಃ । ಸೌಭಗಂ ಚ ನ । ಬುದ್ಧಿರ್ವಾ ನ । ಆಕೃತಿರಪಿ ನ । ನೂನಂ ನಿಶ್ಚಿತಮೇತತ್ । ಕುತಃ । ಯತೋ ಲಕ್ಷ್ಮಣಾಗ್ರಜೋ ರಾಮಃ । ತಿರ್ಯಕ್ಸಂಬಂಧಿಯೋನೌ ಜಾತಾನ್ ಅತ ಏವ ವನೌಕಸೋಽಪಿ ನೋಽಸ್ಮಾನ್ । ಸಖ್ಯೇ ಚಕಾರ । ಬತೇತ್ಯಾಸ್ವಾದನೇ । ಅನುಭವಸಿದ್ಧಮೇತತ್ । ರಾಮಸ್ಯೇತಿ ವಕ್ತವ್ಯೇ ಮಹತ ಇತಿ ವಚನೇನ ಮಹತಾಂ ಸರ್ವೇಷಾಮಯಂ ಸ್ವಭಾವ ಇತಿ ಸೂಚಯತಿ । ಅತ ಏವ ಲಕ್ಷ್ಮಣಾಗ್ರಜ ಇತ್ಯುಕ್ತಮಿತಿ ಮಂತವ್ಯಂ ॥**

❖❖❖

**ಕಿಂಪುರುಷಖಂಡದಲ್ಲಿ ಹನುಮಂತನು ಶ್ರೀರಾಮನನ್ನು ಸ್ತುತಿಸುತ್ತಾನೆ—**

**ಪ್ರಿಯ ಆರ್ಷ್ಟಿಷೇಣನೆ, ಶ್ರೀರಾಮನೆ ಗುಣಗ್ರಾಹಿಗಳಲ್ಲಿ ಮಹಾನ್, ಅವನಿಗೆ ಸತ್ಕುಲದಲ್ಲಿ ಜನ್ಮ, ಸೌಭಾಗ್ಯ ಸಂಪತ್ತು ಬುದ್ಧಿವೈಭವ, ಆಕೃತಿ ಸೌಂದರ್ಯ ಯಾವುದೂ ಅವನ ಒಲುಮೆಗೆ ಕಾರಣವಲ್ಲ. ಏಕೆಂದರೆ ತಿರ್ಯಕ್ ಪ್ರಾಣಿಗಳಾಗಿ ಜನಿಸಿದ ಅರಣ್ಯವಾಸಿಗಳಾದ ನಮ್ಮನ್ನು ಸ್ನೇಹಿತರೆಂದು ಸ್ವೀಕರಿಸಿದ!**

ಇಲ್ಲಿ 'ಮಹತಃ' ಎಂದು ಮಹಾತ್ಮರೆಲ್ಲರೂ ಕೇವಲ ಗುಣಗ್ರಾಹಿಗಳು ಅದು ಅವರ ಸ್ವಭಾವ. ಅದರಿಂದ ನಮ್ಮನ್ನು ಭಕ್ತರೆಂದು ಶ್ರೀರಾಮ ಸ್ನೇಹಿತರನ್ನಾಗಿ ಮಾಡಿಕೊಂಡನೆನ್ನುತ್ತಾನೆ ಹನುಮಂತ. ಭಕ್ತಿಯೆ ದೊಡ್ಡಗುಣವೆಂದು ಹೇಳಿದಂತಾಯಿತು.

❖❖❖

**—೩೩೭—**

**ಶ್ರೀರಾಮ ಭಕ್ತರನ್ನು ವೈಕುಂಠಕ್ಕೇ ಒಯ್ದ**

**ಸುರೋಽಸುರೋ ವಾಥ ನರೋಽಥ ವಾನರಃ**
**ಸರ್ವಾತ್ಮನಾ ಯಃ ಸುಕೃತಜ್ಞಮುತ್ತಮಂ ।**
**ಭಜೇತ ರಾಮಂ ಮನುಜಾಕೃತಿಂ ಹರಿಂ**
**ಯ ಉತ್ತರಾನನಯತ್ ಕೋಸಲಾನ್ ದಿವಂ ॥**

(ಭಾ.೫.೧೯.೮)

ತತಃ ಕಿಮಿತ್ಯತೋऽಸ್ಯೈವ ಮಹತೋ ಭಜನಂ ಮುಮುಕ್ಷುಭಿಃ ಸರ್ವಥಾ ಕಾರ್ಯಮಿತ್ಯಾಶಯೇನೋಕ್ತಂ ವಿಶದಯತಿ ॥ ಸುರ ಇತಿ ॥ ಯತೋऽಸ್ಯ ತೋಷಣೇ ಜನ್ಮಾದಿಕಂ ನ ಪ್ರಯೋಜಕಂ ಅತಃ ಸುರೋऽಸುರೋ ವಾ ನರೋ ವಾನರೋ ವಾ ಕಿಂ ಬಹುನಾ ಯಃ ಪುರುಷಾರ್ಥೀ ಸ ಅತ್ಯಂತಂ ಕೃತೋಪಕಾರಸ್ಯ ಸ್ಮರ್ತಾರಂ ಅತ ಏವೋತ್ತಮಂ ಮನುಜವದಾಕೃತಿಸ್ತಥಾ ಪ್ರದರ್ಶನಂ ಯಸ್ಯ ತಂ। ಹರಿಮೇವ ತಂ ರಾಮಂ। ಸರ್ವಪ್ರಕಾರೇಣ ಭಜತ। ಕೋ ವಾ ತೇನ ಪುರುಷಾರ್ಥೋ ಯದಾಶಯಾ ಭಜೇಮೇತ್ಯತಸ್ತಂ ದರ್ಶಯತಿ ॥ ಯ ಇತಿ ॥ ಯಃ ಉತ್ತರಾನ್ಕೋಸಲಾನ್ ಅಯೋಧ್ಯಾಯಾಃ ಪರಿತೋ ವಿದ್ಯಮಾನದೇಶ ಸ್ಥಾನ್ । ದಿವಮೇವ ವೈಕುಂಠಾದಿರೂಪಂ ಪ್ರಾಪಯಾಮಾಸ ತಮಿತಿ ॥

❖❖❖

ಕಿಂಪುರುಷ ಖಂಡದಲ್ಲಿ ಶ್ರೀಹನುಮನು ಹೇಳುತ್ತಾನೆ—

ಸುರನಾಗಲಿ ಅಸುರನಾಗಲಿ ನರನಾಗಲಿ ವಾನರನಾಗಲಿ ಪ್ರತಿಯೊಬ್ಬನೂ ಕೃತಜ್ಞನಾದ ಸರ್ವೋತ್ತಮನಾದ ಮಾನವಾಕಾರದಿಂದ ತೋರಿಕೊಂಡ ಶ್ರೀರಾಮನನ್ನೇ ಸೇವಿಸಬೇಕು. ಭಕ್ತಿಯ ಸೇವೆಗೆ ಅವನು ಒಲಿಯುತ್ತಾನೆ. ಅದರಿಂದಲೆ ಅವನು ಪರಂಧಾಮಕ್ಕೆ ತೆರಳುವಾಗ ಅಯೋಧ್ಯೆಯ ಆಸುಪಾಸಿನ ಎಲ್ಲ ಜನರನ್ನೂ ಜೊತೆಗೆ ವೈಕುಂಠಕ್ಕೇ ಕರೆದೊಯ್ದನು.

ಶ್ರೀರಾಮಭಕ್ತಿಯು ವೈಕುಂಠಾದಿ ಲೋಕ ಪ್ರಾಪ್ತಿಸಾಧನ. ಮುಮುಕ್ಷುಗಳು ಅವಶ್ಯ ಅವನಲ್ಲಿ ಭಕ್ತಿಯನ್ನು ಮಾಡಬೇಕು.

❖❖❖

—೩೩೭—

## ಅಸುರರೂ ಭಕ್ತಿಮಾಡುತ್ತಾರೆ

ಮನ್ಯೇऽಸುರಾನ್ ಭಾಗವತಾಂಸ್ತ್ರ್ಯಧೀಶೇ
ಸಂರಂಭಮಾರ್ಗಾಭಿನಿವಿಷ್ಟಚಿತ್ತಾನ್ ।
ಯೇ ಸಂಯುಗೇऽಚಕ್ಷತ ತಾರ್ಕ್ಷ್ಯಪುತ್ರ
ಸ್ಯಾಂಸೇ ಸುನಾಭಾಯುಧಮಾಪತಂತಂ ॥

(ಭಾ.೩.೨.೨೪)

ನನ್ವಸುರೋ ವೇತಿ ಕಥಂ। ತೇಷಾಂ ಸರ್ವದಾ ಭಗವತಾ ಸಹ ಯುದ್ಧಾದಿಕಂ ಕುರ್ವತಾಂ ತಸ್ಮಿನ್ ಭಕ್ತೇರಭಾವಾದಿತ್ಯತೋಽಸುರಾ ಅಪಿ ಭಕ್ತಾಃ ಸಂತೀತ್ಯಾಹ ॥ ಮನ್ಯೇ ಇತಿ ॥ ತಾನಸುರಾನಪಿ ಅಹಂ ಭಾಗವತಾನ್ಮನ್ಯೇ। ಅಧೀಶೇ ಭಗವತಿ। ಸಂರಂಭಃ ಕ್ರೋಧಃ ತಲ್ಲಕ್ಷಣೇನ ಮಾರ್ಗೇಣಾಭಿನಿವಿಷ್ಟಂ ಭಕ್ತಿಪೂರ್ವಕಂ ನಿವಿಷ್ಟಂ ಚಿತ್ತಂ ಯೇಷಾಂ ತಾನ್ ।ಆದಾವನ್ಯನಿಮಿತ್ತಕ್ರೋಧೇನ ಯುಧ್ಯಂತೋಽಪಿ ಪಶ್ಚಾದ್ಭಕ್ತಿಮಂತೋ ಭವಂತೀತಿ। ತೇ ಕೇ ಯೇ ತಾರ್ಕ್ಷ್ಯಪುತ್ರೋ ಗರುಡಸ್ತಸ್ಯಾಂಸೇ ಸುನಾಭಂ ಚಕ್ರಂ ಆಯುಧಂ ಯಸ್ಯ ಸ ತಾದೃಶಂ। ಸಂಯುಗೇ ಯುದ್ಧೇ। ಆಪತಂತಂ ಆಭಿಮುಖ್ಯೇನಾಯಾಂತಂ ಅಚಕ್ಷತೇತಿ। ಅನೇನ ಯುದ್ಧಾದಿಕಮನ್ಯನಿಮಿತ್ತಂ ಭಕ್ತಿರೇವ ಸ್ವಾಭಾವಿಕೀತಿ ಸಾಧೂಕ್ತಮಸುರೋ ವೇತೀತಿ ಸೂಚಿತಂ ಭವತಿ। ತದೇವಮುಕ್ತರೀತ್ಯಾ ಭಕ್ತೇಃ ಸರ್ವತೋಽಪಿ ವರೀಯಸ್ತ್ವೇನಾವಶ್ಯಕತಯಾ ಸರ್ವಥಾ ಭಾಗವತ ಧರ್ಮಾನುಷ್ಠಾನೇನ ಸಾ ಸಂಪಾದ್ಯೇತಿ ಸಿದ್ಧಂ। ಯಥಾಹುಃ—

''ನಾಲಂ ದ್ವಿಜತ್ವಂ ದೇವತ್ವಮೃಷಿತ್ವಂ ವಾಽಸುರಾತ್ಮಜಾಃ।
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥
ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಂ ॥
ತತೋ ಹರೌ ಭಗವತಿ ಭಕ್ತಿಂ ಕುರುತ ದಾನವಾಃ।
ದೇವೋಽಸುರೋ ಮನುಷ್ಯೋ ವಾ ಯಕ್ಷೋ ಗಂಧರ್ವ ಏವ ವಾ ।
ಭಜನ್ಮುಕುಂದಚರಣಂ ಸ್ವಸ್ತಿಮಾನ್ಸ್ಯಾದ್ಯಥಾ ವಯಂ।
ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ।
ಖಗಾ ಮೃಗಾಃ ಪಾಪಜೀವಾಃ ಸಂತಿ ಹ್ಯಚ್ಯುತತಾಂ ಗತಾಃ।
ಏತಾವಾನೇವ ಲೋಕೇಽಸ್ಮಿನ್ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ।
ಏಕಾಂತಭಕ್ತಿರ್ಗೋವಿಂದೇ ಯತ್ಸರ್ವತ್ರ ತದೀಕ್ಷಣಂ''। ಇತಿ ॥

❖❖❖

ಉದ್ಧವನು ವಿದುರನಿಗೆ ಶ್ರೀಕೃಷ್ಣನ ಲೀಲೆಗಳನ್ನು ಹೇಳುತ್ತಾನೆ—

ಶ್ರೀರಾಮನು ಅಸುರರನ್ನೂ ವೈಕುಂಠಕ್ಕೆ ಕರೆದೊಯ್ದನೆಂದರೆ ಅದು ಹೇಗೆ ಸಾಧ್ಯ? ಅಸುರರು ಸಂಸಾರಿಯೊಂದಿಗೆ ಸುರಾದಿಗಳೊಂದಿಗೆ ಯುದ್ಧ ಮಾಡುವವರು, ತಾನೆ? ಎಂದರೆ ಉತ್ತಮಕುಲದಲ್ಲಿ ಜನ್ಮಾದಿಗಳು ಮಾತ್ರವೆ ಹರಿಗೆ ಪ್ರಿಯವಲ್ಲ. ಭಕ್ತಿಯೇ ಪ್ರಿಯ, ಅಸುರರಲ್ಲಿಯೂ ಭಕ್ತರಿರುತ್ತಾರೆ.

**'ತಾರ್ಕ್ಷ್ಯಪುತ್ರ'ನಾದ ಕಶ್ಯಪ ಪುತ್ರನಾದ ಗರುಡನ ಹೆಗಲೇರಿ ಚಕ್ರಹಿಡಿದು ರಣರಂಗದಲ್ಲಿ ಮೇಲಿರಿ ಬರುವ ಹರಿಯನ್ನು ಕೆಲವು ಅಸುರರು ನೋಡಿ, 'ಶ್ರೀಹರಿ ಇವನು 'ತ್ರ್ಯಧೀಶ' ಮೂರು ವೇದಗಳಿಗೆ, ಅವುಗಳಿಗೆ ಅಭಿಮಾನಿಗಳಾದ ಶ್ರೀ ಭೂ ದುರ್ಗಾದೇವಿಯರಿಗೆ ಅದರ ಅಧ್ಯಯನ ಗೈವ ಬ್ರಹ್ಮವಾಯುರುದ್ರರಿಗೆ ಅಧೀಶನಾಗಿರುವನು ಎಂದು ಅನುಸಂಧಾನ ಮಾಡುತ್ತಾರೆ. ಮೊದಲಿಗೆ 'ಸಂರಂಭಮಾರ್ಗ' ದ್ವೇಷಮಾರ್ಗದವರಾಗಿದ್ದರೂ, ಬಳಿಕ ಭಕ್ತಿಯಿಂದಲೇ 'ಅಭಿನಿವಿಷ್ಟಚಿತ್ತ'ರಾಗುತ್ತಾರೆ. ಹರಿಯಲ್ಲಿ ಆವಿಷ್ಟಚಿತ್ತ ರಾಗುತ್ತಾರೆ. ಕಣಜಹುಳು ಕೀಟವನ್ನು ನೋಡಿ ಮೊದಲಿಗೆ ದ್ವೇಷ ಮಾಡಿದರೂ ಬಳಿಕ ಆಹಾರನೀಡುವ ಕೀಟವನ್ನು ಪ್ರೀತಿಯಿಂದ ಕಾಣುವಂತೆ. ಆದರಿಂದಲೂ ಈ ಅಸುರರನ್ನೂ ನಾನು ಭಾಗವತರೆಂದೇ ತಿಳಿಯುತ್ತೇನೆ' ಎನ್ನುತ್ತಾನೆ ಉದ್ಧವ.**

ಹೀಗೆ ಅಸುರರು ಹರಿಯೊಂದಿಗೆ ಯುದ್ಧ ಮಾಡಿದರೂ ಭಕ್ತಿಯಿಂದ ಅವನನ್ನು ನೋಡುತ್ತ ದೇಹತ್ಯಾಗ ಮಾಡಿದರೂ ಭಕ್ತಿಯೇ ಹರಿಯ ಒಲುಮೆಗೆ ಸಾಧನ. ಈ ಭಕ್ತಿಯ ಮಹಿಮೆಯನ್ನು ಪ್ರಹ್ಲಾದನೂ ದೈತ್ಯಬಾಲಕರಿಗೆ ಉಪದೇಶಿಸಿದ್ದಾನೆ—

ನಾಲಂ ದ್ವಿಜತಂ ದೇವತ್ವ ಮೃಷಿತ್ವಂ ವಾಽಸುರಾತ್ಮಜಾಃ
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ
ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಂ
ತತೋ ಹರೌ ಭಗವತಿ ಭಕ್ತಿಂ ಕುರುತ ದಾನವಾಃ
ಆತ್ಮೌಪಮ್ಯೇನ ಸರ್ವತ್ರ ಸರ್ವಭೂತಾತ್ಮನೀಶ್ವರೇ ॥

(ಭಾ.೭.೭.೫೨,೫೩,೫೪)

ಅಸುರಬಾಲಕರೆ, ಮುಕುಂದನನ್ನು ಸಂತೋಷಗೊಳಿಸಲು ಬ್ರಾಹ್ಮಣ ನಾದರೆ ಸಾಲದು. ದೇವನಾದರೆ ಸಾಲದು, ಋಷಿಯಾಗುವುದೂ ಸಾಲದು. ಸದಾಚಾರ ಅಧ್ಯಯನ ದಾನ ತಪಸ್ಸು ಪೂಜೆ ಶೌಚ ವ್ರತಗಳೂ ಸಾಲವು ನಿರ್ಮಲಭಕ್ತಿ ಬೇಕು. ಭಕ್ತಿಯಿಂದಲೇ ಅವನನ್ನು ಒಲಿಸಿಕೊಳ್ಳಬೇಕು.

ಅದೊಂದಿಲ್ಲದಿದ್ದರೆ ಬೇರೆ ಎಲ್ಲವೂ ಆಡಂಬರ ಪ್ರದರ್ಶನವಷ್ಟೆ. ಅದರಿಂದ ಹರಿಯಲ್ಲಿ ಭಕ್ತಿ ಮಾಡಿರಿ. ತನ್ನಂತೆ ಎಲ್ಲರೊಳಗಿರುವ ಸ್ವಾಮಿ ಅವನು.

ದೇವೋऽಸುರೋ ಮನುಷ್ಯೋ ವಾ ಯಕ್ಷೋ ಗಂಧರ್ವ ಏವ ವಾ
ಭಜನ್ ಮುಕುಂದ ಚರಣಂ ಸ್ವಸ್ತಿಮಾನ್ ಸ್ಯಾದ್ ಯಥಾ ವಯಂ ॥
(ಭಾ.೭.೭.೫೧)

ದೇವನಾಗಲಿ ಅಸುರನಾಗಲಿ ಮನುಷ್ಯನಾಗಲಿ ಯಕ್ಷನಾಗಲಿ ಗಂಧರ್ವನಾಗಲಿ ಮುಕುಂದನ ಪಾದದಲ್ಲಿ ಭಕ್ತಿ ಮಾಡಿದರೆ ಅವನಿಗೆ ಇಹಪರಗಳಲ್ಲಿ ಒಳ್ಳೆಯದೇ ಆಗುವುದು. ಇದಕ್ಕೆ ನಾನೇ ಸಾಕ್ಷಿ.

ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ
ಖಗಾ ಮೃಗಾಃ ಪಾಪಜೀವಾಃ ಸಂತಿ ಹ್ಯಚ್ಯುತತಾಂ ಗತಾಃ
ಏತಾವಾನೇವ ಲೋಕೇऽಸ್ಮಿನ್ ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ
ಏಕಾಂತ ಭಕ್ತಿರ್ಗೋವಿಂದೇ ಯತ್ ಸರ್ವತ್ರ ತದೀಕ್ಷಣಂ
(ಭಾ.೭.೭.೫೫,೫೬)

ದೈತ್ಯರು ಯಕ್ಷರು ರಾಕ್ಷಸರು ಸ್ತ್ರೀಯರು ಶೂದ್ರರು ಗೋವಳರು ಪಕ್ಷಿಗಳು ಮೃಗಗಳು ಬೇರೆ ಪಾಪಯೋನಿಗಳಲ್ಲಿ ಜನಿಸಿರುವ ಜೀವರು ಅನೇಕರು ಭಕ್ತಿಯ ಬಲದಿಂದ ಮೋಕ್ಷ ಪಡೆದುದು ಉಂಟು. ಹೀಗಾಗಿ ಗೋವಿಂದನಲ್ಲಿ ನಿಶ್ಚಲಭಕ್ತಿ ಪಡೆಯುವುದು ಮತ್ತು ಅವನನ್ನು ಎಲ್ಲೆಡೆ ಕಾಣುವುದು ಲೋಕದಲ್ಲಿ ಜೀವಿಗೆ ಪರಮಪುರುಷಾರ್ಥ ಸಾಧನವೆನಿಸಿದೆ. ಸರ್ವೋತ್ತಮನಲ್ಲಿ ಸರ್ವೋತ್ತಮ ಭಕ್ತಿಯನ್ನು ಮಾಡಿ ಅವನ ಅನುಗ್ರಹಕ್ಕೆ ಪಾತ್ರನಾಗುವುದು ಪುರುಷನಾಗಿ ಹುಟ್ಟಿದ್ದಕ್ಕೆ ಪರಮಪ್ರಯೋಜನವೆನಿಸುವುದು.

❖❖❖

# ೨೪. ಭಕ್ತಿಕಾರ್ಯ ಪ್ರಕರಣ

## ಪ್ರಕರಣ ಸಾರಾಂಶ

ಪ್ರಿಯತಮನಾದ ಹರಿಯ ಗುಣಗಳಿಗೆ ಸಾಟಿ ಇಲ್ಲ ಎಂದು ಭಕ್ತರು ಹೊಗಳುವುದನ್ನು ಕೇಳುವ ಭಕ್ತನ ಮನ ಕರಗುವುದು. ಲೋಕ ನೋಡುತ್ತದೆ ಗಮನಿಸುತ್ತದೆ ಎನ್ನುವುದನ್ನು ಲೆಕ್ಕಿಸದೆ ಅವನು ನಗುವುದು ಅಳುವುದು ಹುಚ್ಚನಂತೆ ವರ್ತಿಸುವುದು ಕಾಣುತ್ತದೆ. ಕೆಲವರಲ್ಲಿ ಅಂತರಂಗದಲ್ಲಿಯೇ ಭಕ್ತಿ ಇರುತ್ತದೆ. ಅದರಿಂದ ಮುಖವು ಪ್ರಸನ್ನವಾಗಿರುತ್ತದೆ. ಹರಿಯಲ್ಲಿ ಸಾಧುಜನರ ವಿಷಯದಲ್ಲಿ ಮೈತ್ರಿದಯಾದಿ ಗುಣಗಳಿರುವುದರಿಂದ ಭಕ್ತನೂ ಈ ಮೈತ್ರಿದಯಾದಿ ಹರಿಸ್ವಭಾವಗಳಿಗೆ ಅನುಗುಣವಾದ ಶೀಲವನ್ನು ತೋರಬೇಕು ಹೊರತು ಹರಿ ಮಾಡಿದ್ದನ್ನೆಲ್ಲ ಅಭಿನಯಿಸಿ ತೋರುವುದು ಸಲ್ಲದು. ದೇವತೆಗಳು ಕೂಡ ಹರಿ ಮಾಡಿದ್ದನ್ನೆಲ್ಲ ಅರ್ಥ ಮಾಡಿಕೊಳ್ಳುವಲ್ಲಿ ಸೋತು ತಲೆತಗ್ಗಿಸುವಾಗ ನಾವು ಪಾಮರರು ಅಭಿನಯಿಸಲು ಹೋದರೆ ಅಣಕವಾಗುವುದು. ಅದರಿಂದ ಹರಿ ಮಾಡಿದ್ದನ್ನು ಮಾತುಗಳಲ್ಲಿ ಬಣ್ಣಿಸಿ ಹೇಳಬೇಕು.

❖❖❖

–೩೩೮–

**ಭಕ್ತನು ಲೋಕವಿಲಕ್ಷಣ**

**ಏವಂವ್ರತಃ ಸ್ವಪ್ರಿಯನಾಮಕೀರ್ತ್ಯಾ**
**ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।**
**ಹಸತ್ಯಥೋ ರೋದಿತಿ ರೌತಿ ಗಾಯ-**
**ತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥**

(ಭಾ.೧೧.೨.೪೦)

ಶ್ರೀರಸ್ತು ॥ ಏವಂ ಭಕ್ತೇರ್ಮಾಹಾತ್ಮ್ಯಂ ಪ್ರದರ್ಶ್ಯ ಭಕ್ತಾನಾಂ ಪ್ರವೃತ್ತಿರಿತ್ಥಂಭೂತೇತಿ ಜ್ಞಾಪಯಿತುಂ ಪೂರ್ವೋಕ್ತಾನಿ ಭಕ್ತಿಜ್ಞಾಪಕಾನಿ ವಿಶದೀಕರೋತಿ

ಅನೇನ ಪ್ರಕರಣೇನ। ತತ್ರಾದೌ ತೇಷಾಂ ಪ್ರವೃತ್ತೇರ್ಲೋಕವಿಲಕ್ಷಣತಾಂ ದರ್ಶಯತಿ ॥ **ಏವಂವ್ರತ ಇತಿ ॥** ಪೂರ್ವೋಕ್ತಶ್ರವಣಾದಿಕಮೇವ ವ್ರತಮನುಷ್ಠೇಯಂ ಯಸ್ಯ। ಶ್ರವಣಾದಿರೂಪಭಾಗವತಧರ್ಮಮನುತಿಷ್ಠನ್ನಿತಿ ಯಾವತ್। ತಾದೃಶಃ ಪುಮಾನ್। ಜಾತಾನುರಾಗೋ ಭಗವತ್ಯುತ್ಪನ್ನಭಕ್ತಿರ್ಭವತಿ। ಸ ಚ ಯದಾ ಪುರುಷಾಂತರೈಃ ಅತುಲ್ಯಾತಿಶಯಗುಣಕರ್ಮಪ್ರತಿಪಾದಕಭಗವನ್ನಾಮಾನಿ ಕೀರ್ತ್ಯಮಾನಾನಿ ಶೃಣೋತಿ। ತದಾ ತೇಷಾಂ ನಾಮ್ನಾಂ ಕೀರ್ತನೇನ ನಿಮಿತ್ತೇನ। ದ್ರುತಂ ದ್ರವೀಭೂತಂ ಚಿತ್ತಂ ಯಸ್ಯ ಸ ತಾದೃಶೋ ಭವತಿ। ಅಥೋ ತದನಂತರಂ। ತೇನ ಚಿತ್ತದ್ರವೀಭಾವೇನೇತಿ ಯಾವತ್। ಹಸತಿ। ಹಾಸಶ್ಚ ನ ಲೋಕಸಂಮತಃ ಕಿಂತು ತೈರ್ನಿಂದನೀಯ ಏವೇತ್ಯಾಶಯೇನೋಕ್ತಂ ॥ **ಉಚ್ಚೈರಿತಿ ॥** ಲೋಕೇಽಪಿ ತಾದೃಶೋ ಹಾಸೋ ವಿದ್ಯತ ಏವೇತಿ ಕಥಂ ನಿಂದ್ಯ ಇತ್ಯತೋ ದೃಷ್ಟಾಂತೇನ ಪ್ರದರ್ಶಯತಿ ॥ **ಉನ್ಮಾದವದಿತಿ ॥** ಉನ್ಮಾದರೋಗೀವ। ನ ಕೇವಲಂ ತಸ್ಯ ಹಾಸ ಏವೇದೃಶಃ। ಕಿಂ ನಾಮ। ಸರ್ವಮಪೀತ್ಯಾಶಯೇನಾಹ ॥ **ಉನ್ಮಾದವದುಚ್ಚೈ ರೋದಿತಿ ರೌತಿ ಗಾಯತಿ ನೃತ್ಯತಿ ಚೇತಿ।** ಏವಂವಿಧಪ್ರವೃತ್ತಿಮತ್ತ್ವಾದೇವ ಲೌಕಿಕಾನಾಮಪಹಾಸ್ಯೋ ಭವತೀತಿ ಭಾವೇನೋಕ್ತಂ ॥ **ಲೋಕಬಾಹ್ಯ ಇತಿ ॥** ಲೋಕಬಾಹ್ಯೋ ಲೋಕವಿಲಕ್ಷಣ ಇತಿ ।ಅನೇನ ದ್ರವತೇ ಯಸ್ಯ ಚಿತ್ತಮಿತ್ಯಾದಿಕಂ ವಿವೃತಂ ಭವತಿ ॥

❖❖❖

ಕವಿಮಹಾಮುನಿಯು ವಿದೇಹರಾಜನಿಗೆ ಹೇಳುತ್ತಾರೆ—

ವಿಷಯಾಸೆಯನ್ನು ತೊರೆದು ಶ್ರವಣಾದಿರೂಪ ವಿಷ್ಣುವ್ರತನಿಷ್ಠನಾಗಿರುವ ಭಕ್ತನು ಹರಿನಾಮ ಸಂಕೀರ್ತನದಿಂದ ಅವನಲ್ಲಿ ಅನುರಕ್ತನಾಗಿರುವನು. ಮನಸಿನಿಂದ ಹರಿಯ ಬಳಿಗೇ ಧಾವಿಸುವನು. ತನಗೆ ಪ್ರಿಯತಮನಾದ ಹರಿಯ ಗುಣಗಳಿಗೆ ಸಾಟಿ ಇಲ್ಲ. ಮೇರೆ ಇಲ್ಲ. ಅವನನ್ನು ವಿಚಾರಿಸಿದವರಿಲ್ಲ ಎಂದು ಅವನ ಗುಣಗಳನ್ನೂ ಕರ್ಮಗಳನ್ನು ಭಕ್ತರು ಹೊಗಳುವುದನ್ನು ಕೇಳಿ ಭಕ್ತನ ಮನಸು ದ್ರವಿಸುವುದು. ಲೋಕದ ಸಾಮಾನ್ಯ ಜನರು ಗಮನಿಸುತ್ತಿರುವುದನ್ನೂ ಲೆಕ್ಕಿಸದೆ ಗಟ್ಟಿಯಾಗಿ ನಗುವನು. ಲೋಕದ ಕಣ್ಣಿಗೆ ಹುಚ್ಚನಂತೇ ಕಂಡುಬರುವನು. ಅಳುವುದು ಕೂಗಿಕೊಳ್ಳುವುದು ಕುಣಿಯುವುದು ಎಲ್ಲವನ್ನೂ ಮಾಡುವನು. ಲೋಕವಿಲಕ್ಷಣನಾಗಿರುವನು.

ಎಲ್ಲ ಭಕ್ತರೂ ಹೀಗಾಗುವರೆಂದು ನಿಯಮವೇನಿಲ್ಲ. ಕೆಲವರಲ್ಲಿ ಅಂತರಂಗದಲ್ಲಿಯೇ ಭಕ್ತಿ ಇರುತ್ತದೆ. ಕೆಲವರಲ್ಲಿ ಅದು ಹೊರಗೆ ಕಾಣಿಸಿಕೊಳ್ಳುತ್ತದೆ. ಅಳುವುದು ನಗುವುದು ಮುಂತಾದುದು ಭಕ್ತರಂತೆ ಹುಚ್ಚರಲ್ಲಿಯೂ ಇರುವುವು. ಆದರೆ ಭಕ್ತರಂತೆ ಮುಖದಲ್ಲಿ ಪ್ರಸನ್ನತೆ ಬರಲಾರದು.

❖❖❖

–೩೩೯–

**ಭಕ್ತನು ಹರಿಲೀಲೆಯನ್ನು ಹಾಡಿ ಹೊಗಳಿ ಬಣ್ಣಿಸುವನು**

**ಕ್ವಚಿದ್ ರುದಂತ್ಯಚ್ಯುತಚಿಂತಯಾ ಕ್ವಚಿತ್**
**ಹಸಂತಿ ನಂದಂತಿ ವದಂತ್ಯಲೌಕಿಕಾಃ।**
**ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ**
**ಭವಂತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ ॥**

(ಭಾ.೧೧.೩.೩೨)

**ಅನ್ಯಾನ್ಯಪಿ ಕಾರ್ಯಾಣಿ ಲೋಕವಿಲಕ್ಷಣಾನ್ಯೇವೇತಿ ದರ್ಶಯತಿ ॥ ಕ್ವಚಿದಿತಿ ॥ ಅಚ್ಯುತಸ್ಯ ದರ್ಶನಂ ಕಥಂ ಸ್ಯಾದಿತಿ ಚಿಂತಯಾ ಕ್ವಚಿದ್ರುದಂತಿ। ಕ್ವಚಿಚ್ಚಾಚ್ಯುತಸ್ಯ ಚರಿತವಿಶೇಷಸ್ಮೃತ್ಯಾ ಹಸಂತಿ, ನಂದಂತಿ ಚ। ಅನ್ಯದಾ ತಚ್ಚರಿತಾನಿ ಲೋಕೈ ರ್ಬಾಹ್ಯೈರಪೃಷ್ಟಾ ಅಪಿ ತೇಷಾಂ ತತ್ರ ಆದರಾಭಾವೇಽಪಿ ಸ್ವಯಮೇವ ವದಂತಿ। ಕ್ವಚಿಚ್ಚ ಅಜಂ ಹರಿಂ ಅನುಶೀಲಯಂತಿ। ಕೃಷ್ಣಾದಿಚರಿತಾನಿ ಅಭಿನಯೇನ ಪ್ರದರ್ಶಯಂತಿ। ಅನ್ಯಸ್ಮಿನ್ಕಾಲೇ ಪರಂ ಹರಿಂ ಮನಸಾ ಏತ್ಯ ಪ್ರಾಪ್ಯ ನಿರ್ವೃತಾಃ ಸಂತಃ ಅನ್ಯೈಃ ಪುನಃ ಪುನಃ ಪೃಷ್ಟಾ ಅಪಿ ತೂಷ್ಣೀಮೇವ ಭವಂತಿ। ತತೋ ಲೋಕವಿರುದ್ಧಪ್ರವೃತ್ತಿಮತ್ತ್ವಾದಲೌಕಿಕಾ ಇತಿ ॥**

❖❖❖

ಪ್ರಬುದ್ಧ ಮುನಿ ವಿದೇಹರಾಜನಿಗೆ ಹೇಳುತ್ತಾರೆ—

ಭಕ್ತರು ಹರಿಯ ದರ್ಶನ ಎಂದಿಗಾಹುದೊ ಎಂದು ಕೆಲವು ಸಲ ಅಳುವರು ಕೆಲವೊಮ್ಮೆ ಹರಿಯ ಲೀಲೆಗಳನ್ನು ನೆನೆದು ನಗುವರು ಮತ್ತು

**ಆನಂದಿಸುವರು. ಇತರರು ಕೇಳಲಿ ಬಿಡಲಿ, ಅದರಲ್ಲಿ ಆದರವಿಲ್ಲದೆ ತಾವಾಗಿ ಹರಿಯ ಲೀಲೆಗಳನ್ನು 'ಅನು–ಶೀಲಯಂತಿ' ಮಾತುಗಳಲ್ಲಿ ಬಣ್ಣಿಸುವರು. ಹರಿ ಮೆಚ್ಚುವಂತೆ ವರ್ತಿಸುವರು. ಕೆಲವೊಮ್ಮೆ ಧ್ಯಾನದಲ್ಲಿ ಹರಿಯ ಜೊತೆಗೆ ಇದ್ದು ಆನಂದಿಸುತ್ತ ಸುಮ್ಮನೆ ಕುಳ್ಳಿರುತ್ತಾರೆ. ಹೀಗೆ ಭಕ್ತರ ಪ್ರವೃತ್ತಿ ಲೋಕವಿಲಕ್ಷಣ.**

ಇಲ್ಲಿ 'ಅನು–ಶೀಲನ'ವೆಂದರೆ ಅಭಿನಯವಲ್ಲ. ಅನುಕರಣವಲ್ಲ. ಹರಿಯ ಲೀಲೆ ಯಾವುದೂ ಅನ್ಯರಿಗೆ ಅನುಕರಣೆಗೆ ನಿಲುಕುವುದಿಲ್ಲ. ಅವನ ವೇಣುಗಾನ ನರ್ತನ ಮುಂತಾದುವನ್ನು ಬ್ರಹ್ಮಾದಿ ದೇವತೆಗಳೂ ಕೂಡ ಅರ್ಥ ಮಾಡಿಕೊಳ್ಳುವಲ್ಲಿಯೇ ಸೋತು ತಲೆ ತಗ್ಗಿಸಿದರು. ಏನೂ ತಿಳಿಯದ ನಾವು ಯದ್ವಾ ತದ್ವಾ ಅನುಕರಣೆ ಮಾಡಿದರೆ ಅದು ಅಣಕವಾಗುತ್ತದೆ ಎಂದು ತಾತ್ಪರ್ಯ (೧೧.೨೭.೪೩)ದಲ್ಲಿ ಎಚ್ಚರಿಸಿದ್ದಾರೆ. ಅದರಿಂದ 'ಅನುಶೀಲನ' ಎಂದರೆ ಅನುಕೂಲವಾದ ಶೀಲವನ್ನು ಸ್ವಭಾವವನ್ನು ತೋರುವುದು, ಹರಿ ಸಾಧುಗಳಲ್ಲಿ ಮೈತ್ರಿ ದಯಾದಿ ಸ್ವಭಾವ ಉಳ್ಳವನು ಭಕ್ತರೂ ಅದಕ್ಕೆ ಅನುಕೂಲವಾಗಿ ಮೈತ್ರಿ ದಯಾದಿ ಸ್ವಭಾವವನ್ನು ತೋರಬೇಕು ಎಂದರ್ಥ. ಶ್ರೀನಿವಾಸತೀರ್ಥರು ಹೇಳುತ್ತಾರೆ—

'ಅನುಶೀಲಯಂತಿ' ಭಗವತ್ಸ್ವಭಾವಾನುಕೂಲಸ್ವಭಾವಂ ಕುರ್ವಂತೀ–ತ್ಯರ್ಥಃ'

ಯದ್ಯಪಿ ಅವಧೂತರು,

'ಹರಿಂ ಅನುಶೀಲಯಂತಿ' ಕೃಷ್ಣಾದಿ ಚರಿತಾನಿ ಅಭಿನಯೇನ ಪ್ರದರ್ಶಯಂತಿ' ಎಂದೇ ವ್ಯಾಖ್ಯಾನ ಮಾಡಿದ್ದಾರೆ. ಆದರೂ ಅಲ್ಲಿ 'ಅಭಿನಯ' ವೆಂದರೆ ತಾತ್ಪರ್ಯದಲ್ಲಿ ಹೇಳಿದಂತೆಯೇ,

ಕೀರ್ತಯಿತ್ವಾ ಅಭಿತೋ ನಯನ್ ಸರ್ವೇಷಾಂ ಪ್ರಕಾಶಯನ್
ಮತ್ಕಥಾಃ ಶ್ರಾವಯನ್ ಇತ್ಯಭಿನಯ ಶಬ್ದಾರ್ಥಃ ।

'ಅಭಿನಯ' ಎಂದರೆ ಅನುಕರಣ ಮಾಡಿ ವೀಕ್ಷಕರಿಗೆ ತೋರಿಸುವುದಲ್ಲ. ವರ್ಣನೆ ಮಾಡಿ ಎಲ್ಲ ಶ್ರೋತೃಗಳಿಗೆ ತಿಳಿಸುವುದೆಂದರ್ಥ.'

❖❖❖

–೩೪೦–

ಪ್ರಹ್ಲಾದನು ಬಣ್ಣಿಸಿದ ಭಕ್ತಿ ಕಾರ್ಯ

ನಿಶಮ್ಯಕರ್ಮಾಣಿ ಗುಣಾನತುಲ್ಯಾನ್
ವೀರ್ಯಾಣಿ ಲೀಲಾತನುಭಿಃ ಕೃತಾನಿ ।
ಯದಾತಿಹರ್ಷೋತ್ಪುಲಕಾಶ್ರು ಗದ್ಗದಃ
ಪ್ರೋತ್ಕಂಠ ಉದ್ಗಾಯತಿ ರೌತಿ ನೃತ್ಯತಿ ॥

(ಭಾ.೭.೭.೩೫)

–೩೪೧–

ಪ್ರಹ್ಲಾದನು ಬಣ್ಣಿಸಿದ ಭಕ್ತಿ ಕಾರ್ಯ

ಯದಾ ಗ್ರಹಗ್ರಸ್ತ ಇವ ಕ್ವಚಿದ್ಧಸ-
ತ್ಯಾಕ್ರಂದತೇ ಧ್ಯಾಯತಿ ವಂದತೇ ಜನಂ ।
ಮುಹುಃ ಶ್ವಸನ್ ವಕ್ತಿ ಹರೇ ಜಗತ್ಪತೇ
ನಾರಾಯಣೇತ್ಯಾತ್ಮಗತಿರ್ಗತತ್ರಪಃ ॥

(ಭಾ.೭.೭.೩೬)

–೩೪೨–

ಪ್ರಹ್ಲಾದನು ಬಣ್ಣಿಸಿದ ಭಕ್ತಿಫಲ

ತದಾ ಪುಮಾನ್ ಮುಕ್ತ ಸಮಸ್ತ ಬಂಧನಃ
ತದ್ಭಾವಭಾವಾನುಕೃತಾಶಯಾಕೃತಿಃ ।
ನಿರ್ದಗ್ಧಬೀಜಾನುಶಯೋ ಮಹೀಯಸಾ
ಭಕ್ತಿಪ್ರಯೋಗೇಣ ಸಮೇತ್ಯಧೋಕ್ಷಜಂ ॥

(ಭಾ.೭.೭.೩೭)

ಅತ್ರ ತ್ರಿವಿಧಾ ಅವಸ್ಥಾ ಹಿ ಭಕ್ತೇಃ। ಅಪಕ್ವಾ, ಪಕ್ವಕಲ್ಪಾ, ಪಕ್ವಾ ಚೇತಿ। ಯತ್ರ ಯದ್ಯೈತಾನ್ಯುಕ್ತಾನಿ ಭಕ್ತಿಕಾರ್ಯಾಣಿ ಹಾಸಾದೀನಿ ಬಾಲಸ್ಯೇವಾನುದ್ರಿಕ್ತಾನಿ ಭವಂತಿ, ಸಾ ಅಪಕ್ವಭಕ್ತ್ಯವಸ್ಥೇತ್ಯುಚ್ಯತೇ। ಯದಾ ಚೋನ್ಮತ್ತಸ್ಯೇವೈತಾನ್ಯುದ್ರಿಕ್ತಾನಿ ಭವಂತಿ, ಸಾ ಪಕ್ವಕಲ್ಪಭಕ್ತ್ಯವಸ್ಥೇತಿ ಗೀಯತೇ। ಯದಾ ತು

ಗ್ರಹಗ್ರಸ್ತಸ್ಯೇವಾತ್ಯುದ್ರಿಕ್ತಾನಿ ಭವಂತಿ, ಸಾ ಪಕ್ವಭಕ್ತ್ಯವಸ್ಥೇತಿ ಭಣ್ಯತೇ। ತತ್ರಾಪಕ್ವಾವಸ್ಥಾಪನ್ನಭಕ್ತಿಕಾರ್ಯಾಣಿ ನ ಸ್ಫುಟಂ ಜ್ಞಾತುಂ ಶಕ್ಯಾನಿ ವಿನಾ ವಿಶೇಷಪರಿಚಯಮಿತ್ಯನುಕ್ತ್ವಾ, ಪಕ್ವಕಲ್ಪಾವಸ್ಥಾಪನ್ನಭಕ್ತಿಕಾರ್ಯಾಣ್ಯೇವ ಪ್ರದರ್ಶಿತಾನಿ ಶ್ಲೋಕದ್ವಯೇನ। ಅಧುನೈವಂ ಸಂತತಮಾದರೇಣ ಭಾಗವಧರ್ಮಾನುಷ್ಠಾನೇನ ನಿರಂತರಮೇಧಮಾನಾ ಭಕ್ತಿರ್ಯದಾ ಪಕ್ವಾ ಭವತಿ ತದಾ ಅಪರೋಕ್ಷಂ ಭವತಿ ಇತಿ ಭಾವೇನ ತತ್ಕಾರ್ಯಾಣಿ ತಜ್ಜ್ಞಾಪಕಾನಿ ಚ ಈದೃಶಾನಿ ಇತಿ ಶ್ಲೋಕತ್ರಯೇಣ ದರ್ಶಯತಿ॥ ನಿಶಮ್ಯೇತ್ಯಾದಿನಾ॥ ಅನ್ಯೈರ್ಗೀತಾನಿ ಕರ್ಮಾಣಿ ಅತುಲ್ಯಾನಿ। ತಾದೃಶಾನ್ ಗುಣಾನ್ ಲೀಲಾತನುಭಿಃ ಕೃತಾನಿ ವೀರ್ಯಾಣಿ ಏಕಯೈವ ಅಂಗುಲ್ಯಾ ಪರ್ವತಧಾರಣಾದೀನಿ ನಿಶಮ್ಯ। ತಚ್ಛ್ರವಣೇನೈವಾತಿಹರ್ಷೋ ಭವತಿ।ತತ ಏವೋತ್ಪುಲಕಾಶ್ರುಗದ್ಗದಃ। ಪುಲಕಃ ರೋಮಾಂಚ ಸ್ತಥಾ ಅಶ್ರೂಣಿ ನೇತ್ರೋದಕಾನಿ ಗದ್ಗದಃ ಸಕಂಪಸ್ಖಲಿತಭಾಷಣಂ ಚ ತದ್ವಾನ್ ಭವತಿ। ತಥಾ ಪ್ರೋತ್ಕಂಠಃ ಪ್ರಕರ್ಷೇಣೋಚ್ಚಧ್ವನಿರ್ಭೂತ್ವಾ ಉಚ್ಚತಯೈವ ಗಾಯತಿ, ರೌತಿ, ನೃತ್ಯತಿ ಚ॥

ಕಾರ್ಯಾಂತರಾಣ್ಯಾಹ॥ ಯದೇತಿ॥ ಗ್ರಹಗ್ರಸ್ತಃ ಪಿಶಾಚಾದಿಭಿ-ರ್ಗೃಹೀತ ಇವಾಕ್ರಂದತೇ ವೃಥಾಶಬ್ದಂ ಕರೋತಿ। ಕ್ವಚಿದ್ಧಸತಿ। ಧ್ಯಾಯತಿ ಚಿಂತಾಪರೋ ಭವತಿ। ಮುಹುಃ ಪುನಃ ಪುನಃ ದೃಷ್ಟಂ ಜನಂ ವಂದತೇ। ಆತ್ಮಗತಿಃ ಪರಮಾತ್ಮವ್ಯಾಪಾರಾನುಸಾರಿವ್ಯಾಪಾರವಾನಹಮಿತ್ಯನುಸಂಧಾನವಾನ್। ಶ್ವಸನ್ ಹರೇ ಜಗತ್ಪತೇ ನಾರಾಯಣೇತಿ ವಿಲಜ್ಜೋ ಭೂತ್ವೈವ ಮುಹುರ್ವಕ್ತಿ॥

ತದ್ಭಾವೇ ತದ್ಯಥಾಸ್ವರೂಪೇ ಭಾವೇನ ಭಕ್ತ್ಯಾ, ಅಥವಾ ಭವತೀತಿ ಭಾವೋ ವಿಶೇಷಸ್ತಸ್ಯ ಹರೇರ್ಭಾವೇ ಸತಿ ಭಾವೋ ವಿಶೇಷೋ ಮಯೀತ್ಯೇವಂಪ್ರಕಾರೇಣಾನುಕೃತೇಽನುಸಂಹಿತೇ ಮಾನಸಾಕೃತೀ ಯಸ್ಯ ಸಃ। ಇದಮುಹಲಕ್ಷಣಂ— ಗಚ್ಛತಿ ತಸ್ಮಿನ್ಮಯಿ ಗತಿಃ, ವದತಿ ತಸ್ಮಿನ್ಮಯಿ ವಚನಂ, ಇಚ್ಛತಿ ತಸ್ಮಿನ್ಮಯೀಚ್ಛೇತ್ಯೇವಮಾದಿಪ್ರಕಾರೇಣಾನುಸಂಹಿತ ವಿವಿಧವ್ಯಾಪಾರಃ ಅನೇನಾತ್ಮಗತಿರಿತ್ಯೇತದ್ವಿವೃತಂ ಭವತಿ। ಸಂಸಾರಬೀಜಸ್ಯ ಕರ್ಮಣೋಽನು-ಶಯಃ ಶೇಷಃ। ನಿರ್ದಗ್ಧೋ ಬೀಜಾನುಶಯೋ ಯಸ್ಯ ಸ ಈದೃಶಃ ಪುಮಾನ್। ತದೈವ ಮಹೀಯಸಾ ಅತ್ಯುತ್ಕೃಷ್ಟೇನ। ಭಕ್ತಿಪ್ರಯೋಗೇಣ ಭಕ್ತ್ಯುತ್ಕರ್ಷೇಣ ಅಧೋಕ್ಷಜಂ ಬಾಹ್ಯೇಂದ್ರಿಯಾಗೋಚರಂ ಶ್ರೀಹರಿಂ ಬಿಂಬಂ। ಸಮೇತಿ

ದಿವ್ಯದೃಷ್ಟ್ಯಾ ಪಶ್ಯತಿ । ತದೈವ ಮುಕ್ತಸಮಸ್ತಬಂಧನೋ ಭವತಿ । ಜೀವನ್ನಪಿ ಮುಕ್ತೋ ಭವತಿ ॥ ೩೪೨ ॥

❖❖❖

ಪ್ರಹ್ಲಾದನು ಅಸುರಬಾಲಕರಿಗೆ ಹೇಳುತ್ತಾನೆ—

ಹರಿಯ ಜಗತ್ಸೃಷ್ಟ್ಯಾದಿ ಕರ್ಮಗಳನ್ನೂ ಅನುಪಮವಾದ ಪೂರ್ಣಜ್ಞಾನಾದಿಗುಣಗಳನ್ನೂ ಅವತಾರರೂಪಗಳಿಂದ ಅವನು ಮಾಡಿದ ಲೀಲೆಗಳನ್ನೂ ಕೇಳಿದಾಗ ಭಕ್ತನಿಗೆ ಬಹಳ ಆನಂದವಾಗುವುದು. ಮೈನವಿರೇಳುವುದು, ಕಣ್ಣುಗಳಿಂದ ನೀರು ಸುರಿಯುವುದು. ಕಂಠ ಗದ್ಗದವಾಗುವುದು. ಉಚ್ಚ ಧ್ವನಿಯಿಂದ ಹಾಡುತ್ತಾನೆ, ಅಳುತ್ತಾನೆ, ಕುಣಿಯುತ್ತಾನೆ. ॥೩೪೦॥

ದೆವ್ವ ಬಡಿದವನಂತೆ ಆತ ಒಮ್ಮೊಮ್ಮೆ ನಗುತ್ತಾನೆ ಜೋರಾಗಿ ಕೂಗಿಕೊಳ್ಳುತ್ತಾನೆ. ಧ್ಯಾನಿಸುತ್ತಾನೆ ಭಕ್ತರಿಗೆ ವಂದಿಸುತ್ತಾನೆ ಪುನಃ ನಿಟ್ಟುಸಿರಿಟ್ಟು ಭಗವಂತನ ಯೋಚನೆಯಲ್ಲಿ ಮಗ್ನನಾಗುತ್ತಾನೆ ಲಜ್ಜೆಬಿಟ್ಟು ಹರಿ! ಜಗತ್ಪತಿ! ನಾರಾಯಣ! ಎನ್ನುತ್ತಾನೆ. 'ಆತ್ಮರತಿ' ಹರಿವ್ಯಾಪಾರಾನುಸಾರಿ ತನ್ನ ವ್ಯಾಪಾರವೆಂದುಕೊಳ್ಳುತ್ತಾನೆ. ॥೩೪೧॥

'ತದ್‌ಭಾವಭಾವಾನುಕೃತಾಶಯಾಕೃತಿಃ' ಹರಿ ನಡೆದು ನನ್ನನ್ನು ನಡೆಸುವನು ನುಡಿದು ನುಡಿಸುವನು ಬಯಸಿ ಬಯಕೆ ಉಂಟು ಮಾಡುವನು ಇತ್ಯಾದಿಯಾಗಿ ಭಾವಿಸಿ ಅವನ ಪ್ರವೃತ್ತಿಗನುಗುಣವಾಗಿ ಭಕ್ತನಲ್ಲಿ ಪ್ರವೃತ್ತಿ ಉಂಟಾಗುವುದು. ಹೀಗೆ ಅವನು ಆ ಎಲ್ಲ ಪ್ರವೃತ್ತಿಗಳಲ್ಲಿಯೂ 'ಆತ್ಮಗತಿ' ಶ್ರೀಶನೆ ಎನಗೆ ಗತಿ ಎಂದು ಅವನಿಗೇ ಅರ್ಪಿಸುವನು. ಸಂಸಾರಬೀಜವಾದ ಕರ್ಮಶೇಷವನ್ನು ಕಳೆದುಕೊಳ್ಳುವನು. ಮಹಾ ಭಕ್ತಿಪ್ರವಾಹದಿಂದ ಅಧೋಕ್ಷಜನ ಅಪರೋಕ್ಷ ಪಡೆಯುವನು. ಎಲ್ಲ ಸಾಂಸಾರಿಕ ಬಂಧನದಿಂದ ಮುಕ್ತನಾಗಿ ಜೀವನ್ಮುಕ್ತನೆನಿಸುವನು. ॥೩೪೨॥

ಹೀಗೆ ಪಕ್ವ ಭಕ್ತಿ ಉಳ್ಳ ಭಕ್ತನ ಲಕ್ಷಣಪ್ರವೃತ್ತಿಗಳನ್ನು ಮೂರು ಶ್ಲೋಕಗಳಲ್ಲಿ ಬಣ್ಣಿಸಿ ಅವನಿಗೆ ಅಪರೋಕ್ಷವಾಗುವುದು. ಜೀವನ್ಮುಕ್ತಿ ಲಭಿಸುವುದು ಎಂದು ಪ್ರಹ್ಲಾದನೂ ಮೂರು ಶ್ಲೋಕಗಳಲ್ಲಿ ತೋರಿಸಿದ್ದಾನೆ. 'ಗ್ರಹಗ್ರಸ್ತ ಇವ' ಪಿಶಾಚ ಬಡಿದವನಂತೆ ಈ ಪಕ್ವಭಕ್ತಿಯವನಿರುತ್ತಾನೆ. ಪ್ರಹ್ಲಾದನು 'ಕೃಷ್ಣಗ್ರಹ

ಗೃಹೀತಾತ್ಮ'ನಾಗಿದ್ದನಂತೆ! (ಭಾ.೭.೬.೩೮) ಉನ್ಮತ್ತನಂತಿರುವುದು ಪಕ್ವಕಲ್ಪ ಭಕ್ತಿಯವನ ಪ್ರವೃತ್ತಿ. ಇದು ಹಿಂದಿನ ೩೩೮, ೩೩೯ನೇ ಶ್ಲೋಕಗಳಲ್ಲಿ ವರ್ಣಿಸಿದಂತೆ ಇರುತ್ತದೆ. ಅಪಕ್ವ ಭಕ್ತಿಯವನು ಮುಗ್ಧ ಬಾಲಕನಂತೆ ಇರುತ್ತಾನೆ. ಅವನ ಭಕ್ತಿಯ ಕಾರ್ಯಗಳನ್ನು ಸ್ಪಷ್ಟವಾಗಿ ತಿಳಿಯಲಾಗದು. ಆದ್ದರಿಂದ ಅದನ್ನು ಹೇಳಿಲ್ಲ.

ಭಾಗವತಧರ್ಮಗಳನ್ನು ಬಿಡದೆ ಆದರದಿಂದ ಸದಾ ಸೇವಿಸುತ್ತಿದ್ದರೆ ಭಕ್ತಿ ಪಕ್ವವಾಗುವುದು. ಅಪರೋಕ್ಷ ಉಂಟುಮಾಡಿ ಜೀವನ್ಮುಕ್ತಿಯನ್ನೂ ತಂದುಕೊಡುವುದೆಂದು ಈ ಮೂರು ಶ್ಲೋಕದಲ್ಲಿ ಉಕ್ತವಾಯಿತು.

❖❖❖

–೩೪೩–

**ಭಕ್ತಿಭಾವದಿಂದ ಹೃದಯ ಕರಗಬೇಕು**

**ತದಶ್ಮಸಾರಂ ಹೃದಯಂ ಬತೇದಂ**
**ಯದ್ಗೃಹ್ಯಮಾಣೈರ್ಹರಿನಾಮಧೇಯೈಃ ।**
**ನ ವಿಕ್ರಿಯೇತಾಥ ಮುಖೇ ವಿಕಾರೋ**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥**

(ಭಾ.೨.೩.೨೪)

**ಯಸ್ಮಿನ್ ಭಕ್ತಿರ್ವಿದ್ಯತೇ ತಜ್ಜನ್ಮೈವ ಸಫಲಂ ಸ ಏವ ವಂದ್ಯೋ ನಾನ್ಯೋ ಭಕ್ತಿವಿರಹಿತಃ ಇತ್ಯಭಿಪ್ರೇತ್ಯಾಹ ॥ ತದಶ್ಮಸಾರಮಿತಿ ॥ ಯದ್ಧೃದಯಂ ಯನ್ಮನಃ ಗೃಹ್ಯಮಾಣೈಃ ಶ್ರೂಯಮಾಣೈಃ। ಹರೇರ್ಗುಣಕರ್ಮಾದಿಪ್ರತಿಪಾದಕೈ-ರ್ನಾಮಭಿಃ ನ ವಿಕ್ರಿಯೇತ ದ್ರವೀಭಾವಲಕ್ಷಣಂ ವಿಕಾರಂ ನ ಪ್ರಾಪ್ನುಯಾತ್ । ಅಥ ವಿಕಾರಃ ದ್ರವೀಭಾವಲಕ್ಷಣಭಕ್ತ್ಯುದ್ರೇಕನಿಮಿತ್ತೋ ಹರ್ಷೋ ಯಸ್ಯ ಮುಖೇ ನಾಸ್ತಿ। ತಥಾ ನೇತ್ರೇ ಜಲಂ ನಾಸ್ತಿ। ಗಾತ್ರರುಹೇಷು ರೋಮಸು ವಿಕಾರೋ ರೋಮಾಂಚರೂಪೋ ನಾಸ್ತಿ। ಉಪಲಕ್ಷಣಮೇತತ್— ಕಿಮಪಿ ಭಕ್ತಿಜ್ಞಾಪಕಂ ನಾಸ್ತಿ ತದಿದಂ ಹೃದಯಂ ಅಶ್ಮಸಾರಂ ದೃಢತರಪಾಷಾಣಸದೃಶಂ। ಬತ ಖೇದೇ। ಯಸ್ಯ ಭಕ್ತಿ ರಸ್ತಿ ಸ ಏವ ವಂದ್ಯೋ ಭವತಿ। ಯಸ್ಯ ಚ ಭಕ್ತಿರ್ನಾಸ್ತಿ ತಜ್ಜನ್ಮ ಧಿಗಿತಿ ಭಾವಃ ॥**

❖❖❖

**ಶೌನಕರು ಸೂತಪುರಾಣಿಕರಲ್ಲಿ ಹೇಳುತ್ತಾರೆ— ಹರಿನಾಮಗಳು ಕಿವಿಗೆ ಬಿದ್ದಾಗ ಭಕ್ತಿಭಾವದಿಂದ ಹೃದಯ ಕರಗಿ ನೀರಾಗದಿದ್ದರೆ, ಮುಖ ಅರಳದಿದ್ದರೆ ಕಣ್ಣಲ್ಲಿ ನೀರು ತುಂಬದಿದ್ದರೆ ಮೈನವಿರೇಳದಿದ್ದರೆ ಅವನ ಮನಸು ಗಟ್ಟಿ ಬಂಡೆಯೇ ಸರಿ. ಇಂಥವರು ಶೋಚನೀಯರು. ಭಕ್ತಿಭರಿತನು ಭಗವಂತನ ಅನುಗ್ರಹಪಾತ್ರನಾಗಿ ವಂದ್ಯನಾಗಿರುವನು. ಅವನ ಜನ್ಮ ಸಾರ್ಥಕ ವಾಗಿರುವುದು.**

❖❖❖

# ೨೫. ಅನ್ಯಥಾ ಮತ್ಯಕರಣ ಪ್ರಕರಣ

## ಪ್ರಕರಣ ಸಾರಾಂಶ

ಬಿಂಬೋಪಾಸಕರ ಚರ್ಯೆಯನ್ನು ತಪ್ಪು ತಿಳಿದು ಆಕ್ಷೇಪಿಸ ಬಾರದು. ರುದ್ರದೇವರು ಮಾವನಾದ ದಕ್ಷನಿಗೆ ನಮಸ್ಕಾರ ಮಾಡಲಿಲ್ಲವೆಂದು ದಕ್ಷ ಆಕ್ಷೇಪಿಸಿದ್ದು ಅವನಿಗೆ ಶಿರಶ್ಛೇದಕ್ಕೇ ಕಾರಣವಾಯಿತು. ರುದ್ರದೇವರು ದಕ್ಷನಿಗೆ ನಮಸ್ಕರಿಸಿದರೂ ಆ ನಮಸ್ಕಾರ ದಕ್ಷನ ಅಂತರ್ಯಾಮಿಗೇ ಸಲ್ಲುತ್ತದೆ. ದಕ್ಷನಿಗಲ್ಲ. ತನಗೇ ಸಲ್ಲುವುದೆಂದು ದಕ್ಷ ಅನ್ಯಥಾ ತಿಳಿದು ಆಕ್ಷೇಪಿಸಿದ. ಹೀಗೆ ಅನ್ಯಥಾಮತಿ' ಅನ್ಯಥಾ ತಿಳಿಯುವುದನ್ನು ಮಾಡಬಾರದು, 'ಅಕರಣ' ಮಾಡದಿರುವುದೇ ಧರ್ಮ. ಅನ್ಯಥಾ ತಿಳಿದು ಬಿಂಬೋಪಾಸಕರನ್ನು ನಿಂದಿಸಿದರೆ ಅವರು ನಿರ್ಲಿಪ್ತರಾಗಿದ್ದು ಸ್ತುತಿನಿಂದೆ ಎಲ್ಲವನ್ನು ಅಂತರ್ಯಾಮಿಗೆ ಸಲ್ಲಿಸುತ್ತಾರೆ. ಅದರಿಂದ ಅವರ ನಿಂದೆ ಹರಿನಿಂದೆಯೇ ಆಗುತ್ತದೆ.

❖❖❖

–೩೪೪–

**ಭಕ್ತನನ್ನು ಅನ್ಯಥಾ ತಿಳಿಯುವುದು ಹರಿದ್ರೋಹವಾಗುವುದು**

ನ ವೇದವಾದಾನನುವರ್ತತೇ ಮತಿಃ
ಸ್ವ ಏವ ಲೋಕೇ ರಮತೋ ಮಹಾಮುನೇಃ ।
ಯಥಾ ಗತಿರ್ದೇವ ಮನುಷ್ಯಯೋಃ ಪೃಥಕ್
ಸ್ವ ಏವ ಧರ್ಮೇ ನ ಪರಂ ಕ್ಷಿಪೇತ್ ಸ್ಥಿತಃ ॥

(ಭಾ.೪.೪.೧೯)

ಶ್ರೀಮತ್ಸತ್ಯಜ್ಞಾನತೀರ್ಥಗುರುಭ್ಯೋ ನಮಃ ॥ ಏವಂವಿಧಾಂ ಲೋಕವಿಲಕ್ಷಣಾಂ ಭಗವದ್ಭಕ್ತಾನಾಂ ಪ್ರವೃತ್ತಿಂ ದೃಷ್ಟ್ವಾ ಯೇ ಅನ್ಯಥಾಮತಿಂ ಕುರ್ವಂತಿ, ತೇ ಶ್ರೀಹರಿದ್ರೋಹೇಣ ಅನರ್ಥಭಾಜೋ ಭವಂತಿ । ತತೋ ಮುಮುಕ್ಷುಭಿಃ ತತ್ರ ಅನ್ಯಥಾಮತಿಃ ಅವಶ್ಯಂ ವರ್ಜನೀಯೇತಿ

ಪ್ರತಿಪಾದಯತ್ಯನೇನ ಪ್ರಕರಣೇನ ।ತತ್ರಾದೌ ವೈಲಕ್ಷಣ್ಯಂ ಸಹೇತುಕಮಾಹ । **ನ ವೇದೇತಿ ॥** ಮಹಾಮುನೇಃ ಮತಿಃ ತತ್ಪೂರ್ವಿಕಾ ಪ್ರವೃತ್ತಿಃ ವೇದವಾದಾನ್ ನ ಅನುವರ್ತತೇ । ತದನುಸಾರಿಣೀ ನ ಭವತಿ । ಕುತಃ । ಸ್ವ ಏವ ಲೋಕೇ ರಮತಃ ಸ್ವೇ ಬಿಂಬಭೂತೇ ಸರ್ವವ್ಯಾಪಾರಕರ್ತೃತಯಾ ಸರ್ವತ್ರ ಸ್ಮರ್ಯಮಾಣೇ ವಿಹರಮಾಣಸ್ಯೇತಿ । ತತ್ತತ್ಕಾಲಕ್ರಿಯಾಸಮರ್ಪಣಾಯ ಬಿಂಬಮೇವ ಮನಸಾ ಅನುಸ್ಮರತ ಇತಿ ಯಾವತ್ । ಯದಿ ವೇದವಾದಾನುಸಾರಿಣೀ ನ ಭವತಿ ತರ್ಹಿ ಸಾ ಪ್ರವೃತ್ತಿಃ ನಿಂದ್ಯೈವೇತ್ಯತ ಉಕ್ತಂ ॥ **ವೇದವಾದಾನಿತಿ ॥** ಶ್ವಶುರಾದಯೋ ನಮ್ಯಾಃ ಇತ್ಯೇವಂಜಾತೀಯಕಾಃ ಆಪಾತತಃ ಪ್ರತೀತಾರ್ಥಮಾತ್ರವಿಷಯಾಃ ವೇದವಾದಾಃ ತಾನೇವ ನಾನುವರ್ತತೇ । ವೇದಾಂಸ್ತು ಉಪಕ್ರಮಾದಿಭಿಃ ನಿರ್ಣೀತಾರ್ಥವಿಷಯಾನ್ ಅನುವರ್ತತ ಏವೇತಿ ನ ನಿಂದ್ಯೇತಿ । ಇತರೇಷಾಂ ತಾದೃಶಾನು ಸಂಧಾನರಹಿತಾನಾಂ ಪ್ರವೃತ್ತಿಸ್ತು ವೇದವಾದಾನ್ ಅನುವರ್ತತೇ । ತತಸ್ತಸ್ಯ ಪ್ರವೃತ್ತಿಃ ಲೋಕತೋ ವಿಲಕ್ಷಣಾ ವಿರುದ್ಧಾ । ತದೇವ ದೃಷ್ಟಾಂತಮುಖೇನ ದ್ರಢಯತಿ ॥ **ಯಥೇತಿ ॥** ದೇವಮನುಷ್ಯಯೋಃ ದೇವಸ್ಯ ಮನುಷ್ಯಸ್ಯ ಚ ಗತಿಃ ಪ್ರವೃತ್ತಿಃ ಪರಸ್ಪರಂ ವಿರುದ್ಧಾ ತಥೈವೇತಿ । ಅಸ್ತ್ವೇವಂ ಲೋಕಪ್ರವೃತ್ತಿವಿಲಕ್ಷಣಾ ಜ್ಞಾನಿನಾಂ ಪ್ರವೃತ್ತಿಃ ಕಿಮಸ್ಮಾಭಿಃ ಕರ್ತವ್ಯಮಿತ್ಯತಃ ತಾದೃಶೀಂ ಭಕ್ತಾನಾಂ ಪ್ರವೃತ್ತಿಂ ದೃಷ್ಟ್ವಾ ತತ್ರ ಅನ್ಯಥಾಮತಿಃ ಶ್ರೇಯೋಽರ್ಥಿಭಿಃ ಭವದ್ಭಿಃ ನ ಕರ್ತವ್ಯೈವೇತ್ಯಾಹ ॥ **ಪರಮಿತಿ ॥** ಪರಂ ವಿಲಕ್ಷಣಪ್ರವೃತ್ತಿಮಂತಮಪಿ । ಪರಂ ಉತ್ತಮಜ್ಞಾನಿನಂ ನ ಕ್ಷಿಪೇತ್ । ಇದಮಕರ್ತವ್ಯಮೇವೇತಿ ಬುದ್ಧಿಂ ನ ಕುರ್ಯಾತ್ । ಕಿಂಚ ಸ್ವಯಮಪಿ ನ ತಥಾ ಪ್ರವರ್ತೇತೇತ್ಯಾಶಯೇನಾಹ ॥ **ಸ್ವ ಏವ ಧರ್ಮೇ ಸ್ಥಿತ ಇತಿ ।** ಇದಮುದಿತಂ ಭವತಿ— ಜ್ಞಾನಿನಾಂ ಇತರೇಷಾಂ ಚ ಪ್ರವೃತ್ತ್ಯೋರ್ವೈಲಕ್ಷಣ್ಯೇ ಹೇತುರಿದಮೇವ । ಯಜ್ಜ್ಞಾನಿನಾಂ ಪ್ರವರ್ತಕಶಾಸ್ತ್ರ ತಾತ್ಪರ್ಯ-ವಿಚಾರಣಂ ಉಪಕ್ರಮಾದಿಭಿಃ । ಇತರೇಷಾಂ ತು ತದಭಾವ ಇತಿ । ತತಸ್ತೇಭ್ಯಃ ಇತರೈಃ ಉಪಕ್ರಮಾದಿನಾ ಪ್ರವರ್ತಕಶಾಸ್ತ್ರಪರೀಕ್ಷಾಕ್ಷಮೈಃ ಇದಾನೀಂ ಅಸ್ಮಾಕಂ ತಾದೃಶಶಕ್ತಿರ್ನಾಸ್ತೀತಿ ಮತ್ವಾ ಸ್ವಯೋಗ್ಯೈವ ಪ್ರವೃತ್ತಿಃ ಕರ್ತವ್ಯಾ ನ ತೇಷಾಂ ಪ್ರವೃತ್ತಿಃ ಕಾರ್ಯಾ, ನಾಪಿ ತತ್ಪ್ರವೃತ್ತೌ ಅಧರ್ಮತ್ವಬುದ್ಧಿಃ । ಯಥಾ ದೇವಾನಾಂ ಪ್ರವೃತ್ತಿಃ ಮನುಷ್ಯೈಃ ನ ಕರ್ತವ್ಯಾ ನಾಪಿ ತೇಷಾಂ ಅಧರ್ಮತಯಾ ಜ್ಞೇಯಾ ತಥೈವ । ಏವಮನ್ಯಥಾಬುದ್ಧ್ಯಕೃತಾವೇವ ಶ್ರೇಯೋಽರ್ಥಿನಾಂ ಶ್ರೇಯಃಪ್ರಾಪ್ತಿಃ । ಅನ್ಯಥಾ ನ ತತ್ಪ್ರಾಪ್ತಿಃ ಅನರ್ಥಪ್ರಾಪ್ತಿಶ್ಚ ಭವೇದಿತಿ ॥

❖❖❖

**ಸತೀದೇವಿ ತಂದೆಯಾದ ದಕ್ಷಪ್ರಜಾಪತಿಗೆ ಹೇಳುತ್ತಾಳೆ—**

**ತನಗೆ ಬಿಂಬನಾಗಿ ಹೃದಯದಲ್ಲಿ ಪ್ರಕಾಶಿಸುವ ಶ್ರೀಹರಿಯಲ್ಲಿಯೇ ಸದಾ ಧ್ಯಾನ ನಿರತರಾಗಿರುವ ಶಿವನ ಬುದ್ಧಿ ಗುರುಹಿರಿಯರನ್ನು ನಮಿಸಬೇಕೆಂದು ಮುಂತಾಗಿ ಹೇಳುವ ವೇದದ ವಿಧಿನಿಷೇಧಗಳನ್ನು ಅನುಸರಿಸದಿರುವುದುಂಟು. ಅನುಸರಿಸದಿದ್ದರೆ ತಪ್ಪಾಗುವುದಿಲ್ಲ. ಮನುಷ್ಯರು ಹಾಗೆ ಮಾಡಬಾರದು. ದೇವತೆಗಳ, ಮನುಷ್ಯರ ನಡೆ ನುಡಿಗಳು ಬೇರೆ ಬೇರೆಯಾಗಿರುವಂತೆ ಶಿವನ ನಡೆನುಡಿಗಳೂ ವಿಲಕ್ಷಣವಾಗಿವೆ. ವಿಲಕ್ಷಣವಾಗಿದ್ದ ಮಾತ್ರಕ್ಕೆ ಮನುಷ್ಯರು ಆಕ್ಷೇಪಿಸಬಾರದು. ತಾವು ತಮ್ಮ ಯೋಗ್ಯ ಧರ್ಮವನ್ನು ಬಿಡದೇ ಇದ್ದು ವೇದಾನುಸಾರಿಗಳೇ ಆಗಿರಬೇಕು.**

'ಉನ್ಮಾದವನ್ನೃತ್ಯತಿ ಲೋಕಬಾಹ್ಯಃ' ಕವಿಮುನಿ ಹೇಳಿದಂತೆ ಭಕ್ತರ ಪ್ರವೃತ್ತಿ ಲೋಕವಿಲಕ್ಷಣವಾದ ಮಾತ್ರಕ್ಕೆ ಅದನ್ನು ಕಂಡು ಅಪಹಾಸ ನಿಂದೆ ಮುಂತಾದ ಅನ್ಯಥಾಮತಿಯನ್ನು ಮಾಡಬಾರದು. ಮಾಡಿದರೆ ಅದು ಭಗವಂತ ನಿಗೇ ದ್ರೋಹ ಮಾಡಿದಂತಾಗುವುದು. ಅನರ್ಥಕ್ಕೆ ಕಾರಣವಾಗುವುದು. ಶಿವನಲ್ಲಿ ದಕ್ಷ ಪ್ರಜಾಪತಿ ಹೀಗೆ ಅನ್ಯಥಾಮತಿಯನ್ನು ಮಾಡಿ ಶಿರಶ್ಛೇದ ಹೊಂದಿದ. ಒಬ್ಬ ದೇವೋತ್ತಮನಾದ ದಕ್ಷಪ್ರಜಾಪತಿಗೆ ಹೀಗೆ ಅನರ್ಥ ಉಂಟಾಯಿತೆಂದರೆ ಅಲ್ಪರಾದ ಮಾನವರಿಗೆ ಏನು ಹೇಳಬೇಕು.

ಭಕ್ತನಾದರೂ ವೇದವಿಧಿಯನ್ನು ಅನುಸರಿಸದಿದ್ದರೆ ಅದು ನಿಂದ್ಯವೇ ತಾನೆ? ಎಂದರೆ, 'ಮಾವನು ವಂದ್ಯ'ನೆಂದು ಹೇಳುವ ವೇದದಲ್ಲಿ ಮೇಲುನೋಟಕ್ಕೆ ಕಾಣುವ ಅರ್ಥವು 'ವೇದವಾದ'. ವೇದವಾದವನ್ನು ಮಹಾಮುನಿಯಾದ ಶಿವನು ಸ್ವೀಕರಿಸದೆ, ಉಪಕ್ರಮ ಉಪಸಂಹಾರಾದಿ ತಾತ್ಪರ್ಯ ಲಿಂಗಗಳಿಂದ ವಿಚಾರ ಮಾಡಿ ನಿರ್ಣೀತವಾದ 'ವೇದಾರ್ಥ'ವನ್ನೇ ಸ್ವೀಕರಿಸಿದ್ದಾನೆ. ನಿರ್ಣೀತವಾದ ವೇದಾರ್ಥವು ಹರಿಯನ್ನು ವಂದಿಸಬೇಕೆಂದು ಹೊರತು ಮಾವನನ್ನೇ ವಂದಿಸಬೇಕೆಂದಲ್ಲ.

ನಿರ್ಣೀತ ವೇದಾರ್ಥಾನುಸಂಧಾನವುಳ್ಳ ದೇವತೆಗಳು ಮೇಲುನೋಟಕ್ಕೆ ಕಾಣುವ ವೇದವಾದವನ್ನು ಅನುಸರಿಸುವುದಿಲ್ಲ. ಅದು ನಿಂದ್ಯವಾಗುವುದಿಲ್ಲ. ನಿರ್ಣೀತ ವೇದಾರ್ಥ ನಿರ್ಣಯ ಮಾಡಿಕೊಳ್ಳಲಾಗದವರು ಅಶಕ್ತಿಯಿಂದ

ವೇದಾರ್ಥ ಅನುಸಂಧಾನ ಮಾಡದ ಮಾನವರು ಪ್ರವೃತ್ತಕರ್ಮ ಮಾಡುತ್ತಾರೆ, ವೇದವಾದವನ್ನು ಅನುಸರಿಸುತ್ತಾರೆ. ದಕ್ಷಪ್ರಜಾಪತಿ ಪ್ರಾರಬ್ಧವಶದಿಂದ ವೇದಾರ್ಥದ ಅನುಸಂಧಾನ ಮಾಡದೆ 'ವೇದವಾದವನ್ನು ತಾನು ಅನುಸರಿಸಬೇಕು, ಶಿವನೂ ಅದನ್ನೇ ಅನುಸರಿಸಬೇಕೆಂ'ದು ಅನ್ಯಥಾಮತಿ ಮಾಡಿ ಅನರ್ಥಕ್ಕೆ ಈಡಾದ.

ದೇವತೆಗಳು ಧರ್ಮವನ್ನು ಬಿಟ್ಟವರೆಂದು ಮಾನವರು ತಿಳಿಯಬಾರದು. ದೇವತೆಗಳಂತೇ ತಾವೂ ಎಂದು ಅವರಂತೆ ನಡೆಯಲೂಬಾರದು. ತಮಗೆ ಯೋಗ್ಯವಾದ ಧರ್ಮದಲ್ಲಿ ತಾವಿರಬೇಕು. ಇಲ್ಲದಿದ್ದರೆ ಮಹಾತ್ಮರ ನಿಂದೆ ಮಾಡಿದ ಪಾಪ ಬಂದೀತು.

❖❖❖

–೩೪೫–

**ಹಿರಿಯರಿಗೆ ಮಾಡಿದ ನಮನ ಹರಿಗೇ ಸಲ್ಲುತ್ತದೆ**

**ಪ್ರತ್ಯುದ್ಗಮ ಪ್ರಶ್ರಯಣಾಭಿವಾದನಂ**
**ವಿಧೀಯತೇ ಸಾಧು ಮಿಥಃ ಸುಮಧ್ಯಮೇ ।**
**ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ**
**ಗುಹಾಶಯಾಯೈವ ನ ದೇಹಮಾನಿನೇ ।**

(ಭಾ.೪.೩.೨೨)

ನನು ಉಪಕ್ರಮಾದಿನಾ ಪ್ರವರ್ತಕಶಾಸ್ತ್ರವಿಚಾರಣಾಕ್ಷಮಾಣಾಂ ಅಜ್ಞಾನಾಂ ಪ್ರವೃತ್ತಿಃ ತತ್ ಕ್ಷಮಾಣಾಂ ಜ್ಞಾನಿನಾಂ ಪ್ರವೃತ್ತೇಃ ವಿಲಕ್ಷಣೇತಿ ತತ್ರಾಜ್ಞಾನಾಂ ಅನ್ಯಥಾಮತಿಕರಣೇ ಅನರ್ಥಪ್ರಾಪ್ತ್ಯಾ ತದ್ವರ್ಜನಮಾವಶ್ಯಕಂ ಶ್ರೇಯೋಽರ್ಥಿನಾಮಿತ್ಯುಕ್ತಂ ತದ್ಯುಕ್ತಮೇವ। ತತ್ರ ಶ್ವಶುರಾದಯೋ ನಮ್ಯಾ ಇತ್ಯಾಪಾತಪ್ರತೀತಾರ್ಥವಿಷಯಕತಯಾ ವೇದವಾದತ್ವಂ ಯದಭಿಹಿತಂ ತದಪ್ಯಸ್ತು। ತಸ್ಯೋಪಕ್ರಮಾದಿನಾ ನಿರ್ಣೀತಾರ್ಥಸ್ತು ಕ ಇತ್ಯತಃ ಪ್ರಾಜ್ಞಸಂಮತೋಽರ್ಥಃ ಅಯಮೇವೇತ್ಯಾಶಯೇನಾಹ ॥ ಪ್ರತ್ಯುದ್ಗಮೇತಿ ॥ ಹೇ ಸುಮಧ್ಯಮೇ ಇತಿ ಸತೀಂ ಪ್ರತಿ ಶಂಕರವಾಕ್ಯಂ। ಪ್ರಾಜ್ಞೈಃ ಮಿಥಃ ಪರಸ್ಪರಂ ಸ್ವಗೃಹಾನ್ ಪ್ರತಿ ಪರೇಷಾಂ ಆಗಮನೇ ಸತಿ। ಪ್ರತ್ಯುದ್ಗಮಃ ಆಭಿಮುಖ್ಯೇನ

ಗಮನಂ, ಪ್ರಶ್ರಯಣಂ ಪ್ರಹ್ವೀಭಾವಃ, ಅಭಿವಾದನಂ ಪ್ರಣಾಮಃ, ಏತದಾದಿಕಂ ಗುಹಾಶಯಾಯ ಹೃದಯಾಂತರ್ವರ್ತಿಜೀವಾಂತರ್ಯಾಮಿಣೇ, ಪರಸ್ಮೈ ಪುರುಷಾಯೈವ, ತದಸ್ತ್ವಿತಿ ಚೇತಸಾ ಅನುಸಂಧಾನೇನ ಕ್ರಿಯತೇ । ನ ತು ದೇಹೇ ಯಸ್ಯ ಅಭಿಮಾನೋಽಸ್ತಿ ಜೀವಸ್ಯ ತಸ್ಮೈ ತದಸ್ತ್ವಿತಿ ಚೇತಸೇತಿ । ಇದಮುದಿತಂ ಭವತಿ— ಶ್ವಶುರಾದಯೋ ನಮ್ಯಾ ಇತಿ ವೇದಸ್ಯ ಉಪಕ್ರಮಾದಿತಾತ್ಪರ್ಯ ಲಿಂಗೈಃ ನಿರ್ಣೀತೋಽರ್ಥಃ ತಚ್ಛಬ್ದವಾಚ್ಯಃ ತದ್ಬಿಂಬರೂಪೋ ಹರಿರೇವ ನಮ್ಯಃ ನಮನೋದ್ದೇಶ ಇತಿ ಹಿ ಪ್ರಾಜ್ಞಸಂಮತಂ । ಅತ ಏವ ಬಿಂಬಾನುಸಂಧಾನವತಾ ಶಿವೇನ ದಕ್ಷಬುದ್ಧಿಪರೀಕ್ಷಣಾಯ ಪ್ರತ್ಯುದ್ಗಮನಾದೌ ಅಕೃತೇ ಪ್ರಾಜ್ಞಮತಂ ಅಜಾನತಾ ದೇಹಾಭಿಮಾನಿನ ಏವ ವಂದನಾದಿಕಮಿತಿ ಜಾನತಾ ದಕ್ಷಪ್ರಜಾಪತಿನಾ ತಸ್ಮೈ ಕುಪಿತಂ ಶ್ವಶುರಸ್ಯ ಮೇ ಜಾಮಾತ್ರಾ ಅನೇನ ವಂದನಂ ನ ಕೃತಮಿತಿ । ತೇನ ಚ ಅನರ್ಥಃ ಪ್ರಾಪ್ತಃ । ತತಃ ಶ್ರೇಯೋಽರ್ಥಿಭಿಃ ಜ್ಞಾನಿನಾಂ ಪ್ರವೃತ್ತೌ ಅನ್ಯಥಾಮತಿಃ ನ ಕರ್ತವ್ಯೇತಿ ॥

❖❖❖

**ಶಿವನು ಸತೀದೇವಿಗೆ ಹೇಳುತ್ತಾನೆ— ಬಲ್ಲವರು ತಮ್ಮ ಮನೆಗೆ ಯಾರಾದರೂ ಬಂದಾಗ ಅವರನ್ನು ಸ್ವಾಗತಿಸುವುದು ವಿನಯದಿಂದ ತಲೆಬಾಗುವುದು ನಮಸ್ಕಾರ ಮಾಡುವುದು ಮುಂತಾದುವನ್ನು ಅವರ ಹೃದಯದಲ್ಲಿರುವ ಬಿಂಬನಾದ ಪರಮ ಪುರುಷ ಹರಿಗೇ ಸಲ್ಲಲಿ ಎಂದು ಮನಸಿನಿಂದ ಅನುಸಂಧಾನ ಮಾಡಿಯೇ ಅನುಷ್ಠಾನ ಮಾಡುವರು. ಅದೇ ಸರಿ. ದೇಹಾಭಿಮಾನಿ ಜೀವನಿಗೆ ಸಲ್ಲುವುದೆಂದು ಅವರು ತಿಳಿಯುವುದಿಲ್ಲ'**

ಶ್ವಶುರನಿಗೆ ವಂದನೆ ಮಾಡಬೇಕೆಂದು ವೇದವಿಧಿಗೆ ಶ್ವಶುರಾದಿ ಶಬ್ದ ಮುಖ್ಯವಾಚ್ಯನಾದ ಬಿಂಬವಾದ ಹರಿಗೇ ವಂದನೆ ಮಾಡಬೇಕೆಂದರ್ಥ. ಆದರಿಂದ ನಮಸ್ಕಾರಾದಿಗಳು ಶ್ವಶುರನ ಬಿಂಬನಿಗೇ ಸಲ್ಲಬೇಕಾದವು ಹೊರತು ದೇಹಾಭಿಮಾನಿ ಜೀವನಿಗಲ್ಲ ಎಂದು ತಿಳಿದಿರುವ ಶಿವನು ಪ್ರಿಯನಾದ ಮಾವನ ಬುದ್ಧಿಪರೀಕ್ಷೆ ಮಾಡುವ ಉದ್ದೇಶದಿಂದ ಅವನಿಗೆ ನಮಿಸಲಿಲ್ಲ. ಚತುರ್ಮುಖಾಂತರ್ಗತನಾದ ಹರಿಗೇ ನಮಿಸಿದ ಇದನ್ನು ತಿಳಿಯದಿದ್ದ ದಕ್ಷನು 'ನಾನು ಮಾವ, ಇವನು ಅಳಿಯ, ನನಗೆ ಏಕೆ ನಮಿಸುತ್ತಿಲ್ಲ?' ಎಂದು ಕುಪಿತನಾದ. ಆದರಿಂದ ಅನರ್ಥವಾಯಿತು. ಶ್ರೇಯೋಭಿಲಾಷಿಗಳು ಇದರಿಂದ

ಪಾಠ ಕಲಿಯಬೇಕು. ತಿಳಿಯದೆ, ದೊಡ್ಡವರ ಪ್ರವೃತ್ತಿಯನ್ನು ಕಂಡು, ಅನ್ಯಥಾ ತಿಳಿಯಬಾರದು.

❖❖❖

—೩೪೬—

**ಜ್ಞಾನಿಗಳನ್ನು ಅನ್ಯಥಾ ತಿಳಿದು ಅವಮಾನಿಸುವುದು ಅನರ್ಥಕರ**

ಶ್ರಿಯಾ ವಿಭೂತ್ಯಾಽಭಿಜನೇನ ವಿದ್ಯಯಾ
ತ್ಯಾಗೇನ ರೂಪೇಣ ಬಲೇನ ಕರ್ಮಣಾ ।
ಜಾತಸ್ಮಯೇನಾಂಧಧಿಯಃ ಸಹೇಶ್ವರಾನ್
ಸತೋಽವಮನ್ಯಂತಿ ಹರಿಪ್ರಿಯಾನ್ ಖಲಾಃ ॥

(ಭಾ.೧೧.೫.೯)

ಜ್ಞಾನಿನಾಂ ಪ್ರವೃತ್ತೌ ಅನ್ಯಥಾಮತಿಕರಣೇ ಶ್ರೀಹರಿಕೋಪೇನ ಅನರ್ಥಪ್ರಾಪ್ತಿರೇವ ಅತೋ ನ ಕರ್ತವ್ಯೇತ್ಯುಪಸಂಹರತಿ ॥ ಶ್ರಿಯೇತಿ ॥ ಶರೀರಕಾಂತ್ಯಾ । ವಿಭೂತ್ಯಾ ಐಶ್ವರ್ಯೇಣ । ತದಾದಿಭಿಃ ಜಾತೇನ ಅಹಂಕಾರೇಣ । ಅಂಧಧಿಯಃ ತಿರೋಹಿತಶಾಸ್ತ್ರೀಯಾನುಸಂಧಾನಾಃ । ಅತ ಏವ ಖಲಾಃ ಹರಿಪ್ರಿಯಾನ್ ಸತಃ । ಅವಮನ್ಯಂತೇ । ಹರಿಭಕ್ತಾನಾಂ ಅವಜ್ಞಾನಂ ಹರೇರೇವ ಅವಜ್ಞಾನಂ, ಯತಃ ತೇ ಖಲಕೃತಂ ಅವಜ್ಞಾನಮಪಿ ಸ್ವಬಿಂಬಾಯ ಹರಯೇ ಸಮರ್ಪಯಂತಿ ಪರಮಭಾಗವತತ್ವಾದಿತ್ಯಾಶಯೇನಾಹ ॥ **ಸಹೇಶ್ವರಾನಿತಿ** । ಅತಃ ಹರಿಕೋಪೇನ ಅನರ್ಥಪ್ರಾಪ್ತೇಃ ಭಕ್ತಾನಾಂ ಲೋಕವಿಲಕ್ಷಣಾಯಾಮಪಿ ಪ್ರವೃತ್ತೌ ಅನ್ಯಥಾಮತಿಃ ಶ್ರೇಯೋಽರ್ಥಿಭಿಃ ನ ಕರ್ತವ್ಯೇತಿ ಭಾವಃ ॥

❖❖❖

ಚಮಸಮುನಿ ವಿದೇಹರಾಜನಿಗೆ ಉಪದೇಶಿಸುತ್ತಾರೆ—

ಶರೀರಕಾಂತಿ ಅಷ್ಟೈಶ್ವರ್ಯ ಸತ್ಕುಲದಲ್ಲಿ ಜನನ ವಿದ್ಯೆ ದಾನ ರೂಪ ಸೌಂದರ್ಯ ಬಲ ಕರ್ಮಾನುಷ್ಠಾನ ಇವುಗಳಿಂದ ಹುಟ್ಟುವ ಅಹಂಕಾರದಿಂದ ಶಾಸ್ತ್ರಜ್ಞಾನದ ಅನುಸಂಧಾನವನ್ನು ಮರೆತು ಹರಿಪ್ರಿಯರಾದ 'ಸಹೇಶ್ವರ'ರಾದ

**ಅಂದರೆ ಬಿಂಬರೂಪಿ ಹರಿಯಿಂದ ಸಮೇತರಾದ ಸಜ್ಜನರನ್ನು ದುರ್ಜನರು ಅವಮಾನಿಸುವರು.**

ಯದ್ಯಪಿ ದುರ್ಜನರಲ್ಲಿಯೂ ಬಿಂಬನಿರುತ್ತಾನೆ. ಆದರೂ ದುರ್ಜನರು ತಮಗೆ ಇತರರು ಮಾಡುವ ಮಾನಾಪಮಾನಗಳೆಲ್ಲ ತಮಗೇ ಸೇರುವವೆಂದು ಭ್ರಾಂತಿಯಲ್ಲಿರುತ್ತಾರೆ. ಸಜ್ಜನರು ತಮಗೆ ಮಾಡಿದ ಮಾನಾಪಮಾನಗಳನ್ನು ತಮ್ಮೊಳಗಿರುವ ಬಿಂಬನಿಗೇ ಸೇರಬೇಕಾದುದೆಂದು ಸಮರ್ಪಿಸುತ್ತಾರೆ. ಆದರಿಂದ ಹರಿಭಕ್ತರಿಗೆ ಮಾಡಿದ ಅವಮಾನವು ಹರಿಗೇ ಹೋಗಿ ಸೇರುವುದರಿಂದ ಹರಿ ಕುಪಿತನಾಗುವನು. ಆದರಿಂದ ಶ್ರೇಯೋऽಭಿಲಾಷಿಗಳು ಜ್ಞಾನಿಜನರ ಲೋಕ ವಿಲಕ್ಷಣ ಪ್ರವೃತ್ತಿಯನ್ನು ಕಂಡು ಅವಹೇಳನ ಮಾಡಬಾರದು.

# ೨೬. ಗುರುವಿಚಾರ ಪ್ರಕರಣ

## ಪ್ರಕರಣ ಸಾರಾಂಶ

ಸಾಧಕರಿಗೆ ಶಾಸ್ತ್ರೋಪದೇಶ ನೀಡುವ ಸಾಮಾನ್ಯ ಗುರುಗಳೂ ಮತ್ತು ಬಿಂಬೋಪದೇಶ ನೀಡುವ ವಿಶೇಷ ನಿಯತ ಗುರುಗಳೂ ಇರುತ್ತಾರೆ. ಇವರು ಇಬ್ಬರೂ ಆಯಾಸಾಧಕರಿಗೆ ಅಸಾಧಾರಣ ಗುರುಗಳು, ಎಲ್ಲ ಸಾಧಕರಿಗೂ ಸಾಧಾರಣವಾಗಿರುವ ಗುರು ಗಳಲ್ಲ. ಬ್ರಹ್ಮ ವಿಷ್ಣುಗಳಿಬ್ಬರು ಸಾಧಾರಣ ಗುರುಗಳು, ಎಲ್ಲ ಸಾಧಕ ರಿಗೂ ಅವರ ಉಪದೇಶ ಆವಶ್ಯಕ. ಅದಿಲ್ಲದೆ ಯಾರಿಗೂ ಮುಕ್ತಿ ಇಲ್ಲ. ಆದರೆ ಅವರು ಯಾರಿಗೂ ಹೊರಗೆ ಪ್ರತ್ಯಕ್ಷವಾಗಿ ಬಿಂಬೋಪದೇಶ ನೀಡುವುದಿಲ್ಲ. ಎಲ್ಲರ ಚಿತ್ತದಲ್ಲಿ ಚಿತ್ತಾಭಿಮಾನಿ ಬ್ರಹ್ಮದೇವರು ಇರುತ್ತಾರೆ, ಅವರ ಹೃದಯದಲ್ಲಿ ಶ್ರೀವಾಸುದೇವ ನಿರುತ್ತಾನೆ. ವಾಸುದೇವನು ಆ ಚಿತ್ತದಲ್ಲಿ ಬಿಂಬಜ್ಞಾನ ಉಂಟು ಮಾಡುತ್ತಾನೆ. ಇಲ್ಲಿ ಗುರುವಾಗಿ ಬಿಂಬಜ್ಞಾನ ನೀಡುವವನು ವಾಸುದೇವನೆ. ಅವನಿಗೆ ಅಧಿಷ್ಠಾನ ಬ್ರಹ್ಮದೇವರು. ಅಧಿ ಷ್ಠಾನವಾಗುವುದೇ ಬ್ರಹ್ಮದೇವರ ಗುರುತ್ವ. ಜ್ಞಾನನೀಡುವ ಗುರು ವಾಸುದೇವನೆ.

ದೇವತೆಗಳ ಅಂತರ್ಯಾಮಿ ಅಸುರರನ್ನು ಗೆದ್ದಾಗ ದೇವತೆಗಳು ತಾವೇ ಗೆದ್ದೆವೆಂದು ಬೀಗಿದರು. ಆಗ ಯಕ್ಷರೂಪದಿಂದ ಹರಿ ಎದುರಿನಲ್ಲಿ ಕಾಣಿಸಿಕೊಂಡ. ಯಾರೀತ, ಏನು ಇವನ ಶಕ್ತಿ ಸಾಮರ್ಥ್ಯ ಎಂದು ತಿಳಿಯಲು ಅಗ್ನಿ ವಾಯುಗಳು ಬಂದರು. ಅವರಿಗೆ ಯಕ್ಷನನ್ನು ಪರೀಕ್ಷಿಸಿ ತಿಳಿಯಲಾಗಲಿಲ್ಲ. ಇಂದ್ರ ಬಂದ. ಅವನು ಪರೀಕ್ಷೆಗೆ ತೊಡಗದೆ ವಿನಯದಿಂದ ನೀನಾರೆಂದೇ ಕೇಳಿದ. ಆಗ ಯಕ್ಷ ಅದೃಶ್ಯನಾದ. ಉಮಾದೇವಿ ಪ್ರತ್ಯಕ್ಷಳಾಗಿ ಹರಿಯ ಬಗ್ಗೆ ಇಂದ್ರನಿಗೆ ಉಪದೇಶ ನೀಡಿದಳು. ಉಮೆ ಇಂದ್ರನಿಗೆ ಅಸಾಧಾರಣ ಗುರು.

ಗುರುಪ್ರಸಾದವಿಲ್ಲದೆ ಬಿಂಬಾಪರೋಕ್ಷವಾಗುವುದಿಲ್ಲ. ಅದಕ್ಕೆ

ಸಾಮಾನ್ಯವಾಗಿ ಬ್ರಹ್ಮೋಪದೇಶ ಮಾಡುವ ಗುರುಗಳನ್ನು ಸೇವೆ ಮಾಡಿ ಅವನ ಅನುಗ್ರಹ ಪಡೆದು, ಬಳಿಕ, ವಿಶೇಷವನ್ನು ಹೇಳಿ ಬಿಂಬನನ್ನು ತಿಳಿಸಿಕೊಡುವ ಗುರುವಿನಲ್ಲಿಯೂ ಭಕ್ತಿಮಾಡಿ ಅವನ ಅನುಗ್ರಹವನ್ನೂ ಸಂಪಾದಿಸಬೇಕು. ಆದರೂ ಇಷ್ಟೇ ಸಾಲದು. ಎಲ್ಲರಿಗೂ ವಿರಿಂಚನ ಉಪದೇಶದಿಂದಲೇ ಮುಕ್ತಿ. ಅದರಿಂದ ವಿರಿಂಚನ ಮತ್ತು ಅವನ ಅಂತರ್ಯಾಮಿ ವಾಸುದೇವನ ಅನುಗ್ರಹದಿಂದ ಅವರ ಉಪದೇಶಪಡೆಯಬೇಕು.

❖❖❖

–೩೪೭–

## ಸರ್ವಲೋಕಗುರು ಬ್ರಹ್ಮಾಂತರ್ಗತನೆ

ನೈವೋಪಯಾಂತ್ಯಪಚಿತಿಂ ಕವಯಸ್ತವೇಶ
ಬ್ರಹ್ಮಾದಯೋಽಪಿ ಕೃತಮೃದ್ಧಮುದಃ ಸ್ಮರಂತಃ ।
ಯೋಽಂತರ್ಬಹಿಸ್ತನುಭೃತಾಮಶುಭಂ ವಿಧುನ್ವ-
ನ್ನಾಚಾರ್ಯ ಚೈತ್ಯವಪುಷಾ ಸ್ವಗತಿಂ ವ್ಯನಂಕ್ಷಿ ॥

(ಭಾ.೧೧.೨೯.೬)

ಶ್ರೀವಾದಿರಾಜಗುರುಭ್ಯೋ ನಮಃ ॥ ಏವಮನವರತಮಾದರೇಣ ಬಿಂಬೋಪಾಸನಾವರ್ಧಿತಪಕ್ವಭಕ್ತಿಯೋಗೇನ ಬಿಂಬಾಪರೋಕ್ಷಂ ಭವತೀತಿ ಪ್ರತಿಪಾದಿತಂ। ತಚ್ಚ ಭವತ್ ಗುರುಪ್ರಸಾದಮಂತರೇಣ ನ ಭವತೀತಿ ವಕ್ತುಮಿದಂ ಪ್ರಕರಣಂ। ನನು ಸಾಮಾನ್ಯತೋ ಬ್ರಹ್ಮೋಪದೇಶಕರ್ತಾ ಗುರುರೇಕೋಽಭಿಹಿತಃ ತಸ್ಮಿನ್ಭಕ್ತಿಸ್ತತಃ ಪ್ರಸಾದಶ್ಚ ಸಂಪಾದಿತ ಏವ। ತಥಾ ವಿಶೇಷತೋಽಪ್ಯುಪದೇಶಕೋ ಗುರುರಪಿ ಬಿಂಬೋಪದೇಷ್ಟಾಪ್ಯಭಿಹಿತಃ। ತಸ್ಮಿನ್ ಭಕ್ತಿಂ ಕೃತ್ವಾ ತತೋ ಬಿಂಬೋಪದೇಶಂ ಸಮಾಸಾದ್ಯ ಉಪಾಸನಾಬಲೇನ ಭಕ್ತಿಂ ಚ ವಿಶಿಷ್ಟಾಂ ಪ್ರಾಪ್ಯ ಸ್ಥಿತವತೋಽಸ್ತ್ಯೇವ ತಸ್ಯ ಗುರೋಃ ಪ್ರಸಾದ ಇತಿ ಕಿಮತ್ರ ಸಂಪಾದ್ಯತಯೋಚ್ಯತೇ। ನ ಚಾಭ್ಯಾಂ ಗುರುರನ್ಯೋಽಸ್ತಿ ಪುಂಸಃ। ಯೇನ ತದರ್ಥಮಯಮಾರಂಭಃ ಸ್ಯಾದಿತಿ ಚೇದುಚ್ಯತೇ। ಅಸ್ತ್ಯೇವಾಭ್ಯಾಮನ್ಯೋ ಗುರುಃ। ಇಮೌ ತ್ವಸಾಧಾರಣೌ ಅನ್ಯಸ್ತು ಸಾಧಾರಣಃ ವಿನಾ ಚ ತತ್ಪ್ರಸಾದಂ ನ ಬಿಂಬಾಪರೋಕ್ಷಂ ಸ ಗುರುರತ್ರ ವಿಚಾರ್ಯತ ಇತಿ ಯುಕ್ತೋಽಯಮಾರಂಭ

ಇತಿ। ನನು ವಿದಿತಮೇತತ್। ಪೂರ್ವೋಕ್ತೌ ಗುರೂ ತು ಅಸಾಧಾರಣೌ। ಸಾಧಾರಣೌ ಚ ದ್ವಾವನ್ಯೌ ವಿದ್ಯೇತೇ। ಯತೋ ವಿರಿಂಚೋಪದೇಶೇನೈವ ಸರ್ವೇಷಾಂ ಮುಕ್ತಿರಿತಿ ಘಂಟಾಘೋಷಃ। ಸ ಚ ಸರ್ವಾನ್ಪ್ರತ್ಯವಿಶಿಷ್ಟತಯಾ ಸಾಧಾರಣಃ ಸ ಏಕಃ ದ್ವಿತೀಯಸ್ತು ಭಗವಾನೇವ ಜಗತಃ ಗುರುರಿತಿ ಗೀತಃ। **ತಥಾ ಚೋಕ್ತಂ ಅಧ್ಯಾತ್ಮಪ್ರಕರಣಾದೌ।**

ತಥಾಪಿ ಇದಂ ದುರ್ಘಟಮೇವ। ತಥಾಹಿ ಔಪನಿಷತ್ಕೀ ಕಥಾ। ದೇವಾಂತರ್ಯಾಮಿಣಾ ಹರಿಣಾ ದೈತ್ಯವಿಜಯೇ ಕೃತೇ ವಯಮೇವ ಜಿತವಂತಃ ಇತಿ ತೇಷಾಂ ಮದೇ ತತ್ಪರಿಹಾರಾಯ ಬ್ರಹ್ಮಾದಿಭಿಃ ಸಹ ಯಕ್ಷರೂಪೋ ಭೂತ್ವಾ ಆಗತಃ। ತದ್ವೇದನಾಯ ಅಗ್ನಿಂ ವಾಯುಂ ಚ ಪ್ರೇಷಿತವಾನ್ ಇಂದ್ರಃ। ತಾವುಭೌ ತತ್ರ ಅಶಕ್ತೌ ದೃಷ್ಟ್ವಾ ಸ್ವಯಂ ಇಂದ್ರ ಏವ ತತ್ರ ಆಜಗಾಮ। ತದ್ವಿದಿತ್ವಾ ಯಕ್ಷಃ ಉಮೈವ ಅಸ್ಮೈ ಬ್ರಹ್ಮೋಪದೇಶಯೋಗ್ಯೇತಿ ತಾಮೇವ ಸಂಸ್ಥಾಪ್ಯ ಬ್ರಹ್ಮಶಿವಾಭ್ಯಾಂ ಸಹೈವ ಅಂತರ್ದಧೇ ಇತಿ। ಯದಾ ಚ ಇಂದ್ರಸ್ಯ ಶಿವಾತ್ ಬ್ರಹ್ಮಣಃ ಹರೇರ್ವಾ ಸಾಕ್ಷಾತ್ ಉಪದೇಶಾನರ್ಹತಾ ತದಾ ಕಿಂ ವಕ್ತವ್ಯಂ ಸರ್ವೇಷಾಂ ತತ್ರ ಅನರ್ಹತಾ ಇತಿ। ನ ಚ ಅಯಂ ಉಪದೇಶಃ ಸಾಧಾರಣಪ್ರಮೇಯವಿಷಯಃ। ಯೇನ ಇಂದ್ರಾದೇರಪಿ ಕದಾಚಿತ್ ವಿರಿಂಚಮುಖಾತ್ ಉಪದೇಶ ಇವ ನಾರದಾದೇರಿವ ಯುಜ್ಯತೇ। ಕಿಂತು ಸಾಕ್ಷಾನ್ಮೋಚಕಾತಿಗೋಪ್ಯಬಿಂಬವಿಷಯಃ। ನ ಚ ಈದೃಶಃ ಉಪದೇಶೋ ಜಂತುಮಾತ್ರಸ್ಯ ವಿರಿಂಚಾತ್ ಹರೇರ್ವಾ ಯುಜ್ಯತೇ। ತತಃ ಇದಂ ದುರ್ಘಟಮೇವ ಭಾತಿ। ಕಿಂಚ ಉಭಾವಪಿ ಏಕದಾ ಏವ ಉಪದಿಶತಃ ಕಿಂವಾ ಕ್ರಮೇಣ। ಕ್ರಮೇಽಪಿ ವಿರಿಂಚಾದಿಃ ಭಗವದಾದಿರ್ವಾ। ಕಥಮೇತತ್ ಇತ್ಯತ ಆಹ॥ **ನೈವೇತಿ**॥ ಹೇ ಈಶ, ಭವಾನ್ ಆಚಾರ್ಯಚೈತ್ಯವಪುಷಾ ಚಿತ್ತಸ್ಥಃ ಚಿತ್ತಾಭಿಮಾನೀ ಆಚಾರ್ಯಃ ಬ್ರಹ್ಮಾ ಚ ಆಚಾರ್ಯಚೈತ್ಯಃ ತದಂತರ್ಯಾಮಿಣಾ ಚೈತ್ಯೇನ ಸರ್ವಜೀವಚಿತ್ತಸ್ಥೇನ ವಾಸುದೇವಾಖ್ಯೇನ ವಪುಷಾ ರೂಪೇಣ। ತನುಭೃತಾಂ ದೇಹಧಾರಿಮಾತ್ರಸ್ಯ ಅಧಿಕಾರಿಣಃ।ಅಂತಃ ಬಹಿಃ। ಅಶುಭಂ ಮಾನಸಾದಿಭೇದೇನ ತ್ರಿವಿಧಮಪಿ ಪಾಪಂ ಜ್ಞಾನಪ್ರತಿಬಂಧಕಂ ವಿಧುನ್ವನ್ ಸನ್। ನಾಶಯಿತ್ವೇತಿ ಯಾವತ್। ಸ್ವಸ್ಯ ಬಿಂಬಸ್ಯ, ಗತಿಂ ಜ್ಞಾನಂ। ವ್ಯನಂಕ್ಷಿ ವ್ಯಕ್ತೀಕರೋಷಿ। ತಸ್ಯ ತವ। ಬ್ರಹ್ಮಾದಯೋಽಪಿ ಕವಯಃ। ಅಪಚಿತಿಂ ಪ್ರತ್ಯುಪಕಾರಭೂತಾಂ ಪೂಜಾಂ ಕರ್ತುಂ ಸಾಮರ್ಥ್ಯಂ। ನೈವ ಉಪಯಾಂತಿ ಯದ್ಯಪಿ। ತಥಾಪಿ ಇದಂ ಏಕಂ ಏವ ಭಕ್ತ್ಯೈಃ ಭಗವತಃ ಕರ್ತವ್ಯಂ ಇತಿ

**ಭಾವೇನೋಕ್ತಂ ॥ ಕೃತಮಿತಿ ॥ ಭಗವತಾ ಕೃತಂ ಉಪಕಾರಂ । ಋದ್ಧಾ ಅಭಿವೃದ್ಧಾ ಮುತ್ ಸಂತೋಷೋ ಏಷಾಂ ತೇ ತಾದೃಶಾಃ ಸಂತಃ । ಸ್ಮರಂತೋ ಭವಂತೀತಿ । ಅನಿಮಿತ್ತಬಂಧುತ್ವಸ್ಮರಣಾದಿಕಮೇವ ಭಕ್ತಕಾರ್ಯಂ ಇತಿ ॥**

**ಇದಮುದಿತಂ ಭವತಿ ॥ ಅಸ್ತ್ಯೇವ ಅಧಿಕಾರಿಮಾತ್ರಸ್ಯಾಪಿ ಹರಿವಿರಿಂಚಾಭ್ಯಾಂ ಉಪದೇಶೋ ಬಿಂಬಸ್ಯೈವ । ನ ಚೈತತ್ ಉಕ್ತರೀತ್ಯಾ ದುರ್ಘಟಂ । ಸಾಕ್ಷಾತ್ ಬಹಿಷ್ಠರೂಪೇಣ ತದನಂಗೀಕಾರಾತ್ । ತಸ್ಯೈವ ದುರ್ಘಟತಯಾ ಅಭಿಪ್ರೇತತ್ವಾತ್ । ಅಂತರ್ಗತರೂಪೇಣ ಪರೋಕ್ಷೇಣ ಉಪದೇಶಸ್ಯ ಸ್ವೀಕಾರಾತ್ । ಬ್ರಹ್ಮೋಪದೇಶೇನೈವ ಸರ್ವೇಷಾಂ ಮುಕ್ತಿಃ ಇತ್ಯಸ್ಯ ಅಸಾಮಂಜಸ್ಯಪ್ರಸಂಗಾತ್ । ಚತುರ್ಮುಖಾಂತರ್ಯಾಮೀ ಯೋ ವಾಸುದೇವಃ ಮಹತ್ತತ್ವಗತಃ ಸ ಏವ ಮಹತ್ತತ್ವಾತ್ಮಕಚಿತ್ತಾಭಿಮಾನಿ ಚತುರ್ಮುಖಾಂತರ್ಗತಃ ಸರ್ವಜೀವಚಿತ್ತನಿಯಾಮಕತಯಾ ಚಿತ್ತನಾಮಾ ಸ ಏವ ಅನುಗ್ರಹವಿಶೇಷಪೂರ್ವಕಂ ಚಿತ್ತಂ ನಿಯಮ್ಯ ಬಿಂಬಂ ಪ್ರದರ್ಶಯತೀತಿ ಸ ಏವ ಸರ್ವೇಷಾಂ ಸಾಧಾರಣೋ ಗುರುಃ । ವಿರಿಂಚಸ್ತು ತದಧಿಷ್ಠಾನತಯಾ ಇತಿ ದ್ವಾವಪಿ ಸಾಧಾರಣೌ ಗುರೂ । ಪೂರ್ವೋಕ್ತೌ ತು ಅಸಾಧಾರಣೌ ಇತಿ ನ ಕಿಂಚಿತ್ ದುರ್ಘಟಂ ಇತಿ ।**

**ಅಥವಾ ''ಹರೌ ಗುರೌ ಮಯಿ ಭಕ್ತ್ಯಾನುವೃತ್ತ್ಯಾ'' ''ಭಕ್ತ್ಯೈಕಯೇಶಂ ಗುರುದೇವತಾತ್ಮಾ ॥'' ''ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್ ಗುರ್ವಾತ್ಮದೈವತಃ'' ಇತ್ಯಾದೌ ಗುರುದೇವತಯೋಃ ಐಕ್ಯಂ ಉಚ್ಯತೇ । ತತ್ಕಥಂ ಇತ್ಯತಃ ಏವಂ ಇತ್ಯಾಶಯೇನ ಆಹ ॥ ನೈವೇತಿ । ಸರ್ವಚಿತ್ತ ನಿಯಾಮಕತಯಾ ಗುರುಭೂತಸ್ಯ ವಾಸುದೇವಸ್ಯ ಹರೇಶ್ಚ ಪರದೈವಸ್ಯ ಐಕ್ಯವಿವಕ್ಷಯಾ ತಾದೃಶೋಕ್ತಿಃ ಇತಿ ಭಾವಃ । ಅನೇನೈವ ಅಧ್ಯಾತ್ಮಪ್ರಕರಣಾದೌ ಉಕ್ತಂ ಹರೇಃ ಗುರುತ್ವಂ ವಿವೃತಂ ಭವತಿ ॥**

❖❖❖

ಸಾಧಾರಣ ಬ್ರಹ್ಮೋಪದೇಶ ನೀಡುವ ಗುರು ಮತ್ತು ವಿಶೇಷ ಬಿಂಬೋಪದೇಶಕ ಗುರುಗಳು ಇಬ್ಬರು ಆಯಾ ಮುಮುಕ್ಷುಗಳಿಗೆ ಬೇರೆಬೇರೆ ಇರುವರು. ಇವರು ಅಸಾಧಾರಣ ಗುರುಗಳು. ವಿರಿಂಚ ಮತ್ತು ವಿರಿಂಚಾಂತರ್ಗತ ವಾಸುದೇವರೆಂಬ ಇಬ್ಬರು, ಸರ್ವ ಮುಮುಕ್ಷುಗಳಿಗೂ, ಬೇರೆಬೇರೆ ಎನ್ನದೆ ಎಲ್ಲರಿಗೂ ಸಾಧಾರಣವಾಗಿಯೆ ಗುರುಗಳಾಗಿರುವರು.

'ಪಿತೃ–ಮಾತೃ–ಬಂಧು–ದೇವತೆ–ಗುರು' ಎಂದು ಐದು ಬಗೆಯಿಂದಲೂ ಶ್ರೀಹರಿಯ ಉಪಾಸನೆಯನ್ನು ಗುರು ಮಾಡಿಸುವುದರಿಂದ, ಗುರುಭಕ್ತಿಯಿಂದ ಹರಿಭಕ್ತಿ ಉಂಟಾಗುವುದೆಂದು ಅಧ್ಯಾತ್ಮ ಪ್ರಕರಣ (೨೨೨ನೇ ಶ್ಲೋಕ)ದಲ್ಲಿ ಸ್ಪಷ್ಟವಿದೆ. ಅದರಿಂದ ಸರ್ವಮುಮುಕ್ಷುಗಳಿಗೂ ಬೇರೆಬೇರೆ ಎನ್ನದೆ ಸಾಧಾರಣವಾಗಿ ಪಿತೃಮಾತೃ ಬಂಧು ದೈವ ಗುರು ಎಂದು ಐವರೂ ಕೂಡ ಬ್ರಹ್ಮಾಂತರ್ಗತನಾದ ವಾಸುದೇವನೊಬ್ಬನೆ.

ಕೇನೋಪನಿಷತ್ತಿನಲ್ಲಿ ಹೀಗೆ ಕಥೆ ಇದೆ— ದೇವತೆಗಳ ಅಂತರ್ಯಾಮಿ ವಾಸುದೇವನು ಅವರಿಗಾಗಿ ದೈತ್ಯರೊಡನೆ ಹೋರಾಡಿ ಜಯಗಳಿಸಿದನು. ಇದನ್ನರಿಯದೆ ದೇವತೆಗಳು ತಾವೇ ಗೆದ್ದೆವೆಂದು ಅಹಂಕಾರದಿಂದ ವಿಜಯೋತ್ಸವ ಮಾಡಿಕೊಂಡರು. ದೇವತೆಗಳ ಅಹಂಕಾರವನ್ನು ಕಳೆಯಲು ಶ್ರೀಹರಿ ಯಕ್ಷರೂಪದಿಂದ ಅಲ್ಲಿಗೆ ಬಂದನು. ಜೊತೆಗೆ ಬ್ರಹ್ಮರುದ್ರರೂ ಉಮಾದೇವಿಯೂ ಬಂದು ಅದೃಶ್ಯರಾಗಿ ನಿಂತಿದ್ದರು.

ಈ ಯಕ್ಷನನ್ನು ಹಿಂದೆ ನಾವೆಂದು ಕಂಡೇ ಇಲ್ಲ. ಯಾರು ಈತ? ಎಂದು ತಿಳಿದುಬರಲು ಇಂದ್ರನು ಅಗ್ನಿವಾಯುಗಳನ್ನು ಕಳಿಸಿದನು. ಅವರಿಬ್ಬರಿಗೂ ಯಕ್ಷನನ್ನು ಪರೀಕ್ಷಿಸಿ ಯಾರೆಂದು ತಿಳಿಯಲಾಗಲಿಲ್ಲ. ಆಗ ಇಂದ್ರನು ತಾನೇ ಬಂದನು. ಅವನು ಅಗ್ನಿವಾಯುಗಳಂತೆ ಅಹಂಕಾರದಿಂದ ಯಕ್ಷನನ್ನು ಪರೀಕ್ಷೆ ಮಾಡದೆ, ಅವನನ್ನೇ ವಿನಯದಿಂದ ನೀನಾರೆಂದು ಕೇಳಿದನು. ಅದರಿಂದ ಇಂದ್ರನೇ ಉಪದೇಶ ಯೋಗ್ಯ, ಅವನಿಗೆ ಉಪದೇಶ ಕೊಡಲು ಉಮಾದೇವಿಯೆ ಯೋಗ್ಯಳೆಂದು ಶ್ರೀಹರಿ ಉಮಾದೇವಿಯನ್ನು ಪ್ರತ್ಯಕ್ಷವಾಗಿ ನಿಲ್ಲಿಸಿ, ಬ್ರಹ್ಮರುದ್ರರೊಂದಿಗೆ ತಾನು ಅಂತರ್ಹಿತನಾದನು.

ಈ ಕಥೆಯಲ್ಲಿ ಇಂದ್ರನಿಗೆ ಶಿವನಿಂದಾಗಲಿ ಬ್ರಹ್ಮನಿಂದಾಗಲಿ ಸ್ವತಃ ತನ್ನಿಂದಾಗಲಿ ಸಾಕ್ಷಾತ್ತಾಗಿ ಬಿಂಬೋಪದೇಶ ಪಡೆಯುವ ಯೋಗ್ಯತೆ ಇಲ್ಲವೆಂದು ಶ್ರೀಹರಿ ಉಮಾದೇವಿಯ ಮೂಲಕವೇ ಉಪದೇಶ ಕೊಡಿಸಿದ್ದಾನೆ.

ಈ ಉಪದೇಶವು ಬಿಂಬವಿಷಯಕವೆ. ಬಿಂಬನೇ ಯಕ್ಷರೂಪದಿಂದ ಬಂದು ನಿಂತಿದ್ದಾನೆ. ಅದರಿಂದ ಇದು ಸಾಧಾರಣ ಉಪದೇಶವಲ್ಲ. ಸಾಧಾರಣ ಉಪದೇಶವಾಗಿದ್ದರೆ, ಇಂದ್ರಾದಿ ದೇವತೆಗಳಿಗೆ ಬ್ರಹ್ಮರುದ್ರರೂ

ನಾರದಾದಿಗಳೂ ಹಿಂದೆ ಉಪದೇಶಿಸಿದ್ದಾರೆ ಎನ್ನಬಹುದಿತ್ತು. ಅದರಿಂದ ಇದು ಸಾಕ್ಷಾನ್ಮೋಚಕವಾದ ಬಿಂಬೋಪದೇಶವೇ ಆಗಿತ್ತು.

ಇಲ್ಲಿ ಪ್ರಶ್ನೆ ಬರುತ್ತದೆ—ಇಂದ್ರನಿಗೆ ಬ್ರಹ್ಮವಿಷ್ಣುಗಳಿಂದ ಉಪದೇಶ ಪಡೆಯಲು ಯೋಗ್ಯತೆ ಇಲ್ಲವೆಂದು ಉಮೆ ಉಪದೇಶಿಸಬೇಕಾಯಿತು ಎಂದರೆ ಇಂದ್ರನಿಗೇ ಯೋಗ್ಯತೆ ಇಲ್ಲ, ಎಲ್ಲ ಮುಮುಕ್ಷುಗಳಿಗೆ ಅದೆಲ್ಲಿ ಬಂದೀತು? ಮತ್ತು ಬ್ರಹ್ಮವಿಷ್ಣುಗಳು ಇಬ್ಬರೂ ಜೊತೆಯಾಗಿ ಉಪದೇಶಿಸುವರೆ? ಬೇರೆಬೇರೆಯಾಗಿಯೆ? ಬೇರೆಬೇರೆ ಎನ್ನುವುದಾದರೆ ಯಾರು ಮೊದಲಿಗೆ ಉಪದೇಶಿಸುತ್ತಾರೆ? ಎಂದು. ಇದಕ್ಕೆ ಸಮಾಧಾನ— ಇಂದ್ರನಿಗೆ ಸಾಕ್ಷಾತ್ ಗುರು ಉಮಾದೇವಿಯಾದ್ದರಿಂದ ಅವಳೇ ಉಪದೇಶ ಮಾಡಿದಳು. ಅವಳು ಇಂದ್ರನಿಗೆ ಅಸಾಧಾರಣ ನಿಯತ ಗುರು.

ಎಲ್ಲ ಮುಮುಕ್ಷುಗಳಿಗೆ ಸಾಧಾರಣ ಬಿಂಬೋಪದೇಶಕ ಗುರು ಮುಕ್ತನಿಯಾಮಕ ಶ್ರೀವಾಸುದೇವನೆ, ಎಲ್ಲರಿಗೂ ವಿರಿಂಚನ ಉಪದೇಶ ದಿಂದಲೇ ಮುಕ್ತಿ ಎನ್ನುವುದೂ ನಿಜವೆ. ಎಲ್ಲರಿಗೂ ಶ್ರೀವಾಸುದೇವನು ಬಿಂಬೋಪದೇಶಕನೆನ್ನುವುದೂ ನಿಜವೆ. ಆದರೆ ಸಾಕ್ಷಾತ್ತಾಗಿ ನಿಂತು ವಾಸು ದೇವನು ಉಪದೇಶ ನೀಡುವುದಿಲ್ಲ. ಬ್ರಹ್ಮಾಂತರ್ಗತರೂಪದಿಂದ ಪರೋಕ್ಷ ವಾಗಿ ಉಪದೇಶಿಸುವನು.

**ಉದ್ಧವನು ಶ್ರೀಕೃಷ್ಣನಲ್ಲಿ ಹೇಳಿಕೊಳ್ಳುತ್ತಾನೆ—**

**'ಹೇ ಈಶ, ನೀನು 'ಆಚಾರ್ಯ ಚೈತ್ಯವಪುಷಾ' ಲೋಕಕ್ಕೆ 'ಆಚಾರ್ಯ'ನೂ, ಚಿತ್ತನಿಯಾಮಕ ಚಿತ್ತಸ್ಥ, ಚಿತ್ತಾಭಿಮಾನಿ ಬ್ರಹ್ಮಾಂತಸ್ಥನೂ ಆಗಿರುವುದರಿಂದ 'ಚೈತ್ಯ'ನೂ ಆಗಿರುವ 'ವಪುಷಾ' ವಾಸುದೇವರೂಪದಿಂದ, ಎಲ್ಲ ಜೀವರ ಒಳಗೂ ಹೊರಗೂ ಇದ್ದು 'ಅಶುಭ'ವನ್ನು ಅಂದರೆ ಜ್ಞಾನಪ್ರತಿಬಂಧಕವಾದ ಕಾಯಿಕ ವಾಚಿಕ ಮಾನಸಿಕ ಎಂಬ ತ್ರಿವಿಧಪಾಪವನ್ನೂ ನಾಶಪಡಿಸಿ 'ಸ್ವಗತಿ'ಯನ್ನು ಬಿಂಬಜ್ಞಾನವನ್ನು ವ್ಯಕ್ತಪಡಿಸುವಿ. ಇಂಥ ಉಪಕಾರಕ್ಕೆ ಬ್ರಹ್ಮಾದಿ ಜ್ಞಾನಿಗಳು ಕೂಡ ತಕ್ಕ ಪ್ರತ್ಯುಪಕಾರ ಮಾಡಲು ಶಕ್ತರಾಗುವುದಿಲ್ಲ. 'ಕೃತಂ' ನೀನು ಮಾಡಿದ ಉಪಕಾರವನ್ನು 'ಋದ್ಧ ಮುದಃ' ಉಕ್ಕಿಬರುವ ಆನಂದದಿಂದ ಸ್ಮರಿಸುತ್ತಾರೆ. ಸ್ಮರಿಸುತ್ತ, ಕೃತಜ್ಞತೆಯಿಂದ 'ಹೇ ಅನಿಮಿತ್ತ ಬಂಧೋ ಗೋವಿಂದ' ಎಂದು ಶಿರಬಾಗಿ ನಮಿಸುತ್ತಾರೆ.**

ಪ್ರತಿಯೊಬ್ಬ ಮುಮುಕ್ಷುವಿಗೂ ಹರಿವಿರಿಂಚರಿಂದ ಬಿಂಬೋಪದೇಶ ವಾಗಲೇಬೇಕು. ಆದರೆ ಸಾಕ್ಷಾತ್ತಾಗಿ ಬಂದುನಿಂತು ಅವರು ಉಪದೇಶ ನೀಡುವುದಿಲ್ಲ. ಜೊತೆಗೆ ನಿಂತಾಗಲಿ, ಒಬ್ಬರಾದ ಬಳಿಕ ಇನ್ನೊಬ್ಬರಂತೆ ಆಗಲಿ ನೀಡುವುದಿಲ್ಲ. ಚತುರ್ಮುಖಾಂತರ್ಯಾಮಿಯಾದ ಶ್ರೀವಾಸುದೇವನು ಮಹತ್ತತ್ವದಲ್ಲಿಯೂ ಮಹತ್ತತ್ವಾಭಿಮಾನಿಯಲ್ಲಿಯೂ ಅಂತರ್ಯಾಮಿ ಯಾಗಿದ್ದು ಮಹತ್ತತ್ವತ್ಮಾಕವಾದ ಸರ್ವಜೀವರ ಚಿತ್ತಕ್ಕೆ ನಿಯಾಮಕ ನಾಗಿರುವುದರಿಂದ 'ಚೈತ್ಯ'ನೆನಿಸಿ ಚಿತ್ತವನ್ನು ನಿಯಮಿಸುತ್ತ ಅದರಲ್ಲಿರುವ ಜ್ಞಾನಪ್ರತಿಬಂಧಕವಾದ ಪಾಪಗಳನ್ನು ದೂರಮಾಡಿ ಪರಮಾನುಗ್ರಹ ತೋರಿ ಚಿತ್ತಕ್ಕೆ ಬಿಂಬರೂಪದರ್ಶನ ಮಾಡಿಸುವನು. ಅದರಿಂದ ಶ್ರೀವಾಸುದೇವನೇ ಸರ್ವಜೀವರಿಗೆ ಸಾಧಾರಣ ಬಿಂಬೋಪದೇಶಕ ಗುರು. ಆತನ ಅಧಿಷ್ಠಾನ ನಾದ್ದರಿಂದ ವಿರಿಂಚನೂ ಸರ್ವಲೋಕ ಸಾಧಾರಣ ಬಿಂಬೋಪದೇಶಕ ಗುರು ಎನಿಸಿದ್ದಾನೆ.

ಹರೌಗುರೌ ಮಯಿ ಭಕ್ತ್ಯಾನುವೃತ್ತ್ಯಾ (ಶ್ಲೋ.೧೭೯((೫.೫.೧೦)

ಭಕ್ತ್ಯೈಕಯೇಶಂ ಗುರುದೇವತಾತ್ಮಾ (೧೧.೨.೩೭)

ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ ಗುರ್ವಾತ್ಮದೈವತಃ ।

(೧೧.೩.೨೩)

ಇಲ್ಲಿ 'ಹರಿಯೂ ಗುರುವೂ ಆಗಿರುವ ನನ್ನಲ್ಲಿ ಭಕ್ತಿಯನ್ನೂ ಸೇವೆಯನ್ನೂ ಮಾಡಬೇಕೆ'ಂದು ಋಷಭದೇವನು ಹೇಳುತ್ತಾನೆ.

'ಭಕ್ತಿಯಿಂದ ಸಿಗುವ ಈಶನೇ ಗುರುಗಳಲ್ಲಿ ಅಂತರ್ಯಾಮಿಯಾಗಿ ಉಪದೇಶಿಸುವ ದೇವತೆಯಾಗಿರುವನು ಎಂದು ತಿಳಿಯಬೇಕು' ಎಂದು ಕವಿಮುನಿಗಳ ಉಪದೇಶ.

'ಹರಿಯು ಗುರುಗಳಲ್ಲಿ ಅಂತರ್ಯಾಮಿಯಾಗಿದ್ದು ಉಪದೇಶಿಸುವ ನೆಂದು ತಿಳಿದು ಗುರುಗಳನ್ನು ಸೇವಿಸಿ ಭಾಗವತ ಧರ್ಮಗಳನ್ನು ಅವರಿಂದ ಕಲಿಯಬೇಕು' ಎಂದು ಪ್ರಬುದ್ಧ ಮುನಿಗಳ ಉಪದೇಶವಿದೆ.

ಇಲ್ಲಿ ಎಲ್ಲ ಕಡೆ ಗುರುವೂ ದೇವನೂ ಒಬ್ಬನೆ ಎಂದುದು, ಸರ್ವಜೀವರಿಗೆ

ಚಿತ್ತನಿಯಾಮಕನಾಗಿ ಗುರುವೇ ಆಗಿರುವ ಶ್ರೀವಾಸುದೇವನೂ ಪರದೈವ ಎಂದು ಪ್ರಸಿದ್ಧನಾದ ದೇವನೂ ಶ್ರೀಹರಿ ಒಬ್ಬನೆ ಎಂಬ ಅಭಿಪ್ರಾಯದಿಂದ, ಎನ್ನುವುದು 'ಆಚಾರ್ಯ ಚೈತ್ಯವಪುಷಾ' ಎಂಬ ಮಾತಿನಿಂದ ಸ್ಪಷ್ಟವಾಗುವುದು.

'ಗುರುಗಳಾದ ಬ್ರಹ್ಮಾದಿಗಳು ವಾಸುದೇವನು ಮಾಡುವ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲು ಶಕ್ತರಲ್ಲ' ಎಂದು ಉದ್ಧವನು ಸ್ಪಷ್ಟ ಹೇಳುತ್ತಿದ್ದಾನೆ. ಆದರಿಂದ ಪರಬ್ರಹ್ಮನೇ ಗುರು. 'ಗುರುವೇ ಸಾಕ್ಷಾತ್ ಪರಬ್ರಹ್ಮ' ಅಲ್ಲ!

❖❖❖

# ೨೭. ಅಪರೋಕ್ಷ ಪ್ರಕರಣ

## ಪ್ರಕರಣ ಸಾರಾಂಶ

ಯಾಜ್ಞಿಕರು ಅರಣಿಕಾಷ್ಠದಲ್ಲಿ ಮಥನ ಮಾಡಿ ಅಗ್ನಿಯನ್ನು ವ್ಯಕ್ತಗೊಳಿಸುವಂತೆ ಸಾಧಕನು ಹೃದಯದಲ್ಲಿ ಅವ್ಯಕ್ತನಾಗಿರುವ ಬಿಂಬನನ್ನು ಮನಸ್ಸೆಂಬ ದಂಡದಿಂದ ಶ್ರವಣಾದಿರೂಪವಾದ ಮಥನ ಮಾಡಿ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಸಾಧಕನು ಮಥನ ಮಾಡಬೇಕೆಂದರೆ ಭಗವಂತನ ಪ್ರೇರಣೆ ಬೇಕು. ನಮ್ಮ ಶರೀರ ದಲ್ಲಿರುವ ತತ್ತ್ವಾಭಿಮಾನಿದೇವತೆಗಳು ನಮ್ಮ ಬಿಂಬವನ್ನು ಸದಾ ನೋಡುತ್ತ ಅವನ ಪೂಜಾರೂಪವಾಗಿ ಶರೀರೇಂದ್ರಿಯಗಳನ್ನು ಪ್ರೇರಿಸುತ್ತಿದ್ದಾರೆ. ಅವರಂತೆ ನಾವೂ ಕೂಡ ನಮ್ಮ ಬಿಂಬವನ್ನು ಕಾಣಬಲ್ಲೆವೆಂದು ವಿಶ್ವಾಸವಿಟ್ಟುಕೊಂಡು ಎಂದು ಕಾಂಬೆನೊ ಎಂದು ತವಕಿಸುತ್ತ ಭಾಗವತಧರ್ಮಾನುಷ್ಠಾನ ಮಾಡುತ್ತಿದ್ದರೆ ಬಿಂಬನು ಒಲಿದು ದರ್ಶನ ನೀಡುವುದರಲ್ಲಿ ಸಂಶಯವಿಲ್ಲ'.

❖❖❖

–೩೪೮–

**ಜ್ಞಾನಿಗಳು ಮನಸಿನಲ್ಲಿ ಭಗವಂತನನ್ನು ಕಾಣುತ್ತಾರೆ**

**ಯಸ್ಯ ಸ್ವರೂಪಂ ಕವಯೋ ವಿಪಶ್ಚಿತೋ**
**ಗುಣೇಷು ಯೋನಿಷ್ವಿವ ಜಾತವೇದಸಂ ।**
**ಮಥ್ನಂತಿ ಮಥ್ನಾ ಮನಸಾ ದಿದೃಕ್ಷವೋ**
**ಗೂಢಂ ಕ್ರಿಯಾರ್ಥೈರ್ನಮ ಈರಿತಾತ್ಮನೇ ॥**

(ಭಾ.೫.೧೮.೩೬)

ಶ್ರೀಃ ॥ **ಏವಂವಿಧಗುರುಪ್ರಸಾದಾತ್ ಬಿಂಬಾಪಾರೋಕ್ಷಂ ಭವತೀತಿ ಭಾವೇನ ಆಹ ॥ ಯಸ್ಯೇತಿ ॥ ಅಧ್ಯಾತ್ಮಪರಿನಿಷ್ಠಿತಾಃ ಜ್ಞಾನಿನಃ । ಯೋನಿಷು ಗುಣಕಾರ್ಯೇಷು ಶರೀರೇಷು । ಯಸ್ಯ ಹರೇಃ ಸ್ವರೂಪಂ ಮನಸಾ ಮಥ್ನಾ ವಿಚಾರಸಾಧನೇನ । ಮಥ್ನಂತಿ ವಿಚಾರಯಂತಿ । ಕಥಂ । ಕವಯಃ**

ಅಗ್ನ್ಯಾಧಾನಾದಿಕುಶಲಾಃ। ಯೋನಿಷು ಅಗ್ನ್ಯುತ್ಪಾದನಶಕ್ತಿಮತ್ಸು ಕಾಷ್ಠೇಷು। ಮಥ್ನಾ ಮಥನಸಾಧನೇನ। ಜಾತವೇದಸಂ ವಹ್ನಿಮಿವ। ಕಿಮರ್ಥಂ ಕವಯೋಽಪಿ ವಿಪಶ್ಚಿತಶ್ಚೇತ್ಯುಭಯೇಽಪಿ ಮಥ್ನಂತಿ ಇತ್ಯತಃ ಆಹ। ಗೂಢಂ ತತ ಏವ ಅನರ್ಚಿತಂ ಪ್ರಾಕ್। ಇದಾನೀಂ ಯಜ್ಞಾದಿಕ್ರಿಯಾಯಾಂ ಯೇ ಅಗ್ನಿಪೂಜಾರ್ಥಂ ವಿಹಿತಾಃ ಘೃತಲಾಜಾದಯಃ ಅರ್ಥಾಃ ತೈಃ ತಥಾ ಸರ್ವಾಭಿಃ ಕ್ರಿಯಾಭಿಃ ಸರ್ವೈಃ ಪದಾರ್ಥೈಃ ಸಮರ್ಪಣೇನ ಪೂಜಿತಂ ದಿದೃಕ್ಷವಃ ಇತಿ। ನನು ಅಗ್ನೇಃ ಪ್ರಾಕೃತಸ್ಥೂಲವಿಗ್ರಹತಯಾ ದಿದೃಕ್ಷೂಣಾಂ ದರ್ಶನಂ ಭವೇತ್। ಭಗವತಸ್ತು ಅಪ್ರಾಕೃತಾವ್ಯಕ್ತಮೂರ್ತಿಕಸ್ಯ ಕಥಂ ದರ್ಶನಂ ಅತ್ರಾಹ॥ **ಮನಸೇತಿ**॥ ಮನಸಾ ದಿದೃಕ್ಷೂಣಾಂ ಮನಸಾ ಏವ ದರ್ಶನಂ ಇತಿ। ನನು ದಿದೃಕ್ಷುತ್ವೇ ಪ್ರಾಗಾರಭ್ಯ ವಿದ್ಯಮಾನೇಽಪಿ ಇದಾನೀಂ ಏವ ಕಿಮರ್ಥಂ ಪ್ರಯತಂತೇ। ಯದಾ ಚ ಪ್ರಯತಂತೇ ತತಃ ಪ್ರಾಗೇವ ಪ್ರಯತಿತುಂ ಶಕ್ಯತ್ವಾತ್ ಇತ್ಯತಃ ಸತ್ಯಂ। ಸ್ವಸ್ಯ ಸ್ವಾತಂತ್ರ್ಯೇ ಸತಿ। ತದೇವ ನಾಸ್ತಿ। ದಿದೃಕ್ಷಾ ದರ್ಶನಸಾಧನಪ್ರಯತ್ನದರ್ಶನಾದಿವಿಷಯವಿಶೇಷಿತಸ್ಯ ಮನಸಃ ತತ್ಪ್ರೇರಣ-ಯೈವ ಪ್ರವರ್ತ್ಯತ್ವಾತ್ ಇತ್ಯಾಶಯೇನ ಈರಿತಃ ಆತ್ಮಾ ಮನೋ ಯೇನ ತಸ್ಮೈ ಹರಯೇ ನಮಃ ಅಸ್ತು ಇತ್ಯುಕ್ತಂ। ತೇನ ಚ ಮಥನೇನ ಬಿಂಬಂ ಪಶ್ಯಂತೀತಿ ಭಾವಃ॥

❖❖❖

ಉತ್ತಕುರುಖಂಡದಲ್ಲಿ ಭೂವರಾಹಮೂರ್ತಿಯನ್ನು ಜ್ಞಾನಿಗಳು ಆರಾಧಿಸುತ್ತಾರೆ—

ಅರಣಿಕಾಷ್ಠದಲ್ಲಿ ಮಥನದಂಡದಿಂದ ಮಥನ ಮಾಡಿ ಅಗ್ನಿಯನ್ನು ಯಾಜ್ಞಿಕರು ವ್ಯಕ್ತಗೊಳಿಸುವಂತೆ ಜ್ಞಾನಿಗಳು ಗುಣಕಾರ್ಯವಾದ ಶರೀರದಲ್ಲಿ ಮನಸ್ಸೆಂಬ ದಂಡದಿಂದ ಶ್ರವಣಾದಿರೂಪವಾದ ಮಥನಮಾಡಿ ಮನಸ್ಸಿನಲ್ಲಿಯೇ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವರು. ಯದ್ಯಪಿ ಅಗ್ನಿಗೆ ಪ್ರಾಕೃತ ಸ್ಥೂಲಶರೀರವಿದೆ. ಅವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಭಗವಂತನು ಅಪ್ರಾಕೃತ ಶರೀರಿ, ಅವ್ಯಕ್ತಮೂರ್ತಿ. ಆದರೂ ಮನಸ್ಸಿನಲ್ಲಿಯೆ ತನ್ನ ದರ್ಶನ ನೀಡುವನು. ಅದಕ್ಕಾಗಿ ಜ್ಞಾನಿಗಳು ಮನಸಿನಲ್ಲಿ ಶ್ರವಣಾದಿರೂಪವಿಚಾರ ಮಾಡುತ್ತಾರೆ. ಯದ್ಯಪಿ ಅನಾದಿಕಾಲದಿಂದಲೂ ಭಗವಂತನನ್ನು ನೋಡುವ ಇಚ್ಛೆ ಮೋಕ್ಷಯೋಗ್ಯರಿಗೆ ಇರುತ್ತದೆ. ಆದರೂ ಹಿಂದೆಯೇ ಪ್ರಯತ್ನಿಸದೆ ಈಗೇಕೆ

ಪ್ರಯತ್ನಿಸುತ್ತಾರೆ ಎಂದರೆ ಭಗವಂತನು 'ಈರಿತಾತ್ಮ' 'ಆತ್ಮ' ಅಂದರೆ ಮನಸು, ಅದು 'ಈರಿತ'ವಾಗುವುದು ಪ್ರೇರಿತವಾಗುವುದು ಭಗವಂತನಿಂದಲೆ, ಭಗವಂತನೇ ಸ್ವತಂತ್ರ. ಜೀವರು ಅಸ್ವತಂತ್ರರು. ಆದರಿಂದ ಭಗವಂತನ ಪ್ರೇರಣೆಯಿಲ್ಲದಿದ್ದುದರಿಂದ ಹಿಂದೆ ಮನಸಿನಿಂದ ಪ್ರಯತ್ನ ಮಾಡಲಿಲ್ಲ. ಈಗ ಭಗವಂತನ ಪ್ರೇರಣೆಯಿಂದ ಪ್ರಯತ್ನ ಮಾಡುತ್ತಿದ್ದಾರೆ. ಇಂಥ 'ಈರಿತಾತ್ಮ'ನಾದ ಭೂವರಾಹ ಮೂರ್ತಿಗೆ ನಮಸ್ಕಾರ' ಎನ್ನುತ್ತಾರೆ ಜ್ಞಾನಿಗಳು.

ಅಪ್ರಾಕೃತನಾದ ಭಗವಂತನಿಗೆ ಪ್ರಾಕೃತ ಅಗ್ನಿಯಂತೆ ಪ್ರಾಕೃತಸ್ಥೂಲ ಶರೀರ ವಿಲ್ಲದಿದ್ದರೂ ಸ್ವತಂತ್ರನಾದ್ದರಿಂದ ಜೀವರಿಗೆ ಈಗ ಮನಸ್ಸಿನಲ್ಲಿ ಪ್ರೇರಣೆ ಮಾಡುತ್ತಿದ್ದಾನೆ. ಆದರಿಂದ ಈಗ ಜ್ಞಾನಿಗಳು ಪ್ರಯತ್ನಮಾಡಿ ಶ್ರವಣಾದಿರೂಪ ಉಪಾಸನೆಯಿಂದ ಭಗವಂತನನ್ನು ಒಲಿಸಿಕೊಂಡು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

❖❖❖

—೩೪೯—

## ನಮ್ಮೊಳಗಿರುವ ತತ್ವದೇವತೆಗಳು ಎಲ್ಲರೂ ಅಪರೋಕ್ಷಿಗಳು, ನಾವು ಹಾಗೇ ಆಗಬಲ್ಲೆವು

ದ್ರವ್ಯಕ್ರಿಯಾ ಹೇತ್ವಯನೇಶಕರ್ತೃಭಿ
ರ್ಮಾಯಾಗುಣೈರ್ವಸ್ತುನಿರೀಕ್ಷಿತಾತ್ಮನೇ ।
ತಥೈವ ತತ್ರಾತಿಶಯಾತ್ಮ ಬುದ್ಧಿಭಿ
ರ್ನಿರಸ್ತ ಮಾಯಾಕೃತಯೇ ನಮೋನಮಃ ॥

(ಭಾ.೫.೧೮.೩೭)

ಬಹೂನಾಂ ಬಿಂಬಾಪರೋಕ್ಷಾದರ್ಶನೇನ ತತ್ರ ಸಂಶಯೇನ ವಿಲಂಬಕರಣಂ ತತ್ಸಾಧನೇಷು ನ ಕರ್ತವ್ಯಂ ಇತಿ ಭಾವೇನ ಆಹ ॥ ದ್ರವ್ಯೇತಿ ॥ ಬ್ರಹ್ಮಾದಿಭಿಃ ಯಥಾ ವಸ್ತು ವಿದ್ಯತೇ ತಥೈವ ನಿರೀಕ್ಷಿತಃ ದೃಷ್ಟಃ ಆತ್ಮಾ ಸ್ವರೂಪಂ ಯಸ್ಯ ತಸ್ಮೈ ನಮೋ ನಮಃ। ಅಗ್ನಿದೃಷ್ಟಾಂತಗ್ರಹಣಮಾತ್ರೇಣ ನ ಪ್ರಾಕೃತವಿಗ್ರಹತ್ವಂ ಮಂತವ್ಯಂ। ಗೂಢತ್ವಮಥನಾಭಿವ್ಯಕ್ತತ್ವಮಾತ್ರೇಣ ತಸ್ಯ ಗೃಹೀತತ್ವಾತ್। ಕಿಂತು ಅಪ್ರಾಕೃತದಿವ್ಯವಿಗ್ರಹಃ ನಿರಸ್ತಸಮಸ್ತದೋಷಃ ಮನೋಮಾತ್ರೇಣ ದರ್ಶನೀಯಃ ಇತಿ ಭಾವೇನ ಆಹ। ನಿತ್ಯಮೇವ ನಿರಸ್ತಾ

ಪ್ರಾಕೃತೀ ಆಕೃತಿಃ ಯಸ್ಮಾತ್ ತಸ್ಮಾ ಇತಿ । ಪ್ರಾಪ್ತಬಿಂಬಾಪರೋಕ್ಷಾಃ ಅಪಿ ನ ದೂರೇ ಸಂತಿ । ಕಿಂತು ಭವತಾಂ ದೇಹೇಷು ಏವ ಸಂತಿ । ತತೋ ನ ಭೇತವ್ಯಂ ಭವತಿ ನ ವೇತಿ ಚಿಂತಯಾ ದುರಂತಯಾ ಇತಿ ಭಾವೇನ ಉಕ್ತಂ ॥ **ದ್ರವ್ಯೇತಿ** ॥ ಅಯನಂ ಸ್ಥಾನಂ । ಕಿಂ ಅಸ್ಮದ್ದೇಹೇ ಅವಸ್ಥಾನೇನ ಪ್ರಯೋಜನಂ ತೇಷಾಂ ಇತ್ಯತೋ ಭವದ್ಭಿಃ ಕ್ರಿಯಮಾಣ ವ್ಯಾಪಾರಮಾತ್ರಸ್ಯ ತತ್ಕರ್ತೃಕತಯಾ ತಜ್ಜನ್ಯಪುರುಷಾರ್ಥ ಏವ ಪ್ರಯೋಜನಂ ಇತಿ ಅಭಿಪ್ರೇತ್ಯ ಆಹ ॥ **ಕರ್ತೃಭಿರಿತಿ** ॥ ತದಪಿ ಕುತಃ ಇತ್ಯತಃ ದ್ರವ್ಯಾದಿಸ್ವಾಮಿತ್ವಾತ್ ಇತಿ ಭಾವೇನ ಉಕ್ತಂ ॥ **ದ್ರವ್ಯಕ್ರಿಯಾಹೇತ್ವಯನೇಶಾಶ್ಚ ತೇ ಕರ್ತಾರಶ್ಚೇತಿ** ॥ ತತ್ರ ದ್ರವ್ಯೇಶಃ ಶಂಕರಃ । ಕ್ರಿಯೇಶಃ ಗರುಡಃ । ಹೇತ್ವೀಶಃ ಬ್ರಹ್ಮಾ । ಅಯನೇಶಃ ವಾಯುಃ । ಇತಿ ವಿವೇಕಃ । ಕಿಂ ಏತೇಽಪಿ ಹರಿವದೇವ ಅಪ್ರಾಕೃತವಿಗ್ರಹಾಃ ಇತ್ಯತಃ ಭಗವದ್ವ್ಯತಿರಿಕ್ತಸ್ಯ ಸರ್ವಸ್ಯಾಪಿ ಪ್ರಾಕೃತಃ ಏವ ವಿಗ್ರಹಃ ಇತಿ ಅಭಿಪ್ರೇತ್ಯ ಆಹ ॥ **ಮಾಯಾಗುಣೈರಿತಿ** ॥ ತೈಃ ಲಭ್ಯಮಾನಂ ಫಲಮಪಿ ನ ಭವತ್ಸಾಮ್ಯೇನ ಕಿಂತು ತತೋಽಪಿ ಅನೇಕಗುಣಾಧಿಕತಯೈವ । ಸಾಧನಾನುಸಾರಿತ್ವಾತ್ ಸಾಧ್ಯಸ್ಯ । ಸಾಧನಾನಾಂ ಚ ತೇಷು ಸರ್ವತೋ ಅಧಿಕತ್ವಾತ್ ಇತ್ಯಭಿಪ್ರೇತ್ಯ ಉಕ್ತಂ ॥ **ತತ್ರೇತಿ** । ತತ್ರ ಭಗವದ್ವಿಷಯೇ ಅತಿಶಯಿತಾತ್ಮಬುದ್ಧ್ಯಾದಿಭಿಃ ಇತಿ । ಅಥವಾ ಬೀಜಾವಾಪಾದಿಚಾತುರ್ಯಾಧಿಕ್ಯೇನ ಫಲಾಧಿಕ್ಯಂ ಕರ್ಷಕಾದೌ ದೃಷ್ಟಚರಂ ಇತಿ ಕಿಮಾಶ್ಚರ್ಯಮತ್ರ ಇತ್ಯಾಶಯೇನ ಆಹ ॥ **ತತ್ರೇತಿ** ॥ ತತ್ರ ಸಾಧನಕರಣೇ ಅತಿಶಯಿತಾತ್ಮಬುದ್ಧಿಭಿಃ ಇತಿ ಏವಂ ಬಹೂನಾಂ ಜ್ಞಾನಿನಾಂ ಬಿಂಬಾಪರೋಕ್ಷ ದರ್ಶನೇನ ನಿಃಶಂಕಂ ತತ್ಸಾಧನೇ ಪ್ರವರ್ತಿತವ್ಯಂ ತದಿಚ್ಛುಭಿಃ ಇತಿ ಭಾವಃ ॥

❖❖❖

ಉತ್ತರಕುರುಖಂಡದಲ್ಲಿ ಭೂವರಾಹಮೂರ್ತಿಯನ್ನು ಜ್ಞಾನಿಗಳು ಹೀಗೆ ಆರಾಧಿಸುತ್ತಾರೆ—

ದ್ರವ್ಯ–ಕ್ರಿಯಾ–ಹೇತು–ಅಯನಗಳಿಗೆ ಈಶರು ದ್ರವ್ಯೇಶ–ಶಂಕರ, ಕ್ರಿಯೇಶ–ಗರುಡ, ಹೇತುಈಶ–ಬ್ರಹ್ಮ, ಅಯನಈಶ–ವಾಯು ಇವರು ದ್ರವ್ಯ ಕ್ರಿಯೆಗಳಿಗೂ ಅವುಗಳ ಕಾರಣ–ಆಧಾರಗಳಿಗೂ ಈಶರು ಅಭಿಮಾನಿಗಳು.. ಎಲ್ಲರೂ ಎಲ್ಲ ಜೀವರ ಎಲ್ಲ ಕ್ರಿಯೆಗಳಿಗೆ ಕೃರ್ತೃಗಳು. ತತ್ವಾಭಿಮಾನಿ ದೇವತೆಗಳು ಹರಿಯಾಜ್ಞೆ ಯಿಂದ ಜೀವರಲ್ಲಿ ಎಲ್ಲ ವ್ಯಾಪಾರಗಳನ್ನು ಮಾಡಿ ಮಾಡಿಸಿ ಹರಿಪ್ರೀತಿಯನ್ನು ಸಂಪಾದಿಸುವರು. ಅವರು 'ಮಾಯಾಗುಣ'ರೆ

ಪ್ರಾಕೃತ ಶರೀರಿಗಳೆ, ಆದರೂ ಅವರು 'ತತ್ರ' ಭಗವಂತನ ವಿಷಯದಲ್ಲಿ ಅತಿಶಯವಾದ ಆತ್ಮಬುದ್ಧಿ ತತ್ವಜ್ಞಾನ ಉಳ್ಳವರು. ಜೀವರ ಶರೀರೇಂದ್ರಿಯಾದಿಗಳಲ್ಲಿಯೂ ಅತಿಶಯ ಆತ್ಮಬುದ್ಧಿ ಪರಮಾತ್ಮ ತತ್ವಜ್ಞಾನ ಉಳ್ಳವರಾದ್ದರಿಂದ ಅವರ ಈ ಬುದ್ಧಿತಾರತಮ್ಯಾನು ಗುಣವಾಗಿ ಅವರಿಗೆ ಬರುವ ಫಲದಲ್ಲಿ ತಾರತಮ್ಯವಿದೆ. ಇಂಥ ತತ್ವದೇವತೆಗಳು ಭಗವಂತನನ್ನು ಪ್ರತ್ಯಕ್ಷವಾಗಿ ದರ್ಶನಮಾಡುತ್ತಾರೆ. 'ವಸ್ತುನಿರೀಕ್ಷಿತ'ವಾದ ಅಂದರೆ ತತ್ವದೇವತೆಗಳಿಂದ ವಸ್ತುತಃ ಸಾಕ್ಷಾತ್ಕರಿಸಲ್ಪಟ್ಟ ಆತ್ಮ ಅಂದರೆ ಸ್ವರೂಪಉಳ್ಳವನು. 'ಯಥಾ ವಸ್ತು ವಿದ್ಯತೇ ತಥಾ' ವಸ್ತು ಹೇಗಿದೆಯೋ ಹಾಗೇ ಯಥಾರ್ಥವಾಗಿ ಭಗವಂತನನ್ನು ತತ್ವದೇವತೆಗಳು ಕಾಣುತ್ತಾರೆ.

ಇಲ್ಲಿಯೇ ನಮ್ಮ ಶರೀರೇಂದ್ರಿಯಾದಿಗಳಲ್ಲಿಯೇ ಈ ಭಗವದಪರೋಕ್ಷಿಗಳಿರುವುದರಿಂದ ಅವರಂತೆ ನಾವೂ ಅಪರೋಕ್ಷ ಹೊಂದಬಲ್ಲೆವು ಎಂದು ವಿಶ್ವಾಸವಿರಿಸಿಕೊಂಡು ಅಪರೋಕ್ಷಕ್ಕಾಗಿ ಮುಮುಕ್ಷುಗಳು ಭಾಗವತ ಧರ್ಮಾನುಷ್ಠಾನ ಮಾಡಬೇಕು. ಭಗವಂತ 'ನಿರಸ್ತಮಾಯಾಕೃತಿ' ಅಪ್ರಾಕೃತ ಶರೀರಿಯೆ. 'ಮಾಯಾಗುಣ'ರಾದ ಪ್ರಾಕೃತಶರೀರಿಗಳಾದ ನಮ್ಮಿಂದ ಅವನನ್ನು ಹೇಗೆ ಅಪರೋಕ್ಷದಿಂದ ಕಾಣಲಾದೀತೆಂದು ನಿರಾಶರಾಗಬಾರದು.

❖❖❖

# ೨೮. ಗುಣನಿವೃತ್ತಿ ಪ್ರಕರಣ

## ಪ್ರಕರಣ ಸಾರಾಂಶ

ಜೀವಸ್ವರೂಪ ಜ್ಞಾನಾನಂದಮಯವೆ. ಆದರೆ ಅದು ಬಂಧಕವಾದ ತ್ರಿಗುಣಾತ್ಮಕ ಪ್ರಕೃತಿಯಿಂದ ಆವೃತವಾಗಿದೆ. ಅದರಿಂದ ಒಳಗೆ ಬಿಂಬನನ್ನು ಕಾಣುವುದಿಲ್ಲ. ಹೊರಗೇ ಕಾಣುತ್ತದೆ. ಇದಕ್ಕೆ ಕಾರಣ ಮನಸಿನಲ್ಲಿರುವ ರಜಸ್ತಮೋಗುಣಗಳು. ಅವುಗಳಿಂದ ಮನಸ್ಸಿನಲ್ಲಿ ಶರೀರೇಂದ್ರಿಯಾದಿಗಳ ಬಗ್ಗೆ ಸ್ವಾಮಿತ್ವಾಭಿಮಾನ, ಕರ್ಮಗಳ ಬಗ್ಗೆ ಸ್ವತಂತ್ರಕರ್ತೃತ್ವಾಭಿಮಾನಗಳುಂಟಾಗುವುವು. ಅವು ರಾಗದ್ವೇಷ ಗಳ ಮೂಲಕ ಬಂಧಕಕರ್ಮ ಮಾಡಿ ಜೀವನನ್ನು ನಾನಾ ಯೋನಿಗಳಲ್ಲಿ ತಿರುಗಿಸುವುವು. ಇದೇ ಸಂಸಾರ. ಇದರಿಂದ ಪಾರಾಗಲು ಬಿಂಬಸಾಕ್ಷಾತ್ಕಾರವನ್ನು ಸಂಪಾದಿಸಬೇಕು.

ಸಾಕ್ಷಾತ್ಕಾರವೂ, ಮನಸ್ಸಿನಲ್ಲೇ ಆಗಬೇಕು. ಅದಕ್ಕೆ ವಿಷಯಾಸೆ ಯಿಂದ ಬಂಧಕ ಕರ್ಮವನ್ನೇ ಮಾಡುವ ತ್ರಿಗುಣಾತ್ಮಕ ಮನಸ್ಸನ್ನು ಅದು ಬಯಸುವ ವಿಷಯಪದಾರ್ಥಗಳೊಂದಿಗೆ ಹರಿಚರಣಕ್ಕೇ ಒಪ್ಪಿಸಬೇಕು. ಇದರ ಬಗ್ಗೆ ಹೆಚ್ಚಿನ ವಿವರಣೆಗಳನ್ನು ಅವಧೂತರು ರಚಿಸಿರುವ ಅಧ್ಯಾತ್ಮಾಮೃತರಸರಂಜನಿಯಲ್ಲಿ ನೋಡಬೇಕು ಎನ್ನುತ್ತಾರೆ.

ವಿಷಯ ಮನಸುಗಳಿಗೆ ಅನಾದಿ ಬಂಧಕಕರ್ಮನಿಮಿತ್ತವಾಗಿ ಪರಸ್ಪರವಾಗಿ ಅವಸ್ಥಾತ್ರಯರೂಪ ಸಂಬಂಧವನ್ನು ಉಂಟು ಮಾಡುವವನು ಬಿಂಬನೆ. ಅವೆರಡು ಅವನ ಅಧೀನವೆ. ಹಾಗೆಂದು ಅನುಸಂಧಾನ ಮಾಡುವುದೆ ಉಭಯ ಸಮರ್ಪಣೆ. ಹಂಸನಾಮಕ ಪರಮಾತ್ಮನು ಈ ರಹಸ್ಯವನ್ನು ಸನಕಾದಿಮುನಿಗಳಿಗೆ ಉಪದೇಶಿ ಸಿದ್ದು ಏಕಾದಶಸ್ಕಂಧದಲ್ಲಿದೆ.

ಬಿಂಬನು ಈ ಉಭಯಸಮರ್ಪಣೆಗೆ ಒಲಿದರೆ ಬಂಧಕವಾದ ಅನಾದಿಕರ್ಮಗಳನ್ನು ನಾಶಮಾಡಿ, ಮನಸ್ಸಿನಲ್ಲಿ ಸಂಸ್ಕಾರರೂಪ ದಿಂದ ಅಂಟಿಕೊಂಡಿರುವ ವಿಷಯಗಳನ್ನು ದೂರಮಾಡುತ್ತಾನೆ.

ವಿಷಯವು ತ್ರಿಗುಣಾತ್ಮಕವಾದ್ದರಿಂದ 'ಗುಣ' ಎನಿಸುತ್ತೆ. ಈ ಗುಣವು ಮನಸಿನಿಂದ ದೂರವಾಗುವುದೇ ಗುಣನಿವೃತ್ತಿರೂಪ ವಾದ ಮೋಕ್ಷ.

❖❖❖

## –೩೫೦–

## 'ಗುಣ' ಎನಿಸುವ ವಿಷಯವು ಮನಸಿಂದ ದೂರವಾಗುವದೇ 'ಗುಣನಿವೃತ್ತಿ' ರೂಪವಾದ ಮೋಕ್ಷ

**ಅವಿದ್ಯಮಾನೋ ಹ್ಯವಭಾತಿ ಹಿ ದ್ವಯೋ**
**ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ ।**
**ತತ್ಕರ್ಮ ಸಂಕಲ್ಪವಿಕಲ್ಪಕಂ ಮನೋ**
**ಬುಧೋ ವಿದಧ್ಯಾದಭಯಂ ತತಃ ಸ್ಯಾತ್ ॥**

(ಭಾ.೧೧.೨.೩೮)

ಶ್ರೀಃ ॥ ಏವಂ ಉತ್ಪನ್ನಾಪರೋಕ್ಷೇಣ ಸುಚಿರಂ ಸಮೇಧಿತಭಕ್ತಿವಿಶೇಷಸ್ಯ ಅಧಿಕಾರಿಣಃ ಗುಣನಿವೃತ್ತಿರೂಪಃ ಮೋಕ್ಷಃ ಭವತಿ । ಸ ಚ ಕೇನ ಪ್ರಕಾರೇಣ ಇತಿ ವಿಚಾರಯಿತುಂ ಇದಂ ಪ್ರಕರಣಂ। ನನು ಜೀವಃ ಯದ್ಯಪಿ ನಿರ್ದೋಷ ಜ್ಞಾನಾನಂದರೂಪಃ ತಾದೃಶಸ್ಯ ಅಪಿ ಯತ್ ಅಜ್ಞಾನಮಿಥ್ಯಾಜ್ಞಾನಾದಿಕಂ ತತ್ ಬಾಹ್ಯಮೇವ। ಸತ್ವಾದ್ಯಾತ್ಮಿಕಾಂ ಪ್ರಕೃತಿಂ ಕರ್ಮಾದಿಕಂ ಚ ನಿಮಿತ್ತೀಕೃತ್ಯ ಸ್ವರೂಪಂ ಆಚ್ಛಾದ್ಯ ಮನಸ್ಯೈವ ಸರ್ವಂ ಪ್ರದರ್ಶಯತಿ ಭಗವತಃ ಇಚ್ಛೈವ ಮಾಯಾವಿದ್ಯಾಪ್ರಕೃತ್ಯಾದಿಪದವಾಚ್ಯಾ। ತತಃ ಸರ್ವಂ ಸಂಸಾರಸಾಧನಂ ಮನಸಿ ಏವ ಆಯತತೇ । ತಥಾಹಿ— ಭಗವತ್ತತ್ವಾಜ್ಞಾನೇನ ಸರ್ವಾಸು ಕ್ರಿಯಾಸು ಭಗವತಃ ಕರ್ತೃತ್ವಂ ಅನನುಸಂಧಾಯ 'ಅಹಂ ಕರ್ತೇತಿ' ಕರ್ತೃತ್ವಾಭಿಮಾನಃ ತಥಾ ಸ್ವಾಮಿತ್ವಂ ಚ ಅನನುಸಂಧಾಯ, 'ಮಮ ಇದಂ' ಇತಿ ಶರೀರೇಂದ್ರಿಯವಿಷಯೇಷು ಸ್ವಾಮಿತ್ವಾಭಿಮಾನಃ। ಇಮೌ ಚ ಗುಣಾನಾಂ ಸನ್ನಿಪಾತೇ ಸತಿ ಭವತಃ। ಗುಣಾಶ್ಚ ಚಿತ್ತ ಏವ ಅಭಿವ್ಯಜ್ಯಂತೇ। ಆಭ್ಯಾಂ ಏವ ಪ್ರವೃತ್ತಧರ್ಮಾರ್ಥಕಾಮವಿಷಯ ಪ್ರವೃತ್ತಿಲಕ್ಷಣಃ ವ್ಯವಹಾರಃ ಕಾಯಿಕವಾಚಿಕಮಾನಸಿಕರೂಪಃ ಭವತಿ। ಯದಾ ತು ತ್ರಿಷು ಏಕೋ ವರ್ಧತೇ ತದಾ ಇತರೌ ಪ್ರತಿಬಧ್ಯ ಸ್ವಕಾರ್ಯಮೇವ ಕರೋತಿ। ತತ್ರ ಯದಾ ಸತ್ವಗುಣಃ

ಅಭಿವೃದ್ಧೋ ಭವತಿ, ತದಾ ಸ್ವೇತರಗುಣದ್ವಯಂ ಪ್ರತಿಬಧ್ಯ ನಿವೃತ್ತಧರ್ಮಾದೌ ಇಚ್ಛಾಂ ಜನಯಿತ್ವಾ, ಚಿತ್ತಪ್ರಸನ್ನತಾಂ ವಿಷಯೇಷು ಅಸಂಗಂ ಚ ದತ್ವಾ, ಜ್ಞಾನೇನ ಸುಖೇನ ಯುಕ್ತಂ ಕರೋತಿ । ಯದಾ ತು ರಜೋಗುಣಃ ವರ್ಧತೇ, ತದಾ ಸ್ವೇತರೌ ಗುಣೌ ನಿರುಧ್ಯ, ಐಶ್ವರ್ಯೇ ಯಶಸಿ ಚ ಇಚ್ಛಾಂ ಜನಯಿತ್ವಾ, ಮನಸಿ ಸಂಕಲ್ಪವಿಕಲ್ಪಾತ್ಮಕಂ ವಿಕಾರಂ ಜನಯಿತ್ವಾ, ಕಿಂಚಿತ್ ಚಿಂತಾದಿನಾ ಅಸ್ವಾಸ್ಥ್ಯ ಯುಕ್ತಂ ಕರೋತಿ । ಯದಾ ಚ ತಮೋಗುಣಃ ವಿಜಯತೇ, ತದಾ ಇತರೌ ವಿನಿಗೃಹ್ಯ, ಮನಸಃ ಗ್ಲಾನಿಂ ಆಪಾದ್ಯ, ಕರ್ತವ್ಯಮೌಢ್ಯಂ ಸಂಪಾದಯಿತ್ವಾ, ಚಿಂತಾದಿನಾ ಯುಕ್ತಂ ಕರೋತಿ । ತದೇವಂ ಕರ್ತೃತ್ವಾದ್ಯಭಿಮಾನಪೂರ್ವಕಂ ರಾಗದ್ವೇಷಾಭ್ಯಾಂ ಯತ್ ಯತ್ ಕರೋತಿ, ತತ್ ತತ್ ಕರ್ಮ ಬಂಧಕಮೇವ ಭವತೀತಿ ಪುನಃಪುನಃ ನಾನಾಯೋನಿಷು ಬಂಭ್ರಮೀತಿ, ಯಾವತ್ ಹರಿಚರಣಸಮಾಶ್ರಯಣಂ । ತತಃ ಬಂಧಕಂ ಸರ್ವಮಪಿ ಮನೋದ್ವಾರೈವ ಇತಿ ಸ್ಥಿತಂ । ತಚ್ಚ ಮನಃ ವಿಷಯಾನೇವ ಸದಾ ಅಭಿಧ್ಯಾಯತಿ ತೇನ ಚ ವಿಷಯಾಃ ಅಪಿ ಸದಾ ಮನಸಿ ಏವ ವರ್ತಂತೇ ಸಂಸ್ಕಾರದ್ವಾರಾ, ತಸ್ಮಿಂಶ್ಚ ಉದ್ಬೋಧಕೇನ ಉದ್ಬುದ್ಧೇ ಸತಿ ತದ್ಧ್ಯಾನೇನ ಇಚ್ಛಾದೌ ಸತಿ ಅನರ್ಥಪರಂಪರಾಯಾಃ ಅನಿವೃತ್ತಿರೇವ ಇತಿ ತಯೋಃ ವಿಯೋಜನಂ ಆವಶ್ಯಕಂ ಸಂಸಾರಸಾಗರಂ ತರ್ತುಂ ಇಚ್ಛತಃ ಮುಮುಕ್ಷೋಃ । ತದೇವ ದುರ್ಘಟಮಿವ ಆಭಾತಿ । ಪರಸ್ಪರಾನುರಾಗಾನುರಕ್ತಯೋಃ ಕಾಮಿನೀಕಾಮುಕಯೋರಿವ । **ಯಥಾಹುಃ**—

> ''ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಭೋ ।
> ಕಥಮನ್ಯೋನ್ಯ ಸಂತ್ಯಾಗೋ ಮುಮುಕ್ಷೋಃ ಸಂತಿತೀರ್ಷತಃ'' ಇತಿ ॥

ಏವಂ ಪ್ರಾಪ್ತೇ ಬ್ರವೀತಿ । ಅವಿದ್ಯಮಾನ ಇತಿ । ದ್ವಯಃ ದ್ವಿತೀಯಃ ಭಿನ್ನಃ ದೇಹಾದಿಃ । ವಸ್ತುತಃ ಅವಿದ್ಯಮಾನ ಏವ । ತಾದೃಶಃ ಅಪಿ ಯಶ್ಚ ದೇಹಾದಿಃ ಅವಭಾತಿ, ಸೋಽಪಿ ಧಿಯಾ ಈಶ್ವರೇಚ್ಛಯೈವ ಪ್ರಾಪ್ತಃ । ತತ್ಸ್ವಾಮಿಕತಯಾ ತದೀಯತ್ವಾತ್ ಜೀವಸ್ಯ ಅವಿದ್ಯಮಾನೋಽಪಿ ಸ್ವೀಯತಯಾ ಅವಭಾತಿ । ಭಗವದಿಚ್ಛಯಾ ಸೃಷ್ಟಸ್ಯ ಭಗವತ್ಸ್ವಾಮಿಕಸ್ಯ ದೇಹಾದೇಃ ಸ್ವೀಯತಯಾ ಭಾನಂ ಜೀವಸ್ಯ ಕುತ ಇತ್ಯತಃ ಭ್ರಾಂತಿರೇವ ಇಯಂ ಇತಿ ಭಾವೇನ ಉಕ್ತಂ । ಧ್ಯಾತುಃ ಅನ್ಯಥೇತಿ । ಅವಿದ್ಯಮಾನಂ ಅಪಿ ಸಂಸಾರಂ ಪ್ರಾಪಯತ್ ಮಹಾದುಃಖದಂ ಕಿಂ ವಿದ್ಯತೇ ಇತ್ಯತಃ ಇದಮೇವ ಇತ್ಯಾಶಯೇನ ಉಕ್ತಂ ॥ **ಧಿಯಾ ಮನಸೈವೇತಿ** ॥ ಅಸ್ವೀಯೇ ಸ್ವೀಯತ್ವಬುದ್ಧ್ಯಾ ದುಃಖಾದಿಕಂ ಕ್ವ ದೃಷ್ಟಂ ಇತ್ಯತ ಉಕ್ತಂ ॥ **ಸ್ವಪ್ನೇತಿ** ॥ ಯಥಾ ಹಿ ಸ್ವಾಪ್ನತುರಗಾದಿಃ ಅಸ್ವೀಯಃ ಅಪಿ

ಜಾಗ್ರತ್ಕಾಲೀನತುರಗಾದಿಃ ಇವ ಅಭಿಮತಃ ಸನ್ ದುಃಖಾದಿಪ್ರದೋ ದೃಷ್ಟಃ ತಥೇತಿ । ಇದಂ ತು ನ ಆಶ್ಚರ್ಯಂ ಯದೀಶ್ವರನಿರ್ಮಿತೇ ಸ್ವಾಪ್ನೇ ಅರ್ಥೇ ಜಾಗ್ರತ್ಕಾಲೀನತಾಭ್ರಾಂತ್ಯಾ ಸ್ವೀಯತ್ವಾಭಿಮಾನೇನ ದುಃಖಾದಿಃ ಅಸ್ಯೇತಿ । ಯತಃ ಬುದ್ಧಿಪೂರ್ವಂ ಸ್ವೇನೈವ ಕಲ್ಪಿತೇ ಸ್ವೀಯತಯಾ ಅನುಸಂಧೀಯಮಾನೇ ಮನೋರಥೇ ಪದಾರ್ಥಸಾರ್ಥೇ ಕೇವಲಂ ಅಭಿಮಾನೇನ ದುಃಖಂ ದೃಷ್ಟಂ ಇತ್ಯಾಶಯೇನ ದೃಷ್ಟಾಂತಾಂತರಂ ಆಹ ॥ **ಮನೋರಥೋ ಯಥೇತಿ** ॥ ಏತತ್ ಸರ್ವಂ ಕೇನ ಜೀವಃ ಅನುಭವತಿ ಇತ್ಯತಃ ಉಕ್ತಂ— **ಧಿಯಾ ಮನಸಾ** ಇತಿ ॥ ಕಥಂ ಇದಂ ಮನಃ ಸಂಸಾರಸ್ಯ ಕಾರಣಂ ಇತ್ಯತಃ ಸಂಕಲ್ಪವಿಕಲ್ಪಕಂ ಇತಿ ಮನೋವಿಶೇಷಿತವಾನ್ । ಇದಂ ಕರ್ಮ ಕರಿಷ್ಯೇ ಇತ್ಯಾದಿಸಂಕಲ್ಪವಿಕಲ್ಪಾದಿ ದ್ವಾರಾ ಸಂಸಾರವ್ಯವಹಾರನಿರ್ವಾಹಕಂ ಇತಿ । ಏತಚ್ಚ ಮನಸಃ ಸಂಸಾರನಿದಾನತ್ವಂ ಪ್ರಮಾಣಪ್ರಸಿದ್ಧಂ ಇತಿ ಹಿಶಬ್ದೇನ ಆಹ । ಯೇನ ಮನಸಾ ಸಂಸಾರಃ ತದೇವ ಮನಃ । ತಥಾ ತಸ್ಯ ಮನಸಃ ಕರ್ಮ ವಿಷಯಂ ಚ । ಬುಧಃ ಶ್ರೀಹರೇರೇವ ಕರ್ತೃತ್ವಾದಿಕಂ ಇತಿ ಜಾನನ್ । ತತ್ರೈವ ನಿದಧ್ಯಾತ್ । ಕಿಂ ತತ್ರ ಮನಆದಿನಿವೇಶನೇನೇತ್ಯತ ಆಹ । ತತ ಇತಿ । ತತಃ ತಸ್ಮಾದೇವ ತತ್ರ ನಿವೇಶಿತಾತ್ ಏವ ತತಃ ಸಂಸಾರಕಾರಣಾದೇವ ಮನಸಃ ಸಕಾಶಾತ್ । ಅಭಯಂ ಸಂಸಾರಭಯಾತ್ ನಿವೃತ್ತಿರಪಿ ಸ್ಯಾತ್ ಇತಿ ಯೋಜನಾ ॥ ಇದಮುದಿತಂ ಭವತಿ— ಸತ್ಯಮೇವ ಸರ್ವೋಽಪಿ ಸಂಸಾರಸಂಭಾರಃ ಮನಸಿ ಏವ ಆಯತತೇ ಇತಿ ತಥಾ ತನ್ಮನಃ ವಿಷಯೇಷ್ವೇವ ವಿಷಯಾಶ್ಚ ಮನಸಿ ಏವ ವರ್ತಂತೇ ಇತಿ । ತಥಾಪಿ ಗುಣಬಂಧನಿವೃತ್ತಿರೂಪಃ ಮೋಕ್ಷಃ ಯುಜ್ಯತೇ ಏವ ಮುಮುಕ್ಷೋಃ । ಪರಸ್ಪರಾನುಷಕ್ತಸ್ಯಾಪಿ ಮನಃ ತದ್ವಿಷಯಶ್ಚ ಇತ್ಯುಭಯಸ್ಯಾಪಿ ಭಗವತಿ ಸಮರ್ಪಣೇನ ವಿಯೋಜನಸ್ಯ ಅತಿಸುಘಟತ್ವಾತ್ ಇತಿ । **ಯಥಾಹುಃ—**

> ''ಗುಣೇಷು ವಾ ವಿಶೇಚ್ಚಿತ್ತಮಭೀಕ್ಷ್ಣಂ ಗುಣಸೇವಯಾ ।
> ಗುಣಾಶ್ಚ ಚಿತ್ತಪ್ರಭವಾ ಮದ್ರೂಪ ಉಭಯಂ ತ್ಯಜೇತ್'' ಇತಿ ॥

ಪ್ರತಿಪಾದಿತಂ ಏತತ್ ನಿಪುಣತರಂ ಅಸ್ಮತ್ಕೃತಾಯಾಂ ಅಧ್ಯಾತ್ಮಾಮೃತ ರಸರಂಜಿನ್ಯಾಂ ಇತಿ ನಾತ್ರ ತತ್ ವಿಶದೀಕ್ರಿಯತೇ ।

ಇದಮತ್ರ ಜ್ಞೇಯಂ— ಏವಂ ಅನುಸಂಧಾನೇನ ಶೀಘ್ರಮೇವ ಗುಣನಿವೃತ್ತಿಃ ಭವತೀತಿ । ಯಥಾ ಅನುಸಂಧಾತಾ ನಿರ್ಗುಣಃ ಇತಿ ಗೀಯತೇ ತಥಾ ತದೀಯಸಾಧನಜಾತಮಪಿ ನಿರ್ಗುಣಂ ಇತಿ ಭಣ್ಯತೇ ಇತಿ । ಅತ ಏವ ಅತ್ರ ಶ್ರೀಮತಿ ಭಾಗವತೇ—

''ಸಾತ್ವಿಕಃ ಕಾರಕೋಽಸಂಗೀ ರಾಗಾಂಧೋ ರಾಜಸಃಸ್ಮೃತಃ ॥
ತಾಮಸಃ ಸ್ಮೃತಿವಿಭ್ರಷ್ಟೋ ನಿರ್ಗುಣೋ ಮದಪಾಶ್ರಯಃ''
ಇತಿ ಕರ್ತಾ ಚತುರ್ವಿಧಃ ಅಭಿಹಿತಃ । ತಥಾ
''ವನಂ ತು ಸಾತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ ।
ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಂ'' ॥

ಇತಿ ಸಾಧನಂ ಚತುರ್ವಿಧತಯಾ ಉಕ್ತಂ । ಇದಂ ತು ಅವಸ್ಥಾಭೇದೇನ ಅಧಿಕಾರಿಣಾಂ ಭೇದಂ ಅಂಗೀಕೃತ್ಯೈವ । ವಸ್ತುತಸ್ತು ತ್ರಿವಿಧಃ ಏವ ಅಧಿಕಾರೀ ಸಾಧನಮಪಿ ತ್ರಿವಿಧಮೇವೇತಿ । ಏತದಪಿ ತಥಾವಿಧಸ್ಯ ಅಧಿಕಾರಿಷು ವೈಶಿಷ್ಟ್ಯಜ್ಞಾಪನಾಯ ತದಪಿ ತತ್ರ ಅನ್ಯೇಷಾಂ ಆದರಜನನಾಯೇತಿ ॥

❖❖❖

ಕಪಿಮುನಿ ವಿದೇಹರಾಜನಿಗೆ ಹೇಳುತ್ತಾರೆ—

'ದ್ವಯ' ಅಂದರೆ ದ್ವಿತೀಯ, ಅನ್ಯ, ಜೀವನಿಗಿಂತ ಭಿನ್ನವಾದ ಅವನ ಶರೀರ ಮನೆ ಮುಂತಾದುವು. ಆದರೂ ಅವು ಅಭಿನ್ನವಾಗಿ 'ಅವಭಾತಿ' ದೇಹವನ್ನು ನಾನೆಂದು ಮನೆ ಮುಂತಾದುವನ್ನು ನನ್ನವೆಂದು 'ಧಿಯಾ' ಭಗವಂತನ ಇಚ್ಛೆಯಿಂದ ಅಭಿಮಾನಪಡುವನು. ಭಿನ್ನವೇ ಆದುದು ಅಭಿನ್ನವೆಂಬಂತೆ ಅವಭಾತಿ ಭ್ರಾಂತಿಯಲ್ಲಿ ಕಾಣುವುದು. ಅದರಿಂದ ದುಃಖ ಉಂಟಾಗುವುದು ಇದಕ್ಕೆ ಉದಾಹರಣೆ—'ಸ್ವಪ್ನಮನೋರಥೋ ಯಥಾ' ಸ್ವಪ್ನದಲ್ಲಿ ಕಾಣುವ ಕರಿತುರಗಾದಿಗಳು ಧನಧಾನ್ಯಾದಿಗಳು ಜೀವನಿಗೆ ತನ್ನವಲ್ಲ. ಜಾಗರದಲ್ಲಿ ಅವು ಕಾಣುವುದೂ ಇಲ್ಲ. ಆದರೂ ಸ್ವಪ್ನದಲ್ಲಿ ಅವುಗಳನ್ನು ಜಾಗರದ ಪದಾರ್ಥಗಳೆಂದೂ ತನ್ನವೆಂದೂ ಭ್ರಮಿಸುವನು. ಎಚ್ಚರವಾದಾಗ ಅವು ಯಾವುವೂ ಇಲ್ಲ. ಬರಿಯ ದುಃಖವಿರುತ್ತದೆ. ಮಾನಸವಾಸನಾಮಯ ವಾದ ಸ್ವಾಪ್ನಪದಾರ್ಥವನ್ನು ಸ್ವಪ್ನದಲ್ಲಿ ಭಗವಂತ ಸೃಷ್ಟಿಮಾಡಿ ತೋರಿಸುತ್ತಾನೆ. ಇನ್ನೊಂದು ಉದಾಹರಣೆ ಮನೋರಥ. ತಾನಾಗಿ ಕೂತು ಕಲ್ಪಿಸಿಕೊಂಡ ಮನೋರಥಗಳಿಗೆ ವಿಷಯವಾದ ಪದಾರ್ಥ ಎಂದೂ ಕೈಗೆ ಸಿಗುವುದಿಲ್ಲ. ಏಕೆಂದರೆ ಅವೂ ಮಾನಸವಾಸನಾನಿರ್ಮಿತ. ಬಾಹ್ಯಪದಾರ್ಥಗಳಲ್ಲ. ಆದರೂ ಅವುಗಳಲ್ಲಿ ಅಭಿಮಾನ ಮಾಡಿ ಅವು ಸಿಗದಿದ್ದಾಗ ಹತಾಶನಾಗುತ್ತಾನೆ. ಅದಕ್ಕೆ ಏನು ಮಾಡಬೇಕೆಂದರೆ 'ಸಂಕಲ್ಪವಿಕಲ್ಪಕಂ ಮನಃ' ನಾನಿದನ್ನು

**ಮಾಡುವೆನೆನ್ನುವುದು ಸಂಕಲ್ಪ. ಬಿಡುವೆನೆನ್ನುವುದು ವಿಕಲ್ಪ. ಎರಡೂ ಮನಸಿನ ವ್ಯಾಪಾರಗಳು. ಆ ವ್ಯಾಪಾರಗಳನ್ನೂ ಅವುಗಳ ವಿಷಯಗಳನ್ನೂ ಭಗವಂತನಲ್ಲಿಯೆ 'ನಿದಧ್ಯಾತ್' ನೀನೆ ಕರ್ತ, ನೀನೆ ಸ್ವಾಮಿ, ನಾನು ಕರ್ತನಲ್ಲ, ಸ್ವಾಮಿಯಲ್ಲ ಎಂದು ಅನುಸಂಧಾನ ಮಾಡಿ ಮನಸ್ಸನ್ನು ವಿಷಯಗಳಿಂದ ಬಿಡಿಸೆಂದು ಭಗವಂತನಿಗೇ ಅರ್ಪಿಸಿದರೆ 'ಅಭಯಂ ಸ್ಯಾತ್' ಸಂಸಾರಭಯ ನಿವೃತ್ತಿಯಾಗುವುದು.**

ಜೀವನು ಮೋಕ್ಷಯೋಗ್ಯನಾಗಿದ್ದರೆ ಅನಾದಿಕಾಲದಿಂದಲೂ ನಿರ್ದೋಷ ಜ್ಞಾನಾನಂದಸ್ವರೂಪನೆ. ಆದರೆ ಸತ್ವರಜಸ್ತಮೋಗುಣಾತ್ಮಕ ಲಿಂಗಶರೀರ ಜೀವಾಚ್ಛಾದಕ ಪರಮಾಚ್ಛಾದಕಗಳಿಂದ ಕರ್ಮಬದ್ಧನಾಗಿರುವನು. ಈ ಬಂಧಕ ಪ್ರಕೃತಿ ಗುಣ ಕರ್ಮಗಳನ್ನು ನಿಮಿತ್ತಮಾಡಿ ಶ್ರೀಹರಿಯ ಇಚ್ಛೆಯೇ ಜೀವನ ಸ್ವರೂಪವನ್ನು ಆಚ್ಛಾದನ ಮಾಡಿ ಲಿಂಗಶರೀರದಲ್ಲಿರುವ ಬಾಹ್ಯಮನಸಿನಿಂದಲೇ ಎಲ್ಲವನ್ನು ತೋರಿಸಿಕೊಡುವನು. ಈ ಬಂಧಕ ಇಚ್ಛೆಯೇ ಮಾಯಾ ಪ್ರಕೃತಿ ನಿಯತಿ ಅವಿದ್ಯಾ ಮೋಹಿನೀ ಎಂದು ಮುಂತಾಗಿ ಕರೆಸಿಕೊಳ್ಳುವುದು. ಈ ಮೋಹಿನೀ ಮಾಯಾರೂಪ ಇಚ್ಛೆಯ ಪ್ರಭಾವದಿಂದಲೇ ಜೀವನು ಹರಿಯ ಸ್ವತಂತ್ರಕರ್ತೃತ್ವವನ್ನು ಮರೆತು ಮನಸಿನಲ್ಲಿ ನಾನೇ ಸ್ವತಂತ್ರಕರ್ತನೆಂದು ಭ್ರಮಿಸುವನು. ಇದುವೆ ಕರ್ತೃತ್ವಾಭಿಮಾನ. ಹರಿಯೆ ಸರ್ವಸ್ವಾಮಿ ಎಂಬುದನ್ನು ಮರೆತು ಶರೀರ ಇಂದ್ರಿಯ ವಿಷಯಗಳೆಲ್ಲ ನನ್ನವೆಂದು ಭ್ರಮಿಸುವನು. ಇದು ಸ್ವಾಮಿತ್ವಾಭಿಮಾನ. ಮನಸು ತ್ರಿಗುಣಾತ್ಮಕ. ಅದರಲ್ಲಿ ರಜೋಗುಣ ಉದ್ರೇಕಗೊಂಡಾಗ ಜೀವನು ಈ ಎರಡು ಭ್ರಮೆಗಳಿಂದ ಕಾಮ್ಯಕರ್ಮ ಮಾಡುವನು.

ಸತ್ವಗುಣ ವೃದ್ಧಿಯಾದಾಗ ಅವನು ರಜಸ್ತಮೋ ಗುಣಗಳನ್ನು ಹತ್ತಿಕ್ಕಿ ಭಗವತ್ ಪ್ರೀತಿಕರವಾದ ಶ್ರವಣಾದಿ ನಿಷ್ಕಾಮಕರ್ಮ ಮಾಡುವನು. ಆಗ ಮನಸ್ಸು ರಜೋಗುಣಪ್ರಭಾವದಿಂದ ಉಂಟಾಗಿರುವ ವಿಷಯಸುಖ ಕಾಮನೆಯನ್ನು ತೊರೆದು ಕಾಮಾದಿದೋಷಗಳನ್ನು ಹತ್ತಿಕ್ಕಿಕೊಂಡು ಪ್ರಸನ್ನವಾಗುವುದು.

ರಜೋಗುಣ ವೃದ್ಧಿಹೊಂದಿದಾಗ ಮನಸ್ಸು ಐಶ್ವರ್ಯಕೀರ್ತಿ ಮುಂತಾದವುಗಳಲ್ಲಿ ಕಾಮನೆಗಳಿಂದ ತುಂಬಿ, ಈ ಕರ್ಮವನ್ನು ನಾನು ಮಾಡಲೆ ಬಿಡಲೆ ಬೇರೆ ಏನನ್ನಾದರೂ ಮಾಡಲೆ ಎಂದು ಸಂಕಲ್ಪವಿಕಲ್ಪಗಳನ್ನುಮಾಡಿ ಚಿಂತೆಯಿಂದ ನೆಮ್ಮದಿ ಕೆಡಿಸಿಕೊಳ್ಳುತ್ತದೆ.

ತಮೋಗುಣ ಅಭಿವೃದ್ಧವಾದಾಗ ಅದು ಸತ್ವರಜಗಳನ್ನು ಹತ್ತಿಕ್ಕಿಕೊಂಡು ಸದಾ ದುಃಖ ಚಿಂತೆಗಳಿಂದ ತುಂಬಿಕೊಳ್ಳುತ್ತದೆ. ಜೀವನು ಕರ್ತವ್ಯಮೌಢ್ಯದಿಂದ ದಿಕ್ಕುತೋಚದಂತಾಗುವನು.

ಹೀಗೆ ಕರ್ತೃತ್ವಾಭಿಮಾನ ಸ್ವಾಮಿತ್ವಾಭಿಮಾನಗಳು ನಾನು ನನ್ನದೆಂಬ ಆಗ್ರಹಗಳು ರಾಗದ್ವೇಷಗಗಳು ಇವುಗಳ ಮೂಲಕ ಎಲ್ಲ ಕರ್ಮ ಮಾಡುವುದರಿಂದ, ಒಂದು ಕರ್ಮದ ಫಲ ಉಣ್ಣುವಾಗ ರಾಗದ್ವೇಷಗಳಿಂದ ನೂರು ಹೊಸಕರ್ಮ ಮಾಡುತ್ತಾನೆ. ಅವೆಲ್ಲವೂ ಬಂಧಕಗಳೆ. ಏಕೆಂದರೆ ಕರ್ಮದಿಂದ ಒಂದು ಶರೀರ ಬಂದರೆ ಆ ಶರೀರದಲ್ಲಿ ಮುಂದಿನ ಅನೇಕ ಶರೀರಗಳಿಗೆ ಕಾರಣವಾಗುವ ಕರ್ಮ ಹುಟ್ಟಿಕೊಳ್ಳುತ್ತದೆ. ಆ ಕರ್ಮವೂ ಮುಂದಿನ ಅನೇಕ ಶರೀರಕಾರಣವಾಗುವ ಕರ್ಮ ಮಾಡಿಸುತ್ತದೆ. ಹೀಗೆ ಶರೀರಗಳ ನಿರಂತರ ಪ್ರವಾಹದಲ್ಲಿ ಜೀವನು ಕೊಚ್ಚಿಹೋಗುತ್ತಾನೆ. ಇದೇ ಸಂಸಾರಸಾಗರ. ಇದರಿಂದ ಪಾರಾಗಲು ಒಂದೇ ಉಪಾಯ ಶ್ರೀಹರಿಯ ಚರಣಗಳಿಗೆ ಶರಣಾಗುವುದು.

ಶ್ರೀಹರಿಚರಣದಲ್ಲಿ ಶರಣಾಗುವುದೆಂದರೆ ತ್ರಿಗುಣಾತ್ಮಕವಾದ ಬಂಧಕ ಕರ್ಮಕ್ಕೆ ಕಾರಣವಾದ ಮನಸ್ಸನ್ನು ಅದು ಬಯಸುವ ವಿಷಯ ಭೋಗ ಗಳೊಂದಿಗೇ ಶ್ರೀಹರಿಗೆ ಅರ್ಪಿಸುವುದು. ಮನಸು ವಿಷಯಾಕರ್ಷಣೆಗೊಳಗಾಗಿ ವಿಷಯಗಳ ಕಡೆಗೆ ಧಾವಿಸಿ ಅವುಗಳಲ್ಲಿಯೆ ಸಿಕ್ಕಿಹಾಕಿಕೊಳ್ಳುತ್ತದೆ. ವಿಷಯಸುಖಾನುಭವದ ಸಂಸ್ಕಾರವು ಮನಸಿನಲ್ಲಿ ತುಂಬಿಕೊಳ್ಳುತ್ತದೆ. ಆದರಿಂದ ವಿಷಯಾಸೆ ಬಲಿತು ಕಾಮಕ್ರೋಧಾದಿ ದೋಷಗಳನ್ನು ಮನಸಿನಲ್ಲಿ ತುಂಬಿಸುತ್ತದೆ. ಆದರಿಂದಲೇ ರಾಗದ್ವೇಷಪೂರ್ವಕ ಬಂಧಕ ಕರ್ಮಗಳು. ಅವುಗಳಿಂದ ಆರವತ್ತನಾಲ್ಕು ಲಕ್ಷ ಯೋನಿಗಳಲ್ಲಿ ಜನನ ಮರಣಾದಿ ಅನರ್ಥ ಪರಂಪರೆ. ಇದಕ್ಕೆ ಮನಸ್ಸಿಗೂ ವಿಷಯಕ್ಕೂ ಇರುವ ನಂಟು ಬಿಡಿಸಬೇಕು. ಹೇಗೆ? ಇದೇ ಪ್ರಶ್ನೆಯನ್ನು ಸನಕಾದಿ ಮುನಿಗಳು ಬ್ರಹ್ಮದೇವರಲ್ಲಿ ಕೇಳಿದಾಗ ಬ್ರಹ್ಮದೇವರು ಹಂಸನಾಮಕ ಪರಮಾತ್ಮನ ಮುಖದಿಂದ ಸಮಾಧಾನ ಹೇಳಿಸಿದರು—

ಗುಣೇಷು ಚಾವಿಶೇಚ್ಚಿತ್ತಂ ಅಭೀಕ್ಷ್ಣಂ ಗುಣಸೇವಯಾ
ಗುಣಾಶ್ಚ ಚಿತ್ತಪ್ರಭವಾಃ ಮದ್ರೂಪ ಉಭಯಂ ತ್ಯಜೇತ್ ॥

(ಭಾ.೧೧.೧೩.೨೬)

'ಸದಾ ವಿಷಯಸೇವನೆಯಿಂದ ಮನಸು ವಿಷಯಗಳಲ್ಲಿ ಹೋಗಿ ನಿಂತು ಬಿಡುವುದು. ಆಸಕ್ತವಾಗುವುದು. ವಿಷಯಗಳೂ ವಿಷಯ ಭೋಗಾನುಭವ ಸಂಸ್ಕಾರರೂಪದಿಂದ ಮನಸಿನಲ್ಲಿ ತುಂಬಿಕೊಳ್ಳುವವೂ ಎರಡನ್ನೂ ನನ್ನ ಅಧೀನ ವೆಂದು ನನ್ನ ಚರಣಗಳಲ್ಲಿ ಆಶ್ರಯಿಸಿಕೊಂಡಿರುವವೆಂದು ಸಮರ್ಪಿಸಬೇಕು' ಇದು ಹಂಸನಾಮಕ ಪರಮಾತ್ಮನ ಉಪದೇಶ.

**ಇದರ ಹೆಚ್ಚಿನ ವಿವರಣೆಗೆ ಅವಧೂತರು ಅನುಗ್ರಹಿಸಿರುವ ಅಧ್ಯಾತ್ಮಾಮೃತರಸರಂಜನಿಯನ್ನು ನೋಡಬೇಕು.**

ತಾತ್ಪರ್ಯವಿಷ್ಟು—ಭಗವಂತನೇ ನನ್ನ ಮನಸ್ಸಿನಲ್ಲಿಯೂ ವಿಷಯ ದಲ್ಲಿಯೂ ನಿಂತು ಎರಡಕ್ಕೂ ಸಂಬಂಧ ಉಂಟುಮಾಡಿ ಮನಸಿನ ಮೂಲಕ ತಾನೇ ವಿಷಯಸುಖವನ್ನು ಉಣ್ಣುತ್ತಾನೆ. ಅವನೆ ಹಾಗೆ ಹೇಳಿದ್ದಾನೆ—

ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ(ಗೀ.೧೫) ಎಂದು. ಜೀವನು ಇದನ್ನು ಚಿಂತಿಸಬೇಕು. 'ನಾನು ವಿಷಯಸುಖ ಉಣ್ಣುತ್ತೇನೆ' ಎನ್ನುವ ಭ್ರಾಂತಿಯನ್ನು ಬಿಟ್ಟುಬಿಡಬೇಕು. ಇದೇ ಮನಸು–ವಿಷಯ ಉಭಯ ಸಮರ್ಪಣೆ. ಸಮರ್ಪಣೆಯ ಕಾಲದಲ್ಲಿ ಮಾಡುವ ಧ್ಯಾನದ ಆಕಾರ 'ಉಭಯವೂ ನಿನ್ನ ಅಧೀನ' ಎಂದು.

ವಿಷಯ– ಮನಸುಗಳ ಸಂಬಂಧವನ್ನೂ ಸಮರ್ಪಿಸಬೇಕು. ಏಕೆಂದರೆ ಅವಸ್ಥಾತ್ರಯರೂಪವಾದ ಬಂಧವು ಈ ಉಭಯಗಳ ಸಂಬಂಧರೂಪವೇ ಆಗಿದೆ. ಉಭಯಸಂಬಂಧಕ್ಕೆ ಕಾರಣವಾದ ಅನಾದಿಪುಣ್ಯಪಾಪಕರ್ಮಗಳನ್ನೂ ಪರಿಹರಿಸಿ ಮುಕ್ತಿನೀಡುತ್ತಾನೆ ಶ್ರೀಹರಿ. 'ಗುಣೇಷು ಚಾವಿಶೇಚ್ಚಿತ್ತಂ ಅಭೀಕ್ಷ್ಣಂ ಗುಣಸೇವಯಾ' ಎಂಬಲ್ಲಿ ವಿಷಯಗಳನ್ನು 'ಗುಣ' ಎಂದು ಕರೆದಿದ್ದಾನೆ ಹಂಸನಾಮಕ ಪರಮಾತ್ಮ. ಅದರಿಂದ ವಿಷಯಾಸೆಯ ನಿವೃತ್ತಿಯೆ ಗುಣನಿವೃತ್ತಿ. ಅದನ್ನು ಪರಮಾತ್ಮ ಅನುಗ್ರಹಿಸುತ್ತಾನೆ ಎಂದು ಅನುಸಂಧಾನ ಮಾಡುವ ಜೀವನು ನಿರ್ಗುಣನೆನಿಸುತ್ತಾನೆ.

ಕರ್ಮಕರ್ತನು ಸಾತ್ವಿಕ ರಾಜಸ ತಾಮಸ ನಿರ್ಗುಣ ಎಂದು ನಾಲ್ಕು ಬಗೆ ಇರುತ್ತಾನೆ. ಅವನ ಸಾಧನೆಯೂ ಹಾಗೇ ಸಾತ್ವಿಕ ರಾಜಸ ತಾಮಸ ನಿರ್ಗುಣ

ಎಂದು ನಾಲ್ಕು ಬಗೆ ಇರುತ್ತದೆ ಎಂದು ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ—

> ಸಾತ್ತ್ವಿಕಃ ಕಾರಕೋಽಸಂಗೀ ರಾಗಾಂಧೋ ರಾಜಸಃ ಸ್ಮೃತಃ ।
> ತಾಮಸಃ ಸ್ಮೃತಿ ವಿಭ್ರಷ್ಟೋ ನಿರ್ಗುಣೋ ಮದಪಾಶ್ರಯಃ ॥
> ವನಂ ತು ಸಾತ್ತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ
> ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಂ ॥
>
> (ಭಾ.೧೧.೨೫.೨೬,೨೫)

'ವಿಷಯಾಸಕ್ತಿ ರಹಿತವಾದ ಸಾತ್ತ್ವಿಕ ಜ್ಞಾನಉಳ್ಳ ಕರ್ತನು ಸಾತ್ತ್ವಿಕ. ವಿಷಯಾಸಕ್ತಿಯಿಂದ ಕುರುಡನಾದ ಕರ್ತ ರಾಜಸ. ಶ್ರುತಿಸ್ಮೃತಿ ವಿಹಿತ ಆಚಾರಭ್ರಷ್ಟನಾದ ಕರ್ತ ತಾಮಸ. ನನ್ನ ಆರಾಧನೆಗಾಗಿ ನಿಷ್ಕಾಮ ಕರ್ಮ ಮಾಡುವವನು ನಿರ್ಗುಣಮೋಕ್ಷಸಾಧನ ಅಪರೋಕ್ಷಜ್ಞಾನ ಉಳ್ಳ ಕರ್ತನು ನಿರ್ಗುಣ. ವಾಸಮಾಡಲು ತಪೋವನವು ಸಾತ್ತ್ವಿಕ. ಗ್ರಾಮಪ್ರದೇಶ ರಾಜಸ, ಜೂಜಿನ ಕಟ್ಟೆಗಳಿರುವ ಸ್ಥಳ ತಾಮಸ. ನನ್ನ ವಿಶೇಷ ಸನ್ನಿಧಾನಉಳ್ಳ ಪುಣ್ಯಕ್ಷೇತ್ರವು ಗುಣತ್ರಯ ರಹಿತಮುಕ್ತಿಯನ್ನು ಬೇಗನೆ ಸಾಧಿಸಿ ಕೊಡುವುದರಿಂದ ನಿರ್ಗುಣವೆನಿಸುವುದು' ಎಂದು.

ಇಲ್ಲಿ ಸಾಧಕನು ಸಾಧನೆಯ ಯಾವ ಹಂತದಲ್ಲಿರುವನೆಂಬುದನ್ನು ಗಮನದಲ್ಲಿರಿಸಿಕೊಂಡು ನಾಲ್ಕು ಬಗೆಗಳನ್ನು ಹೇಳಿದ್ದಾರೆ. ಸಾಧಕನು ಸಾತ್ತ್ವಿಕನಾಗಿದ್ದರೆ ಮಾತ್ರ ತಪೋವನವು ಸಾತ್ತ್ವಿಕ. ರಾಜಸ ತಾಮಸವಾಗಿದ್ದರೆ ಅದೇ ತಪೋವನವು ರಾಜಸತಾಮಸವೇ ಆಗುವುದು. ಆದರಿಂದ ಸಾಧಕನೂ ಸಾತ್ತ್ವಿಕ ರಾಜಸ ತಾಮಸನೆಂದು ತ್ರಿವಿಧ. ಅವನ ವಾಸಸ್ಥಳವೂ ಸಾತ್ತ್ವಿಕ ರಾಜಸ ತಾಮಸವೆಂದು ತ್ರಿವಿಧವೆ. 'ನಿರ್ಗುಣನ ವಾಸಸ್ಥಾನವು ತಪೋವನ' ಎಂದು ವಿಶೇಷವಾಗಿ ಹೇಳಿದ್ದು ಇತರ ಸಾಧಕನಿಗೆ ತಾನು ನಿರ್ಗುಣನಾಗುವಲ್ಲಿ ತಪೋವನಾದಿ ವಾಸಮಾಡುವಲ್ಲಿ ವಿಶೇಷ ಆದರ ಹುಟ್ಟುವುದಕ್ಕಾಗಿ.

❖❖❖

# ೨೯. ನಾಮಪ್ರಶಂಸಾ ಪ್ರಕರಣ

## ಪ್ರಕರಣ ಸಾರಾಂಶ

ವಿಷಯಾಸೆ ಎಂಬುದು ಅನಾದಿಯಿಂದ ಜೀವನಿಗೆ ಅಂಟಿಕೊಂಡಿರುವ ರೋಗ.. ಅದಕ್ಕೆ ಕಾರಣ ಅನಾದಿಬಂಧಕವಾದ ಕರ್ಮ. ಈ ಪಾಪಕರ್ಮಕ್ಕೆ ಪ್ರಾಯಶ್ಚಿತ್ತವೆಂದರೆ ಹರಿನಾಮಸ್ಮರಣೆಯೊಂದೇ. ಅದು ಪಾಪವನ್ನು ಕಳೆದು ಭಕ್ತಿಯನ್ನು ಉಂಟುಮಾಡುತ್ತದೆ. ಮುಕ್ತಿಗೆ ದಾರಿಮಾಡಿಕೊಡುತ್ತದೆ. ಒಮ್ಮೆಯಾದರೂ ಭಕ್ತಿಯಿಂದ ಹರಿನಾಮಸ್ಮರಣೆ ಮಾಡುವವನು ಎಂದೂ ಯಮನನ್ನು ಕಾಣುವುದಿಲ್ಲ.

ನಾಮಾಮೃತವನ್ನು ಒಮ್ಮೆಯೂ ಸವಿಯದವರು ನರಕಭಾಗಿಗಳಾಗುತ್ತಾರೆ. ಒಮ್ಮೆಯಾದರೂ ಸವಿದವರು ಎಂದೂ ನರಕಭಾಗಿಗಳಾಗುವುದಿಲ್ಲ. ಮುಕ್ತಿಯೋಗ್ಯರು ಅವರು.

ಅವರು ಏನೇ ಪಾಪ ಮಾಡಿದರೂ ನರಕವಿಲ್ಲ ಎನ್ನುವುದಾದರೆ, 'ಪಾಪಿ ಬದುಕಿರುವಾಗಲೇ ತಕ್ಕ ಪ್ರಾಯಶ್ಚಿತ್ತಮಾಡಿಕೊಳ್ಳದಿದ್ದರೆ ಅವನಿಗೆ ನರಕಶಿಕ್ಷೆ ನಿಶ್ಚಿತ' ಎನ್ನುವ ಮಾತಿಗೆ ಏನರ್ಥ? ನರಕಶಿಕ್ಷೆ ಎಂದರೆ 'ನರಕಲೋಕದಲ್ಲಿ ಅನುಭವಿಸುವ ಶಿಕ್ಷೆ' ಎಂದರ್ಥವಲ್ಲ. ಪರಮಾತ್ಮನ ಬಗ್ಗೆ ಏನೂ ಅರಿವಿಲ್ಲದ ಪ್ರಾಣಿಜನ್ಮ ಎಂದರ್ಥ. ಅಥವಾ ನರಜನ್ಮ ಬಂದರೂ ನರಕಸ್ಥನಂತೆ ಪರಮಾತ್ಮ ಜ್ಞಾನ ಶೂನ್ಯನಾಗುತ್ತಾನೆ ಎಂದರ್ಥ. 'ನರಕದಲ್ಲಿಯೂ ವಿಷಯಸುಖವಿದೆ ಎಂದಮೇಲೆ ವಿಷಯಸುಖಕ್ಕಾಗಿ ಏಕೆ ಪ್ರಯತ್ನ ಮಾಡಬೇಕು?' ಎಂದು ಭಾಗವತ ಹೇಳುವುದರಿಂದ 'ನರಕದಲ್ಲಿ' ಎಂದರೆ ಪ್ರಾಣಿಜನ್ಮದಲ್ಲಿ ಎಂದೇ ಅರ್ಥ. ಹಾಗೆ ಇಲ್ಲದಿದ್ದರೆ ನರಕಲೋಕದಲ್ಲಿ ಸುಖ ಉಂಟೆ?

❖❖❖

## –೩೫೧–

## ನಾಮಸ್ಮರಣೆಯಿಂದ ಅನಾದಿಕರ್ಮನಿವೃತ್ತಿ

ತಸ್ಮಾತ್ ಪುರೈವಾಶ್ವಿಹ ಪಾಪನಿಷ್ಕೃತೌ
ಯತೇತ ಮೃತ್ಯೋರವಿಪದ್ ಯದಾತ್ಮನಃ ।
ದೋಷಸ್ಯ ದೃಷ್ಟ್ವಾ ಗುರುಲಾಘವಂ ಯಥಾ
ಭಿಷಕ್ ಚಿಕಿತ್ಸೇತ ರುಜಾಂ ನಿದಾನವಿತ್ ॥

(ಭಾ.೬.೧.೮)

ಶ್ರೀರಾಮಾಯ ನಮಃ ॥ ಏವಂ ತ್ರಿಂಶದ್ವಿಧಭಾಗವತಧರ್ಮಾನುಷ್ಠಾನೇನ ಸಂಜಾತಪರಮಭಕ್ತೇಃ ಭಾಗವತಸ್ಯ ಗುರುಪ್ರಸಾದೇನ ಬಿಂಬಾಪರೋಕ್ಷೇ ಸತಿ ಪುನರಭಿವೃದ್ಧಯಾ ಭಕ್ತ್ಯಾ ಗುಣನಿವೃತ್ತಿಲಕ್ಷಣೋ ಮೋಕ್ಷೋ ಭವತೀತಿ ಪ್ರತಿಪಾದಿತಂ। ಅಧುನಾ ಯೇ ತತ್ರ ಉಪಾಸನಾದೌ ಅಶಕ್ತಾಃ ತೇಷಾಮಯಮೇಕ ಏವ ಭಾಗವತೋ ಧರ್ಮಃ ಪರಾಯಣಂ। ಕ್ರಮೇಣ ತತ್ರ ಶಕ್ತಿಂ ಪ್ರದಾಯ ಪುರುಷಾರ್ಥಮಪಿ ಪ್ರದದ್ಯಾದಿತಿ ವಕ್ತುಂ ಇದಂ ಪ್ರಕರಣಂ। ತತ್ರ ಆದೌ ಆದರಜನನಾಯ ನಾಮಕೀರ್ತನರೂಪಭಾಗವತಧರ್ಮಾನುಷ್ಠಾನಸ್ಯ ನಾರಕದುಃಖನಿವರ್ತಕತ್ವರೂಪಂ ಮಹಿಮಾನಮಾಹ ॥ **ತಸ್ಮಾದಿತಿ** ॥ ಯಸ್ಮಾತ್ ಇಹೈವ ಪ್ರಾಯಶ್ಚಿತ್ತಾಕೃತೌ ನಿಶ್ಚಯೇನ ಅನರ್ಥಪ್ರಾಪ್ತಿಃ ತಸ್ಮಾತ್ ಇಹ ಏವ ಪಾಪಪ್ರಾಯಶ್ಚಿತ್ತನಿಮಿತ್ತಂ ಪ್ರಯತೇತ। ತತ್ರಾಪಿ ಮೃತ್ಯೋಃ ಸಕಾಶಾತ್ ಯದಾ ಆತ್ಮನಃ ಅವಿಪತ್ ರೋಗಾದಿವಿಪದಾಮಭಾವಃ ತದಾ ಪುರಾ ತಸ್ಮಿನ್ ಪೂರ್ವಕಾಲೇ ಏವ। ತತ್ರಾಪಿ ಕಾಲವಿಲಂಬೋ ನ ಕರ್ತವ್ಯ ಇತ್ಯಾಹ। ಆಶ್ವೇವೇತಿ। ಆಯುಷೋಽಲ್ಪತ್ವಾದೇವೇತಿ ಭಾವಃ। **ಯಥಾಹುಃ**—

''ಪ್ರಾಯೇಣಾಲ್ಪಾಯುಷೋ ಮರ್ತ್ಯಾಃ ಕಲಾವಸ್ಮಿನ್ ಯುಗೇ ಜನಾಃ।
ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ'' ಇತಿ।

ಕಥಂಕಾರಂ ಪ್ರಾಯಶ್ಚಿತ್ತಂ ಕುರ್ಯಾದಿತ್ಯತ ಉಕ್ತಂ ॥ **ಯಥಾ ಭಿಷಗಿತಿ**। ರುಜಾಂ ರೋಗಾಣಾಂ ನಿದಾನಂ ಮೂಲಕಾರಣಂ ವೇತ್ತೀತಿ ತಾದೃಶೋ ಭಿಷಕ್ ಚಿಕಿತ್ಸಕೋ ರುಜಾಂ ಗೌರವಂ ಲಾಘವಂ ಚ ದೃಷ್ಟ್ವಾ ಯಥಾ ತದನುಸಾರೇಣ ಚಿಕಿತ್ಸೇತ್ ತಥಾ ದೋಷಸ್ಯ ಗುರುಲಾಘವಂ ದೃಷ್ಟ್ವಾ ಇತಿ। ಪಾಪೇಽಲ್ಪೇ ಸತಿ ಪ್ರಾಯಶ್ಚಿತ್ತಮಲ್ಪಂ, ಮಹತಿ ಸತಿ ಮಹದಿತಿ ಭಾವಃ ॥

❖❖❖

**ಶ್ರೀಶುಕಮುನಿ ನಾಮಸಂಕೀರ್ತನದ ಮಹಿಮೆಯನ್ನು ಉಪದೇಶಿಸುವರು—**

**ಈ ಶರೀರದಿಂದ ಮಾಡಿದ ಪಾಪಕ್ಕೆ ಈ ಶರೀರದಲ್ಲಿಯೇ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ನರಕವಾಗುವುದರಿಂದ ಈ ಶರೀರವಿರುವಾಗಲೇ ಪಾಪಪರಿಹಾರಕ್ಕೆ ಯತ್ನಿಸಬೇಕು. ಅದರಲ್ಲಿಯೂ ತನಗೆ ಮರಣ ಬರುವುದಕ್ಕೆ ಮುನ್ನವೇ, ರೋಗಾದಿ ವಿಪತ್ತು ಬಂದಾಗಲೂ, ಮೊದಲಿಗೇ, ಕಾಲವಿಲಂಬ ಮಾಡದೆ ಎಚ್ಚೆತ್ತು ಪ್ರಯತ್ನ ಮಾಡಬೇಕು. ವಿಲಂಬವಾದರೆ, ದ್ವಿಗುಣ ಪ್ರಾಯಶ್ಚಿತ್ತ ಮಾಡಬೇಕು.**

ಮೂವತ್ತು ಬಗೆಯ ಭಾಗವತಧರ್ಮಾನುಷ್ಠಾನದಿಂದ ಭಕ್ತಿ ಪಕ್ವವಾದಾಗ ಗುರುಪ್ರಸಾದದಿಂದ ಅಪರೋಕ್ಷ ಲಭಿಸುವುದು. ಅದರಿಂದ ಇನ್ನೂ ಹೆಚ್ಚು ಭಕ್ತಿ ಪಕ್ವವಾದಾಗ ಗುಣನಿವೃತ್ತಿ ರೂಪ ಮೋಕ್ಷ ದೊರಕುವುದು. ಆದರೆ ಇಂಥ ಉಪಾಸನೆಗಳನ್ನು ಮಾಡಲಾಗದ ಅಶಕ್ತರಿಗೆ ಭಾಗವತಧರ್ಮವೆಂದರೆ ನಾಮಸಂಕೀರ್ತನವೆ. ನಾಮಸಂಕೀರ್ತನದಿಂದ ಭಕ್ತಿ ಉದಿಸಿದಾಗ ಅದರಿಂದ ಪುರುಷಾರ್ಥ ಲಭಿಸುವುದು. ನರಕದುಃಖ ದೂರವಾಗುವುದು ಎಂದು ಮೇಲಿನ ಶ್ಲೋಕವು ಹೇಳುತ್ತಿದೆ'.

**ರೋಗಗಳ ಮೂಲಕಾರಣವನ್ನರಿತ ವೈದ್ಯನು ವಾತಪಿತ್ತಕಫಗಳೆಂಬ ತ್ರಿವಿಧ ದೋಷ ಪ್ರಕೋಪಗಳಲ್ಲಿ ಯಾವುದು ಹೆಚ್ಚು ಯಾವುದು ಕಡಿಮೆ ಎಂದು ಪರೀಕ್ಷಿಸಿ ತಿಳಿದು ಅದಕ್ಕನುಗುಣವಾಗಿ ಆಯುರ್ವೇದ ಚಿಕಿತ್ಸೆ ಮಾಡುವಂತೆ ಪಾಪಿಯು ಪಾಪಗಳನ್ನು ಪರೀಕ್ಷಿಸಿ ತಿಳಿದು, ಬೇಗನೆ ತಕ್ಕ ಪ್ರಾಯಶ್ಚಿತ್ತವನ್ನು ಬಲ್ಲವರಿಂದ ತಿಳಿದು ಮಾಡಿಕೊಳ್ಳಬೇಕು'. ವಿಲಂಬ ಮಾಡಿದರೆ ಅನರ್ಥವಿದೆ.**

ಶೌನಕಾದಿ ಋಷಿಗಳು ಸೂತರಲ್ಲಿ ಹೇಳಿಕೊಳ್ಳುತ್ತಾರೆ—

ಪ್ರಾಯೇಣಾಲ್ಪಾಯುಷೋ ಮರ್ತ್ಯಾಃ ಕಲಾವಸ್ಮಿನ್ ಯುಗೇ ಜನಾಃ ।
ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥

(ಭಾ.೧.೧.೧೦)

'ಈ ಕಲಿಯುಗದಲ್ಲಿ ಮಾನವರು ಹೆಚ್ಚಾಗಿ ಅಲ್ಪಾಯುಷಿಗಳು

ಸೋಮಾರಿಗಳೂ ಆಗಿರುತ್ತಾರೆ. ಬುದ್ಧಿಶಕ್ತಿಯೂ ಕಡಿಮೆ. ಜ್ಞಾನಸಾಧನೆಗೂ ನೂರಾರು ವಿಘ್ನಗಳು, ಜೊತೆಗೆ ರೋಗಾದಿ ಉಪದ್ರವಗಳೂ ಇರುತ್ತವೆ' ಎಂದು.

❖❖❖

—೩೫೨—

**ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳದವರಿಗೆ ನರಕ ನಿಶ್ಚಿತ**

**ನ ಚೇದಿಹೈವಾಪಚಿತಿಂ ಯಥಾಂಹಸಃ**
**ಕೃತಸ್ಯ ಕುರ್ಯಾನ್ಮನ ಉಕ್ತಿ ಪಾಣಿಭಿಃ ।**
**ಧ್ರುವಂ ಸ ವೈ ಪ್ರೇತ್ಯ ನರಕಾನುಪೈತಿ**
**ಯೇ ಕೀರ್ತಿತಾ ಮೇ ಭವತಸ್ತಿಗ್ಮಯಾತನಾಃ ॥**

(ಭಾ.೬.೧.೭)

ಇಹೈವ ಪ್ರಾಯಶ್ಚಿತ್ತಾಕೃತೌ ನಿಯಮೇನಾನರ್ಥಪ್ರಾಪ್ತ್ಯಾ ತದವಶ್ಯ ಮಿಹೈವ ಕರ್ತವ್ಯಮಿತ್ಯುಕ್ತಂ । ಸ ಕೋಽನರ್ಥೋಽ ಯದ್ಭಯಾತ್ತನ್ನಿವೃತ್ತಯೇ ಇಹೈವ ಪ್ರಾಯಶ್ಚಿತ್ತಂ ಆಶ್ವೇವಾನುಷ್ಠೇಯಮಿತ್ಯತೋಽಯಮೇವೇತ್ಯಾ ಶಯೇನಾಹ ॥ **ನ ಚೇದಿತಿ** ॥ ಮನಉಕ್ತಿಪಾಣಿಭಿಃ ಮನೋವಾಕ್ಕಾಯೈಃ । ಕೃತಸ್ಯ ಅಂಹಸಃ, ಅಪಚಿತಿಂ ಪ್ರತೀಕಾರಂ, ಯಥಾ ಯಥಾಯೋಗ್ಯಂ ಪಾಪತಾರತಮ್ಯಾನುಸಾರೇಣ ಇಹೈವ ನ ಕುರ್ಯಾತ್ ಚೇತ್ ತರ್ಹಿ, ಸ ಪ್ರಾಯಶ್ಚಿತ್ತಸ್ಯ ಅಕರ್ತಾ ಪುರುಷಃ, ಪ್ರೇತ್ಯ ಮೃತ್ವಾ, ಮೇ ಮಯಾ, ಭವತಃ ತುಭ್ಯಂ,ತೀಕ್ಷ್ಣವೇದನಾ ಯೇ ನರಕಾಃ ಕೀರ್ತಿತಾಃ

ಕೇವಲಂ ಕುಟುಂಬಪೋಷಣ ರತಸ್ಯ। ಅಭ್ಯಾಗತಾನ್ ವಕ್ರದೃಷ್ಟ್ಯಾ ನಿರೀಕ್ಷ್ಯ

ಕೇವಲಂ ವಿತ್ತಪೋಷಣರತಸ್ಯ ಸೂಚೀಮುಖಃ ಪರವಿತ್ತಾಪಹಾರಕಸ್ಯ ಯಾತನಾವಿಶೇಷಃ ॥

ಸಂಪಾದಿತಂ ದ್ರವ್ಯಮಸಂವಿಭಜ್ಯ ಭುಂಜತಃ ಕ್ರಿಮಿಭೋಜನೋ ನಾಮ ॥
ಆತ್ಮಪ್ರಶಂಸಾಂ ಮಹನ್ನಿಂದಾಂ ಚ ಕುರ್ವತಃ ಕ್ಷಾರಕರ್ದಮಾಖ್ಯಃ ॥
ಅಜಿತೇಂದ್ರಿಯಸ್ಯ ಅಗಮ್ಯಾಗಮನಂ ಕರ್ತುಃ
ತಪ್ತಲೋಹಮಯಸ್ತ್ರ್ಯಾಲಿಂಗನರೂಪಃ ॥

वेदोदितं मार्गं परित्यज्य

पाषंडमार्गमाश्रितस्य असिपत्रवनाख्यः ॥

केवलमुदरंभरणाय दंभेन पशुवधपूर्वकं

यज्ञस्य कर्तेति अभिमंता तस्य वैशसो नाम ॥

निर्निमित्तं प्राणिनामुद्वेजकस्य दंदशूकाख्यः ॥

सद्धर्ममार्गविनाशकस्य वैतरणी ॥

एवमादिरूपेण ये कथिताः तान् नरकान् ध्रुवं निश्चयेन प्राप्नोति ।

इहैव प्रायश्चित्ताकृतौ ईदृशोऽनर्थो भवतीति भावः । **यथाहुः—**

''यस्त्विह वा अतिथीनभ्यागतान्वा गृहपतिरसकृदुपगतमन्युर्दिधक्षुरिव पापचक्षुषा निरीक्षेत्तस्य चापि निरये पापदृष्टेरक्षिणी वक्रतुंडा गृध्रकंककाकबकादयः प्रसह्योरुबलादुत्पाटयंति॥

यस्त्विह वा अर्थाभिमतिरहंकृतिस्तिर्यक्प्रेक्षणः सर्वतः शंकी व्ययनाशचिंतया परिशुष्यमाणहृदयवदनो निर्वृतिमनुपगतो ग्रह इवार्थमभिरक्षति स च प्रेत्य तत्संपादनोत्कर्षण संरक्षण शमलग्रहः सूचीमुखे नरके निपतति, यत्र वित्तग्रहं पापपुरुषं धर्मराजपुरुषा वायका इव सर्वतोऽंगेषु सूत्रैः परिवयंति ॥

यस्त्विह वै स्तेयेन बलाद्वा हिरण्यरजतादीनि ब्राह्मणस्यापहरत्यन्यस्य वानापदि पुरुषस्तममुत्र राजन् यमपुरुषा अयस्मयैरग्निवर्णैः संदंशैस्त्वचि निष्कालयंति ॥

यस्त्विह वा असंविभज्याश्नाति यत्किंचनोपनतं निवृत्तयज्ञोपायमसंस्कृतं स परत्र क्रिमिभोजने नरकाधमे निपतति । तत्र सहस्रयोजने क्रिमिकुंडे क्रिमिभूतः स्वयं क्रिमिभिरेव भक्ष्यमाणः क्रिमिभोजनो यावदप्रदत्ताकृतनिर्वेशमात्मानं यातयते ।

यस्त्विहात्मसंभावनेन स्वयमवमो जन्मतपोविद्याचारवर्णाश्रमवतो वरीयसो न बहुमन्यते स मृतक एव मृत्वा

ಕ್ಷಾರಕರ್ದಮೇ ನಿರಯೇಽವಾಕ್‌ಶಿರಾ ನಿಪಾತಿತೋ ದುರಂತಾ ಯಾತನಾ ಹ್ಯಶ್ನುತೇ ॥

ಯಸ್ತ್ವಿಹ ವಾ ಅಗಮ್ಯಾಂ ಸ್ತ್ರಿಯಂ ಪುರುಷಂ ವಾ ಯೋಷಿದಪಿ ಗಚ್ಛತಿ ತಾವಮುತ್ರ ಕಶಯಾ ತಾಡಯಂತಸ್ತರ್ಜಯಂತಸ್ತಪ್ತಯಾ ಸೂರ್ಮ್ಯಾ ಲೋಹಮಯ್ಯಾ ಪುರುಷಮಾಲಿಂಗಯಂತಿ, ಸ್ತ್ರಿಯಂ ಚ ಪುರುಷರೂಪಯಾ ಸೂರ್ಮ್ಯಾ ॥

ಯಸ್ತ್ವಿಹ ವೈ ನಿಜವೇದಪಥಾದನಾಪದ್ಯಪಗತಃ ಕುಪಥಂ ಪಾಖಂಡಂ ಚೋಪಗತಸ್ತಮಸಿಪತ್ರವನಂ ಪ್ರವೇಶ್ಯ ಕಶಯಾ ಪ್ರಹರಂತಿ । ತತ್ರ ಹಾಸಾದಿತ ಇತಸ್ತತೋ ಧಾವಮಾನ ಉಭಯತೋಧಾರೈಸ್ತಾಲವನಾಸಿಪತ್ರೈಶ್ಛಿದ್ಯಮಾನ-ಸರ್ವಾಂಗೋ ಹಾ ಹತೋಽಸ್ಮೀತಿ ಪರಮಯಾ ವೇದನಯಾ ಮೂರ್ಚ್ಛಿತಃ ಪದೇ ಪದೇ ನಿಪತತಿ ।

ಯೇ ತ್ವಿಹ ವೈ ದಾಂಭಿಕಾ ದಂಭಯಜ್ಞೇನ ಪಶೂನ್ ವಿಶಸಂತಿ ತಾನಮುಷ್ಮಿನ್ ಲೋಕೇ ವೈಶಸೇ ನರಕೇ ಯಾತಯಿತ್ವಾ ನಿರಯಪತಯಃ ಪಾತಯಿತ್ವಾ ವಿಶಸಂತಿ ॥

ಯೇ ತ್ವಿಹ ವೈ ಭೂತಾನ್ಯುದ್ವೇಜಯಂತಿ ನರಾ ಅತ್ಯುದ್ಬಣಸ್ವಭಾವಾ ಯಥಾ ದಂದಶೂಕಾಸ್ತೇಽಪಿ ಪ್ರೇತ್ಯ ನರಕೇ ದಂದಶೂಕಾಖ್ಯೇ ನಿಪತಂತಿ । ಯತ್ರ ನೃಪ ದಂದಶೂಕಾಃ ಪಂಚಮುಖಾಃ ಸಪ್ತಮುಖಾ ಉಪಸೃತ್ಯ ಉತ್ಪತ್ಯ ಗ್ರಸಂತಿ ಯಥಾ ಬಿಲೇಶಯಾಃ ॥

ಯೇ ತ್ವಿಹ ರಾಜನ್ಯಾ ರಾಜಪುರುಷಾ ವಾ ಪಾಷಂಡಾಃ ಧರ್ಮಸೇತುಂ ಭಿಂದಂತಿ ತೇ ಸಂಪರೇತ್ಯ ವೈತರಣ್ಯಾಂ ನಿಪತಂತಿ ಭಿನ್ನಮರ್ಯಾದಾಸ್ತಸ್ಯಾಂ ನಿರಯಪರಿಖಾಭೂತಾಯಾಂ ನದ್ಯಾಂ ಯಾದೋಗಣೈರಿತಸ್ತತೋ ಭಕ್ಷ್ಯಮಾಣಾ ಆತ್ಮನಾ ನವಿಯುಜ್ಯಮಾನಾಸ್ತೇ ಸ್ವಾಸುಭಿರುಹ್ಯಮಾನಾಶ್ಚೌಘೇನ ಕರ್ಮಪಾಕ-ಮನುಸ್ಮರಂತೋ ವಿಣ್ಮೂತ್ರಪೂಯಶೋಣಿತಕೇಶನಖಾಸ್ಥಿಮೇದೋ-ಮಾಂಸವಸಾವಾಹಿನ್ಯಾಮುಪತಪ್ಯಂತೇ' ಇತಿ ॥

❖❖❖

ಶುಕಮುನಿ ಉಪದೇಶಿಸಿದರು—

'ಮನೋವಾಕ್ಕಾಯಗಳಿಂದ ಮಾನವನು ಮಾಡುವ ಪಾಪಗಳಿಗೆ ಈ ಜನ್ಮದಲ್ಲಿಯೇ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಮರಣಾನಂತರ ನಿಶ್ಚಯವಾಗಿ ಉಗ್ರಯಾತನೆ ತುಂಬಿದ ನರಕ ಶಿಕ್ಷೆಗೊಳಗಾಗುತ್ತಾನೆ. ಆ ದಾರುಣಯಾತನೆಗಳನ್ನು ನಿನಗೆ ವರ್ಣಿಸಿದ್ದೇನೆ.'

**ಪ್ರಧಾನ ನರಕಗಳು ಇವು ಹತ್ತು—**

(೧) **ಪರ್ಯಾವರ್ತ ನರಕ**—ತನ್ನ ಕುಟುಂಬವನ್ನೇ ಪೋಷಿಸುತ್ತ ಮನೆಗೆ ಬಂದವರನ್ನು ಕೆಟ್ಟ ದೃಷ್ಟಿಯಿಂದ ನೋಡುವವರಿಗೆ ಈ ನರಕ.

(೨) **ಸೂಚೀಮುಖ ನರಕ**—ತನ್ನ ಧನರಕ್ಷಣೆಗಾಗಿ ಧರ್ಮಬಾಹಿರ ನಾದವನಿಗೆ

(೩) **ಸಂದಂಶ ನರಕ**—ಪರದ್ರವ್ಯಾಪಹಾರಿಗೆ.

(೪) **ಕ್ರಿಮಿಭೋಜನ ನರಕ**— ಸಂಪಾದಿಸಿದ್ದನ್ನು ಎಲ್ಲರಿಗೂ ಹಂಚದೆ ತಾನೊಬ್ಬನೆ ಉಣ್ಣುವವನಿಗಿದು ನರಕ.

(೫) **ಕ್ಷಾರಕರ್ದಮ ನರಕ**—ಆತ್ಮಪ್ರಶಂಸೆ ಮಹಾತ್ಮರ ನಿಂದೆಗಳನ್ನು ಮಾಡುವವನಿಗೆ ಇದು ನರಕ.

(೬) **ತಪ್ತಸೂರ್ಮಿ ನರಕ**—ಇಂದ್ರಿಯ ನಿಗ್ರಹವಿಲ್ಲದೆ ಅಗಮ್ಯಾಗಮನ ಮಾಡುವ ಪುರುಷನಿಗೆ ಕಾದಕಬ್ಬಿಣದ ಸ್ತ್ರೀಮೂರ್ತಿಯ ಆಲಿಂಗನ ಮಾಡಿಸುವ ನರಕ. ಸ್ತ್ರೀಗೂ ಇದೇ ಶಿಕ್ಷೆ ಇದೆ.

(೭) **ಅಸಿಪತ್ರವನ ನರಕ**—ವೇದೋಕ್ತಧರ್ಮವನ್ನು ಆಪತ್ತಿಲ್ಲದಿದ್ದರೂ ಪರಿತ್ಯಜಿಸಿ ಪಾಖಂಡಮಾರ್ಗವನ್ನು ಹಿಡಿದವನಿಗಿದು ನರಕ.

(೮) **ವೈಶಸ ನರಕ**—ಮಾಂಸಭಕ್ಷಣಕ್ಕಾಗಿ ದಂಭದಿಂದ ಪಶುಬಲಿಯಜ್ಞ ಮಾಡುವವನಿಗೆ ಈ ನರಕ.

(೯) **ದಂದಶೂಕ ನರಕ**—ನಿರ್ನಿಮಿತ್ತವಾಗಿ ಮೋಜಿಗಾಗಿ ಮೂಕ ಪ್ರಾಣಿಗಳಿಗೆ ಹಿಂಸೆ ಮಾಡುವವನಿಗೆ ಈ ನರಕ.

(೧೦) **ವೈತರಣಿ ನರಕ**—ಸದ್ಧರ್ಮಮಾರ್ಗವನ್ನು ಕೆಡಿಸುವವನಿಗೆ ಈ ನರಕ.

ಬದುಕಿದ್ದಾಗಲೇ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳದವರಿಗೆ ಮರಣಾನಂತರ ಯಮರಾಜ ನೀಡುವ ಶಿಕ್ಷೆಗಳು ಇವು.

ಭಾಗವತದಲ್ಲಿ ಈ ಹತ್ತು ನರಕಗಳ ವರ್ಣನೆ ಹೀಗೆ ಬಂದಿದೆ—

(೧) ಯಸ್ತ್ವಿಹ ವಾ ಅತಿಥೀನ ಭ್ಯಾಗತಾನ್ ವಾ ಗೃಹಪತಿರಸಕೃದುಪಗತ

ಮನ್ಯುರ್ದಿಧಕ್ಷುರಿವ ಪಾಪಚಕ್ಷುಷಾ ನಿರೀಕ್ಷತೇ ತಸ್ಯ ಚಾಪಿ ನಿರಯೇ ಪಾಪದೃಷ್ಟೇರಕ್ಷಿಣೀ ವಕ್ರತುಂಡಾ ಗೃಧ್ರ ಕಂಕ ಕಾಕ ಬಲಾದಯಃ ಪ್ರಸಹ್ಯೋರು ಬಲಾದುತ್ಪಾಟಯಂತಿ॥ (ಭಾ.೫.೨೬.೩೭)

(೨) ಯಸ್ತ್ವಿಹ ವಾ ಅರ್ಥಾಭಿಮತಿರಹಂಕೃತಿಸ್ತಿರ್ಯಕ್‌ಪ್ರೇಕ್ಷಣಃ ಸರ್ವತಃಶಂಕೀ ವ್ಯಯ ವಿನಾಶಚಿಂತಯಾ ಪರಿಶುಷ್ಯಮಾಣ ಹೃದಯವದನೋ ನಿರ್ವೃತಿ ಮನುಪಗತೋ ಗ್ರಹ ಇವಾರ್ಥಮಭಿರಕ್ಷತಿ ಸ ಪಾಪೀ ಪ್ರೇತ್ಯ ತತ್ ಸಂಪಾದನೋತ್ಕರ್ಷಣ ಸಂರಕ್ಷಣಶಮಲಗ್ರಹಃ ಸೂಚೀಮುಖೇ ನರಕೇ ನಿಪತತಿ। ಯತ್ರ ಹ ವಿತ್ತಗ್ರಹಂ ಪಾಪಪುರುಷಂ ಧರ್ಮರಾಜ ಪುರುಷಾ ವಾಯಕಾ ಇವ ಸರ್ವತೋಽಂಗೇಷು ಪರಿವಯಂತಿ॥ (ಭಾ.೫.೨೬.೩೮)

(೩) ಯಸ್ತ್ವಿಹ ವೈ ಸ್ತೇಯೇನ ಬಲಾದ್ವಾ ಹಿರಣ್ಯರಜತಾದೀನಿ ಬ್ರಾಹ್ಮಣಸ್ಯಾಪಹರತ್ಯನ್ಯಸ್ಯ ವಾಽನಾಪದಿ ಪುರುಷಸ್ತಮಮುತ್ರ ರಾಜನ್ ಯಮಪುರುಷಾ ಆಯಸ್ಮಯೈರಗ್ನಿವರ್ಣೈಃ ಸಂದಂಶೈಸ್ತ್ವಚಿ ವಿಷ್ಕಾಳಯಂತಿ ॥ (ಭಾ.೫.೨೬.೨೧)

(೪) ಯಸ್ತ್ವಿಹ ವಾ ಅಸಂವಿಭಜ್ಯಾಶ್ನಾತಿ ಯತ್ ಕಿಂಚನೋಪನತಂ ನಿವೃತ್ತಯಜ್ಞೋಪಾಯಂ ಅಸಂಸ್ಕೃತಂ ಸ ಪರತ್ರ ಕೃಮಿಭೋಜನೇ ನರಕಾಧಮೇ ನಿಪತತಿ ತತ್ರ ಸಹಸ್ರ ಯೋಜನೇ ಕೃಮಿಕುಂಡೇ ಕೃಮಿಭೂತಃ ಸ್ವಯಂ ಕೃಮಿಭಿರೇವ ಭಕ್ಷ್ಯಮಾಣಃ ಕೃಮಿಭೋಜನೋ ಯಾವದಪ್ರದತ್ತಾ-ಕೃತನಿರ್ವೇಶಮಾತ್ಮಾನಂ ಯಾತಯತೇ ॥ (ಭಾ.೫.೨೬.೨೦)

(೫) ಅಥಚ ಯಸ್ತ್ವಿಹಾತ್ಮಸಂಭಾವನೇನ ಸ್ವಯಮವಮೋ ಜನ್ಮ ತಪೋವಿದ್ಯಾಚಾರ ವರ್ಣಾಶ್ರಮವತೋ ವರೀಯಸೋ ನ ಬಹು ಮನ್ಯತೇ ಸ ಮೃತಕ ಏವ ಮೃತ್ವಾ ಕ್ಷಾರಕರ್ದಮೇ ನಿರಯೇಽವಾಕ್ಶಿರಾ ನಿಪಾತಿತೋ ದುರಂತಾ ಯಾತನಾ ಹ್ಯಶ್ನುತೇ ॥ (ಭಾ.೫.೨೬.೩೨)

(೬) ಯಸ್ತ್ವಿಹ ವಾ ಅಗಮ್ಯಾಂ ಸ್ತ್ರಿಯಂ ಪುರುಷಂ ವಾ ಯೋಷಿದಪಿ ವಾ ಗಚ್ಛತಿ ತಾವಮುತ್ರ ಕಶಯಾ ತಾಡಯಂತಸ್ತರ್ಜಯಂತಸ್ತಪ್ತಯಾ ಸೂರ್ಮ್ಯಾ ಲೋಹಮಯ್ಯಾ ಪುರುಷಮಾಲಿಂಗಯಂತಿ ಸ್ತ್ರಿಯಂ ಚ ಪುರುಷರೂಪಯಾ ಸೂರ್ಮ್ಯಾ ॥ (ಭಾ.೫.೨೬.೨೨)

(೭)ಯಸ್ತ್ವಿಹ ವೈ ನಿಜವೇದಪಥಾದನಾಪದ್ಯಪಗತಃ ಕುಪಥಾ ಪಾಷಂಡಂ ಚೋಪಗತಸ್ತಮಸಿಪತ್ರವನಂ ಪ್ರವೇಶ್ಯ ಕಶಯಾ ಪ್ರಹರಂತಿ । ತತ್ರ ಹಾಸಾದಿತ ಇತಸ್ತತೋ ಧಾವಮಾನ ಉಭಯತೋಧಾರೈಸ್ತಾಳವನಾಸಿಪತ್ರೈಶ್ಛಿದ್ಯಮಾನ ಸರ್ವಾಂಗೋ ಹಾ ಹತೋಸ್ಮೀತಿ ಪರಯಾ ವೇದನಯಾ ಮೂರ್ಛಿತಃ ಪದೇಪದೇ ನಿಪತತಿ ।। (ಭಾ.೫.೨೬.೧೭)

(೮) ಯೇತ್ವಿಹ ವೈ ಡಾಂಭಿಕಾ ಡಂಭಯಜ್ಞೇನ ಪಶೂನ್ ವಿಶಸಂತಿ ತಾನಮುಷ್ಮಿಂಲ್ಲೋಕೇ ವೈಶಸೇ ನರಕೇ ಯಾತಯಿತ್ವಾ ನಿರಯ ಪತಯಃ ಪಾತಯಿತ್ವಾ ವಿಶಸಂತಿ ।। (ಭಾ.೫.೨೬.೨೭)

(೯) ಯೇತ್ವಿಹವೈ ಭೂತಾನ್ಯುದ್ವೇಜಯಂತಿ ನರಾ ಅತ್ಯುದ್ವಣಸ್ವಭಾವಾ ಯಥಾ ದಂದಶೂಕಾಸ್ತೇಽಪಿ ಪ್ರೇತ್ಯ ನರಕೇ. ದಂದಶೂಕಾಖ್ಯೇ ನಿಪತಂತಿ। ಯತ್ರ ನೃಪ ದಂದಶೂಕಾಃ ಪಂಚಮುಖಾಃ ಸಪ್ತಮುಖಾ ಉಪಸೃತ್ಯ ಉತ್ವತ್ಯ ಗ್ರಸಂತಿ ಯಥಾ ಬಿಲೇಶಯಾಃ।। (ಭಾ.೫.೨೬.೩೫)

(೧೦) ಯೇ ತ್ವಿಹ ವೈ ರಾಜನ್ಯಾ ರಾಜಪುರುಷಾ ವಾ ಪಾಷಂಡಾ ಧರ್ಮಸೇತುಂ ಭಿಂದಂತಿ ತೇ ಸಂಪರೇತ್ಯ ವೈತರಣ್ಯಾಂ ನಿಪತಂತಿ ಭಿನ್ನಮರ್ಯಾದಾಃ । ತಸ್ಯಾಂ ನಿರಯಪರಿಖಾಭೂತಾಯಾಂ ನದ್ಯಾಂ ಯಾದೋಗಣೈರಿತಸ್ತತೋ ಭಕ್ಷ್ಯಮಾಣಾ ಆತ್ಮನಾ ನ ವಿಯುಜ್ಯಮಾನಾಸ್ತೇ ಸ್ವಾಸುಭಿರುಹ್ಯಮಾನಾಶ್ಚೌಘೇನ ಕರ್ಮಪಾಕಮನುಸ್ಮರಂತೋ ವಿಣ್ಮೂತ್ರ ಪೂಯ ಶೋಣಿತ ಕೇಶ ನಖಾಸ್ಥಿ ಮೇದೋ ಮಾಂಸ ವಸಾ ವಾಹಿನ್ಯಾ ಮುಪತಪ್ಯಂತೇ ।। (ಭಾ.೫.೨೬.೨೬)

ಈ ಭಾಗವತಗದ್ಯಗಳ ಅರ್ಥ ಹೀಗೆ—

(೧) ಅತಿಥಿ ಅಭ್ಯಾಗತರನ್ನು ನೋಡಿ ಅವರಿಗಾಗಿ ಧನವ್ಯಯವಾಗುವುದೆಂದು ಸಿಟ್ಟಿನಿಂದ ಕೆಟ್ಟಕಣ್ಣಿಂದ ನೋಡಿ ಸುಟ್ಟು ಬಿಡುವನಂತಿರುವ ಗೃಹಸ್ಥನು ಪರ್ಯಾವರ್ತನರಕವನ್ನು ಹೊಂದುವನು. ಅಲ್ಲಿ ಡೊಂಕು ಕೊಕ್ಕಿನ ಹದ್ದು ರಣಹದ್ದು ಕಾಗೆ ಕೊಕ್ಕರೆ ಮುಂತಾದ ಕ್ರೂರಪಕ್ಷಿಗಳು ಅವನ ಕಣ್ಣುಗುಡ್ಡೆಗಳನ್ನು ಕೀಳುವವು.

(೨) ಧನ ಮದದಿಂದ ಅಹಂಕಾರ ಯುಕ್ತನಾಗಿ ಸೊಟ್ಟಕಣ್ಣಿಂದ ನೋಡುವನು. ಎಲ್ಲರನ್ನೂ ಹಣ ಕೀಳುವರೆಂದು ಅನುಮಾನದಿಂದಲೆ ಕಾಣುವನು. ಮನೆಯಲ್ಲಿಟ್ಟ ಹಣದ ರಕ್ಷಣೆ ಮಾಡುವ ಚಿಂತೆಯಲ್ಲಿ ಮನಃಶಾಂತಿ ಕಳೆದು ಹೋಗುತ್ತಿದ್ದರೂ ಧನಪಿಶಾಚಿಯಂತೆ ಹಣವನ್ನು ಭದ್ರವಾಗಿ ಬಚ್ಚಿಡುವನು. ಅವನು ಸೂಚೀಮುಖ ಎಂಬ ನರಕದಲ್ಲಿ ಬೀಳುವನು. ಯಮ ದೂತರು ಸೂಜಿಗಳಿಂದ ಅವನ ಎಲ್ಲ ಅಂಗಗಳನ್ನೂ ಚುಚ್ಚಿ ದಾರದಿಂದ ಹೊಲಿಯುತ್ತಾರೆ, ದರ್ಜಿಯು ಹರಕುಚಿಂದಿಗಳನ್ನು ಹೊಲಿಯುವಂತೆ.

(೩) ಆಪತ್ತಿಲ್ಲದಿದ್ದಾಗಲೂ ಬ್ರಾಹ್ಮಣರ ಅಥವಾ ಇತರರ ಬಂಗಾರ ರತ್ನಾಭರಣಾದಿಗಳನ್ನು ಕಳವಿಂದಾಗಲಿ ದರೋಡೆಯಿಂದಾಗಲಿ ಅಪಹರಿಸು ವವನು ಸಂದಂಶ ಎಂಬ ನರಕದಲ್ಲಿ ಬೀಳುತ್ತಾನೆ. ಯಮಭಟರು ಬೆಂಕಿಯಂತೆ ಕೆಂಪಗೆ ಕಾದ ಇಕ್ಕುಳ(ಸಂದಂಶ)ದಿಂದ ಆ ಪಾಪಿಯ ಚರ್ಮ ಕಿತ್ತು ಸುಲಿಯು ತ್ತಾರೆ.

(೪) ಅನ್ನ ನೀರು ಮುಂತಾದುವನ್ನು ಅತಿಥಿ ಬಾಲ ವೃದ್ಧ ಭೃತ್ಯರು ಮುಂತಾದವರಿಗೆ ಯಥಾಯೋಗ್ಯವಾಗಿ ಹಂಚದೆ ತಾನೊಬ್ಬನೆ ಮಿಷ್ಟಾನ್ನ ಉಣ್ಣುತ್ತಾನೆ. ದೇವರಿಗೆ ನೈವೇದ್ಯ ಸಲ್ಲಿಸದೆ ದೇವತೆಗಳಿಗೆ ಹವಿಸ್ಸನ್ನು ನೀಡದೇ ತಿನ್ನುತ್ತಾನೆ. ಇವನು ಕೃಮಿಭೋಜನ ಎಂಬ ಕೆಟ್ಟ ನರಕದಲ್ಲಿ ಬೀಳುವನು. ನೂರಾರು ಯೋಜನ ವಿಸ್ತಾರದ ಕ್ರಿಮಿಕುಂಡದಲ್ಲಿ ತಾನೂ ಕೃಮಿಯಾಗಿ ಬಿದ್ದು ಕೃಮಿಗಳನ್ನೇ ನುಂಗುತ್ತಾನೆ. ಬೇರೆ ಕೃಮಿಗಳಿಗೆ ತಾನು ಆಹಾರವಾಗುತ್ತಾನೆ.

(೫) ತಾನು ಅಧಮನೇ ಆಗಿದ್ದು ಉತ್ತಮನೆಂದು ಬೀಗುತ್ತಾನೆ. ಉತ್ತಮರ ಕುಲ ತಪಸ್ಸು ವಿದ್ಯೆ ಆಚಾರ ವರ್ಣಾಶ್ರಮಗಳನ್ನು ಏನೂ ಗೌರವಿಸುವುದಿಲ್ಲ. ಈತ ಜೀವನ್ ಮೃತನೇ ಸರಿ. ಮೃತನಾಗಿ ಕ್ಷಾರಕರ್ದಮ ಎಂಬ ನರಕದಲ್ಲಿ ಬೀಳುತ್ತಾನೆ. ಯಮಭಟರು ಅವನನ್ನು ಉಪ್ಪುಕೆಸರಿನಲ್ಲಿ ತಲೆಕೆಳಗಾಗಿ ಬೀಳಿಸುತ್ತಾರೆ. ಕೊನೆಯಿಲ್ಲದ ಯಾತನೆಗಳನ್ನು ಅವನು ಉಣಬೇಕಾಗುತ್ತದೆ.

(೬) ಇಂದ್ರಿಯನಿಗ್ರಹ ಮಾಡಿಕೊಳ್ಳದೆ ಪುರುಷನಾಗಲಿ ಸ್ತ್ರೀಯಾಗಲಿ ವ್ಯಭಿಚಾರ ಮಾಡಿದರೆ ಅಗಮ್ಯ ಸ್ತ್ರೀಪುರುಷರನ್ನು ಕೂಡಿದರೆ ಇಬ್ಬರನ್ನೂ

ತಪ್ತಸೂರ್ಮಿ ಎಂಬ ನರಕದಲ್ಲಿ ಹಾಕಿ ಚಾಟಿಯಿಂದ ಹೊಡೆಯುತ್ತ ಹೊರಗೆ ಕಾದಕಬ್ಬಿಣದ ಹೆಣ್ಣು ಪ್ರತಿಮೆಯನ್ನು ಪುರುಷನೂ ಕಾದಕಬ್ಬಿಣದ ಪುರುಷ ಪ್ರತಿಮೆಯನ್ನು ಸ್ತ್ರೀಯೂ ಅಪ್ಪಿಕೊಳ್ಳುವಂತೆ ಮಾಡುತ್ತಾರೆ.

(೭) ಏನೂ ಆಪತ್ತಿಲ್ಲದಿದ್ದರೂ ತನ್ನ ವೇದವಿಹಿತವಾದ ಮಾರ್ಗವನ್ನು ಬಿಟ್ಟು ದುರ್ಮಾರ್ಗದಿಂದ ಪಾಷಂಡಿಯಾದರೆ ಅಸಿಪತ್ರವನದಲ್ಲಿ ಅವನಿಗೆ ಚಾಟಿ ಏಟುಗಳ ಶಿಕ್ಷೆ ನೀಡುತ್ತಾರೆ. ಆತ ಆಕಡೆ ಈಕಡೆ ಧಾವಿಸಿದರೆ ಎರಡೂ ಕಡೆ ಹರಿತವಾದ ಅಲಗುಳ್ಳ ಕತ್ತಿಯಂಥ ತಾಳೆ ಎಲೆಗಳು ಅವನ ಸರ್ವಾಂಗ ಸೀಳುತ್ತವೆ. ಅಯ್ಯೋ ಸತ್ತೆನೆಂದು ಅಸಹ್ಯವೇದನೆಯಿಂದ ಪದೇಪದೇ ಮೂರ್ಛಿತನಾಗುತ್ತಾನೆ.

(೮) ಮಾಂಸಭಕ್ಷಣಕ್ಕಾಗಿ ದಂಭದಿಂದ ಪಶುಬಲಿ ಯಜ್ಞಮಾಡುತ್ತ ಪಶುಗಳನ್ನು ಕೊಂದು ಅವಯವಗಳನ್ನು ಕೀಳುವವರು. ವೈಶಸ ಎಂಬ ನರಕದಲ್ಲಿ ಬೀಳುತ್ತಾರೆ. ಅಲ್ಲಿ ಅವರನ್ನು ಹೊಡೆದು ಬೀಳಿಸಿ ಅಂಗಾಂಗಗಳನ್ನು ಕೀಳುತ್ತಾರೆ.

(೯) ನಿಷ್ಕಾರಣವಾಗಿ ಮೂಕಪ್ರಾಣಿಗಳನ್ನು ಪೀಡಿಸಿ ಭಯಪಡಿಸುವ ಕ್ರೂರಸರ್ಪಗಳಂಥ ಕ್ರೂರಸ್ವಭಾವದವರು ದಂದಶೂಕ ನರಕದಲ್ಲಿ ಬೀಳುತ್ತಾರೆ. ಅಲ್ಲಿ ಹೆಬ್ಬಾವಿನ ಗಾತ್ರದ ಐದೈದು ಏಳೇಳು ಹೆಡೆಗಳುಳ್ಳ ಸರ್ಪಗಳು ಬಂದು ಇವರನ್ನು ನುಂಗುತ್ತವೆ.

(೧೦) ರಾಜರಾಗಲಿ ರಾಜಭಟರಾಗಲಿ ತಾವೇ ಪಾಷಂಡರಾಗಿ ಧರ್ಮ ನಿಯಮಗಳನ್ನು ಮುರಿದರೆ ವೈತರಣಿನರಕದಲ್ಲಿ ಬೀಳುತ್ತಾರೆ. ನರಕಗಳ ಸುತ್ತಲೂ ಕಂದಕವಾಗಿರುವ ಈ ವೈತರಣೀ ನದಿಯಲ್ಲಿ ಮೊಸಳೆ ಮುಂತಾದ ಜಲಜಂತುಗಳು ಕಚ್ಚಿ ತಿನ್ನುತ್ತವೆ. ಆದರೂ ಅವರಿಗೆ ಪ್ರಾಣವಿಯೋಗ ವಾಗುವುದಿಲ್ಲ. ಮಲಮೂತ್ರ ಕೀವು ರಕ್ತ ಕೂದಲು ಉಗುರು ಎಲುಬು ಕೊಬ್ಬು ಮಾಂಸಗಳು ತುಂಬಿರುವ ನದಿಯಲ್ಲಿ ಮೊಸಳೆ ತಿಮಿಂಗಿಲ ಮುಂತಾದವುಗಳಿಂದ ಕಡಿಸಿಕೊಂಡು ಸಾವಿಲ್ಲದೆ ಯಾತನಾಶರೀರದಲ್ಲಿ ಯಾತನೆಗಳನ್ನು ಉಣುತ್ತಲೆ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಾರೆ.

❖❖❖

## –೩೫೩–

## ನಾಮಸಂಕೀರ್ತನೆ ಬಹುಜನ್ಮ ಸಾಧನೆಯಿಂದ ಮಾತ್ರ ಲಭ್ಯ

ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ ।
ವಿಕ್ರುಶ್ಯ ಪುತ್ರಮಘವಾನ್ ಯದಜಾಮಿಲೋಽಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥ (ಭಾ.೬.೩.೨೪)

ಏವಂವಿಧಸ್ಯಾಪಿ ನರಕದುಃಖಸ್ಯ ಶ್ರೀಹರಿನಾಮಕೀರ್ತನಮೇವ ಪರಿಹಾರಕ ಮಿತಿ ತದೇವ ಮಹತ್ಪ್ರಾಯಶ್ಚಿತ್ತಂ ತ್ರಿವಿಧಾನಾಮಪಿ ಪಾಪಾನಾಮಿತಿ ಸಂತತಮಾದರೇಣಾನುಷ್ಠೇಯಂ ಕಿಮಶಕ್ತಾನಾಂ ಭವತಾಂ ಭಾಗವತ ಧರ್ಮಾನುಷ್ಠಾನಚಿಂತಯೇತಿ ಭಾವೇನ ತೇನ ಫಲಮಪಿ ಪೂರ್ವತನಾನಾಂ ದೃಷ್ಟಮಿತ್ಯಾಹ ॥ **ಏತಾವತಾಲಮಿತಿ** ॥ ಗುಣಕರ್ಮನಾಮ್ನಾಂ ಸಮ್ಯಕ್ ಕೀರ್ತನಮಿತಿ ಯತ್ ಏತಾವತಾ ಭಾಗವತಧರ್ಮೇಣಾನುಷ್ಠಿತೇನ ಪುಂಸಾಮಘನಿವೃತ್ತಯೇ ಅಲಂ ಇದಮೇಕಮೇವ ನಾರಕದುಃಖಪ್ರಾಪಕಪಾಪ ಪರಿಹಾರಸಮರ್ಥಂ । ಕುತ ಏವಂ ನಿಶ್ಚೀಯತ ಇತ್ಯತ ಉಕ್ತಂ । **ವಿಕ್ರುಶ್ಯೇತಿ** ॥ ಪಾತಕಿಪ್ರವರತಯಾ ಪ್ರಸಿದ್ಧೋಽಪ್ಯಜಾಮಿಲೋ ನಾಮ ವಿಪ್ರೋ ದಾಸ್ಯಾಂ ಜಾತಂ ಪುತ್ರಂ ನಾರಾಯಣಸಂಜ್ಞಿತಂ ಮರಣಕಾಲೇ ಸಕೃದೇಕದೈವ ವಿಕ್ರುಶ್ಯ ಮುಕ್ತಿಂ ಗತವಾನ್ ಇತಿ ಯತ್ ಯಸ್ಮಾತ್ತಸ್ಮಾತ್ ॥ **ಇದಮುದಿತಂ ಭವತಿ**— ಅಜಾಮಿಲೋ ನಾಮ ವಿಪ್ರೋ ನಷ್ಟಸದಾಚಾರೋ ದಾಸೀಸಂಗನಿರತಃ ಚೌರ್ಯಾದಿನೋದರಂಭರಃ ತಸ್ಯಾಂ ದಶ ಪುತ್ರಾನುತ್ಪಾದ್ಯ ಅಂತೇ ವಯಸಿ ಉತ್ಪನ್ನೇ ದಶಮೇ ನಾರಾಯಣನಾಮಕೇ ಪುತ್ರೇ ಕಲಭಾಷಣಾದಿನಾ ಮನೋರಮೇ ಪ್ರೀತ್ಯಾ ಭೋಜನಾದೌ ತಮೇವ ಲಾಲಯನ್ ತಸ್ಮಿನ್ನೇವ ಸ್ನೇಹಯುತೋ ಮರಣಸಮಯೇ ಸುದೂರಂ ಕ್ರೀಡಾಯಾಮಾಸಕ್ತಂ ಬಾಲಮುಚ್ಚಸ್ವರೇಣಾಹ್ವಯಾಮಾಸ । ತಾವತ್ಯೈವ ವಿಷ್ಣುದೂತೈರಾಗತ್ಯೈಃ, ಯಮದೂತಾ ವಿಪ್ರಾಭಾಸಂ ಪಾಶೈರ್ನಿಬಧ್ಯ ನೇತುಮಾಗತಾ ನಿವಾರಿತಾಃ । ತತಃ ಸ ಪಾಪಕರ್ಮಣಃ ಪಶ್ಚಾತ್ತಾಪೇನ ನಿವೃತ್ತೋ ಭಗವತಿ ಮನೋ ನಿಧಾಯ ಮೃತೋ ವಿಷ್ಣುದೂತೈರೇವ ನೀತಃ । ಯದೇವಂ ಪುತ್ರಸ್ನೇಹೇನ ತಸ್ಮಿನ್ ಸಂಕೇತಿತಭಗವನ್ನಾಮಗ್ರಹಣಮಾತ್ರೇಣ ಸದ್ಯೋ ಯಮಪಾಶಾನ್ಮುಕ್ತಿಃ ತದಾ ಕಿಂ ವಾಚ್ಯಂ ಗುಣಕರ್ಮಾದಿಪ್ರವೃತ್ತಿನಿಮಿತ್ತೈರೇತಾನಿ ಭಗವತೋ ನಾಮಾನೀತಿ

ಭಕ್ತಿಪೂರ್ವಕಂ ನಾಮೋಚ್ಚಾರಣಕರ್ತುರ್ನಾರಕಭಯನಿವೃತ್ತಿರ್ಭವೇದಿತಿ । ಏವಂ ನಾಮಕೀರ್ತನಾದಿನಾ ಪಾಪನಿವೃತ್ತೌ ಸತ್ಯಾಂ ಅಜಾಮಿಲಸ್ಯೇವ ಭಗವತಿ ಭಕ್ತ್ಯುದ್ಯುತ್ಪಾದನದ್ವಾರಾ ಮುಕ್ತಿರಪಿ ಭವತೀತಿ । **ಯಥಾಹುಃ—**

> ''ಸ್ತೇನಃ ಸುರಾಪೋ ಮಿತ್ರಧ್ರುಕ್ ಬ್ರಹ್ಮಹಾ ಗುರುತಲ್ಪಗಃ ।
> ಸ್ತ್ರೀರಾಜಪಿತೃಗೋಹಂತಾ ಯೇ ಚ ಪಾತಕಿನೋಽಪರೇ ॥
>
> ಸರ್ವೇಷಾಮಪ್ಯಘವತಾಮಿದ ಮೇವ ಸುನಿಷ್ಕೃತಂ ।
> ನಾಮವ್ಯಾಹರಣಂ ವಿಷ್ಣೋರ್ಯತಸ್ತದ್ವಿಷಯಾ ಮತಿಃ ॥
> ಅಯಂ ಹಿ ಕೃತನಿರ್ವೇಶೋ ಜನ್ಮಕೋಟ್ಯಂಹಸಾಮಪಿ ।
> ಯದ್ವ್ಯಾಜಹಾರ ವಿವಶೋ ನಾಮ ಸ್ವಸ್ತ್ಯಯನಂ ಹರೇಃ ॥
>
> ಅಥೈನಂ ಮಾಪನಯತ ಕೃತಾಶೇಷಾಘ ನಿಷ್ಕೃತಂ ।
> ಯದಸೌ ಭಗವನ್ನಾಮ ಮ್ರಿಯಮಾಣಃ ಸಮಗ್ರಹೀತ್ ॥
>
> ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ ।
> ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥
>
> ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।
> ಹರಿರಿತ್ಯ ವಶೇನಾಹ ಪುಮಾನ್ನಾರ್ಹತಿ ಯಾತನಾಂ ॥
>
> ಮ್ರಿಯಮಾಣೋ ಹರೇರ್ನಾಮ ಗೃಹ್ಣನ್ ಪುತ್ರೋಪಚಾರಿತಂ ।
> ಅಜಾಮಿಲೋಽಪ್ಯಗಾನ್ಮುಕ್ತಿಂ ಕಿಮುತ ಶ್ರದ್ಧಯಾ ಗೃಣನ್ ॥
>
> ಕೃತೇ ಯದ್ಧ್ಯಾಯತೋ ವಿಷ್ಣುಂ ತ್ರೇತಾಯಾಂ ಯಜತೋ ಮಖೈಃ ।
> ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್'' ಇತಿ ॥

❖❖❖

ಯಮದೇವನು ದೂತರಿಗೆ ನುಡಿದ—

ಭಗವಂತನ ಗುಣಕರ್ಮನಾಮಗಳ ಸಂಕೀರ್ತನ ಒಂದೇ ಪಾಪ ಪರಿಹಾರಕ್ಕೆ ಪ್ರಾಯಶ್ಚಿತ್ತವಾಗಿ ಸಾಧನವಾಗುವುದು. ಏಕೆಂದರೆ ಪಾಪಿಗಳಲ್ಲಿ ಬಲು ಪಾಪಿ ಎಂದೆನಿಸಿದ್ದ ಅಜಾಮಿಳನೂ ಕೂಡ ಮರಣಕಾಲದಲ್ಲಿ ತನಗೆ ದಾಸಿಯಲ್ಲಿ ಜನಿಸಿದ್ದ ಮಗನನ್ನು ನಾರಾಯಣ'ಎಂದು ಕೂಗಿ ಕರೆದ ಮಾತ್ರದಿಂದ ಮುಕ್ತಿಯನ್ನು ಹೊಂದಿದನು.

ಅಜಾಮಿಳನೆಂಬ ಬ್ರಾಹ್ಮಣನು ಸದಾಚಾರವನ್ನು ಬಿಟ್ಟು ದಾಸೀ ಸಂಗ ಮಾಡಿ ಕೆಟ್ಟು ಕಳ್ಳತನ ಜೂಜು ಮೊದಲಾದುವನ್ನು ಮಾಡಿ ಹೊಟ್ಟೆ ಹೊರೆದು ದಾಸಿಯಲ್ಲಿ ಹತ್ತುಮಕ್ಕಳನ್ನು ಪಡೆದಿದ್ದನು. ಮುದಿತನದಲ್ಲಿ ಕೊನೆಯ ಮಗ ನಾರಾಯಣ ಬಲುಪ್ರಿಯನಾಗಿದ್ದ. ಅನ್ನಪಾನ ವಿಹಾರಾದಿ ಕಾಲಗಳಲ್ಲಿ ಅವನನ್ನು ಬಿಡದೆ ಕೂಡಿ ಉಂಡು ಕುಡಿದು ತಿರುಗಿ, ಅರಳುಮರುಳಾಗಿದ್ದನು. ಕೊನೆಯಲ್ಲಿ ಮರಣಕಾಲ ಬಂದಾಗ ಯಮದೂತರನ್ನು ಕಂಡು ಭಯದಿಂದ, ದೂರದಲ್ಲಿ ಆಟವಾಡುತ್ತಿದ್ದ ಮಗನನ್ನು ನಾರಾಯಣ! ಎಂದು ಕೂಗಿದನು. ಯಮದೂತರು ಮೂವರು ಅವನ ಕುತ್ತಿಗೆಗೆ ಪಾಶಬಿಗಿದು ಸೆಳೆಯುತ್ತಿದ್ದರು. ಅಷ್ಟರಲ್ಲಿ ನಾರಾಯಣ ಎಂಬ ಕೂಗನ್ನು ಕೇಳಿ ನಾಲ್ವರು ವಿಷ್ಣುದೂತರು ಬಂದು ಯಮಭಟರ ಪಾಶಗಳನ್ನೂ ಕಡಿದು ಬಿಸುಟರು. ಆಗ ವಿಷ್ಣುದೂತರಿಗೂ ಯಮದೂತರಿಗೂ ನಡೆದ ಸಂವಾದವನ್ನು ಕೇಳಿದ ಅಜಾಮಿಳನಿಗೆ ತಾನು ಅಷ್ಟರವರೆಗೆ ಮಾಡಿದ್ದ ಪಾಪಗಳಿಗೆ ಪಶ್ಚಾತ್ತಾಪವಾಯಿತು. ಮುಂದೆ ಆ ವಿಷ್ಣುದೂತರೆ ಆತನನ್ನು ಕರೆದೊಯ್ದರು. ಆತ ಮುಕ್ತನಾದ.

ಮಗನ ಮೇಲಿನ ಪ್ರೀತಿಯಿಂದ ನಾರಾಯಣ ಎಂದು ಕೂಗಿದ್ದರೂ ಅಜಾಮಿಳನು ಆಗಲೆ ಭಗವಂತನನ್ನು ಭಕ್ತಿಯಿಂದ ನೆನೆದು ಯಮಪಾಶದಿಂದ ಮುಕ್ತನಾದನು ಎಂದು ತಾತ್ಪರ್ಯದಲ್ಲಿ ಹೇಳಿದ್ದಾರೆ. ಎಂದಮೇಲೆ ಭಕ್ತಿಪೂರ್ವಕ ವಾಗಿ ನಾಮಾರ್ಥವನ್ನು ಜ್ಞಾನಿಗಳಿಂದ ತಿಳಿದು ಭಗವಂತನೆ ಸರ್ವಶಬ್ದವಾಚ್ಯ ನೆಂದು ಭಕ್ತಿಯಿಂದ ನೆನೆದು ನಾಮೋಚ್ಚಾರಣ ಮಾಡಿದವರಿಗೆ ನರಕಭಯವಿಲ್ಲ ವೆಂದು ಬೇರೆ ಹೇಳಬೇಕಿಲ್ಲ. ಹೀಗೆ ಸದಾ ನಾಮಸಂಕೀರ್ತನ ಮಾಡಿ ಪಾಪ ಕಳೆದುಕೊಂಡವರಿಗೆ ಹರಿಯಲ್ಲಿ ಭಕ್ತಿ ಹುಟ್ಟುವುದು. ಮುಕ್ತಿಯು ಸಿಗುವುದು. ಇದಕ್ಕೆ ಅಜಾಮಿಳನೇ ಸಾಕ್ಷಿ. ವಿಷ್ಣುದೂತರು ಯಮಭಟರಿಗೆ ಹೇಳಿದರು—

ಸ್ತೇನಃ ಸುರಾಪೋ ಮಿತ್ರಧ್ರುಗ್ ಬ್ರಹ್ಮಹಾ ಗುರುತಲ್ಪಗಃ
ಸ್ತ್ರೀರಾಜ ಪಿತೃ ಗೋಹಂತಾ ಯೇ ಚ ಪಾತಕಿನೋಽಪರೇ ||

(ಭಾ.೬.೩.೯)

ಸರ್ವೇಷಾಮಪ್ಯಘವತಾಂ ಇದಮೇವ ಸುನಿಷ್ಕೃತಂ ।
ನಾಮ ವ್ಯಾಹರಣಂ ವಿಷ್ಣೋರ್ಯತಸ್ತದ್ವಿಷಯಾ ಮತಿಃ ||

(ಭಾ.೬.೩.೧೦)

ಅಯಂ ಹಿ ಕೃತನಿರ್ವೇಶೋ ಜನ್ಮಕೋಟ್ಯಂಹಸಾಮಪಿ ।
ಯದ್ ವ್ಯಾಜಹಾರ ವಿವಶೋ ನಾಮ ಸ್ವಸ್ತ್ಯಯನಂ ಹರೇಃ ॥

(ಭಾ.೬.೨.೭)

ಅಥೈನಂ ಮಾಪನಯತ ಕೃತಾಶೇಷಾಘ ನಿಷ್ಕೃತಂ ।
ಯದಸೌ ಭಗವನ್ನಾಮ ಮ್ರಿಯಮಾಣಃ ಸಮಗ್ರಹೀತ್ ॥

(ಭಾ.೬.೨.೧೩)

ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಳನಮೇವ ವಾ ।
ವೈಕುಂಠ ನಾಮಗ್ರಹಣಂ ಅಶೇಷಾಘಹರಂ ವಿದುಃ ॥

(ಭಾ.೬.೨.೧೪)

ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।
ಹರಿರಿತ್ಯವಶೇನಾಹ ಪುಮಾನ್ ನಾರ್ಹತಿ ಯಾತನಾಂ ॥

(ಭಾ.೬.೨.೧೫)

ಮ್ರಿಯಮಾಣೋ ಹರೇರ್ನಾಮ ಗೃಣನ್ ಪುತ್ರೋಪ ಚಾರಿತಂ ।
ಅಜಾಮಿಳೋಪ್ಯಗಾನ್ಮುಕ್ತಿಂ ಕಿಮುತ ಶ್ರದ್ಧಯಾ ಗೃಣನ್ ॥

(ಭಾ.೬.೨.೫೨)

ಕೃತೇ ಯದ್ಧ್ಯಾಯತೋ ವಿಷ್ಣುಂ ತ್ರೇತಾಯಾಂ ಯಜತೋ ಮಖೈಃ ।
ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್ ॥

(ಭಾ.೧೨.೩.೫೨)

ವಿಷ್ಣುದೂತರು ಯಮದೂತರಿಗೆ ಹೇಳುತ್ತಾರೆ—

ಕಳ್ಳತನ ಸುರಾಪಾನ ಮಿತ್ರದ್ರೋಹ ಗುರುತಲ್ಪಗಮನ ಸ್ತ್ರೀಹತ್ಯೆ ರಾಜಹತ್ಯೆ ಪಿತೃಹತ್ಯೆ ಗೋಹತ್ಯೆ ಇತ್ಯಾದಿ ಮಹಾಪಾಪಗಳಿಗೆಲ್ಲಕ್ಕೂ ಪಶ್ಚಾತ್ತಾಪ ಪಟ್ಟು ಹರಿಯಲ್ಲಿ ಮನವಿಟ್ಟು ಹರಿನಾಮಕೀರ್ತನ ಮಾಡುವುದೇ ಉತ್ತಮ ಪ್ರಾಯಶ್ಚಿತ್ತ. ಏಕೆಂದರೆ ಸದಾ ಆ ಭಕ್ತಿಯಿಂದ ನಾಮೋಚ್ಚಾರಣೆಯಿಂದ ಜೀವಸ್ವರೂಪದಲ್ಲಿ ಅವ್ಯಕ್ತವಾಗಿ ಅನಾದಿಕಾಲದಿಂದ ಇದ್ದ ವಿಷ್ಣುಭಕ್ತಿಯು ಕ್ರಮೇಣ ವ್ಯಕ್ತವಾಗಿ ಅದರಿಂದ ಜ್ಞಾನ ಸಾಧನೆಯ ಮೂಲಕ ಮೋಕ್ಷಪ್ರಾಪ್ತಿ. ಹೀಗೆ ಭಕ್ತಿ ವ್ಯಕ್ತವಾದಾಗಲೆ ಸಮಸ್ತ ಪಾಪನಿವೃತ್ತಿ.

ಈ ಅಜಾಮಿಳನು ಮರಣಕಾಲದಲ್ಲಿ ಮೋಕ್ಷದಾಯಕವಾದ ಹರಿನಾಮವನ್ನು ಭಕ್ತಿಪರವಶತೆಯಿಂದ ಉಚ್ಚರಿಸಿರುವುದರಿಂದ ಕೋಟಿಜನ್ಮಗಳ ಪಾಪಗಳಿಗೂ ಅವನು ಪ್ರಾಯಶ್ಚಿತ್ತ ಮಾಡಿಕೊಂಡು ಬಿಟ್ಟಿದ್ದಾನೆ.

ಆದರಿಂದ ಹರಿನಾಮ ಚಿತ್ತಶುದ್ಧಿಯನ್ನುಂಟು ಮಾಡುವುದರಿಂದ ಪ್ರಾಯಶ್ಚಿತ್ತ ಮಾಡಿದ ಬಳಿಕವೂ ತಿರುಗಿ ಮನಸು ಪಾಪ ಮಾಡಲಾರದು. ಆದರಿಂದ ಈ ಅಜಾಮಿಳನನ್ನು ನರಕಕ್ಕೆ ಒಯ್ಯಬೇಡಿರಿ. ಮರಣಕಾಲದಲ್ಲಿ ಹರಿನಾಮವನ್ನು ಈತ ವೈರಾಗ್ಯಭಕ್ತಿಪೂರ್ವಕ ಉಚ್ಚರಿಸಿದ್ದಾನೆ.

ಇನ್ನೊಬ್ಬರಿಗೆ ಹರಿನಾಮ ಹೆಸರಿದ್ದುದರಿಂದಾಗಲಿ ಇನ್ನೊಬ್ಬರನ್ನು ಹಾಸ್ಯಮಾಡುವುದಕ್ಕಾಗಲಿ ಕೋಪ ಬರಿಸುವುದಕ್ಕಾಗಲಿ ಅಣಕಿಸುವುದಕ್ಕಾಗಲಿ ಯಾವುದೇ ಕಾರಣಕ್ಕಾಗಿ ಹರಿನಾಮ ಉಚ್ಚರಿಸಿದರೂ ಹರಿಸ್ಮರಣೆಯಾದಾಗ ಭಕ್ತಿ ವ್ಯಕ್ತವಾಗುವುದರಿಂದ ಅದು ಸಕಲ ಪಾಪಪರಿಹಾರಕವೇ ಆಗುವುದು. ಮೋಕ್ಷಾದಿ ಸಕಲಾಭೀಷ್ಟದಾಯಕವೂ ಆಗುವುದು.

ಎಡವಿ ಬಿದ್ದಾಗ, ಮೈಗಾಯ ಹಾವಿನ ಕಡಿತ ದಾಹ ಉಂಟಾದಾಗ ಏಟು ತಗುಲಿದಾಗ ಭಕ್ತಿಪರವಶನಾಗಿ, ಹರಿ ಎಂದು ಎರಡಕ್ಷರ ಸಾಕು ಅವನಿಗೆ ಎಂದೂ ಯಮಯಾತನೆ ಇಲ್ಲ ಎಂದು ವಿಷ್ಣುದೂತರ ಉಪದೇಶವಿದೆ.

ಅಜಾಮಿಳ ಜೀವನವಿಡೀ ಪಾಪಮಾಡಿದರೂ ಸಾಯುವ ಸಮಯದಲ್ಲಿ ಮಗನನ್ನು ಕೂಗುವ ನೆಪದಿಂದಾದರೂ ಭಕ್ತಿಯಿಂದ ಹರಿನಾಮ ಉಚ್ಚರಿಸಿ ಮುಕ್ತಿ ಪಡೆದ. ಇನ್ನು ಈ ಕಥೆ ಕೇಳಿ ಶ್ರದ್ಧೆಯಿಂದ ಸದಾ ಹರಿನಾಮ ಉಚ್ಚರಿಸಿದರೆ ಏನು ಹೇಳಬೇಕು? ಎಂದು ಶುಕಮುನಿ ನುಡಿದರು.

ಕೃತಯುಗದಲ್ಲಿ ಧ್ಯಾನದಿಂದೇನು ಫಲವೋ ತ್ರೇತೆಯಲ್ಲಿ ಯಜ್ಞಗಳಿಂದೇನು ಫಲವೋ ದ್ವಾಪರದಲ್ಲಿ ಅರ್ಚನೆಯಿಂದೇನು ಫಲವೊ ಅದು ಕಲಿಯುಗದಲ್ಲಿ ಹರಿನಾಮ ಸಂಕೀರ್ತನೆಯಿಂದಲೆ ಲಭಿಸುವುದು ಎಂದೂ ಶುಕಮುನಿಗಳ ಉಪದೇಶವಿದೆ.

ಹೀಗೆ ನಾಮಸಂಕೀರ್ತನ ರೂಪವಾದ ಭಾಗವತಧರ್ಮಾನುಷ್ಠಾನಕ್ಕೆ ಇಂಥ ಮಹಾತ್ಮ್ಯವಿರುವಾಗ ಲೋಕದಲ್ಲಿ ಜನರು ಏಕೆ ಇನ್ನೂ ನರಕಭಾಗಿಗಳಾಗುತ್ತಿದ್ದಾರೆ? ಎಂದರೆ, ಈ ಧರ್ಮಾನುಷ್ಠಾನ ಎಲ್ಲರಿಗೂ ಸಿಗುವುದಿಲ್ಲ. ಅನೇಕ ಜನ್ಮಗಳಲ್ಲಿ ಮಹಾತ್ಮರ ಪಾದಸೇವೆ ಮಾಡಿ ಭಾಗವತಧರ್ಮಗಳನ್ನು ಚೆನ್ನಾಗಿ

ನಡೆಸಿದ ಅಜಾಮಿಳನಂಥ ಪಕ್ವಭಕ್ತಿಉಳ್ಳವರಿಗೆ ಮಾತ್ರ ಸಿಗುತ್ತದೆ. ಅನ್ಯರಿಗೆ ಸಿಗುವುದಿಲ್ಲ. ಅವರು ಹರಿಮಾಯೆಯಿಂದ ಬುದ್ಧಿಗೆಟ್ಟು ನಿಷಿದ್ಧ ವಿಷಯದಲ್ಲಿ ಆಸಕ್ತರಾಗಿರುತ್ತಾರೆ. ನಾಮಸಂಕೀರ್ತನೆಯ ಕಡೆಗೆ ಕಣ್ಣೆತ್ತಿಯೂ ನೋಡುವು ದಿಲ್ಲ. ಬಲು ದುರ್ಲಭವಾಗಿರುವ ಈ ಧರ್ಮವನ್ನು ತಪ್ಪದೆ ಸಂಪಾದಿಸಿಕೊಳ್ಳ ಬೇಕು.

❖❖❖

–೩೫೪–

**ಕಾಮ್ಯಕರ್ಮಿಗಳಿಗೆ ನಾಮಸಂಕೀರ್ತನೆ ಲಭ್ಯವಿಲ್ಲ**

ಪ್ರಾಯೇಣ ವೇದ ತದಿದಂ ನ ಮಹಾಜನೋಽಯಂ
ದೇವ್ಯಾ ವಿಮೋಹಿತಮತಿರ್ಬತ ಮಾಯಯಾಲಂ ।
ತ್ರಯ್ಯಾಂ ಜಡೀಕೃತಮತಿರ್ಮಧುಪುಷ್ಪಿತಾಯಾಂ
ವೈತಾನಿಕೇ ಮಹತಿ ಕರ್ಮಣಿ ಯುಜ್ಯಮಾನಃ ॥

(ಭಾ.೬.೩.೨೫)

ನನ್ವೇವಂ ನಾಮಕೀರ್ತನರೂಪಭಾಗವತಧರ್ಮಾನುಷ್ಠಾನಸ್ಯ ಈದೃಶ ಮಾಹಾತ್ಮ್ಯಮಸ್ತಿ ಚೇತ್ ಕಿಮಿತಿ ಲೋಕೋ ನಾರಕಂ ದುಃಖಮನುಭವತೀತ್ಯತಃ ಸತ್ಯಂ। ತಥಾಪಿ ನೇದಂ ಸರ್ವೇಷಾಂ ಲಭ್ಯಂ, ಕಿಂತು ಯೇ ಜನ್ಮಾಂತರೇಷು ಮಹತ್ಪಾದರಜೋಭಿರಭಿಷಿಕ್ತಾಸ್ತ ಏವ ಸಂಪಾದಿತಭಾಗವತ ಧರ್ಮಾನುಷ್ಠಾನ ಪರಿನಿಷ್ಠಿತಬುದ್ಧಯಸ್ತೇಷಾಮೇವೇದಂ ಭಗವನ್ನಾಮಕೀರ್ತನಂ ಲಭ್ಯತೇ। ಅನ್ಯೇ ತು ಪುನರ್ಭಾಗವತಜನಸಂಗವಿಧುರಾಃ ಭಗವನ್ಮಾಯಯಾ ಮೋಹಿತಬುದ್ಧಯಃ ಅನ್ಯತ್ರೈವ ಶ್ರದ್ಧಾಜಾಡ್ಯೇನ ನೇದಂ ನಿರೀಕ್ಷಂತೇ। ತತಃ ಸುದುರ್ಲಭಮಿದ ಮವಶ್ಯಂ ಸಂಪಾದನೀಯಮಿತಿ ಭಾವೇನಾಹ॥ **ಪ್ರಾಯೇಣೇತಿ** ॥ ತದಿದಂ ಭಾಗವತಧರ್ಮಾನುಷ್ಠಾನಮಾಹಾತ್ಮ್ಯಂ। ಮಹಾಜನೋ ಬಂಧಮೋಕ್ಷವಿಚಾರಾ ನಭಿಜ್ಞಃ। ಮಾಯಯಾ ಬಂಧಕಶಕ್ತ್ಯಾ। ಆಪಾತತಃ ಸ್ವರ್ಗಾದಿಕ್ಷುದ್ರಫಲಾಯಾಂ ತ್ರಯ್ಯಾಂ ವೇದವಿದ್ಯಾಯಾಂ। ಜಡೀಕೃತಮತಿಃ ಶ್ರದ್ಧಾಜಾಡ್ಯೇನ ತತ್ರೈವಾಸಕ್ತಮತಿಃ। ತತ ಏವ ಹಿಂಸಾದಿರೂಪೇ ಯಜ್ಞಾದೌ ಮಹತಿ ಮಹಾಯಾಸದ್ರವ್ಯವ್ಯಯಸಾಧ್ಯೇ ಕರ್ಮಣಿ ಯುಜ್ಯಮಾನ ಇತಿ॥

❖❖❖

ಯಮಧರ್ಮನು ಭಟರಿಗೆ ಹೇಳುತ್ತಾನೆ— ಪ್ರಾಯಃ ಹೆಚ್ಚಿನ ಜನರು ಭಗವಂತನ ಬಂಧಕಶಕ್ತಿಯಿಂದ ಬುದ್ಧಿಮೋಹಗೊಂಡು ವಿಷಯಸುಖಕ್ಕೆ ಮರುಳಾಗಿ ವೇದದಲ್ಲಿ ಮೇಲುನೋಟಕ್ಕೆ ಕಾಣುವ ಮಹಾಶ್ರಮಸಾಧ್ಯವಾದ ಸ್ವರ್ಗಾದಿ ಸಾಧನ ಕಾಮ್ಯಕರ್ಮದಲ್ಲಿಯೇ ಆಸಕ್ತರಾಗುತ್ತಾರೆ. ವೇದವು ನಿಜವಾಗಿ ಬೋಧಿಸುತ್ತಿರುವ ಮೋಕ್ಷಫಲವನ್ನೂ ಅದಕ್ಕೆ ಸಾಧಕವಾದ ಭಗವನ್ನಾಮ ಸಂಕೀರ್ತನೆಯನ್ನೂ ಸಾಮಾನ್ಯ ಜನರು ಗ್ರಹಿಸುವುದಿಲ್ಲ. ಹೀಗಾಗಿ ನಾಮಸಂಕೀರ್ತನ ಧರ್ಮವು ಬಲು ದುರ್ಲಭವಾಗಿದೆ. ಅದನ್ನು ತಪ್ಪದೇ ಸಂಪಾದಿಸಬೇಕು.

❖❖❖

—೩೫೫—

**ನಾರಾಯಣನ್ನ ನೆನೆದರೆ ನರಕಭಯವಿಲ್ಲವೊ**

ಏವಂ ವಿಮೃಶ್ಯ ಸುಧಿಯೋ ಭಗವತ್ಯನಂತೇ
ಸರ್ವಾತ್ಮನಾ ವಿದಧತೇ ಖಲು ಭಾವಯೋಗಂ ।
ತೇ ಮೇ ನ ದಂಡಮರ್ಹಂತ್ಯಥ ಯದ್ಯಮೀಷಾಂ
ಸ್ಯಾತ್ ಪಾತಕಂ ತದಪಿ ಹಂತ್ಯುರುಗಾಯವಾದಃ ॥

(ಭಾ.೬.೩.೨೬)

ಮಹಾಜನೋ ನ ವೇದೇತಿ ವಿಶೇಷನಿಷೇಧೇನ ತಸ್ಮಾದಿತರೋ ವೇದೇತಿ ಸೂಚಿತಂ। ತೇ ಕ ಇತ್ಯತಃ ಸತ್ಸಂಗೇನ ಭಾಗವತಧರ್ಮಪರಿನಿಷ್ಠಿತಧಿಯ ಏವೇತ್ಯಾಶಯೇನಾಹ ॥ ಏವಮಿತಿ ॥ ಏವಂ ಪೂರ್ವೋಕ್ತಂ ಭಾಗವತ ಧರ್ಮಾನುಷ್ಠಾನಮಾಹಾತ್ಮ್ಯಂ ವಿಮೃಶ್ಯ ।ಸರ್ವಾತ್ಮನಾ ತ್ರಿಕರಣೈಃ। ಭಾವೋ ಭಕ್ತಿಸ್ತದ್ರೂಪಂ ಯೋಗಂ। ಉರುಗಾಯೋ ಹರಿಃ ತಸ್ಯ ವಾದಃ ಕಥಾವಚನಾದಿ ರೂಪಃ। ತಾದೃಶಾಃ ಮಯಾ ದಂಡ್ಯಾ ನ ಭವಂತಿ। ತತೋ ಭವದ್ಭಿರ್ನ ತೇ ಆನೇತವ್ಯಾ ಇತಿ ಭಾವಃ ॥

❖❖❖

ಯಮಧರ್ಮನು ಭಟರಿಗೆ ಹೇಳುತ್ತಾನೆ—

ವೇದವು ಕಾಮ್ಯಕರ್ಮವನ್ನು ಬೋಧಿಸುತ್ತಿಲ್ಲ. ಮೋಕ್ಷಸಾಧನ ನಿಷ್ಕಾಮ

ಕರ್ಮವನ್ನೇ ವಿಧಿಸುತ್ತಿದೆ ಎಂದು ಸಾಮಾನ್ಯ ಜನರು ತಿಳಿಯದಿದ್ದರೂ ಮಹಾತ್ಮರ ಸೇವೆಯಿಂದ ಭಾಗವತ ಧರ್ಮಗಳನ್ನು ನಡೆಸಿ ಶುದ್ಧಬುದ್ಧಿಗಳಾಗಿರುವ ವಿವೇಕಿಗಳು ವೇದವನ್ನು ವಿಮರ್ಶಿಸಿ ನೋಡಿ ಭಗವಾನ್ ಅನಂತನಲ್ಲಿ ತ್ರಿಕರಣದಿಂದ ಭಕ್ತಿಯೋಗವನ್ನೇ ಅನುಷ್ಠಾನ ಮಾಡುತ್ತಾರೆ. ಅಂಥ ಭಕ್ತರು ನಾನು ನೀಡುವ ನರಕ ಶಿಕ್ಷೆಗೆ ಭಾಗಿಗಳಾಗುವುದಿಲ್ಲ. ಒಂದುವೇಳೆ ಅವರಲ್ಲಿ ಪೂರ್ವಜನ್ಮದ ಪಾಪ ಉಳಿದಿದ್ದರೂ ಅದನ್ನು ಹರಿಕಥಾಶ್ರವಣಾದಿ ಧರ್ಮವು ಪರಿಹರಿಸುವುದು. ಅದರಿಂದ ಹರಿನಾಮೋಚ್ಚಾರಣಗೈವ ಭಕ್ತರನ್ನು ನೀವು ನನ್ನ ಬಳಿಗೆ ಎಳೆದು ತರಬೇಡಿರಿ' ಎಂದು.

❖❖❖

—೩೫೬—

**ಭಕ್ತರನ್ನು ವಿಷ್ಣುದೂತರು ರಕ್ಷಿಸುತ್ತಾರೆ**

**ಭೂತಾನಿ ವಿಷ್ಣೋಃ ಸುರಪೂಜಿತಾನಿ**
**ದುರ್ದರ್ಶಲಿಂಗಾನಿ ಮಹಾದ್ಭುತಾನಿ ।**
**ರಕ್ಷಂತಿ ತದ್ಭಕ್ತಿಮತಃ ಪರೇಭ್ಯೋ**
**ಮತ್ತಶ್ಚ ಮರ್ತ್ಯಾನಥ ಸರ್ವತಶ್ಚ ॥**

(ಭಾ.೬.೩.೧೮)

ಕಿಂಚ ತೇಷಾಂ ನಿಕಟೇ ಸಾಧಾರಣೈರದೃಶ್ಯರೂಪಾಃ ಭಗವತ್ಪಾರ್ಷದಾಸ್ತಿಷ್ಠಂತಿ । ಮಮ ಭಕ್ತಾಃ ಮರ್ತ್ಯಜನ್ಮಸಮಾಶ್ರಿತಾಃ ತತ್ರ ವಿಪದೋ ಬಹ್ವ್ಯಃ ಪ್ರತಿಕ್ಷಣಂ ಭವಂತಿ । ತತ್ರ ಕಾಶ್ಚನ ಬಾಹ್ಯಜನನಿಮಿತ್ತಾಃ, ಅನ್ಯಾಶ್ಚಾಂತರಾಃ । ಆಂತರಜ್ವರಾದಿರೋಗನಿಮಿತ್ತಾ ಯಮಪ್ರೇಷಿತದೂತ ನಿಯಮಿತಾಃ ತಾ ಉಭಯವಿಧಾ ಅಪಿ ವಿನಾ ಮಯಾ ನಿಯಮಿತಂ ಕಾಲಂ ಮಾ ಭೂವನ್ನಿತಿ ಭಗವತಾ ಆಜ್ಞಪ್ತಾ ಇತೋಽಪಿ ನ ಸಹಸಾ ಗಂತವ್ಯಂ ತನ್ನಿಕಟೇ ಇತ್ಯಾಶಯೇನಾಹ ॥ **ಭೂತಾನೀತಿ** ॥ ವಿಷ್ಣೋಃ ಭೂತಾನಿ ಪಾರ್ಷದಾಃ ತದ್ಭಕ್ತಿಮತೋ ವಿಷ್ಣುಭಕ್ತಿಮತಃ ಮತ್ತಃ ಮಮ ಸಕಾಶಾತ್ । ಮತ್ತಃ ಪರೇಭ್ಯಶ್ಚೇತಿ ಸರ್ವತೋಽಪಿ ॥

❖❖❖

ಯಮಧರ್ಮನು ಭಟರಿಗೆ ಹೇಳುತ್ತಾನೆ—

ವಿಷ್ಣುದೂತರು ದೇವತೆಗಳಿಗೂ ಮಾನ್ಯರು. ಮಹಾ ಅದ್ಭುತರು. ಪುಣ್ಯವಂತರಲ್ಲದವರಿಗೆ ಅವರ ರೂಪ ಕಣ್ಣಿಗೆ ಕಾಣಿಸದು. ವಿಷ್ಣುಭಕ್ತರಾದ ಮಾನವರನ್ನು ಅವರು ನನ್ನಿಂದಲೂ ಬೇರೆ ಶತ್ರುಗಳಿಂದಲೂ ಬೆಂಕಿ ವಿಷ ಮುಂತಾದ ಸರ್ವ ಅಪಾಯಗಳಿಂದಲೂ ರಕ್ಷಿಸುತ್ತಾರೆ. ಭಗವದ್‌ಭಕ್ತರ ಬಳಿಯಲ್ಲಿ ಸಾಮಾನ್ಯಜನರಿಗೆ ಕಾಣಿಸದಂತೆ ಭಗವಂತನ ಪಾರ್ಷದರು ರಕ್ಷಕರಾಗಿ ನಿಂತಿರುತ್ತಾರೆ. ಅವರಿಗೆ ಶ್ರೀಹರಿಯ ಆಜ್ಞೆ ಇದೆ—'ನನ್ನ ಭಕ್ತರು ನಾನು ನಿಗದಿಪಡಿಸಿದ ಕಾಲದಲ್ಲಿ ಹೊರತು ಎಂದೂ ಕಷ್ಟಗಳಿಗೆ ಈಡಾಗಬಾರದು. ಇತರ ಜನರಿಂದ ಅವರಿಗೆ ಬೆಂಕಿ ವಿಷ ಮುಂತಾದ ಅಪಾಯ ಬರಬಹುದು, ನನ್ನಿಂದಲೂ ಯಮನಿಂದಲೂ ಕರ್ಮಫಲವಾಗಿ ರೋಗಾದಿ ಉಪದ್ರವಗಳನ್ನು ಅವರು ಇದಿರಿಸಬೇಕಾಗಬಹುದು. ಆ ಕಷ್ಟಗಳನ್ನು ಅವರಿಗೆ ನನ್ನ ಸಂಕಲ್ಪದಂತೆ ಕೆಲಕಾಲ ಮಾತ್ರವಿದ್ದು ಬಳಿಕ ಇಲ್ಲದಂತೆ ಮಾಡಿರಿ' ಎಂದು. ಅದರಿಂದ ನೀವು ಇಂಥ ವಿಷ್ಣುಭಕ್ತರನ್ನು ನನ್ನ ಬಳಿಗೆ ಎಳೆದು ತರಬೇಡಿರಿ' ಎಂದು.

❖❖❖

—೩೫೭—

**ಅಭಕ್ತರನ್ನು ಮಾತ್ರ ಎಳೆದುತರಲು ಯಮನಾಜ್ಞೆ**

ತಾನಾನಯಧ್ವಮಸತೋ ವಿಮುಖಾನ್ ಮುಕುಂದ
ಪಾದಾರವಿಂದಮಕರಂದರಸಾದಜಸ್ರಂ ।
ನಿಷ್ಕಿಂಚನೈಃ ಪರಮಹಂಸಕುಲೈಃ ರಸಜ್ಞೈ
ರ್ಜುಷ್ಟಾದ್ ಗೃಹೇ ನಿರಯವರ್ತ್ಮನಿ ಬದ್ಧತೃಷ್ಣಾನ್ ॥

(ಭಾ.೬.೩.೨೮)

ನನ್ವೇವಂ ಸತಿ ಸರ್ವೇಽಪಿ ನಾಮಕೀರ್ತನಂ ಕುರ್ಯುರೇವ। ತತೋ ನಾಸ್ಮಾಭಿಸ್ತೇ ದಂಡ್ಯಾ ಇತಿ ವಿರಿಂಚನಿಯಮಿತಃ ಅಸ್ಮಾಕಂ ವ್ಯಾಪಾರ ಏವ ಲುಪ್ಯೇತೇತ್ಯತಃ ಸತ್ಯಂ, ಸರ್ವೇಷಾಮಪಿ ನಾಮಕೀರ್ತನಲಾಭೇ, ಸ ಏವ ನ ಭವತಿ ಸರ್ವೇಷಾಂ, ತತೋ ಯೇ ನಾಮಕೀರ್ತನಾದಿವಿರಹಿತಾ ಭಗವತಿ ವಿಮುಖಾಃ, ವಿಷಯೇಷ್ವೇವ ನಿರತಾಸ್ತೇ ಭವದ್ಭಿರ್ದಂಡ್ಯಾ ಇತಿ ನ ಭವತಾಂ ವ್ಯಾಪಾರಸ್ಯ ವಿಲೋಪ ಇತ್ಯಾಶಯೇನಾಹ ॥ **ತಾನಿತಿ** ॥ ಸಾರಜ್ಞೈಃ

ಪರಮಹಂಸಕುಲೈಃ ವಿಶುದ್ಧಾಂತಃಕರಣೈಃ ಭಾಗವತನಿವಹೈಃ, ಅಜಸ್ರಂ ನಿತ್ಯಂ, ಜುಷ್ಟಾತ್ ಸೇವಿತಾತ್, ಪಾದಾರವಿಂದಯೋರ್ಯೋ ಮಕರಂದೋ ಗುಣವಿಶೇಷಃ ತದ್ರೂಪೋ ಯೋ ರಸಃ ಸಾರಃ ತಸ್ಮಾತ್ । ಅಜಸ್ರಂ ನಿತ್ಯಂ ವಿಮುಖಾನ್ । ನಿರಯವರ್ತ್ಮಭೂತೇ ಕುಟುಂಬೇ ಏವ ಅಜಸ್ರಂ ಬದ್ಧತೃಷ್ಣಾನ್ ಅಸತಃ ತಾನ್ ಜೀವಾನ್ ಆನಯಧ್ವಮಿತಿ ॥

❖❖❖

ಯಮಧರ್ಮನು ಭಟರಿಗೆ ಹೀಗೆ ಆಜ್ಞೆ ಮಾಡಿದ್ದಾನೆ—

'ಹರಿನಾಮ ನುಡಿದು ಪಾಪರಹಿತರಾದವರನ್ನು ಎಳೆದು ತರಬಾರದೆಂದರೆ, ಎಲ್ಲರೂ ಹರಿನಾಮ ನುಡಿದು ಪಾಪರಹಿತರೇ ಆದಾರು. ಆಗ ನಾವು ಯಾರನ್ನೂ ಎಳೆದು ತರುವಂತಿಲ್ಲ. ಬ್ರಹ್ಮದೇವರು ನಮಗೆ ಒಪ್ಪಿಸಿರುವ ಕೆಲಸ ನಿಂತೇ ಹೋದೀತು' ಎಂದರೆ ನಿಜ, ಭಟರೆ, ಕೇಳಿ, ಎಲ್ಲರೂ ಹರಿನಾಮ ನುಡಿಯುವುದಿಲ್ಲ. ಎಷ್ಟೋ ಜನರು ಶ್ರೀಹರಿಗೆ ವಿಮುಖರಾಗಿದ್ದು ವಿಷಯ ಲೋಲುಪರಾಗಿರುವರು ಅಂಥವರು ನಿಮಗೆ ಸಿಗುತ್ತಾರೆ. ನಿಮ್ಮ ಕೆಲಸಕ್ಕೆ ಯಾವ ವ್ಯತ್ಯಯವೂ ಬರುವುದಿಲ್ಲ. ಮುಕುಂದನ ಪಾದಾರವಿಂದ ಮಕರಂದರಸದ ಸವಿಯನ್ನು ಸರ್ವಸಂಗಪರಿತ್ಯಾಗ ಮಾಡಿದ ಪರಮಹಂಸರು ಮಾತ್ರ ಬಲ್ಲರು. ಅವರು ಅದನ್ನು ಸದಾ ಸೇವಿಸುತ್ತಾರೆ. ದುರ್ಜನರು ಅದಕ್ಕೆ ವಿಮುಖರಾಗಿ, ನರಕಕ್ಕೆ ದಾರಿ ಮಾಡಿಕೊಡುವ ಮನೆಮಡದಿ ಮುಂತಾದವುಗಳಲ್ಲಿಯೇ ಆಸಕ್ತರಾಗುತ್ತಾರೆ. ಅವರನ್ನು ನೀವು ಸೆಳೆದು ತನ್ನಿರಿ' ಎಂದು.

❖❖❖

—೩೫೮—

**ಒಮ್ಮೆಯೂ ಹರಿಗೆ ಮಣಿಯದವನೇ ಯಮನಿಗೆ ಅತಿಥಿ !**

ಜಿಹ್ವಾ ನ ವಕ್ತಿ ಭಗವದ್‌ಗುಣನಾಮಧೇಯಂ
ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಂ ।
ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಪಿ
ತಾನಾನಯಧ್ವಮಸತೋಽಕೃತ ವಿಷ್ಣುಕೃತ್ಯಾನ್ ॥

(ಭಾ.೬.೩.೨೯)

ನನ್ವನೇನ **ಇದಮುದಿತಂ ಭವತಿ**—ನ ಸರ್ವೇಽಪಿ ಭಗವನ್ನಾಮ ಕೀರ್ತನಾದಿನಾ ಭಗವತಿ ನಿರತಾಃ ಯೇನ ಭವತೋ ವ್ಯಾಪಾರಲೋಪಃ । ಕಿಂತು ಕೇಚಿತ್ತದ್ವಿಮುಖಾಃ ಕೀರ್ತನಾದಿಭಗವತ್ಸೇವಾರಹಿತಾಃ ಸಂತಿ ತ ಏವ ಭವತಾ ದಂಡ್ಯಾ ಭವಂತಿ ಇತಿ । ನೇದಮಸ್ಮದ್ಧೃದಯಂಗಮಂ । ಯೇ ಸಂತಸ್ತ ಏವ ಭಗವತ್ಸೇವಾತೋ ವಿಮುಖಾಃ ಕದಾಚಿದ್ಭವಂತಿ ಯಥಾಽಜಾಮಿಲಃ । ಯೇ ಚ ಅಸಂತಃ ತೇಽಪಿ ಕದಾಚಿನ್ನಾಮಸಂಕೀರ್ತನಾದಿನಾ ಭಗವತ್ಸೇವಾಯಾಂ ನಿರತಾಸ್ತತಃ ಸತಃ ಪರಿತ್ಯಜ್ಯ ಅಸತ ಆನಯಧ್ವಮಿತಿ ಭವದೀಯೋಕ್ತಿರ್ನಾಸ್ಮಾಭಿಃ ಸುಜ್ಞೇಯಾ ಭವತಿ ಇತ್ಯತಃ ಪೂರ್ವೋಕ್ತಂ ವಿಶದಯತಿ ॥ **ಜಿಹ್ವೇತಿ** ॥ ಏಕದಾಪಿ ನ ವಕ್ತೀತ್ಯಾದಿ ಯೋಜ್ಯಂ । ಇದಂ ಚ ವಿಷ್ಣುಸೇವಾಮಾತ್ರಸ್ಯ ಉಪಲಕ್ಷಣಮಿತಿ ಭಾವೇನೋಕ್ತಂ ॥ **ಅಕೃತೇತಿ** ॥ **ಇದಮುದಿತಂ ಭವತಿ**— ನಾಮಸಂಕೀರ್ತನಾದಿಕಂ ಸರ್ವಮಪಿ ತಾವತ್ ಭಕ್ತಕೃತಮೇವ ಸಫಲಂ, ನಾಭಕ್ತ ಕೃತಮಿತಿ ನಿಷ್ಕೃಷ್ಟಂ । **ಯಥಾಹುಃ**—

> ''ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣ ಪರಾಙ್ಮುಖೈಃ ।
> ನ ವೈ ಪುನಂತಿ ರಾಜೇಂದ್ರ ಸುರಾಕುಂಭಮಿವಾಪಗಾಃ'' ಇತಿ ।

ಸಾ ಚ ಭಕ್ತಿಃ ಸತೋ ಜೀವಸ್ಯೈವ ಭವತಿ ನಾಸತಃ । ಕದಾಚಿದ್ವೈಮುಖ್ಯಂ ತು ಪಿತಾ ಪುತ್ರಸ್ಯಾಪರಾಧಮಿವ ಸ್ವಯಮೇವ ಕ್ಷಮತೇ ಭಗವಾನ್ ಯಥಾಽಜಾಮಿಲಸ್ಯ । ಅತ ಏವ ಏಕದಾಪಿ ನ ವಕ್ತೀತ್ಯಾದ್ಯುಕ್ತಂ ಇಹ ಜನ್ಮನಿ ಜನ್ಮಾಂತರೇ ವಾ ನ ವಕ್ತೀತಿ । ಏಕದಾಪಿ ಭಗವತ್ಸೇವಾ ನ ಕೃತೇತ್ಯಾದಿಕಂ ತು ಅಸತೋ ಜೀವಸ್ಯೈವ । ತೇನ ಕದಾಚಿತ್ ಕೃತಾವಪಿ ತಸ್ಯಾಃ ಸೇವಾಯಾಃ ಗತಿರುಕ್ತೈವ । ತತೋ ಭಕ್ತಾನ್ ನಾನಯಧ್ವಂ ಅಭಕ್ತಾನೇವಾನಯಧ್ವಮಿತಿ ಮಯೋಕ್ತಂ । ಅತ ಏವ ''ರಕ್ಷಂತಿ ತದ್‌ಭಕ್ತಿಮತಃ ಪರೇಭ್ಯೋ ಮತ್ತಶ್ಚ '' (೬।೩।೧೮) ತ್ಯುಕ್ತಮಿತಿ । ನನು ಮುಕ್ತಿಯೋಗ್ಯಜೀವಮಾತ್ರಸ್ಯ ಯಮದೂತಾದಿ ದಂಡ್ಯತ್ವಾಭಾವೇ ತಸ್ಯ ನಿರಯಪ್ರತಿಪಾದಕವಾಕ್ಯವಿರೋಧಃ ಸ್ಯಾದಿತಿ ಚೇತ್ । ಮೈವಂ । ತತ್ರ ನಿರಯಪದೇನ ತಿರ್ಯಗ್ಯೋನೇಃ, ಭಗವಜ್ಞಾನಶೂನ್ಯತಾಯಾ ವಾ ವಿವಕ್ಷಿತತ್ವಾತ್ । ಅತ ಏವ ''ಮಾತ್ರಾತ್ಮಕತ್ವಾನ್ನಿರಯೇ ಸುಸಂಗಮಃ'' ''ಯತ್ಸ್ಪರ್ಶಜಂ ನರಕೇಽಪಿ ನೃಣಾಂ'' ''ಯೇ ನಾರಕಾಣಾಮಪಿ ಸಂತಿ ದೇಹಿನಾಂ'' ಇತ್ಯಾದೌ ಬಹುಶಸ್ತಿರ್ಯಗ್ಯೋನಾವೇವ ನಿರಯಾದಿಪ್ರಯೋಗಃ । ಅತ ಏವ ಅಜ್ಞಾನೇ ''ಅತಿತಿತೀರ್ಷತಾಂ ತಮೋಽಂಧಮಿ''ತಿ ''ಅಂಧಂತಮ'' ಇತ್ಯಾದಿ ಪ್ರಯೋಗೋಽಪಿ । ನ ಚ ತಾವತಾ ತತ್ರ ಅಂಧಂತಮೋ ಗೃಹೀತುಂ

ಶಕ್ಯಂ । ತತೋಽಜ್ಞಾನಮೇವ ನರಕದುಃಖಾದಧಿಕದುಃಖದಂ ಭಗವದ್ಭಕ್ತಾನಾಂ । ಅತ ಏವ ಸನಕಾದಿಭಿಃ ''ತ್ವತ್ಪಾದಾಂಬುಜಸ್ಮೃತಿಶ್ಚೇನ್ನಿರಯೋಽಪ್ಯಸ್ತು'' ಇತಿ ಶ್ರೀಹರಿಂ ಪ್ರತ್ಯುಕ್ತಂ । **ತಥಾ ಚೋಕ್ತಂ ಪುರಸ್ತಾತ್ —**

> ''ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾ ।
> ಶ್ಚೇತೋಽಲಿವದ್ಯದಿ ತು ತೇ ಪದಯೋ ರಮೇತ ॥''

ಇತ್ಯಾದಿ । ಲೋಕಸಿದ್ಧಂ ಚೈತತ್ । ಅಮಾತ್ಯೇನ ರಾಜಪುತ್ರೇಣ ಕೇನಚಿತ್ಸೇವಕೇನ ಚೌರೇಣ ಚ ಸಮಾನೇ ಅಪರಾಧೇ ಕೃತೇಽಪಿ ತತ್ತದ್ಯೋಗ್ಯತಾಮನುಸೃತ್ಯೈವ ಶಿಕ್ಷಣಮಿತಿ । ಕಥಂ ವಾ ಯಮರಾಜೋಽಪಿ ಭಗವದ್ಭಕ್ತಾನಾಂ ಭಕ್ತ್ಯಾದಿಕಂ ಸ್ವರೂಪಭೂತಂ ಅವಿಗಣಯ್ಯ ಅಸ್ವರೂಪಂ ಚ ನೈಮಿತ್ತಿಕಂ ಪಾಪಂ ಪುರಸ್ಕೃತ್ಯ ಅಭಕ್ತಸಾಮ್ಯೇನ ತಾಪನಪಾಚನತಾಡನ-ಭರ್ತ್ಸನಾದಿಕಂ ನಿಷ್ಕರುಣ ಇವ ಕುರ್ಯಾತ್ । ತತೋ ನರಕಾದಿವಚನಂ ಪ್ರಾಯಃ ಸತಾಂ ಮನಃ ಪಾಪಮಾರ್ಗೇ ನ ಗಚ್ಛತ್ಯೇವ ಕದಾಚಿನ್ನಿಮಿತ್ತಾಂತರವಶೇನ ಗತಿರಪಿ ಮಾಭೂದಿತಿ ವಿಪಕ್ಷೇ ಬಾಧಕಪ್ರದರ್ಶನಾರ್ಥಂ । ಯಥಾಹಿ ಲೋಕೇ ಪಿತ್ರಾ ಗುರುಣಾ ವಾ ಪುತ್ರಾನ್ ಶಿಷ್ಯಾನ್ ವಾ ಪ್ರತ್ಯುಚ್ಯತೇ ಇದಂ ಕಾರ್ಯಂ ಭವದ್ಭಿಃ ಸರ್ವಥಾ ನ ಕರ್ತವ್ಯಂ ಕರಣೇ ತು ಅಹಂ ದಂಡೇನ ತಾಡಯಾಮೀತಿ । ತಚ್ಛ್ರುತ್ವಾ ತತ್ರ ಯೇ ಸರ್ವಥಾ ಪ್ರಾಗಾರಭ್ಯ ಸ್ವತ ಏವ ನ ಪ್ರವೃತ್ತಾಃ ಸುಶೀಲಾಃ ಪುತ್ರಾಃ ಶಿಷ್ಯಾ ವಾ ತೇ ಸರ್ವಥಾ ನ ಪ್ರವರ್ತಂತ ಏವ । ಯೇ ತು ತತ್ರ ಪ್ರಾಕ್ ಪ್ರವೃತ್ತಾಃ ತದ್ವಿವಕ್ಷಯೈವೈತದುಕ್ತಂ । ತೇಽಪಿ ತಚ್ಛ್ರುತ್ವಾಪಿ ತತ್ಸಂಸ್ಕಾರವಶಾತ್ ಯದಿ ತತ್ರ ಪ್ರವೃತ್ತಾಃ ತಾನ್ ಪುತ್ರಾನ್ ಶಿಷ್ಯಾನ್ ವಾ ಪಿತಾ ಗುರುರ್ವಾ ಸ್ವವಚನೋಲ್ಲಂಘನೇನ ಕುಪಿತಃ ತಾಡಯತ್ಯೇವ ದಂಡೇನ । ತದ್‌ದೃಷ್ಟ್ವಾ ಯೇ ಸುಶೀಲಾಃ ತೇ ತತೋ ಭೀತಾ ನಿವರ್ತಂತ ಏವ । ಕದಾಚಿತ್ಸುಶೀಲೈಃ ಪ್ರಮಾದಾ ನ್ನಿಮಿತ್ತಾಂತರಾದ್ವಾ ಘಟನಾಯಾಂ ತತ್ಸ್ವಭಾವವಿದಾ ನಾಯಮೇಷಾಂ ಸ್ವಭಾವಃ ಕಿಂ ತು ಪ್ರಮಾದಾದಿನಿಬಂಧನ ಇತಿ ಕ್ಷಮ್ಯತ ಏವ ಗುಣೇ ದೃಷ್ಟಿಂ ದತ್ವಾ ತಥಾ ಭಗವಾನಪೀತಿ । ಅತ ಏವ

> ''ತೇ ಮೇ ನ ದಂಡಮರ್ಹಂತ್ಯಥ ಯದ್ಯಮೀಷಾಂ ।
> ಸ್ಯಾತ್ಪಾತಕಂ ತದಪಿ ಹಂತ್ಯುರುಗಾಯವಾದಃ'' ಇತ್ಯುಕ್ತಂ ॥

ಕದಾಚಿನ್ಮಹಾಪರಾಧೇ ಸತಿ ಶಿಕ್ಷಣೇಽಪಿ ತದ್ಯೋಗ್ಯಮೇವ ಶಿಕ್ಷಣಮಿತಿ । ತಥಾ ಚ ಯಥಾ ಅಪರೋಕ್ಷೋದಯಾನಂತರಂ ನ ಯಮಾದಿದಂಡ್ಯತಾ ತಥಾ

**ಪ್ರಾಗಪೀತಿ। ಕದಾಪಿ ಯಸ್ಯ ಜಿಹ್ವಾ ನ ವಕ್ತಿ ಭಗವನ್ನಾಮ ತಾನಸತ ಏವಾನಯಧ್ವಮಿತಿ ಸಾಧೂಕ್ತಮಿತಿ ದಿಕ್ ॥**

❖❖❖

**ಯಮಧರ್ಮನು ದೂತರಿಗೆ ಹೇಳುವನು—**

**ಯಾರ ನಾಲಿಗೆ ಒಮ್ಮೆಯೂ ಭಗವಂತನ ಗುಣನಾಮಕೀರ್ತನ ಮಾಡದೋ ಒಮ್ಮೆಯೂ ಮನಸು ಅವನ ಚರಣಾರವಿಂದವನ್ನು ನೆನೆಯದೊ ಒಮ್ಮೆಯೂ ತಲೆ ಅವನಿಗೆ ಮಣಿಯದೋ ಹರಿಕಥಾಶ್ರವಣಾದಿ ನವ ವಿಧ ವೈಷ್ಣವಧರ್ಮವನ್ನು ಯಾವುದನ್ನೂ ಆಚರಿಸದಿರುವ ಆ ದುರ್ಜನರನ್ನು ಸೆಳೆದು ತನ್ನಿರಿ' ಎಂದು.**

ಭಟರು ಕೇಳುತ್ತಾರೆ. 'ಹರಿನಾಮಕೀರ್ತನ ಮಾಡದ ಜನರನ್ನು ಸೆಳೆದು ತನ್ನಿರಿ' ಎಂದು ನಮಗೆ ಆಜ್ಞೆ ಮಾಡುತ್ತಿರುವಿರಿ. ಆದರೆ ಸಜ್ಜನರು ಕೆಲವೊಮ್ಮೆ ನಾಮಸಂಕೀರ್ತನೆಗೆ ವಿಮುಖರಾಗುತ್ತಾರೆ. ಅದಕ್ಕೆ ಅವರಿಗೆ ನರಕಶಿಕ್ಷೆ ಬೇಡವೆ? ಮತ್ತು ದುರ್ಜನರು ಕೂಡ ಕೆಲವೊಮ್ಮೆ ಹರಿನಾಮಕೀರ್ತನ ಮಾಡುತ್ತಾರೆ. ಅವರ ಪಾಪಕರ್ಮಗಳಿಗೆ ಶಿಕ್ಷೆ ಇಲ್ಲವೆ?'

ಈ ಪ್ರಶ್ನೆಗಳಿಗೆ ಯಮಧರ್ಮನ ಉತ್ತರ—ನಾಮಸಂಕೀರ್ತನವನ್ನು ಭಕ್ತನು ಮಾಡಿದರೆ ಮಾತ್ರ ಅದು ಸಫಲವಾಗುವುದು. ಭಕ್ತನಲ್ಲದವನು ಮಾಡಿದರೆ ಅದು ನಿಷ್ಫಲವೆ. ಹೀಗಾಗಿ ಭಕ್ತನು ನಾಮಸಂಕೀರ್ತನ ಮಾಡಿ ಪಾಪ ಪರಿಹಾರ ಮಾಡಿಕೊಳ್ಳುವುದರಿಂದ ಅವನನ್ನು ಬಿಟ್ಟು ನಾಮಸಂಕೀರ್ತನ ಮಾಡಿಯೂ ಪಾಪಕಳೆದುಕೊಂಡಿಲ್ಲದ ಅಭಕ್ತನನ್ನು ಮಾತ್ರ ಸೆಳೆದು ತನ್ನಿ' ಎಂದು.

ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣ ಪರಾಙ್ಮುಖೈಃ ।
ನ ವೈ ಪುನಂತಿ ರಾಜೇಂದ್ರ ಸುರಾಕುಂಭಮಿವಾಪಗಾಃ ॥

(ಭಾ.೬.೧.೧೮)

'ಭಕ್ತನು ಮಾಡುವ ನಾಮಸಂಕೀರ್ತನಾದಿಗಳೇ ಪಾಪಪರಿಹಾರ ಹರಿಪ್ರೀತಿ ರೂಪವಾದ ಫಲನ್ನು ಕೊಡುವುವು. ಅಭಕ್ತರು ನಾಮಸಂಕೀರ್ತನ ಮಾಡಿದರೂ ಅದು ನಿಷ್ಫಲವೆ. ಅದು ಪಾಪಪರಿಹಾರ ಮಾಡದು. ಹೆಂಡದ ಗಡಿಗೆಯನ್ನು

ನದಿಗಳಲ್ಲಿ ತೊಳೆದ ಮಾತ್ರಕ್ಕೆ ಅದರ ದುರ್ವಾಸನೆ ಹೋಗಲಾರದು' ಎಂದು ಶುಕಮುನಿಗಳ ಉಪದೇಶವಿದೆ.

ಭಕ್ತಿ ಎಂಬುದು ಸುಜೀವನಿಗೇ ಸಿಗುವ ರತ್ನ. ದುರ್ಜನರಿಗೆ ಅದು ಸಿಗಲಾರದು. ಇಂಥ ಭಕ್ತಿಉಳ್ಳ ಜೀವನಿಗೆ ಹರಿಯ ಅನುಗ್ರಹದ ರಕ್ಷಾಕವಚ ಸದಾ ಇರುತ್ತದೆ. ಇವನು ಕೆಲವೊಮ್ಮೆ ಕಾರಣಾಂತರದಿಂದ ಹರಿಯನ್ನು ಮರೆತು ಅವನಿಂದ ದೂರಸರಿಯಬಹುದು. ಅವನಲ್ಲಿ ಅಪರಾಧವನ್ನು ಮಾಡಬಹುದು. ಆದರೂ ತಂದೆ ಮಗನ ಅಪರಾಧವನ್ನು ಕ್ಷಮಿಸುವಂತೆ ಹರಿ ಈತನನ್ನು ತಾನಾಗಿ ಕ್ಷಮಿಸುವನು. ಅನಂತ ಅಪರಾಧ ಮಾಡಿದ ಅಜಾಮಿಳನನ್ನು ಹರಿ ಕಾಪಾಡಿದ್ದಾನೆ. ಯಮಭಟರ ಕೈಗೆ ಬಿಟ್ಟುಕೊಡಲಿಲ್ಲ.

ಭಕ್ತಿ ಎಂದೂ ಇಲ್ಲದ ದುರ್ಜನನು ಹರಿಗೆ ಸದಾ ವಿಮುಖವಾಗಿರುತ್ತಾನೆ. ಒಮ್ಮೆಯೂ ಭಕ್ತಿಯಿಂದ ಹರಿಯನ್ನು ಅವನು ಸೇವಿಸುವುದಿಲ್ಲ. ಅವನು ಮಾಡುವ ತಪ್ಪಿಗೆ ಕ್ಷಮೆ ಇಲ್ಲ. ಅದರಿಂದ ಒಮ್ಮೆಯಾದರೂ ಭಕ್ತಿಯಿಂದ ಹರಿಸೇವೆ ಮಾಡಿದ ಜೀವನು ಹರಿಯ ಅನುಗ್ರಹ ಪಾತ್ರನಾಗುತ್ತಾನೆ. ಅವನ ಪಾಪಗಳು ದೂರವಾಗುವುವು. ಇಂಥ ಸುಜೀವನನ್ನು ಮುಟ್ಟಬೇಡಿರೆಂದು ಯಮರಾಜನು ಭಟರಿಗೆ ಆಜ್ಞೆ ಮಾಡಿದ್ದಾನೆ. 'ಶ್ರೀಹರಿಯ ಭಕ್ತರನ್ನು ಹರಿಯೆ ಇತರರಿಂದಲೂ ನನ್ನಿಂದಲೂ ಏನೂ ಅಪಾಯಬಾರದಂತೆ ಕಾಪಾಡುತ್ತಿದ್ದಾನೆ' ಎಂದೂ ಎಚ್ಚರಿಸಿದ್ದಾನೆ.

ಇಲ್ಲಿ ಒಂದು ಪ್ರಶ್ನೆ—ಜೀವನು ಮುಕ್ತಿಯೋಗ್ಯನಾಗಿದ್ದರೆ ಸಾಕು ಅವನೇನು ಪಾಪ ಮಾಡಿದರೂ ಯಮದೂತರ ಭಯವಿಲ್ಲವೆಂದರೆ ಅವನು ಬದುಕಿರುವಾಗಲೇ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಮಾಡಿಕೊಳ್ಳದಿದ್ದರೆ ನರಕದ ಶಿಕ್ಷೆ ಅವನಿಗೆ ಅವಶ್ಯ ಇರುತ್ತದೆ ಎನ್ನುವ ಮಾತಿಗೆ ಏನರ್ಥ? ಎಂದು.

ಇದಕ್ಕೆ ಸಮಾಧಾನ—ನರಕಶಿಕ್ಷೆ ಎಂದರೆ ನರಕಲೋಕದಲ್ಲಿ ಸಿಗುವ ಶಿಕ್ಷೆ ಎಂದರ್ಥವಲ್ಲ. ಪರಮಾತ್ಮನ ಬಗ್ಗೆ ಏನೂ ಅರಿವೇ ಇಲ್ಲದ ಪ್ರಾಣಿಜನ್ಮ. ಅಥವಾ ನರಜನ್ಮ ಬಂದರೂ ಅವನು ನರಕಸ್ಥನಂತೆ ಪರಮಾತ್ಮನ ಬಗ್ಗೆ ಜ್ಞಾನಶೂನ್ಯನಾಗಿರುತ್ತಾನೆ ಎಂದರ್ಥ. ಏಕೆಂದರೆ,

'ಮಾತ್ರಾತ್ಮಕತ್ವಾತ್ ನಿರಯೇ ಸುಸಂಗಮಃ'

'ಯತ್ಸ್ಪರ್ಶಜಂ ನರಕೇऽಪಿ ನೃಣಾಂ'

'ಯೇ ನಾರಕಾಣಾಂ ಅಪಿ ಸಂತಿ ದೇಹಿನಾಂ'

ಇತ್ಯಾದಿ ಕಡೆಗಳಲ್ಲಿ ಭಾಗವತದಲ್ಲಿಯೇ 'ನರಕದಲ್ಲಿಯೂ ಜೀವರಿಗೆ ಶಬ್ದಾದಿ ವಿಷಯಸುಖ ಲಭ್ಯವಿದೆ.' 'ಸ್ಪರ್ಶಜನ್ಯಸುಖವಿದೆ' 'ವಿಷಯ ಸುಖವಿದೆ' ಎಂದು ಮುಂತಾಗಿ ವಚನಗಳಿವೆ. ಆದರಿಂದ 'ನರಕ'ವೆಂದರೆ ಪ್ರಾಣಿಜನ್ಮ ಅಥವಾ ಪ್ರಾಣಿಯಂತೆ ಹರಿಯಬಗ್ಗೆ ಅಜ್ಞಾನ ಎಂದೇ ಹೇಳಬೇಕು. ಅಜ್ಞಾನವೇ 'ನರಕ'ವೆಂದು ಇಲ್ಲಿ ಎಲ್ಲ ಕಡೆ ವಿವಕ್ಷಿತವಾಗಿದೆ.

'ಅಧ್ಯಾತ್ಮದೀಪಮತಿತಿತೀರ್ಷತಾಂ ತಮೋಽಂಧಂ' (೧.೨.೩)

ಎಂಬಲ್ಲಿ ಅಜ್ಞಾನವನ್ನು 'ಅಂಧಂತಮ' ಎಂದೇ ಕರೆದುದುಂಟು. ಇಲ್ಲಿ ಅಂಧಂತಮ ಎಂದರೆ ನಿತ್ಯನರಕ ಎಂಬರ್ಥವನ್ನು ಗ್ರಹಿಸಲಾಗದು ತಾನೆ? ಭಗವದ್ಭಕ್ತರಿಗೆ ಭಗವಂತನ ಅಜ್ಞಾನವು ಉಂಟಾದರೆ ಅದು ನರಕದುಃಖ ಕ್ಕಿಂತಲೂ ಅಧಿಕ ದುಃಖಕರ. ಸನಕಾದಿಗಳು, 'ಶ್ರೀಹರಿ! ನಮಗೆ ನರಕದಲ್ಲಿ ನಿನ್ನ ಪಾದಸ್ಮರಣೆ ಇರುವುದಾದರೆ ಅಂಥ ನರಕವೇ ನಮಗೆ ಪ್ರಾಪ್ತವಾಗಲಿ' ಎನ್ನುತ್ತಾರೆ—

ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾ<br>
ಶ್ಚೇತೋऽಲಿವದ್ಯದಿ ತು ತೇ ಪದಯೋ ರಮೇತ ॥

(ಭಾ.೩.೧೬.೪೧)

ಎಂದು ಹಿಂದೆ ೨೮೦ನೇ ಶ್ಲೋಕದಲ್ಲಿ ಇದನ್ನು ಹೇಳಿದ್ದೇವೆ. ಲೋಕದಲ್ಲಿಯೂ ಈ ರೀತಿ ಬೇರೆಬೇರೆಯಾಗಿ ಅಪರಾಧಗಳಿಗೆ ಶಿಕ್ಷೆ ನೀಡುವುದು ಕಂಡಿದೆ. ಒಂದೇ ತಪ್ಪನ್ನು ಮಂತ್ರಿಗಳು ರಾಜಕುಮಾರರು ಮುಂತಾದವರು ಮಾಡಿದರೂ ಕಳ್ಳರೂ ಸೇವಕರೂ ಮಾಡಿದರೂ ಶಿಕ್ಷೆ ಒಂದೇ ರೀತಿ ಇರುವುದಿಲ್ಲ. ಅವರವರ ಯೋಗ್ಯತೆಗೆ ತಕ್ಕಂತೆ ದಂಡಿಸುವುದುಂಟು. ಆದರಿಂದ ಯಮರಾಜನು ಭಕ್ತರ ಭಕ್ತಿ ಮುಂತಾದ ಸ್ವರೂಪಗುಣಗಳನ್ನು ಲೆಕ್ಕಿಸದೆ, ಕಾರಣಾಂತರದಿಂದ ಅವರು ಮಾಡುವ ಅವರ ಸ್ವರೂಪದಲ್ಲಿಲ್ಲದ ಪಾಪವನ್ನು ಪಾಪಿಜೀವರ ಪಾಪದಂತೇ ಪರಿಗಣಿಸಿ ಪಾಪಿಜೀವರಿಗೆ ನರಕದಲ್ಲಿ ನೀಡುವಂಥ ಘೋರ ಶಿಕ್ಷೆಯನ್ನು ಕೊಡುವುದಿಲ್ಲ.

ಸುಜೀವರ ಮನಸು ಸಾಮಾನ್ಯವಾಗಿ ಪಾಪ ಮಾರ್ಗವನ್ನು ಹಿಡಿಯುವುದೇ ಇಲ್ಲ. ಕಾರಣಾಂತರದಿಂದ ಪಾಪಮಾರ್ಗವನ್ನು ಒಂದುವೇಳೆ ಹಿಡಿದರೆ ಅವರಿಗೂ ಅನರ್ಥವಿದೆ ಎಂದು ಮಾತ್ರ ತಿಳಿಸಲು 'ನರಕ' ಶಬ್ದಪ್ರಯೋಗ ಮಾಡುವುದು ಕಂಡಿದೆ. ತಂದೆ ಮಗನಿಗೆ, ಗುರು ಶಿಷ್ಯನಿಗೆ 'ಹೀಗೆ ಮಾಡಬೇಡ ಇದು ನಿನಗೆ ಒಳ್ಳೆಯದಲ್ಲ. ಆದರೂ ಮಾಡುವಿಯಾದರೆ ಶಿಕ್ಷೆ ಮಾಡುವೆನು' ಎಂದು ಗದರಿಸುತ್ತಾನೆ. ಮಗನಿಗೂ ಶಿಷ್ಯನಿಗೂ ಹೀಗೆ ಗದರುವುದೇ ಶಿಕ್ಷೆ. ಬೇರೆಯವರಿಗೆ ದೈಹಿಕವಾಗಿ ಶಿಕ್ಷೆ. ಮಗನೂ ಶಿಷ್ಯನೂ ಬೇಗನೆ ತಿಳಿದು ತಂದೆಯ ಗುರುವಿನ ಮಾತಿನಂತೆ ನಡೆಯುತ್ತಾರೆ. ಬೇರೆಯವರು ಮಾತಿಗೆ ವಿರುದ್ಧವಾಗಿ ನಡೆಯುವರು. ಅವರಿಗೆ ಸರಿಯಾದ ಶಿಕ್ಷೆ ಇರುತ್ತದೆ. ಅದೇರೀತಿ ಸುಜೀವರು ವಿಧಿನಿಷೇಧಗಳಿಗೆ ಅಂಜಿ ಸರಿಯಾದ ಮಾರ್ಗದಲ್ಲಿಯೆ ನಡೆಯುವರು. ಅವರಿಗೆ ಶಿಕ್ಷೆ ನೀಡುವ ಪ್ರಸಂಗ ಬರುವುದಿಲ್ಲ. ದುರ್ಜನರು ವಿಧಿನಿಷೇಧಗಳನ್ನು ಧಿಕ್ಕರಿಸಿ ತಪ್ಪುಮಾಡಿ ನರಕ ಶಿಕ್ಷೆಗೆ ಭಾಜನರಾಗುವರು.

ಮಕ್ಕಳು ಒಳ್ಳೆಯವರೇ ಇದ್ದರೂ ಕಾರಣಾಂತರದಿಂದ ತಪ್ಪು ಮಾಡಬಹುದು. ಆಗ ಹಿರಿಯರು, ಪಾಪ! ಈತನ ಸ್ವಭಾವ ಒಳ್ಳೆಯದು, ಪ್ರಮಾದದಿಂದ ಅಥವಾ ಕೆಟ್ಟಮಕ್ಕಳ ಸಂಗದೋಷದಿಂದ ತಪ್ಪು ಮಾಡುತ್ತಿದ್ದಾನೆ ಎಂದು ತಿಳಿದು ಗದರಿ ಸುಮ್ಮನಾಗುವರು, ಕ್ಷಮಿಸುವರು. ಅಂತೆಯೆ ಭಗವಂತನೂ ಭಕ್ತರ ಗುಣವನ್ನು ಮಾತ್ರ ಕಾಣುತ್ತಾನೆ ಹೊರತು ತಪ್ಪನ್ನು ಗಂಭೀರವಾಗಿ ಪರಿಗಣಿಸನು.

ಹೀಗಾಗಿ ಯಮರಾಜನು 'ಹರಿಭಕ್ತರನ್ನು ನಾನು ದಂಡಿಸಲಾರೆನು ಒಂದುವೇಳೆ ಅವರು ಪಾಪವನ್ನು ಮಾಡಿದ್ದರೂ ಅದು ಪ್ರಮಾದದಿಂದ ಅಥವಾ ಅಸುರಾವೇಶದಿಂದ, ಸ್ವಭಾವದಿಂದಲ್ಲ. ಸ್ವಭಾವದಿಂದ ಅವರು ಮಾಡಿದ ಶ್ರವಣಾದಿಗಳಿಂದ ಆ ಪಾಪವು ಪರಿಹಾರವಾಗಿ ಹೋಗಿದೆ. ಭಗವಂತ ಕ್ಷಮಿಸಿದ್ದಾನೆ' ಎನ್ನುತ್ತಾನೆ.

ಕೆಲವೊಮ್ಮೆ ಮಹಾಅಪರಾಧಗೈದರೂ ಅದಕ್ಕೆ ತಕ್ಕ ಪ್ರಾಣಿಜನ್ಮ ವೃಕ್ಷಾದಿ ಜನ್ಮರೂಪ ಶಿಕ್ಷೆ ನೀಡುತ್ತಾನೆ ಹೊರತು ನರಕಶಿಕ್ಷೆಯನ್ನು ಸರ್ವಥಾ ಕೊಡಲಾರ. ಅಪರೋಕ್ಷ ಜ್ಞಾನೋತ್ತರದಲ್ಲಿ ಸ್ವೋತ್ತಮಾಪರಾಧವನ್ನು ಬಿಟ್ಟು ಬೇರೆ ಯಾವ

ಅಪರಾಧಕ್ಕೂ ನರಕಾದಿ ಶಿಕ್ಷೆ ಇಲ್ಲ. ಹಾಗೇ ಅಪರೋಕ್ಷಕ್ಕಿಂತ ಪೂರ್ವದಲ್ಲಿಯೂ ಸುಜೀವರಿಗೆ ನರಕಾದಿ ಶಿಕ್ಷೆ ಇಲ್ಲ. ದುರ್ಜನರಿಗೆ ಮಾತ್ರ ನರಕಾದಿ ಶಿಕ್ಷೆ, ಅವರನ್ನು ಮಾತ್ರ ಹಿಡಿದು ಎಳೆದು ತನ್ನಿರೆಂದು ಯಮನು ಭಟರಿಗೆ ಆದೇಶಿಸುವನು.

❖❖❖

—೩೫—

**ಭಕ್ತನಿಗೆ ಎಂದೂ ನರಕ ಶಿಕ್ಷೆ ಇಲ್ಲ**

**ತತ್‌ಕ್ಷಮ್ಯತಾಂ ಸ ಭಗವಾನ್ ಪುರುಷಃ ಪುರಾಣೋ**
**ನಾರಾಯಣಃ ಸ್ವಪುರುಷೈರ್ಯದಸತ್ ಕೃತಂ ನಃ ।**
**ಸ್ವಾನಾಮಹೋ ನವಿದುಷಾಂ ರಚಿತಾಂಜಲೀನಾಂ**
**ಕ್ಷಾಂತಿರ್ವರೀಯಸಿ ನಮಃ ಪುರುಷಾಯ ಭೂಮ್ನೇ ॥** (ಭಾ.೬.೩.೩೦)

ಯತ ಏವಂ ಭಗವದ್ಭಕ್ತೋಽದಂಡ್ಯಃ ಯಸ್ಮಾತ್ಕಾರಣಾಚ್ಚ ತಾದೃಶೇಽಜಾಮಿಲೇ ನಃ ಅಸ್ಮಾಕಂ ಅಸ್ಮತ್ಕರ್ತೃಕಂ ಅಸತ್ಕೃತಮಯೋಗ್ಯಮಾಚರಣಂ ಯತ್ತತ್ ಸಃ ಭಕ್ತಾನಾಂ ಮತ್ತಃ ಅನ್ಯತಃ ಸರ್ವತಶ್ಚ ಸಂರಕ್ಷಣಾಯ ಸ್ವಪಾರ್ಷದಸ್ಥಾಪನಾದಿನಾ ಸ್ವಭಕ್ತೇಷು ಪರಮಕೃಪಾವಾನ್ ಭಗವಾನಪರಾಧವೇತ್ತಾ ಪುರಾಣಪುರುಷೋ ನಾರಾಯಣಃ ಕ್ಷಮ್ಯತಾಂ ಕ್ಷಮತಾಂ। ನನು ಭವತಾ ಅಪರಾಧೋ ನ ಕೃತ ಏವ ಕಿಮರ್ಥಂ ಕ್ಷಮಾ ಅರ್ಥ್ಯತ ಇತ್ಯತ ಉಕ್ತಂ—ಸ್ವಪುರುಷೈಃ ಸ್ವಭೃತ್ಯೈಃ ಯದಸತ್ಕಾರ್ಯಂ ಕೃತಂ ತನ್ನಃ ಅಸ್ಮಾಕಂ ಸ್ವಾಮಿನಾಮೇವೇತಿ। **ಯಥಾಹುಃ—**

''ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ।
ತದ್ಧ್ಯೇವಾತ್ಮಕೃತಂ ಮನ್ಯೇ ಯತ್ಸ್ವಪುಂಭಿರಸತ್ಕೃತಾಂ ॥

ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ।
ಸೋಽಸಾಧುವಾದಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ'' ಇತಿ।

ನನು ತೈರಪಿ ತಸ್ಯಾವಜ್ಞಾ ನ ಕೃತಾ ಇತ್ಯತ ಉಕ್ತಂ। **ಸ ಭಗವಾನಿತಿ ॥** ತದ್ಭಕ್ತೇಷ್ವಪರಾಧ ಏವ ತಸ್ಯಾಪರಾಧ ಇತಿ ಭಾವಃ। ಕ್ಷಮಾಪನಂ ಚ ಕ್ಷಮಾವಂತಂ ಪ್ರತ್ಯೇವ ಉಚಿತಂ ದೃಷ್ಟಂ। ಅಯಂ ತು ತೇಷಾಂ ಮಧ್ಯೇ ವರಿಷ್ಠ ಇತಿ ಮದೀಯಂ ಕ್ಷಮಾಪನಂ ಯುಕ್ತತರಮೇವೇತ್ಯಾಶಯೇನ ಉಕ್ತಂ ನವಿದುಷಾಂ

**ಅವಿದುಷಾಂ । ತತ ಏವ ಅಪರಾಧಕರ್ತೄಣಾಂ ಸ್ವಾನಾಂ ಕಿಂಕರಾಣಾಂ ವಿಷಯೇ ಕ್ಷಾಂತಿಃ ಸಕೃದಪರಾಧಸಹನಂ ವರೀಯಸಿ ಕ್ಷಮಾವತಾಂ ಮಧ್ಯೇ ಉತ್ತಮೇ ಭಗವತಿ ವಿದ್ಯತ ಏವೇತಿ । ಅಯಮೇಕ ಏವ ಅಸ್ಮದುಪಾಯ ಇತಿ ಭಾವೇನಾಹ । ಪುರುಷಾಯ ಭೂಮ್ನೇ ನಮ ಇತಿ ॥ ಅನೇನ ಕ್ಷಮಾಪನೇನಾಪಿ ಮುಕ್ತಿಯೋಗ್ಯಸ್ಯ ಭಕ್ತಸ್ಯ ಯಮದಂಡೋ ನಾಸ್ತೀತಿ ಸೂಚಿತಂ ॥**

❖❖❖

**ಯಮರಾಜನು ಹರಿಯಲ್ಲಿ ಕ್ಷಮೆ ಬೇಡುತ್ತಾನೆ—**

**ಭಕ್ತರಿಗೆ ನನ್ನಿಂದಲೂ ಇತರ ದುಷ್ಟರಿಂದಲೂ ಎಲ್ಲ ಕಡೆಯಿಂದಲೂ ಆಪತ್ತುಬಾರದಂತೆ ರಕ್ಷಿಸಲು ತನ್ನ ಪಾರ್ಷದರನ್ನು ನೇಮಿಸಿರುವ ಆದಿಪುರುಷ ಪರಮಾತ್ಮ ಪರಮಕೃಪಾಳುವಾದ ಶ್ರೀನಾರಾಯಣನು ನಮ್ಮ ತಪ್ಪನ್ನು ಕ್ಷಮಿಸಲಿ. ಏಕೆಂದರೆ ನಿನ್ನ ಭಕ್ತರಿಗೆ ನಮ್ಮ ಭಟರಿಂದ ಏನು ಅಪಚಾರವಾದರೂ ಅದು ನಮ್ಮದೇ ಎನಿಸುವುದರಿಂದ ನಾವು ಅಪರಾಧ ಮಾಡಿದಂತಾಯಿತು. ತಿಳಿಯದೆ ತಪ್ಪು ಮಾಡಿ ಕೈಮುಗಿದು ಬೇಡಿಕೊಳ್ಳುತ್ತಿರುವ ನಾನೂ ನನ್ನ ಭಟರೂ ನಿನ್ನವರೆ ಆಗಿರುವುದರಿಂದ ನಮ್ಮ ತಪ್ಪನ್ನು ಕ್ಷಮಿಸುವುದು ಕ್ಷಮಾಶಾಲಿಗಳಲ್ಲಿ ಶ್ರೇಷ್ಠನಾದ ನಿನ್ನಲ್ಲಿರುವ ಶ್ರೇಷ್ಠಗುಣವೇ ಆಗಿದೆ. ನಾವು ಮಾಡಬೇಕಾಗಿರುವುದು ಇದೊಂದೆ, 'ಪರಮಪುರುಷನಿಗಿದೋ ನಮಸ್ಕಾರ' ಎನ್ನುತ್ತೇವೆ.**

ಹೀಗೆ ಯಮನು ಕ್ಷಮಾಯಾಚನೆ ಮಾಡುವುದರಿಂದ ಭಕ್ತರಿಗೆ ನರಕಶಿಕ್ಷೆ ಇಲ್ಲ ಎಂದು ಸೂಚಿತವಾಗುತ್ತದೆ.

ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ
ತದ್ಧ್ಯೇವಾತ್ಮಕೃತಂ ಮನ್ಯೇ ಯತ್ ಸ್ವಪುಂಭಿರಸತ್ಕೃತಾಃ ।
ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ ।
ಸೋಽಸಾಧುವಾದಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ ॥

(ಭಾ.೩.೧೭.೪,೫)

ಶ್ರೀಹರಿ ಸನಕಾದಿಗಳ ಮುಂದೆ ಹೇಳುತ್ತಾನೆ—

ಬ್ರಾಹ್ಮಣರು ನನಗೆ ಪರದೇವತೆಗಳು ಅತ್ಯಂತ ಪ್ರೀತಿಪಾತ್ರರು. ಆದರಿಂದ ನಾನು ನಿಮ್ಮಲ್ಲಿ ಕ್ಷಮೆ ಬೇಡುತ್ತೇನೆ. ಏಕೆಂದರೆ ನನ್ನ ಸೇವಕರಾದ

ಜಯವಿಜಯರಿಂದ ನಿಮಗೆ ಅಪಚಾರವಾಗಿದೆ ಎಂದಮೇಲೆ ಅದು ನಾನೇ ಮಾಡಿದ ಅಪಚಾರವಾಯಿತೆಂದು ಭಾವಿಸುತ್ತೇನೆ.

ಲೋಕದಲ್ಲಿ ಸೇವಕನು ಅಪರಾಧ ಮಾಡಿದಾಗ ಅದಕ್ಕೆ ಜವಾಬುದಾರ ಯಜಮಾನ, ಯಜಮಾನನ ಹೆಸರನ್ನೇ ಎತ್ತಿ ಹೇಳುತ್ತಾರೆ. ಈ ನಿಂದೆ ಯಜಮಾನನ ಕೀರ್ತಿಯನ್ನು ನಾಶಮಾಡುತ್ತದೆ. ಚರ್ಮರೋಗವು ಚರ್ಮವನ್ನು ನಾಶಪಡಿಸುವಂತೆ'

—ಹೀಗೆ ಸನಕಾದಿ ಮುನಿಗಳಲ್ಲಿ ವೈಕುಂಠಪತಿ ಕ್ಷಮೆ ಬೇಡುತ್ತಾನೆ. ಆದರಿಂದ ಯಮರಾಜನೂ ಕೂಡ ತನ್ನ ಭಟರು ಭಕ್ತನಾದ ಅಜಾಮಿಳನನ್ನು ಸೆಳೆಯಲು ಬಂದು ಅಪರಾಧ ಮಾಡಿದ್ದಕ್ಕೆ ನಾನೇ ಜವಾಬುದಾರ. ಈ ಅಪರಾಧವನ್ನು ನಾನು ಹೊತ್ತುಕೊಳ್ಳುವೆನೆನ್ನುತ್ತಾನೆ.

❖❖❖

## —೩೬೦—

### ಭಕ್ತರನ್ನು ಕಣ್ಣೆತ್ತಿ ನೋಡಲೂ ಯಮಭಟರು ಅಂಜುವರು

ಇತ್ಥಂ ಸ್ವಭರ್ತೃಗದಿತಂ ಭಗವನ್ಮಹಿತ್ವಂ
ಸಂಶ್ರಾವ್ಯ ವಿಸ್ಮಿತಧಿಯೋ ಯಮಕಿಂಕರಾಸ್ತೇ ।
ತೇನಾಚ್ಯುತಾಶ್ರಯಜನಂ ಪ್ರತಿ ಶಂಕಮಾನಾಃ
ದ್ರಷ್ಟುಂ ಚ ಬಿಭ್ಯತಿ ತತಃಪ್ರಭೃತಿ ಸ್ಮ ರಾಜನ್ ॥

(ಭಾ.೬.೩.೩೨)

ಭಗವದ್ಭಕ್ತಾನಾಂ ನಿರೀಕ್ಷಣೇ ಸರ್ವಥಾ ಯಮಭಟಾ ನ ಶಕ್ತಾಃ ಕಿಂ ತೈಃ ಪಾಶಾದಿನಾ ಬಂಧನಾದಿ ಸ್ಯಾದಿತ್ಯತೋ ಭಗವನ್ನಾಮಮಹಿಮಾ ಈದೃಶೀ ಇತಿ ತತ್ರೈವ ಆದರಃ ಕಾರ್ಯೋ ಭವದ್ಭಿರ್ಮುಮುಕ್ಷುಭಿರಿತ್ಯಾಶಯೇನಾಹ ॥ ಇತ್ಥಮಿತಿ ॥

''ನಾಮೋಚ್ಚಾರಣಮಾಹಾತ್ಮ್ಯಂ ಹರೇಃ ಪಶ್ಯತ ಪುತ್ರಕಾಃ ।
ಅಜಾಮಿಲೋಽಪಿ ಯೇನೈವ ಮೃತ್ಯುಪಾಶಾದಮುಚ್ಯತ'' ॥

ಇತಿ ಸ್ವಾನಭಿಮುಖೀಕೃತ್ಯ ''ಏತಾವತಾಲಮಘನಿರ್ಹರಣಾಯೇ'' ತ್ಯಾದಿನಾ ಸ್ವಸ್ವಾಮಿನಾ ಯಮೇನ ಗದಿತಂ ಭಗವತೋ ನಾಮ್ನಶ್ಚ ಮಾಹಾತ್ಮ್ಯಂ

**ನಿಶಮ್ಯ ವಿಸ್ಮಿತಧಿಯೋ ಬಭೂವುಃ। ತೇನ ವಿಜ್ಞಾತ ಭಗವನ್ಮಹಿಮತ್ವೇನ ತತಃಪ್ರಭೃತಿ ತದ್ದಿನಮಾರಭ್ಯ। ಯದಾ ವೃತ್ತಿರೂಪಂ ಜ್ಞಾನಾದಿಕಂ ಜನ್ಮಾಂತರಕೃತಮಪಿ ತೇ ಗಣಯಂತಿ ಕಿಮು ತದಾ ಸ್ವರೂಪಭೂತಂ ಜ್ಞಾನಭಕ್ತ್ಯಾದಿಕಂ ಮಾನಯೇಯುರಿತಿ ವಕ್ತವ್ಯಮಿತ್ಯಭಿಪ್ರೇತ್ಯ ಉಕ್ತಂ ಅಚ್ಯುತ ಏವಾಶ್ರಯಃ ಯಸ್ಯ ತಾದೃಶಂ ಜನಮಿತಿ ತಂ ಪ್ರತಿ ಶಂಕಮಾನಾಃ ಕದಾಚಿದಜ್ಞಾನೇನ ತೇಷಾಂ ಪಾಶಬಂಧನಾದ್ಯುದ್ಯೋಗೇನ ಅವಜ್ಞಾನಘಟನೇ ಭಗವತಃ ಕೋಪೇನ ಮಹಾನನರ್ಥಃ ಅಸ್ಮಾಕಂ ಭವೇದಿತಿ ಭೀತಿಮಂತೋ ದ್ರಷ್ಟುಮಪಿ ಸಹಸಾ ಬಿಭ್ಯತಿ ಯದಾ ತದಾ ವ್ಯಾಪಾರಾಂತರಂ ಕರ್ತುಂ ಬಿಭ್ಯತೀತಿ ಕಿಮು ವಾಚ್ಯಮಿತಿ ॥**

❖❖❖

**ಶುಕಮುನಿ ಹರಿಭಕ್ತರ ಮತ್ತು ಹರಿನಾಮಕೀರ್ತನೆಯ ಮಹಿಮೆಗಳನ್ನು ಹೇಳಿದರು—**

**ಹೀಗೆ ತಮ್ಮ ಪ್ರಭು ಯಮರಾಜನು ಭಗವಂತನ ಮಹಿಮೆಯನ್ನು ಹೇಳಿದುದನ್ನು ಕೇಳಿಸಿಕೊಂಡು ಭಟರು ಅಚ್ಚರಿಗೊಂಡರು. ಅಂದಿನಿಂದ ಹರಿಭಕ್ತರನ್ನು ನೋಡಿ, ಅವರನ್ನು ಸೆಳೆಯಲು ಹೋದರೆ ಹರಿ ಕುಪಿತನಾದಾನೆಂದು ಭಯಗೊಂಡು ಅವರನ್ನು ಕಣ್ಣೆತ್ತಿ ನೋಡುವುದಕ್ಕೂ ಭಯಪಟ್ಟು ಹಿಂದೆಗೆಯುವರು ಎಂದಮೇಲೆ, ಸೆಳೆದೊಯ್ಯುವುದು ನರಕ ಶಿಕ್ಷೆ ನೀಡುವುದು ಸರ್ವಥಾ ಇಲ್ಲವೆಂದು ಬೇರೇನು ಹೇಳಬೇಕು.**

ಭಕ್ತರು ಜನ್ಮಾಂತರದಲ್ಲಿ ಸಂಪಾದಿಸಿದ ಶಾಸ್ತ್ರಜ್ಞಾನಜನ್ಯಭಕ್ತಿಯನ್ನೂ ಕೂಡ ಯಮಭಟರು ಪರಿಗಣಿಸುವರೆಂದಮೇಲೆ ಇನ್ನು ಸ್ವರೂಪಭೂತವಾದ ಜ್ಞಾನಭಕ್ತ್ಯಾದಿಗಳನ್ನು ಆದರಿಸದಿರುವರೆ ಎಂದು ಬೇರೆ ಹೇಳಬೇಕಾಗಿಲ್ಲ. ಅದರಿಂದ ಹರಿನಾಮೋಚ್ಚಾರಣವು ಇಷ್ಟು ಪುಣ್ಯಕರ ಎಂಬುದನ್ನು ತಿಳಿದು ಮುಮುಕ್ಷುಗಳು ನಾಮೋಚ್ಚಾರಣ ಮಾಡುವಲ್ಲಿ ಬಲು ಆದರ ತೋರಬೇಕೆಂಬುದು ಸಿದ್ಧವಾಗುವುದು.

❖❖❖

## —೩೬೧—

## ನಾಮಕೀರ್ತನ ಮಾಡದ ಬ್ರಾಹ್ಮಣನಿಗಿಂತ ಚಂಡಾಲ ಮೇಲು

ಅಹೋ ಬತ ಶ್ವಪಚೋऽತೋ ಗರೀಯಾನ್
ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಂ ।
ತೇಪುಸ್ತಪಸ್ತೇ ಜುಹುವುಃ ಸುರಾದ್ಯಾನ್
ಬ್ರಹ್ಮಾನೂಚುರ್ನಾಮ ಗೃಣಂತಿ ಯೇ ತೇ ॥

(ಭಾ.೩.೩೪.೭)

ನಾಮಕೀರ್ತನೇ ಶೀಘ್ರಪ್ರವೃತ್ತಿಜನನಾಯ ತದ್ವಿರಹಿತಂ ಜನಂ ಧಿಕ್ಕರೋತಿ ॥ **ಅಹೋ ಇತಿ** ॥ ಯಸ್ಯ ಪುರುಷಸ್ಯ ಜಿಹ್ವಾಯಾ ಅಗ್ರೇ ತೇ ತವ ನಾಮ ವರ್ತತೇ ಸ ತಾದೃಶಃ ಶ್ವಪಚೋऽಪಿ ಅತಃ ತಪಆದಿಮತೋऽಪಿ ನಾಮರಹಿತಾದ್ಬ್ರಾಹ್ಮಣಾತ್ ಗರೀಯಾನ್ ಅತಿಶಯೇನ ಶ್ರೇಷ್ಠಃ। ಅಹೋ ಆಶ್ಚರ್ಯಂ । ಬ್ರಾಹ್ಮಣಮೀದೃಶಂ ದೃಷ್ಟ್ವಾ ಖೇದಶ್ಚ ಭವತೀತ್ಯಾಹ ॥ **ಬತೇತಿ** ॥ ಶ್ವಪಚೇ ತಪಆದೇರಭಾವಾತ್ ಅತಃ ಕಥಂ ತಸ್ಯ ವರಿಷ್ಠತ್ವಂ ಇತ್ಯತಃ ತಪಆದಿನಾ ಯತ್ಪುಣ್ಯಂ ಲಭ್ಯತೇ ತಸ್ಯ ಸರ್ವಸ್ಯಾಪಿ ನಾಮೋಚ್ಚಾರಣೇನೈವ ಲಬ್ಧತ್ವಾದಿತ್ಯಾಶಯೇನ ನಾಮ ಗೃಣತೋ ಜನಾನ್ ಸ್ತೌತಿ ॥ **ತೇಪುರಿತಿ** ॥ ಯೇ ನಾಮ ಗೃಣಂತಿ ತ ಏವ ತುಭ್ಯಂ ತ್ವತ್ಪ್ರೀತಯೇ ತಪಃ ಕೃತವಂತಃ ಸುರಾದ್ಯಾನುದ್ದಿಶ್ಯ ಜುಹುವುಃ ಯಜ್ಞಂ ಕೃತವಂತಃ। ವೇದಮನೂಚುಃ ಗುರೂಚ್ಚಾರಣಮನುಸೃತ್ಯ ಅಧೀತವಂತ ಇತಿ। ತತೋ ನಾಮಕೀರ್ತನಾದ್ಯಭಾವೇ ಜನ್ಮ ಅಸಾರ್ಥಕಂ ಭವತೀತಿ ತದವಶ್ಯಂ ಕರ್ತವ್ಯಮಿತಿ ಭಾವಃ ॥

❖❖❖

ದೇವಹೂತಿ ಕಪಿಲನ ಮುಂದೆ ಹರಿನಾಮಕೀರ್ತನ ಮಾಡದವರನ್ನು ಧಿಕ್ಕರಿಸುತ್ತಾಳೆ. ಹರಿನಾಮಕೀರ್ತನೆಯಲ್ಲಿ ಸುಜನರು ಏನೂ ಅನುಮಾನ ಮಾಡದೆ ಬೇಗನೆ ಪ್ರವೃತ್ತಿ ಮಾಡಬೇಕೆನ್ನುತ್ತಾಳೆ—ಯಾರ ನಾಲಿಗೆ ತುದಿಯಲ್ಲಿ ನಾರಾಯಣಾಯ ನಮಃ ಎಂದು ಹರಿನಾಮವು ನಲಿಯುವುದೋ ಅವನು ಚಂಡಾಲನೆ ಆಗಿದ್ದರೂ ಸರಿಯೆ ನಾಮಕೀರ್ತನ ಮಾಡದ ಬ್ರಾಹ್ಮಣನಿಗಿಂತಲೂ ಶ್ರೇಷ್ಠನೆನಿಸುತ್ತಾನೆ. ಚಂಡಾಲನು ತಪಸ್ಸು ಯಜ್ಞ ವೇದಾಧ್ಯಯನಾದಿ ಅನುಕೂಲಗಳಿಲ್ಲದಿದ್ದರೂ ಹರಿನಾಮೋಚ್ಚಾರಣ ಮಾಡುತ್ತಾನೆ. ಬ್ರಾಹ್ಮಣನು

**ಅವೆಲ್ಲ ಅನುಕೂಲಗಳಿದ್ದೂ ಹರಿನಾಮೋಚ್ಚಾರಣ ಮಾಡುವುದಿಲ್ಲವೆಂದರೆ ಖೇದ ಆಶ್ಚರ್ಯಗಳೆರಡೂ ಆಗುತ್ತವೆ. ಯಾರು ಭಕ್ತಿಯಿಂದ ಹರಿನಾಮೋಚ್ಚಾರಣ ಮಾಡುವನೋ ಅವನು ಚಂಡಾಲನಾದರೂ ತಪಸ್ಸು ಯಜ್ಞ ವೇದಾಧ್ಯಯನ ಗಳನ್ನು ಮಾಡದಿದ್ದರೂ ಮಾಡಿದಂತೆಯೆ ಅವೆಲ್ಲವುಗಳ ಪುಣ್ಯಕ್ಕೆ ಭಾಗಿಯಾಗು ತ್ತಾನೆ.**

ನಾಮಕೀರ್ತನದಲ್ಲಿ ಇಷ್ಟು ಮಹಿಮೆಗಳಿರುವುದರಿಂದ ತಪ್ಪದೆ ಭಕ್ತಿಯಿಂದ ಅರ್ಥಾನುಸಂಧಾನಪೂರ್ವಕವಾಗಿ ಹರಿನಾಮೋಚ್ಚಾರಣ ಮಾಡಬೇಕು.

❖❖❖

# ೩೦. ಗುರುದಕ್ಷಿಣಾ ಪ್ರಕರಣ

## ಪ್ರಕರಣ ಸಾರಾಂಶ

ಅತ್ಯಂತ ರಹಸ್ಯವಾದ ಭಗವಂತನ ಸ್ವರೂಪವನ್ನು ತಿಳಿಸಿದ ಗುರುಗಳಿಗೆ ಪ್ರತಿಯಾಗಿ ಯಾರು ತಾನೆ ಉಪಕಾರ ಮಾಡಬಲ್ಲ? ಆದರೂ ಉಪಕಾರ ಮಾಡುವೆನೆಂದು ಹೊರಟರೆ ಶಿಷ್ಯನು ತನ್ನನ್ನು ತಾನೆ ನಗೆಗೀಡು ಮಾಡಿಕೊಂಡಂತಾಗುವುದು. ಗುರುಚರಣಾರವಿಂದಗಳಲ್ಲಿ ತನ್ನನ್ನೇ ಸಮರ್ಪಿಸಿಕೊಳ್ಳಬೇಕು. ನನ್ನ ಭಕ್ತನಿಗೆ ತತ್ತ್ವೋಪದೇಶಗೈವ ಗುರುವಿಗೆ ನನ್ನನ್ನೇ ನಾನು ಕೊಡುವೆನೆಂದು ಭಗವಂತನೇ ಹೇಳುತ್ತಾನೆ. ಮತ್ತು ಗುರುಗಳು ಭಗವಂತನಲ್ಲಿಯೂ ಭಕ್ತಿಯನ್ನು ಬಿಟ್ಟು ಬೇರೇನೂ ಕೇಳುವುದಿಲ್ಲ ಎಂದು ಋಷಭದೇವ ಹೇಳುತ್ತಾನೆ ಎಂದಮೇಲೆ ಅಂಥ ಗುರು ಅಲ್ಪನಾದ ಶಿಷ್ಯನಿಂದ ಯಾವ ದಕ್ಷಿಣೆ ಸ್ವೀಕರಿಸುವನು?

❖❖❖

–೩೬೨–

### ಬದರೀನಾರಾಯಣನಿಂದ ನಾರದರಿಗೆ ಭಾಗವತೋಪದೇಶವಾಗಿತ್ತು

ಜ್ಞಾನಂ ತದೇತದಖಿಲಂ ದುರವಾಪಮಾಹ
ನಾರಾಯಣೋ ನರಸಖಃ ಕಿಲ ನಾರದಾಯ ।
ಏಕಾಂತಿನಾಂ ಭಗವತಸ್ತದಕಿಂಚನಾನಾಂ
ಪಾದಾರವಿಂದರಜಸಾಽಽಪ್ಲುತದೇಹಿನಾಂ ಸ್ಯಾತ್ ॥

(ಭಾ.೭.೬.೩೩)

ಶ್ರೀಕಮಲಾಪತಯೇ ನಮಃ ॥ ತದೇವಂ ಏಕೋನತ್ರಿಂಶತ್ಪ್ರಕರಣೈರುದಿತಂ ಬಿಂಬಾಪರೋಕ್ಷಜ್ಞಾನಸಾಧನಂ ಭಾಗವತಧರ್ಮಾನುಷ್ಠಾನರೂಪಂ ಮುಕ್ತಿಸಾಧನಂ ನಿಷ್ಕಿಂಚನಾನಾಂ ಪರಮಭಾಗವತಾನಾಂ ವಿನಾ ಸೇವಾಂ ಬಹುಭಿರಪಿ ಜನ್ಮಭಿಃ ಸಾಧನೈಶ್ಚ ದುರ್ಲಭಂ ಸಂತತಮಾದರೇಣ ಚ ಸಂಪಾದನೀಯಂ ಪುರುಷಾರ್ಥಾರ್ಥಿಭಿಃ ಇತಿ ಭಾವೇನ ನೇದಂ ಸಾಧಾರಣಜನೋಪದೇಶ ಪರಂಪರಾಯಾತಂ ಕಿಂತು ಸಾಕ್ಷಾನ್ನಾರಾಯಣೇನ ಬದರಿಕಾಶ್ರಮನಿವಾಸಿನಾ

ಭಾಗವತಪ್ರಧಾನಾಯ ನಾರದಾಯ ಪ್ರೋಕ್ತಂ। **ಯಥಾಹುಃ—** ''ಪುರಾಣಸಂಹಿತಾಮೇತಾಮೃಷಿರ್ನಾರಾಯಣೋಽವ್ಯಯಃ॥ ನಾರದಾಯ ಪುರಾ ಪ್ರಾಹೇ''ತಿ। ತೇನ ಚ ಪರಮಭಾಗವತೇಭ್ಯಃ ಪ್ರಹ್ಲಾದಾದಿಭ್ಯಃ ಪ್ರೋಕ್ತಂ। **ಯಥಾಹುಃ —**

''ಶ್ರುತಮೇತನ್ಮಯಾ ಪೂರ್ವಂ ಜ್ಞಾನಂ ವಿಜ್ಞಾನಸಂಯುತಂ।
ಧರ್ಮಂ ಭಾಗವತಂ ಶುದ್ಧಂ ನಾರದಾದ್‌ದೇವದರ್ಶನಾತ್।'' ಇತಿ।

ಅತೋಽತಿವಿಶ್ವಸನೀಯಮಿತ್ಯಾಹ। **ಜ್ಞಾನಮಿತಿ॥** ಭಗವತೋ ಬಿಂಬರೂಪಸ್ಯ ಜ್ಞಾನಂ ಜ್ಞಾನಸಾಧನಂ ಪೂರ್ವೋಕ್ತಪ್ರಕರಣೈರ್ಯದ್ಯದುದಿತಂ ತದೇತದಖಿಲಮಪಿ ನಾರಾಯಣೋ ನ ಮೂಲರೂಪೀ ಕಿಂತು ಯಮರಾಜ ತನಯತಯಾ ಅವತೀರ್ಣಚತುರ್ಮೂರ್ತ್ಯಂತರ್ಗತಃ ಅವತಾರ ಇತಿ ಜ್ಞಾಪಯಿತುಂ ನರಸಖ ಇತ್ಯಾಹ॥ **ಅಥವಾ—** ಇದಮೇವ ಶೇಷೇಣ ಸನಕಾದಿಭ್ಯಃ ಪ್ರೋಕ್ತಂ ತೈಶ್ಚ ಸಾಂಖ್ಯಾಯನಾಯ ಇತ್ಯಾದಿಕಂ ಸೂಚಯಿತುಂ **ನರಸಖ ಇತ್ಯಾಹ।** ಕಿಲೇತ್ಯನೇನ ತತ್ಪ್ರಸಿದ್ಧಮಿತಿ ಸೂಚಯತಿ। ತತ ಏವಂವಿಧಮುಕ್ತಜ್ಞಾನಸಾಧನಂ ಚ ಅಕಿಂಚನಾನಾಂ ಏಕಾಂತಿನಾಂ ಏಕೋ ಭಗವಾನೇವ ಅಂತೇ ಗತಿಃ ಪುತ್ರಾದಯಸ್ತು ಅನಿಯತಾಃ, ಪ್ರತಿಜನ್ಮ ಸ ಏವ ಯತ್ರ ಯತ್ರ ಜನ್ಮನಿ ಗಚ್ಛತಿ ಜೀವಃ ತತ್ರ ತತ್ರಾಗತ್ಯ ನಿರ್ನಿಮಿತ್ತಂ ರಕ್ಷತೀತ್ಯನುಸಂಧಾನ ವತಾಂ ಭಗವದ್ಭಕ್ತಾನಾಂ ಯೇ ಪಾದಾರವಿಂದೇ ತಯೋಃ ರಜಸಾ ಆಪ್ಲುತಶ್ಚಾಸೌ ದೇಹಶ್ಚ ಸ ಏಷಾಮಸ್ತೀತಿ ತೇಷಾಮೇವ। ಅಥವಾ ಆಪ್ಲುತಾ ಅಭಿಷಿಕ್ತಾ ಯೇ ದೇಹಿನಃ ತೇಷಾಮೇವ ಸ್ಯಾದಿತಿ॥

❖❖❖

ಪ್ರಹ್ಲಾದನು ಅಸುರ ಬಾಲಕರಿಗೆ ಉಪದೇಶಿಸುತ್ತಾನೆ—

ಇಷ್ಟರವರೆಗೆ ಇಪ್ಪತ್ತೊಂಬತ್ತು ಪ್ರಕರಣಗಳಲ್ಲಿ ಹೇಳಿದಂತೆ ಮೂವತ್ತು ಭಾಗವತಧರ್ಮಗಳ ಅನುಷ್ಠಾನವೇ ಮುಕ್ತಿಸಾಧನವಾಗಿವೆ. ಅದನ್ನು ಪಡೆಯಲು ಏಕಾಂತಿಗಳಾದ ನಿಷ್ಕಿಂಚನರಾದ ಭಗವದ್‌ಭಕ್ತರ ಸೇವೆ ಮಾಡದಿರುವವರು ಎಷ್ಟು ಜನ್ಮ ಸಾಧನೆ ಮಾಡಿದರೂ ಸಾಧ್ಯವಾಗುವುದಿಲ್ಲ. ಅಂಥ ದುರ್ಲಭವಾದ ಭಾಗವತಧರ್ಮಾನುಷ್ಠಾನವನ್ನು ಬದರಿನಾರಾಯಣನು ಭಾಗವತೋತ್ತಮರಾದ ನಾರದರಿಗೆ ಉಪದೇಶಿಸಿದನು. ನಾರದರು ಪರಮಭಾಗವತರಾದ ಪ್ರಹ್ಲಾದಾದಿ ಗಳಿಗೆ ಉಪದೇಶಿಸಿದರು.

ಪುರಾಣಸಂಹಿತಾಮೇತಾಂ ಋಷಿರ್ನಾರಾಯಣೋಽವ್ಯಯಃ ।
ನಾರದಾಯ ಪುರಾ ಪ್ರಾಹ ಕೃಷ್ಣದ್ವೈಪಾಯನಾಯ ಸಃ ॥
(ಭಾ.೧೨.೪.೪೧)

—ನಾರಾಯಣನು ನಾರದರಿಗೆ ಉಪದೇಶಿಸಿದ ಅಂಶ ಇಲ್ಲಿ ಸ್ಪಷ್ಟವಿದೆ.

ಶ್ರುತಮೇತನ್ಮಯಾ ಪೂರ್ವಂ ಜ್ಞಾನಂ ವಿಜ್ಞಾನಸಂಯುತಂ
ಧರ್ಮಂ ಭಾಗವತಂ ಶುದ್ಧಂ ನಾರದಾದ್ದೇವದರ್ಶನಾತ್ ॥
(ಭಾ.೭.೬.೩೪)

—ನಾರದರು ಪ್ರಹ್ಲಾದಾದಿಗಳಿಗೆ ಉಪದೇಶಿಸಿದರೆನ್ನುವುದು ಇಲ್ಲಿ ಸ್ಪಷ್ಟ.

ಈ ಭಾಗವತಧರ್ಮಾನುಷ್ಠಾನವೇ ಶ್ರೀಹರಿಯಿಂದ ಬ್ರಹ್ಮನಿಗೆ ಉಪದಿಷ್ಟವಾದಾಗ ಶೇಷನೂ ಜೊತೆಗೆ ಶ್ರವಣ ಮಾಡಿದ್ದರಿಂದ ಶೇಷಾವತಾರನಾದ ಬದರಿನಾರಾಯಣಸೋದರ ನರಋಷಿಯು ಸನಕಾದಿಗಳಿಗೂ ಅವರು ಸಾಂಖ್ಯಾಯನರಿಗೂ ಅವರು ಪರಾಶರ ಬೃಹಸ್ಪತಿಗಳಿಗೂ ಪರಾಶರರು ಮೈತ್ರೇಯರಿಗೂ ಮೈತ್ರೇಯರು ವಿದುರನಿಗೂ ಉಪದೇಶಿಸಿದ್ದು ಭಾಗವತದಲ್ಲಿ ತೃತೀಯ ಚತುರ್ಥಸ್ಕಂಧರೂಪದಿಂದ ಪ್ರಚಲಿತವಿದೆ. ಇದು 'ನಾರಾಯಣೋ ನರಸಖಃ' ಎಂಬ ಮಾತಿನಿಂದ ಸೂಚಿತವಾಗಿದೆ.

❖❖❖

—೩೬೩—

## ಗುರುವಿಗೆ ಆತ್ಮಾರ್ಪಣೆಯೇ ಗುರುದಕ್ಷಿಣೆ

**ಯೈರೀದೃಶೀ ಭಗವತೋ ಗತಿರಾತ್ಮವಾದಃ**
**ಏಕಾಂತತೋ ನಿಗಮಿಭಿಃ ಪ್ರತಿಪಾದಿತಾ ನಃ ।**
**ತುಷ್ಯಂತ್ವದಭ್ರಕರುಣಾಃ ಸ್ವಕೃತೇನ ನಿತ್ಯಂ**
**ಕೋ ನಾಮ ತತ್ ಪ್ರತಿಕರೋತಿ ವಿನೋದಪಾತ್ರಂ ।**
(ಭಾ.೪.೨೨.೫೦)

**ಏವಂ ವಕ್ತವ್ಯಮರ್ಥಮುಪಸಂಹೃತ್ಯ ಏತಾವತಾ ಪ್ರಬಂಧೇನ ಉಪದೇಶಂ ಕೃತ್ವಾ ಸ್ವರೂಪೋದ್ಧಾರಕತ್ರೇ ಗುರವೇ ದಕ್ಷಿಣಾ ದೇಯಾ ಭವತಿ ।**

ತದ್ದಾನಪ್ರಕಾರಮಾಹ ॥ **ಯೈರೀದೃಶೀತಿ** ॥ ವೇದಾರ್ಥೋಪಸಂಹಾರಚತುರೈಃ ಯೈಃ ಆತ್ಮವಾದೇ ಆತ್ಮೋಪದೇಶಾರ್ಥಮೇವ ಪ್ರವೃತ್ತೇ ಉಪನಿಷದಾದಿ ಸರ್ವವೇದಾಂತಸಾರಭೂತೇ ಶಾಸ್ತ್ರೇ। ಏಕಾಂತತೋ ಗೋಪ್ಯತಯಾ ಮುಖ್ಯತಯಾ ಚ। ಪ್ರತಿಪಾದಿತಾ ಯಾ ಭಗವತೋ ಗತಿಃ ಈದೃಶೀ ಇಯಂ ಯೈರ್ನೋऽಸ್ಮಾಕಂ ಅಸ್ಮಾನ್ಪ್ರತಿ ವಾ ಪ್ರತಿಪಾದಿತಾ। ಕಿಂ ಪ್ರಯೋಜನಮುದ್ದಿಶ್ಯ। ನೈವಂ, ಕೇವಲಂ ಕರುಣಯೈವ ಇತ್ಯಾಶಯೇನೋಕ್ತಂ— **ಅದಭ್ರಕರುಣಾ ಇತಿ। ಯಥಾಹುಃ—**

''ಯ ಏತನ್ಮಮ ಭಕ್ತೇಷು ಸಂಪ್ರದದ್ಯಾತ್ಸುಪುಷ್ಕಲಂ।
ತಸ್ಯಾಹಂ ಬ್ರಹ್ಮದಾಯಸ್ಯ ದದಾಮ್ಯಾತ್ಮಾನಮಾತ್ಮನಾಃ।''
''ಜ್ಞಾನಮಜ್ಞಾತತತ್ತ್ವಾಯ ಯೋ ದದ್ಯಾತ್ಪರಮಾರ್ಥವಿತ್।
ಕೃಪಾಲೋರ್ದೀನನಾಥಸ್ಯ ದೇವಾಸ್ತಸ್ಯಾನುಗೃಹ್ಣತೇ।'' ಇತಿ।

ನಿತ್ಯಂ ತೇ ಸ್ವಕೃತೇನೈವ ತುಷ್ಯಂತು ತೇಷಾಮಾತ್ಮಾರ್ಪಣಮೇವ ಗುರುದಕ್ಷಿಣಾತ್ವೇನ ಯೋಗ್ಯಂ ನಾತೋऽನ್ಯದಸ್ತೀತಿ ಭಾವಃ। **ಯಥಾಹುಃ—**

''ಇಯದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಂ ॥
ಯದ್ವೈ ವಿಶುದ್ಧಭಾವೇನ ಸರ್ವಥಾತ್ಮಾರ್ಪಣಂ ಗುರೌ'' ಇತಿ।

ಸತ್ಯೇವಂ ಕೋ ನಾಮ ತತ್ತತ್ಕೃತಂ ಪ್ರತಿಕರೋತಿ। ತಸ್ಯ ಪ್ರತ್ಯುಪಕಾರಂ ಕರ್ತುಂ ಕ್ಷಮೋ ಭವತಿ। ನ ಕೋऽಪಿ ಲೋಕೇऽಸ್ತೀತಿ ಭಾವಃ। ಏವಮಪಿ ಯಃ ಪುರುಷಃ ತತ್ಪ್ರತಿಕರೋತಿ ಪ್ರತ್ಯುಪಕಾರಃ ಕೃತೋ ಮಯಾ ಇತಿ ಮನ್ಯತೇ ಸ ಸತಾಂ ಸಭಾಯಾಂ ವಿನೋದಪಾತ್ರಂ ಭವತಿ। ಕೇವಲಮುಪಹಸನೀಯಪ್ರಕ್ರಿಯ ಇತಿ ಭಾವಃ। **ಯಥಾಹುಃ—**

''ನಿಷ್ಪಾದಿತಂ ಚ ಕಾರ್ತ್ಸ್ನ್ಯೇನ ಭಗವದ್ಭಿರ್ಘೃಣಾಲುಭಿಃ।
ಸಾಧು ದತ್ತಂ ಹಿ ಸರ್ವಂ ಮೇ ಆತ್ಮನಾ ಸಹ ಕಿಂ ದದೇ ॥
ಪ್ರಾಣಾ ದಾರಾಃ ಸುತಾ ಬ್ರಹ್ಮನ್ಗೃಹಾಶ್ಚ ಸಪರಿಗ್ರಹಾಃ।
ರಾಯೋ ಬಲಂ ಮಹೀ ಕೋಶ ಇತಿ ಸರ್ವಂ ನಿವೇದಿತಂ ॥
ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ।
ಸರ್ವ ಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ' ಇತಿ ॥

ಘೃಣಾಲುಭಿರ್ದಯಾಶೀಲೈಃ ಭಗವದ್ಭಿಃ ಕಾರ್ತ್ಸ್ನ್ಯೇನಾಪಿ ನಿಷ್ಪಾದಿತಂ। ಕೋऽರ್ಥಃ। ಮೇ ಮಹ್ಯಂ ಯದ್ದೇಯಂ ತತ್ಸರ್ವಮಪಿ ಸಾಧು ದತ್ತಂ ಹೀತಿ। ಏವಮುಪಕಾರಿಭ್ಯೋ ಗುರುಭ್ಯೋ ದಕ್ಷಿಣಾ ದೇಯಾ ಖಲು ತಥಾಪಿ ಕಿಂ ದದೇ। ನ ಕಿಮಪಿ ನೂತನಮಸ್ತಿ ದೇಯಮಿತಿ ಭಾವಃ। ಕುತಃ। ಯತೋ ವೇದಶಾಸ್ತ್ರವಿತ್

**ಜ್ಞಾನೀ ಸೇನಾಪತ್ಯಾದಿಕಂ ಅರ್ಹತಿ ತತ ಆತ್ಮನಾ ದೇಹೇನ ಸಹ ಪ್ರಾಣಾದಿಕಂ ಸರ್ವಂ ನಿವೇದಿತಂ ತಸ್ಮೈ ೈವ ಭವತಿ ತತ ಇತಿ ॥ ೩೬೩ ॥**

❖❖❖

**ಸನತ್ಕುಮಾರರಿಂದ ಉಪದೇಶಪಡೆದ ಪೃಥುರಾಜ ಹೇಳುತ್ತಾನೆ—**

**ವೇದಾರ್ಥರಹಸ್ಯವನ್ನು ಬಲ್ಲ ಮಹಾದಯಾಳುಗಳಾದ ತಾವು ವೇದಾಂತ ಶಾಸ್ತ್ರದಲ್ಲಿ ನಿರ್ಣೀತವಾದ ಭಗವಂತನ ಸ್ವರೂಪವನ್ನು ಕೇವಲ ಕರುಣೆಯಿಂದ ನಮಗೆ ಉಪದೇಶಿಸಿರುವಿರಿ. ಈ ಉಪಕಾರಕ್ಕೆ ಪ್ರತಿಯಾಗಿ ಯಾರು ತಾನೆ ಉಪಕಾರ ಮಾಡಬಲ್ಲನು? ಉಪಕಾರ ಮಾಡುವೆನೆಂದುಕೊಂಡು ಅದಕ್ಕೆ ಹೊರಟರೆ, ತನ್ನನ್ನು ತಾನೆ ನಗೆಗೀಡು ಮಾಡಿಕೊಂಡಂತಾಗುವುದು. ಅದರಿಂದ ಮಹಾಕರುಣಾಶಾಲಿಗಳಾದ ತಾವು ನಮಗೆ ಇಷ್ಟು ದೊಡ್ಡ ಉಪಕಾರ ಮಾಡಿದ್ದಕ್ಕೆ ತಮಗೆ ತಾವೇ ಸಂತುಷ್ಟರಾಗಬೇಕಷ್ಟೆ!**

ಶಿಷ್ಯರು ಶುದ್ಧಾಂತಃಕರಣರಾಗಿ ತಮ್ಮನ್ನೇ ತಾವು ಗುರುಚರಣಾರ ವಿಂದಗಳಲ್ಲಿ ಸಮರ್ಪಿಸಿಕೊಳ್ಳುವುದು ಹೊರತು ಬೇರೇನೂ ದಕ್ಷಿಣಾದಿ ಪ್ರತ್ಯುಪಕಾರ ಮಾಡುವುದು ಶಕ್ಯವಿಲ್ಲ.

ಯ ಏತನ್ಮಮ ಭಕ್ತೇಷು ಸಂಪ್ರದದ್ಯಾತ್ ಸುಪುಷ್ಕಲಂ ।
ತಸ್ಯಾಹಂ ಬ್ರಹ್ಮದಾಯಸ್ಯ ದದಾಮ್ಯಾತ್ಮಾನಮಾತ್ಮನಾ ॥

(ಭಾ.೧೧.೨೯.೨೬)

'ಮೋಕ್ಷ ನೀಡಲು ಬಲು ಸಮರ್ಥವಾದ ಈ ಜ್ಞಾನವನ್ನು ಯಾರು ನನ್ನ ಭಕ್ತರಿಗೆ 'ಆತ್ಮನಾ' ಮನಃಪೂರ್ವಕವಾಗಿ ಉಪದೇಶಿಸುವನೋ ಅವನಿಗೆ ನಾನು ಅಕ್ಷಯವಾದ ನಿಧಿಯಾಗಿದ್ದು 'ಆತ್ಮಾನಂ ದದಾಮಿ' ಸಾಯುಜ್ಯಮೋಕ್ಷವನ್ನು ಕೊಡುವೆನು' ಎಂದು ಶ್ರೀಕೃಷ್ಣ ಉದ್ಧವನಿಗೆ ಹೇಳುತ್ತಾನೆ.

ಜ್ಞಾನಮಜ್ಞಾತ ತತ್ತ್ವಾಯ ಯೋ ದದ್ಯಾತ್ ಪರಮಾರ್ಥವಿತ್ ।
ಕೃಪಾಳೋರ್ದೀನನಾಥಸ್ಯ ದೇವಾಸ್ತಸ್ಯಾನುಗೃಹ್ಣತೇ ॥

(ಭಾ.೪.೧೨.೫೦)

'ಸರ್ವೋತ್ತಮನು ಹರಿಯೇ ಎಂದು ತಿಳಿದಿರುವ ಜ್ಞಾನಿ ತತ್ತ್ವಜ್ಞಾನರಹಿತನಾದ ಶಿಷ್ಯನಿಗೆ ಆ ಜ್ಞಾನವನ್ನು ನೀಡಬೇಕು. ಆ ಮೂಲಕ

ಕೃಪೆಯಿಂದ ಜನರನ್ನು ಕಾಪಾಡುವವನಿಗೆ ದೇವತೆಗಳೂ ಕೂಡ ಅನುಗ್ರಹಿಸು ವರು' ಎಂದು ಮೈತ್ರೇಯರು ವಿದುರನಿಗೆ ಹೇಳುತ್ತಾರೆ.

ಆದರಿಂದ ದಯಾಳುಗಳಾದ ಗುರುಗಳು ನೀವು ಶಿಷ್ಯರಿಗೆ ಮಾಡಿದ ಈ ಉಪಕಾರದಿಂದ ನೀವೇ ತೃಪ್ತರಾಗಿರಿ. ಅದು ನಿಮ್ಮ ಸ್ವಭಾವವೇ ಆಗಿದೆ. ಹೀಗಿರಲು ನಿಮ್ಮಂಥವರಿಗೆ ನಾವೇನು ದಕ್ಷಿಣೆ ನೀಡಬಲ್ಲೆವು? ಎಷ್ಟು ನೀಡಿದರೂ ಸಾಲದು. ಮತ್ತು ನೀವೇನೂ ಬೇಡುವವರಲ್ಲ! ಎನ್ನುತ್ತಾನೆ ಪೃಥುರಾಜ. ಶುದ್ಧಾಂತಃಕರಣವಾಗಿ ತನ್ನನ್ನು ತಾನೆ ಗುರುಚರಣಾರವಿಂದಗಳಲ್ಲಿ ಸಮರ್ಪಿಸಿ ಕೊಳ್ಳುತ್ತಾನೆ.

ಇಯದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಂ ।
ಯದ್ವೈ ವಿಶುದ್ಧಭಾವೇನ ಸರ್ವಥಾತ್ಮಾರ್ಪಣಂ ಗುರೌ ॥
(ಭಾ.೧೦.೧೦೦.೩೮)

'ಒಳ್ಳೆಯ ಶಿಷ್ಯರು ಗುರುವಿಗೆ ಪ್ರತ್ಯುಪಕಾರವಾಗಿ ಮಾಡಬೇಕಾದುದಿಷ್ಟೆ. ತಮಗೆ ಸರ್ವಾಭೀಷ್ಟಸಾಧಕವಾಗಿರುವ ತಮ್ಮ ಸಾಧನ ಶರೀರವನ್ನು ತಾವೇ ನಿರ್ಮಲಮನಸಿನಿಂದ ಗುರುಸೇವೆಗೆ ಮುಡಿಪಾಗಿಡಬೇಕು' –ಗುರುಕುಲದಲ್ಲಿ ಗುರು ಸಾಂದೀಪನಿ ಮುನಿ ಕೃಷ್ಣ ರಾಮ ಮತ್ತು ಸುದಾಮರಿಗೆ ಹೇಳಿದ ಮಾತು ಇದು.

ಇದೇರೀತಿ ಪೃಥುರಾಜನೂ ಸನತ್ಕುಮಾರಾದಿ ಮುನಿಗಳಿಗೆ ಆತ್ಮಾರ್ಪಣೆ ಮಾಡಿದ್ದು ಭಾಗವತದಲ್ಲಿ ಉಕ್ತವಾಗಿದೆ—

'ನಿಷ್ಪಾದಿತಂ ಚ ಕಾರ್ತ್ಸ್ನ್ಯೇನ ಭಗವದ್ಭಿರ್ಘೃಣಾಲುಭಿಃ ।
ಸಾಧುದತ್ತಂ ಹಿ ಸರ್ವಂ ಮೇ ಆತ್ಮನಾ ಸಹ ಕಿಂ ದದೇ ॥

ಪ್ರಾಣಾ ದಾರಾಃ ಸುತಾ ಬ್ರಹ್ಮನ್ ಗೃಹಾಶ್ಚ ಸಪರಿಗ್ರಹಾಃ ।
ರಾಯೋ ಮಹೀ ಬಲಂ ಕೋಶ ಇತಿ ಸರ್ವಂ ನಿವೇದಿತಂ ॥

ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ ।
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥
(ಭಾ.೪.೨೨.೪೬,೪೭,೪೮)

'ಮುನಿಗಳೆ, 'ನಿಮ್ಮಿಂದ ಉಪದೇಶಕೊಡಿಸುತ್ತೇನೆ' ಎಂದು ಶ್ರೀಹರಿ ನನಗೆ ನೀಡಿದ್ದ ವರವನ್ನು ನೀವು ಚೆನ್ನಾಗಿ ನಡೆಸಿಕೊಟ್ಟಿರುವಿರಿ. ನೀವು ನನಗೆ ಏನು ತತ್ವಜ್ಞಾನ ನೀಡಬೇಕಾಗಿತ್ತೋ ಅದೆಲ್ಲವನ್ನು ನೀವು ನನಗೆ ಚೆನ್ನಾಗಿ ದಯೆಯಿಂದ ನೀಡಿರುವಿರಿ. ಇದಕ್ಕೆ ಪ್ರತಿಯಾಗಿ ನಾನು ನಿಮಗೆ ಏನು ನೀಡಲಿ? ಹೊಸದಾಗಿ ನಿಮಗೆ ನೀಡಬೇಕಾದುದು ನನ್ನಲ್ಲಿ ಏನೂ ಇಲ್ಲ ತಾನೆ? ಏಕೆಂದರೆ ನನ್ನೊಂದಿಗೆ ನನ್ನದೆಲ್ಲವನ್ನು ಮೊದಲೇ ನಿಮಗೆ ಕೊಟ್ಟುಬಿಟ್ಟಿದ್ದೇನೆ.

'ಆದರೂ ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಅರ್ಘ್ಯ ನೀಡುವಂತೆ ನಿಮ್ಮವೇ ಆಗಿರುವ ನನ್ನ ಪ್ರಾಣಗಳು ಹೆಂಡತಿ ಮಕ್ಕಳು ಎಲ್ಲ ಭೋಗ ಸಾಮಗ್ರಿ ಯುಕ್ತವಾದ ಅರಮನೆ ಧನಸಂಪತ್ತು ಭೂಮಿ ಸೈನ್ಯ ಬೊಕ್ಕಸ ಎಂದೆಲ್ಲವನ್ನೂ ಪುನಃ ನಿಮಗೆ ಅರ್ಪಿಸುತ್ತೇನೆ.

'ವೇದಶಾಸ್ತ್ರಗಳನ್ನು ಅರಿತಿರುವ ನೀವು ತಾವೇ ಸೇನಾಪತಿಯ, ರಾಜನ ಮತ್ತು ನ್ಯಾಯಾಧೀಶನ ಎಲ್ಲರ ಎಲ್ಲ ಕರ್ತವ್ಯಗಳನ್ನೂ, ಎಲ್ಲ ಪ್ರಜೆಗಳ ಆಡಳಿತವನ್ನೂ ನಿರ್ವಹಿಸಲು ಸಮರ್ಥರೇ ಇರುವಿರಿ.'

ಹೀಗೆ ಹೇಳಿ ಪೃಥುರಾಜ—

'ಯೈರೀದೃಶೀ ಭಗವತೋ ಗತಿರಾತ್ಮವಾದಃ...'

ಎನ್ನುತ್ತ 'ಸ್ವಕೃತೇನ ತುಷ್ಯಂತು' ದಯೆಯಿಂದ ನೀವು ಮಾಡಿದ ಉಪಕಾರಕ್ಕೆ, ನಿಮಗೆ ನೀವೇ ತೃಪ್ತಿಪಡಬೇಕು' ಎಂದು ಪ್ರಾರ್ಥಿಸುತ್ತಾನೆ.

❖❖❖

—೩೬೪—

## ಗುರು ಪರಮಾತ್ಮನಲ್ಲಿಯೂ ಭಕ್ತಿಯನ್ನು ಹೊರತು ಏನೂ ಬೇಡುವವನಲ್ಲ

ಮತ್ತೋ ಽಪ್ಯನಂತಾತ್ ಪರತಃ ಪರಸ್ಮಾತ್
ಸ್ವರ್ಗಾಪವರ್ಗಾಧಿಪತೇ ರ್ನ ಕಿಂಚಿತ್ ।
ಯೇಷಾಂ ಕಿಮು ಸ್ಯಾದಿತರೇಣ ತೇಷಾಂ
ಅಕಿಂಚನಾನಾಮಪಿ ಭಕ್ತಿಭಾಜಾಂ ॥

(ಭಾ.೫.೫.೨೫)

ವಿಶುದ್ಧೇನ ಮನಸಾ ಕಾಲತ್ರಯೇಽಪ್ಯಾತ್ಮಸಮರ್ಪಣಂ ವಿನಾ ಅನ್ಯಾ ಗುರುದಕ್ಷಿಣಾ ದೇಯಾ ನಾಸ್ತೀತ್ಯುದಿತಂ। ನೈತದ್ಗುರೂಣಾಂ ಪ್ರಶಂಸಾರ್ಥ ಮುಕ್ತಂ, ಕಿಂ ನಾಮ, ತೇಷಾಂ ಭಗವದ್ಭಕ್ತಿಮಾತ್ರಮಿಚ್ಛತಾಂ ಭಗವತೋಽಪಿ ಕಿಮಪ್ಯನಿಚ್ಛತಾಂ ಅನ್ಯೇನ ಪುರುಷೇಣ ಕಿಂ ಪ್ರಾರ್ಥನೀಯಮಸ್ತೀತಿ ಸರ್ವಥಾ ಅನ್ಯಾಪೇಕ್ಷಾರಹಿತತ್ವಸ್ಯ ತೇಷಾಂ ಸ್ವಭಾವತ ಏವ ಸಿದ್ಧತ್ವಾದಿತ್ಯಾಶಯೇನಾಹ ॥ ಮತ್ತ ಇತಿ ॥ ಭಗವದ್ವಚನಮೇತತ್। ಯೇಷಾಮನಂತಗುಣಾತ್ ಸರ್ವೋತ್ತಮಾತ್ ಸ್ವರ್ಗಾಪವರ್ಗಸ್ವಾಮಿನೋ ಮತ್ತೋಽಪಿ ಕಿಂಚಿದಪಿ ಪ್ರಾರ್ಥನೀಯಂ ನಾಸ್ತಿ। ತೇಷಾಂ ನಿಷ್ಕಿಂಚನಾನಾಂ ಮಯಿ ಭಕ್ತಿಭಾಜಾಂ ಭಕ್ತಿಮೇವೇಚ್ಛತಾಂ ಇತರೇಣ ಪುರುಷೇಣ ದೇಯಂ ಕಿಂ ವಿದ್ಯೇತೇತಿ ॥

❖❖❖

ಋಷಭದೇವನ ಉಪದೇಶ—

ನಾನು ಅನಂತಗುಣಪರಿಪೂರ್ಣ ಸರ್ವೋತ್ತಮ. ಸ್ವರ್ಗಮೋಕ್ಷ ಗಳೆರಡಕ್ಕೂ ಅಧಿಪತಿ. ಇಂಥ ನನ್ನಿಂದಲೂ ಕೂಡ ಈ ನಿಷ್ಕಿಂಚನರಾದ ಅವಧೂತ ಬ್ರಾಹ್ಮಣರಿಗೆ ಏನೂ ಲಾಭ ಆಗಬೇಕಿಲ್ಲ. ಎಂದಮೇಲೆ, ಬೇರೆ ಧನಿಕರಿಂದ ಏನಾಗ ಬೇಕಾಗಿದೆ? ಅವರು ನನ್ನಲ್ಲಿ ಭಕ್ತಿಉಳ್ಳವರು, ಇನ್ನೂ ಭಕ್ತಿಯನ್ನೇ ಬೇಡುವರು!

ಶುದ್ಧಾಂತಕರಣದಿಂದ ಆತ್ಮಸಮರ್ಪಣ ಮಾಡುವುದೇ ಶಿಷ್ಯನು ಗುರುಗಳಿಗೆ ನೀಡುವ ಗುರುದಕ್ಷಿಣೆ. ಇದು ಕೇವಲ ಗುರುಗಳ ಪ್ರಶಂಸೆಗಾಗಿ ಹೇಳಿದ ಮಾತಲ್ಲ. ಅವರು ಭಕ್ತರು, ಭಕ್ತಿಯನ್ನು ಬಿಟ್ಟು ಬೇರೇನನ್ನೂ ಸಾಕ್ಷಾತ್ ಜಗದೀಶ್ವರನಾದ ಹರಿಯಿಂದಲೂ ಬೇಡುವವರಲ್ಲ ಎಂದು ಋಷಭಮೂರ್ತಿ ಶ್ರೀಹರಿಯೇ ಹೇಳಿದ್ದಾನೆ ಎಂದಮೇಲೆ ಅಲ್ಪನಾದ ಶಿಷ್ಯನು ಕೊಡುವ ಯಾವ ವಸ್ತುಗಳಿಂದ ಗುರುಗಳಿಗೆ ತೃಪ್ತಿಯಾದೀತು?

❖❖❖

# ಸರ್ವಸಮರ್ಪಣ

—೩೬೫—

## ಈ ಗ್ರಂಥ ಶ್ರವಣಮಾಡುವವನಿಗೆ ವಿಷ್ಣುಲೋಕಪ್ರಾಪ್ತಿ ಫಲ

ಯ ಇದಮನು ಶೃಣೋತಿ ಶ್ರಾವಯೇದ್ವಾ ಮುರಾರೇ
ಶ್ಚರಿತಮಮೃತ ಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ ।
ಜಗದಘಭಿದಲಂ ತದ್‌ಭಕ್ತಕರ್ಣಾವತಂಸಂ
ಭಗವತಿ ಕೃತಚಿತ್ತೋ ಯಾತಿ ತತ್ ಕ್ಷೇಮ ಧಾಮ ॥

(ಭಾ.೧೦.೧೦೫.೪೨)

ಶ್ರೀರಮಾರಮಣಾಯ ನಮಃ ॥ ಏವಂ ಭಾಗವತಾಗತಿಪ್ರಕಾರಕಥನ ಪ್ರಕರಣಮಾರಭ್ಯ ಗುರುದಕ್ಷಿಣಾಪ್ರಕರಣಪರ್ಯಂತಂ ತ್ರಿಂಶತ್ಪ್ರಕರಣಾತ್ಮಕಂ

ಶ್ರೀಮದ್ಭಾಗವತಸಾರಾಖ್ಯಂ ನಿಬಂಧಂ

ನಿರ್ಮಾಯ ಆದೌ ಪ್ರಣತಮೇವ ಅಂತೇ ಪ್ರಣಮನ್ ನಾತ್ರಾಸ್ಮದೀಯಾ ಕೃತಿಃ ಕ್ವಾಪ್ಯಸ್ತಿ ಕಿಂ ನಾಮ ಶ್ರೀಮದ್ಭಾಗವತ ಸ್ಥಪದ್ಯಾನಾಮೇವ ಆನುಪೂರ್ವೀವಿಶೇಷವಿಶಿಷ್ಟತಯಾ ಕೇವಲಂ ಸಂಗ್ರಹ ಏವ ತತೋ ನಾತ್ರಾನಾದರಃ ಕಾರ್ಯಃ ಸ್ವಕಾರ್ಯಾರ್ಥಿಭಿರಿತಿ ಭಾವೇನ ಆದೌ ಮಂಗಲಾಚರಣಪದ್ಯಮಿವ ಅಂತೇಽಪಿ ಫಲಾಭಿಧಾನಪೂರ್ವಕಂ ತದೀಯ ಮೇವ ಪದ್ಯಂ ಪಠತಿ ॥ ಯ ಇದಮಿತಿ ॥ ಯಃ ಪುರುಷೋ ಜಗತೋಽಘಂ ಅಲಂ ಭಿನತ್ತೀತಿ ತತ್ ತಾದೃಶಂ ತಸ್ಯ ಮುರಾರೇಃ ಯೇ ಭಕ್ತಾಸ್ತೇಷಾಂ ಕರ್ಣಯೋಃ ಭೂಷಣಂ ವ್ಯಾಸಪುತ್ರೈಃ ಶುಕಾಚಾರ್ಯೈಃ ವರ್ಣಿತಂ ಅಮೃತಕೀರ್ತೇಃ ಮುರಾರೇಃ ಚರಿತಂ ಶೃಣೋತಿ ಶ್ರಾವಯೇದ್ವಾನ್ಯಂ ಸ ಭಗವತಿ ನಿವೇಶಿತಚಿತ್ತಃ ಸನ್ ತಸ್ಯ ಮುರಾರೇಃ ಕ್ಷೇಮದಂ ಧಾಮ ಲೋಕಂ ಯಾತಿ । ಪುತ್ರೈರಿತಿ ಪೂರ್ವೋಕ್ತಂ ಗುರುತ್ವಂ ಸ್ಮಾರಯತಿ ॥

❖❖❖

ಭಾಗವತದ ಅಂತಿಮ ಮಂಗಳಾಚರಣ ಶ್ಲೋಕವಿದು. ಈ ಶ್ಲೋಕ ದಿಂದಲೇ ಅವಧೂತರು ತಮ್ಮ 'ಶ್ರೀಮದ್‌ಭಾಗವತಸಾರ' ಎಂಬ ಈ ಗ್ರಂಥಕ್ಕೆ ಮೋಕ್ಷರೂಪ ಫಲವನ್ನು ಹೇಳಿ ಅಂತಿಮಮಂಗಳವನ್ನು ಹಾಡಿದ್ದಾರೆ.

**ಭಾಗವತದಲ್ಲಿ 'ಸೂತಪುರಾಣಿಕರು ಹೀಗೆ ಭಗವಂತನನ್ನು ನಮಿಸಿದರು—**

**'ಶ್ರೀವ್ಯಾಸಪುತ್ರರಾದ ಶುಕಮುನಿ ಉಪದೇಶಿಸಿದ ಅಮೃತದಂಥ ಕೀರ್ತಿಉಳ್ಳ ಶ್ರೀಕೃಷ್ಣನ ಈ ಚರಿತ್ರೆ ಜಗದ ಪಾಪವೆಲ್ಲವನ್ನೂ ತೊಡೆಯು ವಂಥದ್ದು. ಭಕ್ತರ ಕಿವಿಗೆ ಆಭರಣದಂತಿರುವುದು. ಇದನ್ನು ಕೇಳುವವನೂ ಹೇಳುವವನೂ ಭಗವಂತನಲ್ಲಿ ಮನವಿಟ್ಟು ಕ್ಷೇಮದಾಗರವೆನಿಸಿರುವ ವೈಕುಂಠ ವನ್ನು ಹೊಂದುವನು'.**

ಭಾಗವತಾಗತಿಪ್ರಕರಣದಿಂದ ತೊಡಗಿ ಗುರು ದಕ್ಷಿಣಾ ಪ್ರಕರಣದವರೆಗಿನ ಮೂವತ್ತು ಪ್ರಕರಣಗಳನ್ನೊಳಗೊಂಡ ೩೬೪ ಶ್ಲೋಕಗಳ

## ಶ್ರೀಮದ್‌ಭಾಗವತಸಾರ

ಎಂಬ ಈ ಗ್ರಂಥವನ್ನು ನಿರ್ಮಿಸಿದ ಬಳಿಕ, ಇದೀಗ ಆದಿಯಲ್ಲಿ ನಮಿಸಿದ್ದ ಹರಿಯನ್ನೇ ಅಂತ್ಯದಲ್ಲಿಯೂ ನಮಿಸುತ್ತಿದ್ದಾರೆ ಅವಧೂತರು.

'ಈ ೩೬೪ ಶ್ಲೋಕಗಳಿಂದ ಕೂಡಿದ ಗ್ರಂಥದಲ್ಲಿ ಎಲ್ಲಿಯೂ ನಾನು ರಚಿಸಿದ ಶ್ಲೋಕವಿಲ್ಲ. ಎಲ್ಲವೂ ಶ್ರೀವ್ಯಾಸರೇ ರಚಿಸಿದ ಶ್ಲೋಕಗಳು. ಅವುಗಳ ಕ್ರಮವು ಮಾತ್ರ ಪ್ರಕರಣಾನುಸಾರವಾಗಿ ಬೇರಾಗಿದೆಯಷ್ಟೆ. ನಾವು ಕೇವಲ ಶ್ಲೋಕ ಸಂಗ್ರಹ ಮಾಡಿದ್ದೇವೆ. ಅದರಿಂದ ಹರಿಕೃಪೆಗೆ ಪಾತ್ರರಾಗಲು ಬಯಸುವ ಸುಜನರು ಈ ಗ್ರಂಥವನ್ನು ಸ್ವಲ್ಪವೂ ಅನಾದರ ಮಾಡದೆ ಸ್ವೀಕರಿಸಲಿ' ಎಂಬ ಅಭಿಪ್ರಾಯದಿಂದ ಮೊದಲಿಗೆ ಮಾಡಿದ ಆದಿಮಂಗಳಾಚರಣದಂತೆಯೇ ಕೊನೆಯಲ್ಲಿಯೂ, ಫಲವನ್ನು ಹೇಳಿ, ಭಾಗವತ ಪದ್ಯದಿಂದಲೇ ಅಂತಿಮ ಮಂಗಳಾಚರಣೆಯನ್ನು ಮಾಡುತ್ತ ನಮಿಸುತ್ತಾರೆ.

ಇಲ್ಲಿ ಶುಕಮುನಿಗಳು ಹಿಂದೆ ಹೇಳಿದಂತೆ ವ್ಯಾಸಪುತ್ರರು. 'ಭೋಃ ಪುತ್ರ !' ಎಂದು ಶ್ರೀವ್ಯಾಸರು ಕೂಗಿ ಕರೆದಿದ್ದಾರೆ. ಹೀಗೆ ಲೋಕಕ್ಕೆ ಶುಕಮುನಿ ಅಂತರ್ಗುರುಗಳೂ ಬಾಹ್ಯಗುರುಗಳೂ ಆಗಿದ್ದಾರೆ ಎಂಬುದನ್ನು 'ವ್ಯಾಸಪುತ್ರೈಃ' ಎಂಬ ಮಾತಿನಿಂದ ಸೂತರು ಸ್ಮರಿಸುತ್ತಾರೆ.

❖❖❖

–೩೬೬–

## ಗ್ರಂಥಸಮಾಪ್ತಿಗೆ ಕಾರಣನಾದ ಹರಿಗೆ ಪುನಃ ನಮನ

**ತಮಹಮಜಮನಂತಮಾತ್ಮತಂತ್ರಂ**
**ಜಗದುದಯಸ್ಥಿತಿ ಸಂಯಮಾತ್ಮಶಕ್ತಿಂ ।**
**ದ್ಯುಪತಿಭಿರಜಶಕ್ರಶಂಕರಾದ್ಯೈ**
**ರ್ದುರವಸಿತಸ್ತವಮಚ್ಯುತಂ ನತೋಽಸ್ಮಿ ॥**

(ಭಾ.೧೨.೧೨.೬೭)

ಏವಮಸ್ಯ ಗ್ರಂಥಸ್ಯ ಶ್ರವಣಾದಿಫಲಮಭಿಧಾಯ ಯಸ್ಯ ನಮನೇನ ಗ್ರಂಥೋಽಯಂ ಅವಸಿತಸ್ತಮೇವಾಂತೇ ನಮತಿ ॥ **ತಮಿತಿ ॥** ಜಗದುದಯಸ್ಥಿತಿಸಂಹೃತಿಸಾಧನಸ್ವರೂಪಭೂತ ಶಕ್ತಿಂ । ಅನೇನ ಶಕ್ತಿತ್ರಯಸ್ಯ ಸ್ವರೂಪತ್ವಕಥನೇನ ಗೃಹೀತಶಕ್ತಿತ್ರಿತಯಾಯ ಇತಿ ಪದಂ ವಿವೃತಂ ವೇದಿತವ್ಯಂ । ದ್ಯುಪತಿಭಿರುಚ್ಚಲೋಕಾಧಿಪತಿಭಿಃ ಅಪಿ ಅಜಾದಿಭಿಃ । ದುರವಸಿತಸ್ತವಂ ಅಲಬ್ಧಪಾರಮಹಿಮಂ ಇತ್ಯನೇನ ಈದೃಶಾನಾಮಪಿ ದುರವಗಮತಯಾ ದೇಹಿನಾಮಜ್ಞೇಯತ್ವಂ ಕೈಮುತ್ಯೇನೇತಿ ಸೂಚನೇನ ದೇಹಿನಾಮಂತ-ರ್ಧ್ರುವಾಯ ಅನುಪಲಭ್ಯವರ್ತ್ಮನೇ ಇತ್ಯೇತದ್ವಿವೃತಂ ಭವತಿ । ಭವತ್ವಯಂ ಜಗದುತ್ಪತ್ತ್ಯಾದಿಕರ್ತಾ ಅಸ್ಯ ಉತ್ಪತ್ತ್ಯಾದಿಕರ್ತಾ ತು ಕಃ ಇತ್ಯತ ಉಕ್ತಂ— **ಅಜಂ ಅನಂತಮಿತಿ** ॥ ಉತ್ಪತ್ತಿನಾಶರಹಿತಂ । ತದಭಾವೇಽಪಿ ಪಾಲಕಃ ಕ ಇತ್ಯತ ಉಕ್ತಂ— **ಆತ್ಮತಂತ್ರಮಿತಿ** । ರಕ್ಷಕಾಂತರರಹಿತಮಿತಿ । ಅನೇನ ಪರಸ್ಮೈ ಪುರುಷಾಯ ಇತ್ಯುಕ್ತಂ ಪರಮಪುರುಷತ್ವಂ ಸ್ಪಷ್ಟೀಕೃತಂ ಭವತಿ । ಸರ್ವಮಿದಂ ಪರಾಧೀನತ್ವೇ ನ ಘಟತ ಇತ್ಯತೋಽಪ್ಯಾತ್ಮತಂತ್ರಮಿತಿ । ಸ್ವತಂತ್ರಂ । ಅನೇನ ಭೂಯಸೇ ಇತ್ಯುಕ್ತಂ ಭೂಯಸ್ತ್ವಂ (ಸ್ವಾತಂತ್ರ್ಯಂ) ಪ್ರಕಟೀಕೃತಂ ಭವತಿ । ಉಪಸಂಹಾರಸ್ಯೋಪಕ್ರಮವ್ಯಾಖ್ಯಾನರೂಪತಾಯಾಃ ಸ್ಥಿತತ್ವಾದಿತಿ ॥

❖❖❖

ಭಾಗವತದಲ್ಲಿ ಸೂತರು ಕೊನೆಗೆ ಹಾಡುವ ಮಂಗಳ ಪದ್ಯ—

ಜನನ ಮರಣ ರಹಿತ ಸ್ವತಂತ್ರ ಜಗದ ಸೃಷ್ಟಿ ಸ್ಥಿತಿ ಲಯಗಳಿಗೆ ಸ್ವರೂಪಭೂತವಾದ ಶಕ್ತಿ ಉಳ್ಳವನು, ಬ್ರಹ್ಮ ಇಂದ್ರ ರುದ್ರ ಮೊದಲಾದ ಲೋಕಪಾಲಕರಿಗೂ ಸ್ತುತಿಗೆ ನಿಲುಕದವನು–ಇಂಥ ಅಚ್ಯುತನಿಗೆ ನಮಿಸುವೆನು.

ಈ 'ಶ್ರೀಮದ್ಭಾಗವತಸಾರ' ಗ್ರಂಥವನ್ನು ಓದಿಕೊಳ್ಳುವವರಿಗೆ ಮುಕ್ತಿಫಲವೆಂದು ಹೇಳಿ, ಈಗ 'ನಾನು ಆದಿಯಲ್ಲಿ ಭಾಗವತದ 'ನಮಃ ಪರಸ್ಮೈಪುರುಷಾಯ ಭೂಯಸೇ' ಎಂಬ ಶ್ಲೋಕದಿಂದ ಹರಿಯನ್ನು ನಮಿಸಿದ್ದರಿಂದ ಹರಿ ಗುರುಗಳು ನನ್ನಿಂದ ಈ ಗ್ರಂಥವನ್ನು ಸಾಂಗವಾಗಿ ಮಾಡಿಸಿ ಪೂರೈಸಿದ್ದಾರೆ, ಆದರಿಂದ ಗ್ರಂಥಾರ್ಪಣ ಸಮಯದಲ್ಲಿಯೂ ಆ ಆದಿಶ್ಲೋಕಕ್ಕೇ ವ್ಯಾಖ್ಯಾನರೂಪವಾಗಿರುವ ಈ ಅಂತಿಮ ಶ್ಲೋಕದಿಂದಲೂ 'ನಮಿಸುವೆನಂ'ದು ಅವಧೂತರು ಪುನಃ ನಮಿಸುತ್ತಿದ್ದಾರೆ.

❖❖❖

–೩೬೭–

**ಸರ್ವಕರ್ತನಾದ ಗ್ರಂಥಪ್ರತಿಪಾದ್ಯನಿಗೆ ಮತ್ತೊಮ್ಮೆ ನಮನ**

**ಉಪಚಿತನವಶಕ್ತಿಭಿಃ ಸ್ವ ಆತ್ಮ**
**ನ್ಯುಪರಚಿತ ಸ್ಥಿರಜಂಗಮ ಪಾಲನಾಯ ।**
**ಭಗವತ ಉಪಲಬ್ಧಿ ಮಾತ್ರಧಾಮ್ನೇ**
**ಸುರಋಷಭಾಯ ನಮಃ ಸನಾತನಾಯ ॥**

(ಭಾ.೧೨.೧೨.೬೮)

ಇತಿ ಶ್ರೀಮದವಧೂತಶಿರೋಮಣಿ ಶ್ರೀಜಯತೀರ್ಥಾಚಾರ್ಯ ನಿರ್ಮಿತ ಶ್ರೀಮದ್ಭಾಗವತಸಾರಃ ಸಮಾಪ್ತಃ ॥

ಭಕ್ತ್ಯುದ್ರೇಕೇಣ ಪುನರ್ನಮತಿ । **ಉಪಚಿತೇತಿ** ॥ ಉಪಚಿತಾಭಿರ್ಮೂಲ-ಪ್ರಕೃತಿ ಮಹದಹಂಕಾರ ಮನಃ ಪಂಚಮಹಾಭೂತ ರೂಪಾಭಿರ್ನವಶಕ್ತಿಭಿಃ । ಸ್ವಾತ್ಮನಿ ಸ್ವಾಧಾರತಯಾ ಉಪರಚಿತಯೋಃ ಸ್ಥಿರಜಂಗಮಯೋಃ ಪಾಲಕಾಯೇತ್ಯನೇನ ಭಗವತಃ ಜಗದುತ್ಪತ್ತ್ಯಾದಿಹೇತುತ್ವೇ ವಿಕಾರಿತ್ವಂ ಸ್ಯಾದಿತ್ಯತೋ ವಿಕಾರಿತಯಾ ಹೇತುತ್ವಂ ಪ್ರಕೃತ್ಯಾದೇರ್ಭಗವತಸ್ತು ನಿಮಿತ್ತತಯಾ ಆಧಾರತಯಾ ಚೇತಿ ಸಮಾಧಾನಕಥನೇನ ಸದುದ್ಭವಸ್ಥಾನೇತಿ ವಿವೃತಂ ಭವತಿ । ಸ್ವರೂಪಶಕ್ತಿ ತ್ರಿಕಾದಧಿಕಸ್ಯ ಭಿನ್ನಶಕ್ತಿನವಕಸ್ಯಾಭಿಧಾನಾದಿತಿ । ಭವತು ಭಗವತೋಽನ್ಯದೇವೋಪಾದಾನಂ ವಿಕಾರಿರೂಪಜಗತಃ, ಭಗವತಃ ಸ್ವರೂಪಂ ಕೀದೃಶಮಿತ್ಯತ ಉಕ್ತಂ—**ಉಪಲಬ್ಧಿಮಾತ್ರಧಾಮ್ನ ಇತಿ** ॥ ಪೂರ್ಣಜ್ಞಾನಾದ್ಯ-

ಶೇಷಗುಣೈಕಸ್ವರೂಪಾಯೇತಿ। ಅನೇನ ದ್ವಿತೀಯ ಪದ್ಯಗತಂ ಅಖಿಲಸತ್ತ್ವಮೂರ್ತಯೇ ಇತ್ಯೇತದ್ವಿವೃತಂ। ಭವತು ಭಗವತೋ ಜಗತಃ ಶ್ರೈಷ್ಠ್ಯಂ ನ ತು ದೇವೇಭ್ಯಃ। ತೇ ಹಿ ಬಹುಕಾಲಮಾರಭ್ಯ ಪದಾರೂಢಾ ಇತ್ಯತಸ್ತೇಷಾಂ ತತ್ಪದಸ್ಯ ದಾತಾಪ್ಯಯಮೇವ ತತೋಽಪ್ಯನಾದಿರಿತಿ ಭಾವೇನೋಕ್ತಂ— **ಸುರಋಷಭಾಯ ಸನಾತನಾಯೇತಿ**॥ ಈದೃಶಾಯ ಭಗವತೇ ನಮ ಇತಿ। ಅನೇನಾಪಿ ಭೂಯಸೇ ಇತ್ಯೇತದ್ವಿವೃತಂ ಇತಿ ಮಂತವ್ಯಂ।

ಅಥವಾ ಸ್ವೇ ಸ್ವಸ್ಮಿನ್ನೇವ ಉಪಚಿತಾಭಿಃ ಲೀಲಯಾ ವ್ಯಕ್ತೀಕೃತಾಭಿಃ ನವಭಿಃ ಶಕ್ತಿಭಿಃ ಸ್ವರೂಪಭೂತಾಭಿಃ ಮೂರ್ತಿಭಿಃ ಆತ್ಮನ್ಯುಪರಚಿತಾಃ ಪೂಜಕತಯಾ ಸ್ವಪ್ರಸಾದೇನೈವ ಕೃಪ್ತಾಃ ಸ್ಥಿರಾಃ ಪೂಜಾಯಾಮೇವ ದೃಢಮನಸೋ ಜಂಗಮಾಃ ಪ್ರಾಣಧಾರಿಣಃ ತೇಷಾಂ ಪಾಲಕಾಯ ಜ್ಞಾನದಾನಾದಿನಾ ಇತ್ಯನೇನ ಸ್ವಪೂಜನೇನ ಅನುಮೃಗ್ಯದಾನಾಯ ಜ್ಞಾನಾತ್ಮಕ ಮೂರ್ತಿಸ್ವೀಕರಣಂ ಭಗವತ ಇತಿ ಸೂಚನೇನ ಅಖಿಲಸತ್ತ್ವಮೂರ್ತಯೇ ಅನುಮೃಗ್ಯದಾಶುಷೇ ಇತ್ಯೇತದ್ವಿವೃತಂ ಭವತಿ। **ಯಥಾಹುಃ**—

''ಸಾತ್ವತಾಂ ನವಮೂರ್ತೀನಾಮಾದಿ ಮೂರ್ತಿರಹಂ ಪುರಾ'' ಇತಿ।

**ಅಥವಾ** ಸ್ವೇ ಆತ್ಮನಿ ಸ್ವಾಧಾರತಯಾ ಉಪರಚಿತಾಃ ಸ್ವೇನ ಹರಿಣೈವ ಕೃತಾಃ। ಭಗವಾನೇವ ಅಸ್ಮಾಕಂ ಪರಾಯಣಮಿತಿ ಮನ್ವಾನಾ ಇತಿ ಯಾವತ್। ತಥೈವ ಸ್ಥಿರಾಃ ದೃಢಮನಸಃ ಯೇ ಜಂಗಮಾ ದೇಹಧಾರಿಣಸ್ತೇಷಾಂ ಅನುಮೃಗ್ಯಸ್ವಸ್ವರೂಪ ವಿಷಯಕಜ್ಞಾನಾದಿದಾನೇನ ಪಾಲನಾಯ ಇತ್ಯನೇನ ಪಾರಮಹಂಸ್ಯ ಆಶ್ರಮೇ ವ್ಯವಸ್ಥಿತಾನಾಂ ಅನುಮೃಗ್ಯದಾಶುಷ ಇತ್ಯೇತದ್ವಿವೃತಂ ಭವತಿ। ಪರಮ ಹಂಸೋ ಭಗವಾನ್ ತದ್ರೂಪೇ ಆಶ್ರಮೇ ಅಧಿಷ್ಠಾನೇ ವಿಷಯೇ ವ್ಯವಸ್ಥಿತಾಃ ಸ್ಥಿರಾಸ್ತೇಷಾಮಿತಿ। ಅನೇನಾಸ್ಮಿನ್ ಶಾಸ್ತ್ರೇ ಹಂಸಪರಮಹಂಸಾದಿಶಬ್ದಾ ಭಗವತ್ಪರತ್ವೇನ ವಿಶುದ್ಧಮನಸಾಂ ಪುಂಸಾಂ ಬೋಧಕಾ ಇತಿ ಸೂಚಿತಂ ಭವತಿ। ವಿಸ್ತೃತಂ ಚೈತತ್ಪ್ರಾಗೇವೇತಿ ದಿಕ್॥

❖❖❖

ಭಕ್ತ್ಯುದ್ರೇಕದಿಂದ ತಮ್ಮ 'ಶ್ರೀಮದ್ ಭಾಗವತಸಾರೋದ್ಧಾರ' ಎಂಬ ಈ ಗ್ರಂಥದ ಕೊನೆಯಲ್ಲಿ ಪುನಃ ಭಾಗವತದ ಕೊನೆಯಲ್ಲಿ ಸೂತರು ಗೈದ ಅಂತಿಮ ನಮನದಿಂದಲೂ ನಮಿಸುತ್ತಾರೆ—

**ಪ್ರಪಂಚಸೃಷ್ಟಿಗೆ ಶ್ರೀಹರಿಯ ಜ್ಞಾನಶಕ್ತಿ ಇಚ್ಛಾಶಕ್ತಿ ಕ್ರಿಯಾಶಕ್ತಿ ಎಂಬ ಮೂರು ಸ್ವರೂಪಶಕ್ತಿಗಳೂ, ಮೂಲಪ್ರಕೃತಿ ಮಹತ್ತತ್ತ್ವ ಅಹಂಕಾರತತ್ತ್ವ ಮಹತ್ತತ್ತ್ವ ಪಂಚಮಹಾಭೂತಗಳೆಂಬ ಭಿನ್ನವಾದ ನವಶಕ್ತಿಗಳೂ ಕಾರಣ. ಸ್ವರೂಪಶಕ್ತಿಗಳು ನಿಮಿತ್ತಕಾರಣ, ಭಿನ್ನಶಕ್ತಿ ಉಪಾದಾನಕಾರಣಗಳೆನಿಸುವವು. ಇಂಥ ನವಶಕ್ತಿಗಳಿಂದ ತನ್ನಲ್ಲಿ ತಾನು ಸೃಜಿಸಿದ ಸ್ಥಾವರಜಂಗಮಗಳನ್ನು ದೃಢಭಕ್ತರನ್ನು ಪಾಲಿಸುವ ದೇವೋತ್ತಮನಾದ ಸನಾತನ ಚಿನ್ಮಯ ಮೂರ್ತಿಯಾದ ಶ್ರೀಹರಿಗೆ ನಮಸ್ಕಾರ.**

ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪುರಾ ।

(ಭಾ.೧೧.೧೧.೩೨)

ಎಂದು ಭಾಗವತ ಹೇಳುವಂತೆ ಪಂಚರಾತ್ರದಲ್ಲಿ ವಿಷ್ಣು ಲಕ್ಷ್ಮಿ ಬ್ರಹ್ಮ ವಾಯು ಶೇಷ ಗರುಡ ಇವರೆಲ್ಲರಿಗೂ ಪ್ರತ್ಯೇಕ ನವಮೂರ್ತಿಗಳು ಉಕ್ತವಾಗಿವೆ. ಅವುಗಳಲ್ಲಿ ವಿಷ್ಣುವಿನ ನವಮೂರ್ತಿಗಳು ಅವುಗಳಿಗೆ ಆದಿಯಲ್ಲಿ ಉಕ್ತವಾಗಿವೆ—

ನಾರಾಯಣ–ಪರಬ್ರಹ್ಮ–ವಾಸುದೇವ–ಸಂಕರ್ಷಣ–

ಪ್ರದ್ಯುಮ್ನ–ಅನಿರುದ್ಧ– ನರಸಿಂಹ–ವರಾಹ–ಪರಂಜ್ಯೋತಿ ಎಂದು

ಈ ನವಶಕ್ತಿಗಳು 'ಸ್ವೇ ಉಪಚಿತ' ತನ್ನಲ್ಲೇ ತನ್ನಿಂದ ಲೀಲೆಯಿಂದ ವ್ಯಕ್ತಗೊಳಿಸಲ್ಪಟ್ಟ ಸ್ವರೂಪಶಕ್ತಿಗಳು ಮೂರ್ತಿಗಳು. ಈ ಮೂರ್ತಿಗಳು 'ಆತ್ಮನ್ಯುಪರಚಿತ' ತನ್ನ ಆರಾಧನೆಗೆ ನಿಯುಕ್ತರಾದ ಆರಾಧನೆಗೆ ಅರ್ಹರೆಂದು ಸ್ವೀಕೃತರಾದ 'ಸ್ಥಿರ' ಪೂಜೆಯಲ್ಲಿ ದೃಢಮನಸ್ಕರಾದ 'ಜಂಗಮ'ರಿಗೆ ಪ್ರಾಣಧಾರಿಗಳಿಗೆ ಜ್ಞಾನಾದಿ ದಾನದಿಂದ ಪಾಲಕನಾಗಿದ್ದಾನೆ ಶ್ರೀಹರಿ. ಅಂಥ ದೇವೋತ್ತಮ ಸನಾತನ ಚಿನ್ಮಯಮೂರ್ತಿ ಯಾದ ಹರಿಗೆ ನಮಸ್ಕಾರ.

'ಸ್ವಆತ್ಮನ್ಯುಪರಚಿತ ಸ್ಥಿರ ಜಂಗಮ ಪಾಲನ' ಎಂಬ ಶಬ್ದದಿಂದ 'ಶ್ರೀಹರಿ ತನ್ನ ಪೂಜೆಯಿಂದ ತನ್ನ ಜ್ಞಾನಭಕ್ತಿಗಳನ್ನಿತ್ತು ಉದ್ಧರಿಸುವನೆಂ'ದು, 'ಅನುಮೃಗ್ಯದಾಶುಷೇ' ಎಂಬುದನ್ನು ವಿವರಿಸಿದಂತಾಯಿತು. 'ಆತ್ಮನ್ಯುಪ-ರಚಿತ' ತನ್ನನ್ನೇ ಗತಿ ಎಂದು ನಂಬಿದ ಭಕ್ತರು. ಅವರೇ 'ಸ್ಥಿರ ಜಂಗಮ'ರು. ಸ್ಥಿರಮನಸ್ಕರಾದ ದೇಹಧಾರಿಗಳು. ಅವರಿಗೆ 'ಅನುಮೃಗ್ಯ' ವಾದ ಜಿಜ್ಞಾಸ್ಯವಾದ ತನ್ನ ಸ್ವರೂಪದ ಬಗ್ಗೆ ಜ್ಞಾನಭಕ್ತಿಗಳನ್ನು 'ದಾಶುಷೇ' ಕೊಡುವವನು ಹರಿ. ಈ ಮಾತಿನಿಂದ—

'ಪಾರಮಹಂಸ್ಯ ಆಶ್ರಮೇ ವ್ಯವಸ್ಥಿತಾನಾಮನುಮೃಗ್ಯದಾಶುಷೇ'

ಎಂಬುದನ್ನೇ ವಿವರಿಸಿದಂತಾಯಿತು. 'ಪಾರಮಹಂಸ್ಯ ಆಶ್ರಮ'ದ ಭಗವದ್ರೂಪ ಅಧಿಷ್ಠಾನದ ವಿಷಯದಲ್ಲಿ ಸ್ಥಿರಮನಸ್ಕರಾದ ಭಕ್ತರಿಗೆ ಎಂದರ್ಥ. ಹಂಸ ಪರಮಹಂಸ ಶಬ್ದಗಳು ಭಗವದ್‌ವಾಚಕ ತಾನೆ?

❖❖❖

**ಶ್ರೀವಿಷ್ಣುತೀರ್ಥರ ವಿನಯ ದೃಢಭಕ್ತಿಗಳು ವ್ಯಕ್ತವಾಗುತ್ತವೆ—**

**ನ ವಿದ್ಯಾಮದತೋ ನಾಪಿ ಪ್ರತಿಷ್ಠಾಕಾಮತಃ ಕ್ವಚಿತ್ ।**
**ಕಿಂತು ಶ್ರೀಹರಿಪಾದಾಬ್ಜ ರತಿಃ ಸ್ಯಾದಿತ್ಯಯಂ ಶ್ರಮಃ ॥**

ವಿದ್ಯಾಮದದಿಂದಾಗಲಿ ಪ್ರತಿಷ್ಠೆಯ ಅಭಿಲಾಷೆಯಿಂದಾಗಲಿ ಈ ಗ್ರಂಥವನ್ನು ನಾನು ರಚಿಸಲಿಲ್ಲ. ಶ್ರೀಹರಿಯ ಪಾದಕಮಲಗಳಲ್ಲಿಯೇ ನಾನು ಸುಖ ಕಾಣುವಂತಾದರೇ ನನ್ನ ಈ ಶ್ರಮವು ಸಾರ್ಥಕವಾಗುವುದು.

**ಇತಿ ಶ್ರೀಮದವಧೂತ ಶಿರೋಮಣಿ ಶ್ರೀಜಯತೀರ್ಥ(ಶ್ರೀವಿಷ್ಣುತೀರ್ಥ) ನಿರ್ಮಿತಾ ಶ್ರೀಮದ್ಭಾಗವತಸಾರೋದ್ಧಾರಟೀಕಾ ಸಮಾಪ್ತಾ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

❖❖❖

**''ಅಡವಿ ಆಚಾರ್ಯರ ಅಡಿಯ ಪೊಂದಿದ ಜನರು**
**ಅಡಿಗಡಿಗೆ ಬಹುಪುಣ್ಯ ಪಡೆದುಕೊಂಬುವರು''**

**''ಯಸ್ಯಪ್ರಚಂಡತಪಸಾ ಶ್ರುತಿಗೀತವೃತ್ತ-**
**ಸ್ತುಷ್ಟೋ ಹರಿಃ ಕಿಲ ವಶಂವದತಾಮವಾಪ ।**
**ಶ್ರೀಮಧ್ವಸನ್ಮತ ಪಯೋನಿಧಿ ಪೂರ್ಣಚಂದ್ರಃ**
**ಶ್ರೀವಿಷ್ಣುತೀರ್ಥಮುನಿರಾಣ್ಮುದಮಾತನೋತು ॥''**

**''ಸತ್ಯಂ ಸತ್ಯಂ ಪುನಃ ಸತ್ಯಂ ವಿಷ್ಣುತೀರ್ಥಪ್ರಸಾದತಃ ।**
**ಸರ್ವೇ ಕಾಮಾ ಭವಂತ್ಯೇವ ಶಪಥೋ ಬಿಂಬ ಸನ್ನಿಧೌ ॥''**

**॥ ಶ್ರೀಹರಯೇ ನಮಃ ॥ ಶ್ರೀಕೃಷ್ಣಾರ್ಪಣಮಸ್ತು ॥**

**'ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ'**



ವಿದ್ವಾನ್ ಶ್ರೀ ಕೆ. ಹಯವದನ ಪುರಾಣಿಕರು ಕಾಪು ಸುಬ್ರಾಯ ಪುರಾಣಿಕರ ಸುಪುತ್ರರು. ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ೧೨ ವರ್ಷ ಶಾಸ್ತ್ರಾಭ್ಯಾಸ ನಡೆಸಿ, ತದನಂತರ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಹಾಗೂ ಶ್ರೀ ಶ್ರೀ ವಿಶ್ವೇಶತೀರ್ಥರಲ್ಲಿ ಸುಧಾಂತ, ವೇದಾಂತ, ಬಾಧಾಂತ, ನ್ಯಾಯಶಾಸ್ತ್ರ, ವ್ಯಾಸತ್ರಯಗಳ ಅಧ್ಯಯನವನ್ನು ಮಾಡಿ, ಮೂರು ದಶಕಕ್ಕೂ ಮೀರಿ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕರು ಹಾಗೂ ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳು, ಶ್ರೀ ವಾದಿರಾಜರ ಯುಕ್ತಿಮಲ್ಲಿಕಾ ಹಾಗೂ ಹರಿದಾಸ ಸಾಹಿತ್ಯ ಇವುಗಳ ಪಾಠ ಪ್ರವಚನ ಹಾಗೂ ಕನ್ನಡ ಅನುವಾದವನ್ನು ಮಾಡಿರುತ್ತಾರೆ.

ಭಗವದ್ಗೀತೆ, ಶ್ರೀಲಕ್ಷ್ಮೀಶೋಭನಪದ, ಶ್ರೀ ವಾದಿರಾಜರ ವೈಕುಂಠ ವರ್ಣನೆ, ಶ್ರೀ ವಾದಿರಾಜರು ಕಂಡ ಶ್ರೀ ಕೃಷ್ಣ – ಒಂದು ಅಧ್ಯಯನ ಹಾಗೂ ಶ್ರೀ ಹರಿವಾಯುಸ್ತುತಿ, ಶ್ರೀ ರಾಘವೇಂದ್ರ ನಮನ, ಪೂರ್ಣಪ್ರಜ್ಞ ವಿಜಯ, ಸೀತಾಯನ, ಹರೇ ವೇಂಕಟ ದಾಸೋಹಂ, ಸುಲಭನಿತ್ಯಾನುಷ್ಠಾನಪದ್ಧತಿ, ಸುಲಭನಿತ್ಯಾನುಷ್ಠಾನಸಂಗ್ರಹ, ಸ್ತವನಾಂಜಲಿ, ಗೋಪೀಗೀತಾ, ಭ್ರಮರಗೀತ, ಗುರುಗುಣಸ್ತವನ, ಗಂಗಾಲಹರಿ, ಶ್ರೀ ಶ್ರೀಶಗುಣದರ್ಪಣ, ಶ್ರೀ ಹರಿಕಥಾಮೃತಸಾರ–ಒಂದು ಅಧ್ಯಯನ, ಇವರು ಸಂಪಾದಿಸಿದ ಕನ್ನಡ ಕೃತಿಗಳು ಹಾಗೂ ಗ್ರಂಥಗಳು.

ಇದರ ಜೊತೆಯಲ್ಲಿ ಅಖಿಲ ಭಾರತ ಮಾಧ್ವ ಮಹಾಮಂಡಲದ ಸರ್ವಮೂಲ ಗ್ರಂಥದ ಪ್ರಕಾಶನದ ಮುಖಾಂತರ ಪ್ರಕಟಣೆಗೊಂಡಿರುವ ಮಹಾಭಾರತ ತಾತ್ಪರ್ಯ ನಿರ್ಣಯ– ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ ಮತ್ತು ಸರ್ವಮೂಲ ಗ್ರಂಥದ ಶ್ರೀ ಗೀತಾಪ್ರಸ್ಥಾನದಲ್ಲಿ ಭಗವದ್ಗೀತೆ, ಉಪನಿಷತ್ ಪ್ರಸ್ಥಾನದಲ್ಲಿ ಶ್ರೀಮನ್ ಮಹೈತರೇಯೋಪನಿಷದ್ಭಾಷ್ಯ, ಸಂಕೀರ್ಣಗ್ರಂಥದಲ್ಲಿ ಕಂದುಕ ಸ್ತುತಿ ಹಾಗೂ ಋಗ್ಭಾಷ್ಯ ಇತ್ಯಾದಿಗಳೂ ಇವರ ವಾಙ್ಮಯ ಸೇವೆಯ ಮೈಲಿಗಲ್ಲುಗಳು. ಪ್ರಸ್ತುತ, ಶ್ರೀವಿಷ್ಣುತೀರ್ಥ ವಿರಚಿತ ಶ್ರೀಮದ್‌ಭಾಗವತಸಾರೋದ್ಧಾರ ಗ್ರಂಥದ ಕನ್ನಡ ಅನುವಾದವನ್ನು ಶ್ರೀಯುತರು ೨ ಸಂಪುಟಗಳಲ್ಲಿ ಮಾಡಿ ಮಹದುಪಕಾರ ಮಾಡಿರುತ್ತಾರೆ.